ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೩೯

ಶ್ರೀ ವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

## ಭಾಗ—೧

(೧—೧೬ ಅಧ್ಯಾಯಗಳು)



ಮಹಾವಿದ್ವಾನ್, ವಿದ್ವನ್ಮಣಿ,

ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ,

ಅನುವಾದಕ.



ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುಖವಾಣಿ

" ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ "

---

## ಪುರಾಣಗಳ ಉದ್ದೇಶ.

'ನಾನು' ಎಂಬ ಹಂಬಲಿಕೆಯು ಜನಜನಿತವಾಗಿದೆ. ಅದರ ತತ್ತ್ವವಾದರೋ ಬಹು ಗೂಢವು. ನಾನು ಎಂಬ ವಸ್ತುವಾವುದು? ನಾನು ಎಲ್ಲಿಂದ ಹೇಗೆ ಬಂದಿರುವೆನು? ನನ್ನ ಈ ಸ್ಥಿತಿಯು ಶಾಶ್ವತವೇ? ಅಥವಾ ನನಗೆ ಬೇರೊಂದು ಶಾಶ್ವತಸ್ಥಾನವುಂಟೇ? ನನ್ನ ಮುಖ್ಯ ಗುರಿಯಾವುದು? ಅದನ್ನು ಸಾಧಿಸುವ ಬಗೆ ಹೇಗೆ? ಅದನ್ನು ಪಡೆಯಲು ನಾನೇ ಸಮರ್ಥನೇ? ಅಥವಾ ಇತರರ ಸಹಾಯದಿಂದ ಪಡೆಯಬೇಕೇ? ಅಂತಹ ಸಹಾಯನೀಡುವವನಾರು? ಎಂತಹವನು? ಇವೇ ಮುಂತಾದ ಸಮಸ್ಯೆಗಳು ಎದುರಿಗೆ ನಿಂತಿವೆ. ಪಶು, ಪಕ್ಷಿ ಮುಂತಾದುವುಗಳಾಗಿ ಹುಟ್ಟಿದ ಸಮಯದಲ್ಲಿ ಇವನ್ನು ಬಗೆಹರಿಸಿಕೊಳ್ಳುವ ವಿವೇಚನಶಕ್ತಿಯಿರುವುದಿಲ್ಲ. ಆ ಶಕ್ತಿಯು ಮಾನವನಿಗೇ ಮೀಸಲಾಗಿದೆ. ಆದುದರಿಂದ ಮೇಲಿನ ಸಮಸ್ಯೆಗಳನ್ನು ಅಪರೂಪವಾಗಿ ಬಂದಿರುವ ಈ ಮನುಷ್ಯಜನ್ಮದಲ್ಲಿಯೇ ಬಗೆಹರಿಸಿಕೊಳ್ಳಲು ಯತ್ನಿಸಿ ಮುಖ್ಯ ಗುರಿಯನ್ನು ಸಾಧಿಸಬೇಕು. ಇವೆಲ್ಲವನ್ನೂ ಸಾಕ್ಷಾತ್ಕರಿಸಿ ಅಥವಾ ಕೇವಲ ಯುಕ್ತಿಗಳಿಂದ ವಿಮರ್ಶಿಸಿ ತಿಳಿಯಲು ಅಲ್ಪಜ್ಞರಿಗೆ ಸಾಧ್ಯವಲ್ಲವೆಂದು ದಯಾಸಾಗರನಾದ ಭಗವಂತನು ನಾಲ್ಕು ವೇದಗಳನ್ನು ಉಪದೇಶಿಸಿದನು. ಬಹು ಗಂಭೀರವಾದ ಆ ವೇದರಾಶಿಯಿಂದಲೇ ಈಗಿನ ಜನರೆಲ್ಲರೂ ತತ್ತ್ವವನ್ನು ತಿಳಿಯಲಸಮರ್ಥರೆಂದು ಮನವರಿತು ಶ್ರೀ ವೇದವ್ಯಾಸರು ಪುರಾಣಗಳನ್ನು ರಚಿಸಿ ಜನತೆಯನ್ನುದ್ಧರಿಸಿರುವರು. ನಾಲ್ಕು ವೇದಗಳಂತೆಯೇ ಪುರಾಣಾದಿಗಳೂ ಸಹ ಆಧ್ಯಾತ್ಮಿಕ ತತ್ತ್ವವನ್ನು ಬೋಧಿಸಿ ಜನತೆಯನ್ನುದ್ಧರಿಸುವ ಕಾರಣ ಅವು ಐದನೆಯ ವೇದವೆಂದು ಪರಿಗಣಿಸಲ್ಪಟ್ಟಿವೆ.

ಪುರಾಣಗಳಲ್ಲಿ ಜಗತ್ಕಾರಣನಾದ ಪರಬ್ರಹ್ಮನ ಮಾಹಾತ್ಮ್ಯ, ಜೀವರ ಸ್ವರೂಪ, ಅವರಿಗೆ ಅಂಟಿಕೊಂಡಿರುವ ಸಂಸಾರಸ್ವಭಾವ, ಅದರ ಕಾರಣ,

ಅದನ್ನು ಹೋಗಲಾಡಿಸುವ ಉಪಾಯ, ಭಕ್ತಿಯಿಂದ ಭಗವಂತನನ್ನು ಆರಾಧಿಸುವ ಮನುಜರಿಗೆ ಅವನ ಪ್ರಸಾದದಿಂದ ದೊರೆಯುವ, ಯೋಗ್ಯವಾದ ಮುಕ್ತಿ ಪದವಿ ಮುಂತಾದ ಆಧ್ಯಾತ್ಮಿಕ ತತ್ತ್ವಗಳು ಮನೋಹರವಾದ ಅನೇಕ ಉದಾಹರಣೆಗಳಿಂದ ವಿವರಿಸಲ್ಪಟ್ಟಿವೆ. ಹೀಗೆ ಸಕಲ ತತ್ತ್ವಗಳನ್ನೊಳಗೊಂಡ ಪುರಾಣವನ್ನು ವ್ಯಾಸಂಗಮಾಡದಿರುವ ಮನುಷ್ಯನು ಎಷ್ಟೇ ಓದಿದ್ದರೂ ವಿಚಕ್ಷಣನೆನಿಸಲಾರನು ಎಂಬುದಾಗಿ ಈ ಮಹಾಭಾರತ ವಚನವು ಸಾರುತ್ತಿದೆ.

**ಯದಿ ವಿದ್ಯಾಚ್ಚತುರ್ವೇದಾನ್ ಸಾಂಗೋಪನಿಷದಾನ್ ದ್ವಿಜಃ ।**
**ನ ಚೇತ್ಪುರಾಣಂ ಸಂವಿದ್ಯಾನ್ನೈವ ಸ ಸ್ಯಾದ್ವಿಚಕ್ಷಣಃ ॥**

## ನಾರದೀಯಪುರಾಣ.

ಈ ಪುರಾಣವು ಶ್ರೀ ವೇದವ್ಯಾಸರು ರಚಿಸಿರುವ ಹದಿನೆಂಟು ಮಹಾಪುರಾಣಗಳಲ್ಲಿ ಒಂದಾಗಿದೆ. ಇದನ್ನು ಪೂರ್ವಭಾಗ, ಉತ್ತರಭಾಗ ಎಂಬುದಾಗಿ ವಿಂಗಡಿಸಿದೆ. ಪೂರ್ವಭಾಗದಲ್ಲಿ ನಾಲ್ಕು ಪಾದಗಳಿವೆ. ಅವುಗಳಲ್ಲಿ ಮೊದಲನೆಯ ಪಾದವು ನಾರದರಿಗೆ ಸನಕಮುನಿಯ ಉಪದೇಶವು. ಎರಡನೆಯದು ಸನಂದನಮುನಿಯ ಉಪದೇಶವು. ಮೂರನೆಯದು ಸನತ್ಕುಮಾರರ ಉಪದೇಶವು. ನಾಲ್ಕನೆಯದು ಸನಾತನಋಷಿಯ ಉಪದೇಶವು. ಹೀಗೆ ನಾಲ್ಕು ಪಾದಗಳಾಗಿ ವಿಂಗಡಿಸಿರುವ ಪೂರ್ವಭಾಗದಲ್ಲಿ ೧೨೫ ಅಧ್ಯಾಯಗಳಿವೆ. ಉತ್ತರಭಾಗವು ಮಾಂಧಾತರಾಜ ಮತ್ತು ವಸಿಷ್ಠಮುನಿಗಳ ಸಂವಾದರೂಪವಾಗಿ ೮೨ ಅಧ್ಯಾಯಗಳನ್ನೊಳಗೊಂಡಿದೆ.

ಈ ಗ್ರಂಥದಲ್ಲಿ ಅವಶ್ಯವಾಗಿ ಪುರಾಣದಲ್ಲಿ ಹೇಳಬೇಕಾದ ಸೃಷ್ಟಿ ಮುಂತಾದುವುಗಳ ವರ್ಣನೆ ಮಾತ್ರವಲ್ಲದೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬ ಆರು ವೇದಾಂಗಗಳು, ವಿಶೇಷವಾಗಿ ಪಶುಪಾಶವಿಮೋಕ್ಷಣೆ, ಮಂತ್ರಶೋಧನೆ, ದೀಕ್ಷೆ, ಮಂತ್ರೋದ್ಧಾರ, ಪೂಜೆ, ಪ್ರಯೋಗ, ಕವಚ ಮುಂತಾದ ಮಂತ್ರಶಾಸ್ತ್ರದ ವಿಷಯಗಳೂ, ವ್ರತಗಳೂ, ಅಷ್ಟಾದಶ ಪುರಾಣಗಳ ವಿಷಯಾನುಕ್ರಮಣಿಕೆ, ರುಕ್ಮಾಂಗದ ಮಹಾರಾಜನ ಚರಿತ್ರೆ ಮತ್ತು ತೀರ್ಥಕ್ಷೇತ್ರಮಾಹಾತ್ಮ್ಯ ಮುಂತಾದುವುಗಳನ್ನು ವಿಸ್ತಾರವಾಗಿ ನಿರೂ

ಪಿಸಿದೆ. ಈಗ ಪ್ರಚಾರದಲ್ಲಿರುವ ವೇದಾಂಗ ಮತ್ತು ಮಂತ್ರಶಾಸ್ತ್ರಗ್ರಂಥಗಳಿಗೆ ಈ ಪುರಾಣವೇ ಮೂಲವೆಂದು ಹೇಳುವುದು ಅತಿಶಯೋಕ್ತಿಯಾಗಲಾರದು.

**"ಬೃಹನ್ನಾರದೀಯಪುರಾಣ"** ಎಂಬ ಹೆಸರಿನಿಂದ ಒಂದು ಗ್ರಂಥವು ಕಲ್ಕತ್ತಾನಗರದಲ್ಲಿ ಮುದ್ರಿಸಲ್ಪಟ್ಟು ಪ್ರಕಾಶಿತವಾಗಿದೆ. ಅದು ಈ ನಾರದೀಯ ಪುರಾಣದಲ್ಲಿನ ಪೂರ್ವಭಾಗದ ಪ್ರಥಮಪಾದವೇ ಆಗಿದೆ. ಬೇರೆಯಾಗಿ ಕಂಡು ಬರುವುದಿಲ್ಲ. ಪ್ರಥಮಪಾದದ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ 'ಇತಿ ಶ್ರೀ ಬೃಹನ್ನಾರದೀಯಪುರಾಣೇ' ಎಂಬುದಾಗಿಯೂ ಹೇಳಿದೆ. ಆದರೆ ಆ ಗ್ರಂಥದಲ್ಲಿ ನಾರದರು ಸನಕಮುನಿಗೆ ಉಪದೇಶಮಾಡಿದಂತೆ ಕಥಾಸಂದರ್ಭವನ್ನು ಸಂಯೋಜನೆಮಾಡಿದೆ. ಈ ನಾರದೀಯಪುರಾಣದಲ್ಲಿಯಾದರೋ ಆ ಭಾಗವು ಸನಕಮುನಿಯು ನಾರದರಿಗೆ ಮಾಡಿದ ಉಪದೇಶರೂಪವಾಗಿದೆ. ಇವೆರಡಕ್ಕೂ ಇಷ್ಟೇ ವ್ಯತ್ಯಾಸವು ಕಂಡುಬರುತ್ತದೆಯೇ ಹೊರತು ವಿಷಯಬದಲಾವಣೆಯೇನೂ ಇಲ್ಲ.

ನಾರದೀಯಪುರಾಣವು ಸುಮಾರು ಹತ್ತು ಸಂಪುಟಗಳಲ್ಲಿ ಅಡಗಬಹುದೆಂದು ನಿರೀಕ್ಷಿಸಲಾಗಿದೆ. ಪ್ರಥಮ ಸಂಪುಟದಲ್ಲಿ ಪೂರ್ವಭಾಗದ ಪ್ರಥಮ ಪಾದದಲ್ಲಿನ ಹದಿನಾರು ಅಧ್ಯಾಯಗಳು ಅಡಕವಾಗಿವೆ. ಅದರ ವಿಷಯಗಳ ವಿವರವನ್ನು ವಿಷಯಾನುಕ್ರಮಣಿಕೆಯಿಂದ ತಿಳಿಯಬಹುದು. ಆದಕಾರಣ ಪುನಃ ಅದರ ವಿವರಣೆಯು ಅವಶ್ಯವಿಲ್ಲ.

ಮಹಾಪ್ರಭುಗಳಾದ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಸ್ವಾಮಿಯವರು ಹಿಂದೂಧರ್ಮಕ್ಕೆ ಅಡಿಗಲ್ಲಿನಂತಿರುವ ವೇದಶಾಸ್ತ್ರ ತತ್ತ್ವಜ್ಞಾನಜ್ಯೋತಿಯನ್ನು ಬಹುಮುಖವಾಗಿ ಬೆಳಗಿಸಿ, ಸಾಮಾನ್ಯ ಜನತೆಗೂ ಸಹ ಶ್ರೇಯಸ್ಕರವಾದ ತತ್ತ್ವಜ್ಞಾನವನ್ನು ಹೊಂದಲು ಅನುಕೂಲಿಸುವಂತೆ ಸಂಸ್ಕೃತಭಾಷೆಯಲ್ಲಿ ಬಹು ಗಂಭೀರವಾಗಿರುವ ಪುರಾಣಾದಿಗಳನ್ನು ದೇಶಭಾಷೆಯಲ್ಲಿ ಪರಿವರ್ತನೆಮಾಡಿಸಿ ಪ್ರಕಾಶಪಡಿಸುತ್ತಿರುವುದು ಪ್ರಜೆಗಳ ಭಾಗ್ಯೋದಯವೇ ಸರಿ. ಇಂತಹ ಸುಸಮಯವನ್ನು ಕಳೆದುಕೊಳ್ಳದೆ ಪ್ರಜೆಗಳೆಲ್ಲರೂ ಈ ಗ್ರಂಥಗಳ ಮೂಲಕ ಪುರಾಣಾರ್ಥಗಳನ್ನರಿತು ಸದ್ವೃತ್ತಾನುಷ್ಠಾನದಿಂದ ಶ್ರೇಯೋಭಾಗಿಗಳಾಗಲಿ. ಈ ಕರ್ಣಾಟಕದೇಶವು ಜ್ಞಾನಜ್ಯೋತಿಯಿಂದ ಬೆಳಗಲಿ.

ಆಳುವ ಮಹಾಸ್ವಾಮಿಯವರ ಅಪ್ಪಣೆಯಂತೆ ಸಂಸ್ಕೃತಭಾಷೆಯಲ್ಲಿರುವ **ಶ್ರೀ ನಾರದೀಯಪುರಾಣವನ್ನು** ಕರ್ಣಾಟಕ ಭಾಷೆಯಲ್ಲಿ ಪರಿವರ್ತಿಸಿರುವೆನು. **ಈ** ಜ್ಞಾನಪ್ರಸಾರಕಾರ್ಯದಲ್ಲಿ ನನಗೆ ಅವಕಾಶವನ್ನು ದಯಪಾಲಿಸಿದುದಕ್ಕಾಗಿ ಪ್ರಭುವರ್ಯರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ,ಸಿ.ಎಸ್.ಐ.,** ರವರ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ, ನಮ್ಮ ಮಹಾಪ್ರಭುಗಳಿಗೆ ಈ ಪುರಾಣದೇವತೆಯಾದಭಗವಂತನು ಆಯುರಾರೋಗ್ಯ ಐಶ್ವರ್ಯ ಸತ್ಸಂತಾನಾದಿಗಳನ್ನನುಗ್ರಹಿಸಿ ಕಾಪಾಡುತ್ತಿರಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ವ್ಯಯ ಸಂ॥ ಕಾರ್ತಿಕ ಶುಕ್ಲ ದ್ವಾದಶೀ,
೬-೧೧-೧೯೪೬.

ಅನುವಾದಕ,
ಮಹಾವಿದ್ವಾನ್ ವಿದ್ವನ್ಮಣಿ,
**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**



# ವಿಷಯಾನುಕ್ರಮಣಿಕೆ.

ಪುಟಸಂಖ್ಯೆ

**ಒಂದನೆಯ ಅಧ್ಯಾಯ—**

ಮಂಗಳಾಚರಣೆ.

ಋಷಿಗಳು ಶೌನಕರನ್ನು ಪ್ರಶ್ನಿಸಿದುದು.

ಋಷಿಗಳ ಸಹಿತರಾಗಿ ಶೌನಕರು ಸಿದ್ಧಾಶ್ರಮಕ್ಕೆ ಹೋಗಿ ಸೂತರನ್ನು ಕೇಳಿದ ಪ್ರಶ್ನೆಗಳ ವಿವರ.

ಸೂತರು ಈ ಪ್ರಶ್ನೆಗಳಿಗೆ ನಾರದೀಯಪುರಾಣವೇ ಉತ್ತರವೆಂದು ಹೇಳಿ ಅದರ ಪ್ರಶಂಸೆ, ಶ್ರವಣ ಅಧ್ಯಯನಗಳ ಫಲ ಮುಂತಾದುವುಗಳನ್ನು ನಿರೂಪಿಸಿದುದು. 1–22

**ಎರಡನೆಯ ಅಧ್ಯಾಯ—**

ಸನತ್ಕುಮಾರ ಮತ್ತು ನಾರದರ ಸಮಾಗಮ, ಅವರ ತತ್ತ್ವವಿಚಾರ ವಿಷಯದಲ್ಲಿ ಶೌನಕಾದಿಗಳ ಪ್ರಶ್ನೆ.

ಬ್ರಹ್ಮಸದನಕ್ಕೆ ಹೊರಟಿದ್ದ ಸನಕಾದಿ ನಾಲ್ವರು ಮುನಿಗಳು ದಾರಿಯಲ್ಲಿ ಸಿಕ್ಕಿದ ಗಂಗಾನದಿಯಲ್ಲಿ ಸ್ನಾನಮಾಡುತ್ತಿದ್ದಾಗ ನಾರದರಸಮಾಗಮವಾದುದು.

ತತ್ತ್ವವಿಚಾರದಲ್ಲಿ ಸನಕಾದಿಗಳನ್ನು ಕುರಿತು ನಾರದರು ಮಾಡಿದ ಪ್ರಶ್ನೆಗಳು ಭಗವಂತನ ಅವತಾರವರ್ಣನೆ. 23–37

**ಮೂರನೆಯ ಅಧ್ಯಾಯ—**

ನಾರಾಯಣನ ಮಹಿಮೆ.

ಅವನ ಶಕ್ತಿಯ ನಾಮಾಂತರಾದಿಗಳು.

ಪ್ರಪಂಚ ಸೃಷ್ಟಿಕ್ರಮ.

ಭೂಗೋಳಸಂಗ್ರಹ.

ಭರತಖಂಡಪರಿಚಯ ಮತ್ತು ಮಹಿಮೆ.

ಸತ್ಕರ್ಮಪ್ರಶಂಸೆ. 38–57

ಪುಟಸಂಖ್ಯೆ

**ನಾಲ್ಕನೆಯ ಅಧ್ಯಾಯ--**

ಭಕ್ತಿಪ್ರಶಂಸೆ.

ಸನತ್ಕುಮಾರರು ನಾರದರನ್ನು ಕೇಳಿದ ಭಗವದ್ಭಕ್ತರ ಲಕ್ಷಣ ಮತ್ತು ಅವರ ವ್ಯಾಪಾರ ಮುಂತಾದುವುಗಳ ಪ್ರಶ್ನೆ.

ಮಾರ್ಕಂಡೇಯ ಚರಿತ್ರೆ. 58-82

**ಐದನೆಯ ಅಧ್ಯಾಯ--**

ಮಾರ್ಕಂಡೇಯಮುನಿಯ ತಪಸ್ಸು.

ಅವರಿಗಾದ ಪ್ರಳಯದರ್ಶನಪ್ರಕಾರ, ಕಾಲವಿಭಾಗ.

ಪ್ರಳಯಾನಂತರ ಸೃಷ್ಟಿ.

ಮಾರ್ಕಂಡೇಯಕೃತ ಹರಿಸ್ತುತಿ.

ಭಗವದ್ಭಕ್ತರ ಸ್ವರೂಪ ವಿವರಣೆ.

ಮಾರ್ಕಂಡೇಯನಿಗೆ ಹರಿಯು ವರವನ್ನುಕೊಟ್ಟುದು. 83-101

**ಆರನೆಯ ಅಧ್ಯಾಯ—**

ನಾರದರು ಸನಕರನ್ನು ಕುರಿತು ಮಾಡಿದ ಉತ್ತಮ ತೀರ್ಥಕ್ಷೇತ್ರವಾವುದೆಂಬ ಪ್ರಶ್ನೆಯು.

ಪ್ರಯಾಗಕ್ಷೇತ್ರ ಮತ್ತು ಗಂಗೆಯ ಮಹಿಮೆಗಳನ್ನು ಸನಕರು ಹೇಳಿದುದು. 102-119

**ಏಳನೆಯ ಅಧ್ಯಾಯ—**

ಸೂರ್ಯವಂಶೋತ್ಪನ್ನನಾದ ಬಾಹುರಾಜನ ಚರಿತ್ರೆ. 120-137

**ಎಂಟನೆಯ ಅಧ್ಯಾಯ—**

ಔರ್ವಮುನಿಯಾಶ್ರಮದಲ್ಲಿ ಸೇವೆಮಾಡಿಕೊಂಡಿದ್ದ ಬಾಹುರಾಜನ ಎರಡನೆಯ ಹೆಂಡತಿಯಲ್ಲಿ ಸಗರನ ಉತ್ಪತ್ತಿ.

ಅವನ ಉಪನಯನ ಮತ್ತು ವಿದ್ಯಾಭ್ಯಾಸ.

ಸಗರನು ತಾಯಿಯಿಂದ ತನ್ನ ವಂಶವೃತ್ತಾಂತವನ್ನು ತಿಳಿದು ಶತ್ರುದಿಗ್ವಿಜಯಕ್ಕಾಗಿ ಹೊರಟು ಕುಲಗುರುಗಳಾದ ವಸಿಷ್ಠರಾಶ್ರಮಕ್ಕೆ ಹೋಗಿ

ಪುಟಸಂಖ್ಯೆ

ಅವರ ಅನುಗ್ರಹದಿಂದ ಶತ್ರುಗಳನ್ನು ಜಯಿಸಿದುದು.
ಸಗರನ ಪಟ್ಟಾಭಿಷೇಕ, ಅವನ ಅಶ್ವಮೇಧಯಾಗ.
ಸಗರನವಂಶದಲ್ಲಿ ಹುಟ್ಟಿದ ಮಿತ್ರಸಹರಾಜನ ಚರಿತ್ರೆಯು. 138-169

**ಒಂಭತ್ತನೆಯ ಅಧ್ಯಾಯ—**

ಮಿತ್ರಸಹನ ಚರಿತ್ರೆಯು ಮುಂದುವರಿದುದು.
ಅವನು ವಸಿಷ್ಠರ ಶಾಪದಿಂದ ರಾಕ್ಷಸನಾದುದು.
ಗಂಗೋದಕಸೇಚನೆಯಿಂದ ರಾಕ್ಷಸಜನ್ಮವು ಹೋಗಿ ಪುನಃ ರಾಜನಾದುದು. 170-202

**ಹತ್ತನೆಯ ಅಧ್ಯಾಯ—**

ಗಂಗಾವತರಣ ಪ್ರಶ್ನೆ.
ಬಲಿಯು ದೇವಲೋಕವನ್ನು ಆಕ್ರಮಿಸಿದುದು.
ಅದಿತಿಯು ತನ್ನ ಮಕ್ಕಳ ಶ್ರೇಯಸ್ಸಿಗಾಗಿ ತಪಸ್ಸುಮಾಡಿದುದು.
ರಾಕ್ಷಸರು ಅವಳ ತಪಸ್ಸಿಗೆ ವಿಘ್ನಮಾಡಲು ಹೋಗಿ ಕಾಡುಗಿಚ್ಚಿನಿಂದ ಬೆಂದುಹೋದುದು.
ಅದಿತಿಯು ಸುರಕ್ಷಿತವಾಗಿದ್ದುದು. 203-215

**ಹನ್ನೊಂದನೆಯ ಅಧ್ಯಾಯ—**

ಅದಿತಿಯ ತಪಸ್ಸಿಗೆ ಮೆಚ್ಚಿದ ಹರಿಯು ಅವಳ ಮಗನಾಗುವೆನೆಂದು ವರವನ್ನು ಕೊಟ್ಟು ವಾಮನನಾಗಿ ಅವತರಿಸಿದುದು.
ಬಲಿಯು ಮೂರು ಪಾದ ಭೂಮಿಯನ್ನು ವಾಮನನಿಗೆ ಕೊಟ್ಟುದು.
ವಾಮನನು ತ್ರಿವಿಕ್ರಮರೂಪವನ್ನು ತಾಳಿ ಲೋಕಗಳೆಲ್ಲವನ್ನೂ ಎರಡು ಪಾದಗಳಿಂದಲೇ ಅಳೆದುದು.
ಪಾದಾಂಗುಷ್ಠಾಗ್ರದಿಂದ ಒಡೆದ ಬ್ರಹ್ಮಾಂಡದಿಂದ ಗಂಗೆಯು ಬಂದುದು.
ವಾಮನನು ಬಲಿಯನ್ನು ಪಾತಾಳಕ್ಕೆ ಮೆಟ್ಟಿ ಅವನ ಭಕ್ತಿಗೆ ಮೆಚ್ಚಿ ರಸಾತಳದಲ್ಲಿ ಅವನಿಗೆ ಸ್ಥಾನವನ್ನು ಕೊಟ್ಟು ನಾನಾವಿಧ ಭೋಗಗಳನ್ನು ಏರ್ಪಡಿಸಿ ವಾಮನರೂಪದಿಂದ ಅವನಿಗೆ ರಕ್ಷಕನಾಗಿದ್ದುದು. 216-262

ಪುಟಸಂಖ್ಯೆ

**ಹನ್ನೆರಡನೆಯ ಅಧ್ಯಾಯ—**

ದಾನ ಮತ್ತು ಅದರ ಪ್ರಭೇದ.

ಪಾತ್ರಾಪಾತ್ರಗಳ ವಿವೇಚನೆ.

ಭಗೀರಥ ಧರ್ಮರಾಜರ ಸಂವಾದ.

ವೀರಭದ್ರರಾಜನ ಚರಿತ್ರೆ. 263–284

**ಹದಿಮೂರನೆಯ ಅಧ್ಯಾಯ—**

ದೇವಾಲಯ, ಕೆರೆ, ತುಳಸೀವನ ಮುಂತಾದುವುಗಳ ನಿರ್ಮಾಣದಿಂದ ಬರುವ ಫಲಗಳ ವಿವರಣೆ.

ಪುಂಡ್ರಧಾರಣೆ, ಕ್ಷೀರಾಭಿಷೇಕ, ಗೋದಾನ, ದೇವಸ್ಥಾನಗಳ ಜೀರ್ಣೋದ್ಧಾರ ಮತ್ತು ವಿದ್ಯಾದಾನ ಮುಂತಾದುವುಗಳ ಮಹಿಮೆ.

ವಿಷ್ಣುಭಕ್ತಿಯ ಆವಶ್ಯಕತೆ.

ನಿವೃತ್ತಧರ್ಮಾನುಷ್ಠಾನ ವಿಧಾನ. 285–317

**ಹದಿನಾಲ್ಕನೆಯ ಅಧ್ಯಾಯ—**

ನಾನಾವಿಧಪಾಪಗಳು, ಪ್ರಾಯಶ್ಚಿತ್ತ, ವಿವಿಧಶ್ರಾದ್ಧಗಳು.

ಮರಣಾನಂತರ ಕರ್ತವ್ಯಕ್ರಿಯಾಕಲಾಪ. 318–338

**ಹದಿನೈದನೆಯ ಅಧ್ಯಾಯ—**

ನರಕ, ಅಲ್ಲಾಗುವ ದುಃಖಾನುಭವರೀತಿ, ಸಾಮಾನ್ಯಪ್ರಾಯಶ್ಚಿತ್ತವಿಧಾನ.

ಹತ್ತುವಿಧ ಭಕ್ತಿಗಳ ನಿರೂಪಣೆ.

ಸದಾಚಾರದ ಆವಶ್ಯಕತೆ.

ಭಗೀರಥನು ಗಂಗೆಯನ್ನು ಭೂಲೋಕಕ್ಕೆ ತಂದುದು. 339–374

**ಹದಿನಾರನೆಯ ಅಧ್ಯಾಯ—**

ಭಗೀರಥಮಹಾರಾಜನು ಹಿಮಾಚಲಕ್ಕೆ ತಪಸ್ಸಿಗಾಗಿ ಹೊರಟು ದಾರಿಯಲ್ಲಿ ಭೃಗುಮುನಿಯ ಉಪದೇಶವನ್ನು ಪಡೆದುದು.

ಸತ್ಯ, ಅಹಿಂಸೆ, ದುರ್ಜನ, ಸಾಧುಮುಂತಾದುವುಗಳ ವಿವರಣೆ-

ಹಿಮಾಚಲದಲ್ಲಿ ಭಗೀರಥನು ತಪಸ್ಸುಮಾಡಿ ಗಂಗೆಯನ್ನು ಭೂಲೋಕಕ್ಕೆ ತಂದುದು.

ಗಂಗೋದಕದಿಂದ ಸಗರಪುತ್ರರು ಮುಕ್ತಿಯನ್ನು ಪಡೆದುದು. 375–402

# ಓಂ

॥ ಶ್ರೀ ವೇದವ್ಯಾಸಾಯ ನಮಃ ಹರಿಃ ಓಂ ॥

# ನಾರದೀಯಪುರಾಣಂ

## ಪೂರ್ವಭಾಗೇ ಪ್ರಥಮಪಾದಃ

## ಪ್ರಥಮೋಽಧ್ಯಾಯಃ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥ ೧ ॥**

---

### ಒಂದನೆಯ ಅಧ್ಯಾಯ

ಶ್ರೀ ಸರ್ವಜ್ಞಗುರುಭ್ಯೋನಮಃ :—ದ್ವಾಪರಯುಗದ ಕೊನೆಯ ಭಾಗದಲ್ಲಿ ಮೋಕ್ಷಮಾರ್ಗವಾದ ತತ್ತ್ವಜ್ಞಾನವು ಕಾಲಬಲದಿಂದ ಮರೆಯಾಯಿತು. ಆಗ ನಾನಾವಿಧವಾದ ಸಾಂಸಾರಿಕಕ್ಲೇಶದಲ್ಲಿ ಸಿಲುಕಿ ನರಳಾಡುತ್ತಿದ್ದ ಸಜ್ಜನರನ್ನು ಉದ್ಧರಿಸಲೋಸುಗ ದಯಾಳುಗಳಾದ ದೇವತೆಗಳ ಪ್ರಾರ್ಥನಾನುಸಾರವಾಗಿ ಶ್ರೀಮನ್ನಾರಾಯಣನು ವೇದವ್ಯಾಸರೂಪದಿಂದ ಅವತರಿಸಿ ವೇದವಿಭಾಗಾದಿಗಳನ್ನು ಮಾಡಿ ಅದರ ಅರ್ಥನಿರ್ಣಯವನ್ನು ಮಾಡುವುದಕ್ಕೆ ಸಾಧನವಾಗಿ ಬ್ರಹ್ಮಸೂತ್ರಗಳನ್ನೂ ರಚಿಸಿ ತತ್ತ್ವೋಪದೇಶವನ್ನು ಮಾಡಿದನು. ತರುವಾಯ ಅತ್ಯಂತಗಹನಾರ್ಥಕವಾದ ವೇದರಾಶಿ, ಬಹು ಗಂಭೀರವಾಗಿ ಸಂಗ್ರಹವಾಗಿರುವ ಬ್ರಹ್ಮಸೂತ್ರ, ಇವುಗಳಿಂದಲೇ ಮುಂದಿನ ಕಲಿಯುಗದ ಜನರೆಲ್ಲರೂ ತತ್ವಜ್ಞಾನವನ್ನು ಸಂಪಾದಿಸಲು ಅಸಮರ್ಥರೆಂದು ಮನವರಿತು ಮನೋಹರವಾದ ಕಥೆಗಳನ್ನೊಳಗೊಂಡು ಸುಗಮವಾದ ರೀತಿಯಲ್ಲಿ ಸ್ತ್ರೀಪುರುಷರೆಲ್ಲರಿಗೂ ತತ್ವವು ತಿಳಿಯುವಂತೆ ಹದಿನೆಂಟು ಪುರಾಣಗಳನ್ನೂ ಸಹ ರಚಿಸಿ ಸಜ್ಜನರನ್ನುದ್ಧರಿಸಿರು

**ವಂದೇ ವೃಂದಾವನಾಸೀನಮಿಂದಿರಾನಂದಮಂದಿರಂ ।**
**ಉಪೇಂದ್ರಂ ಸಾಂದ್ರಕಾರುಣ್ಯಂ ಪರಾನಂದಂ ಪರಾತ್ಪರಂ ॥ ೨ ॥**

---

ತ್ತಾನೆ. ಅಂತಹ ಹದಿನೆಂಟು ಪುರಾಣಗಲ್ಲೊಂದಾದ ನಾರದೀಯಪುರಾಣವನ್ನು ಶ್ರೀವೇದವ್ಯಾಸರು ರಚಿಸುವವರಾಗಿ "ತಾವು ರಚಿಸುವ ಗ್ರಂಥವು ನಿರ್ವಿಘ್ನವಾಗಿ ಕೊನೆಗಾಣಬೇಕೆಂಬ ಉದ್ದೇಶದಿಂದ ಗ್ರಂಥಕರ್ತರು ಪ್ರಾರಂಭದಲ್ಲಿ ಇಷ್ಟದೇವತಾನಮಸ್ಕಾರರೂಪವಾದ ಮಂಗಳವನ್ನು ಆಚರಿಸುವುದಾವಶ್ಯಕ" ಎಂಬ ಶಿಷ್ಟಸಂಪ್ರದಾಯವನ್ನು ಉಪದೇಶಿಸುವುದಕ್ಕೋಸ್ಕರ ಪುರಾಣದ ಆದಿ ಭಾಗದಲ್ಲಿ ಮಂಗಳವನ್ನು ಮಾಡಿರುತ್ತಾರೆ.

ಶ್ರೀಮನ್ನಾರಾಯಣನು ಅರ್ಜುನ, ಭೀಮಸೇನ, ಭಾಗ್ಯಾಭಿಮಾನಿ ದೇವತೆಯಾದ ಲಕ್ಷ್ಮೀದೇವಿ ಮತ್ತು ವಿದ್ಯಾಭಿಮಾನಿದೇವತೆಯಾದ ಸರಸ್ವತೀದೇವಿ ಇವರುಗಳನ್ನು ನಮಸ್ಕರಿಸಿ ಮಹಾಭಾರತವನ್ನು ಪಠನೆಮಾಡಬೇಕು.

[ಮಹಾಭಾರತವನ್ನು ಪಠನೆಮಾಡುವಾಗ ಯಾವಯಾವ ದೇವತೆಗಳನ್ನು ನಮಸ್ಕರಿಸಿ ಪ್ರಾರಂಭಿಸಬೇಕೆಂಬ ಸಂಪ್ರದಾಯವನ್ನು ಲೋಕಕ್ಕೆ ತಿಳಿಸಲು ಈ ಪದ್ಯವನ್ನು ವೇದವ್ಯಾಸರು ಮಹಾಭಾರತದ ಆದಿಭಾಗದಲ್ಲಿ ಸೇರಿಸಿರುತ್ತಾರೆ. ಅದೇ ಈ ಗ್ರಂಥದ ಆದಿಯಲ್ಲಿಯೂ ಉಕ್ತವಾಗಿದೆ. ಇದರಲ್ಲಿ ನರ ಎಂಬ ಶಬ್ದಕ್ಕೆ ಇಷ್ಟಾರ್ಥವನ್ನು ಸಾಧಿಸುವ ಅರ್ಜುನ, ನರೋತ್ತಮನೆಂದರೆ ಇಷ್ಟಾರ್ಥವನ್ನು ಸಾಧಿಸುವವರಿಗೆ ಒಡೆಯನಾದ ಭೀಮಸೇನ ಎಂದರ್ಥ. ಜಯ ಎಂಬುದು ಮಹಾಭಾರತದ ನಾಮಧೇಯವು. ಮಹಾಭಾರತದಲ್ಲಿ ಶ್ರೀಕೃಷ್ಣ, ಅರ್ಜುನ, ಭೀಮಸೇನ ಮುಂತಾದವರ ಚರಿತ್ರೆಯೇ ಮುಖ್ಯವಾಗಿ ನಿರೂಪಿಸಲ್ಪಟ್ಟಿರುವುದರಿಂದ ಅದರ ಆರಂಭದಲ್ಲಿ ಅನುಗ್ರಹಾರ್ಥವಾಗಿ ಅವರಿಗೆ ವಂದನೆ ಮಾಡುವುದು ಆವಶ್ಯಕವೆಂದು ತಾತ್ಪರ್ಯ.]

೨. ವೃಂದಾವನವೆಂಬ ಕ್ಷೇತ್ರದಲ್ಲಿರುವವನು, ಲಕ್ಷ್ಮಿಯ ಸುಖಕ್ಕೆ ಆವಾಸಸ್ಥಾನನು, ನಿರಂತರವಾದ ದಯೆಯುಳ್ಳವನು, ಉತ್ಕೃಷ್ಟಾನಂದ ಸ್ವರೂಪನು, ಮತ್ತು ಉತ್ತಮೋತ್ತಮನೂ ಆದ ಉಪೇಂದ್ರನಾಮಕನಾದ ಹರಿಯನ್ನು ನಮಸ್ಕರಿಸುತ್ತೇನೆ.

ಬ್ರಹ್ಮವಿಷ್ಣುಮಹೇಶಾಖ್ಯಂ ಯಸ್ಯಾಂಶಾ ಲೋಕಸಾಧಕಾಃ ।
ತಮಾದಿದೇವಂ ಚಿದ್ರೂಪಂ ವಿಶುದ್ಧಂ ಪರಮಂ ಭಜೇ ॥ ೩ ॥

ಶೌನಕಾದ್ಯಾ ಮಹಾತ್ಮಾನ ಋಷಯೋ ಬ್ರಹ್ಮವಾದಿನಃ ।
ನೈಮಿಷಾಖ್ಯೇ ಮಹಾರಣ್ಯೇ ತಪಸ್ತೇಪುರ್ಮುಮುಕ್ಷವಃ ॥ ೪ ॥

ಜಿತೇಂದ್ರಿಯಾ ಜಿತಾಹಾರಾಃ ಸಂತಃ ಸತ್ಯಪರಾಕ್ರಮಾಃ ।
ಯಜಂತಃ ಪರಯಾ ಭಕ್ತ್ಯಾ ವಿಷ್ಣುಮಾದ್ಯಂ ಸನಾತನಂ ॥ ೫ ॥

ಅನೀರ್ಷ್ಯಾಃ ಸರ್ವಧರ್ಮಜ್ಞಾ ಲೋಕಾನುಗ್ರಹತತ್ಪರಾಃ ।
ನಿರ್ಮಮಾ ನಿರಹಂಕಾರಾಃ ಪರಸ್ಮಿನ್ಸ್ರುತಮಾನಸಾಃ ॥ ೬ ॥

ನ್ಯಸ್ತಮಾನಾ ವಿವೃಜಿನಾಃ ಶಮಾದಿಗುಣಸಂಯುತಾಃ ।
ಕೃಷ್ಣಾಜಿನೋತ್ತರೀಯಾಸ್ತೇ ಜಟಿಲಾ ಬ್ರಹ್ಮಚಾರಿಣಃ ॥ ೭ ॥

---

೩. ಯಾವ ಪರಬ್ರಹ್ಮನ ಅಂಶಗಳು ಲೋಕಕ್ಕೆ ಇಷ್ಟಾರ್ಥವನ್ನು ಕೊಡುತ್ತವೆಯೋ ಅಂತಹವನಾದ, ಬ್ರಹ್ಮವಿಷ್ಣುಮಹೇಶ ಎಂಬ ಹೆಸರುಗಳುಳ್ಳ, ಜ್ಞಾನಸ್ವರೂಪಿಯು, ದೋಷರಹಿತನು, ಮತ್ತು ಉತ್ತಮನೂ ಆದ ಆದಿದೇವನನ್ನು ಸೇವಿಸುತ್ತೇನೆ.

೪. ಮಹಾತ್ಮರೂ ಪರಬ್ರಹ್ಮನ ಮಾಹಾತ್ಮ್ಯೆಯನ್ನು ಕೊಂಡಾಡುವವರೂ ಆದ ಶೌನಕರೇ ಮುಂತಾದ ಋಷಿಗಳು ನೈಮಿಷವೆಂಬ ಹೆಗ್ಗಾಡಿನಲ್ಲಿ ಮುಕ್ತಿಯನ್ನು ಹೊಂದಬೇಕೆಂಬ ಆಪೇಕ್ಷೆಯಿಂದ ತಪಸ್ಸುಮಾಡಿದರು.

೫-೮. ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಕ್ಲ್ಪಪ್ತವಾದ ಆಹಾರವನ್ನು ಸೇವಿಸುವವರು, ಸಾಧುಗಳು, ಸತ್ಯವಚನ ಮತ್ತು ಶೌರ್ಯಗಳುಳ್ಳವರು, ಜಗತ್ಕಾರಣನೂ ಅನಾದಿನಿತ್ಯನೂ ಆದ ವಿಷ್ಣುವನ್ನು ಭಕ್ತಿಯಿಂದ ಆರಾಧಿಸುವವರು, ಹೊಟ್ಟೆಕಿಚ್ಚಿಲ್ಲದವರು, ಎಲ್ಲಾಧರ್ಮಸೂಕ್ಷ್ಮಗಳನ್ನು ತಿಳಿದವರು, ಲೋಕಕ್ಕೆ ಶ್ರೇಯಸ್ಸಾಗಲಿ ಎಂಬುದಾಗಿ ಅನುಗ್ರಹವನ್ನೇ ಮಾಡುತ್ತಿರುವವರು, ಮಮತೆ (ಜಂಭ) ಯಿಲ್ಲದವರು, ಅಹಂಕಾರ (ಗರ್ವ) ವಿಲ್ಲದವರು, ಪರಮಾತ್ಮನಲ್ಲಿ ಆಸಕ್ತವಾದ ಮನಸ್ಸುಳ್ಳವರು ಅಂದರೆ ಭಗವದ್ಭಕ್ತರು, ಕಾಮ

ಗೃಣಂತಃ ಪರಮಂ ಬ್ರಹ್ಮ ಜಗಚ್ಚಕ್ಷುಃ ಸಮೌಜಸಃ ।
ಧರ್ಮಶಾಸ್ತ್ರಾರ್ಥತತ್ತ್ವಜ್ಞಾ ಸ್ತೇಷು ನೈಮಿಷಕಾನನೇ ॥ ೮ ॥

ಯಜ್ಞೈರ್ಯಜ್ಞಪತಿಂ ಕೇಚಿದ್ಜ್ಞಾನೈ ಜ್ಞಾನಾತ್ಮಕಂ ಪರೇ ।
ಕೇಚಿಚ್ಚ ಪರಯಾ ಭಕ್ತ್ಯಾ ನಾರಾಯಣಮುಪೂಜಯನ್ ॥ ೯ ॥

ಏಕದಾ ತೇ ಮಹಾತ್ಮಾನಃ ಸಮಾಜಂ ಚಕ್ರುರುತ್ತಮಾಃ ।
ಧರ್ಮಾರ್ಥಕಾಮಮೋಕ್ಷಾಣಾಮುಪಾಯಾನ್ ಜ್ಞಾತುಮಿಚ್ಛವಃ ॥ ೧೦ ॥

---

ವನ್ನು ಪರಿತ್ಯಾಗಮಾಡಿರುವವರು, ಪಾಪರಹಿತರು, ಶಾಂತಿ ಮುಂತಾದ ಗುಣಗಳುಳ್ಳವರು, ಜಿಂಕೆಯಚರ್ಮವನ್ನು ಹೊದ್ದಿರುವವರು, ಜಟಾಧಾರಿಗಳು, ಬ್ರಹ್ಮಚಾರಿಗಳು, ಪರಬ್ರಹ್ಮನನ್ನು ಸ್ತುತಿಸುವವರು, ಸೂರ್ಯನಂತೆ ಪ್ರಕಾಶಮಾನರು, ಧರ್ಮ ಮತ್ತು ವೇದಾದಿಶಾಸ್ತ್ರಾರ್ಥತತ್ತ್ವ ಇವುಗಳನ್ನು ತಿಳಿದಿರುವವರೂ ಆಗಿರುವ ಆ ಶೌನಕಾದಿ ಋಷಿಗಳು ನೈಮಿಷಾರಣ್ಯದಲ್ಲಿ ತಪಸ್ಸನ್ನು ಮಾಡಿದರು.

೯. ಆ ಶೌನಕಾದಿ ಋಷಿಗಳ ಸಮುದಾಯದಲ್ಲಿ ಕೆಲವರು, ಯಜ್ಞಯಾಗಾದಿಗಳಿಂದ ಯಜ್ಞಗಳಿಗೆ ನಿಯಾಮಕನಾದ ಪರುಶರಾಮರೂಪಿಯಾದ ಭಗವಂತನನ್ನೂ ಮತ್ತೆ ಕೆಲವರು ಜ್ಞಾನಗಳಿಂದ ಜ್ಞಾನಸ್ವರೂಪಿಯಾದ ಪರಬ್ರಹ್ಮನನ್ನೂ, ಇನ್ನೂ ಕೆಲವರು ಉತ್ತಮವಾದ ಭಕ್ತಿಯಿಂದ ನಾರಾಯಣನನ್ನೂ ಪೂಜಿಸಿದರು. ಎಂದರೆ :—ಅಧಿಕಾರಿಗಳು, ಕರ್ಮಯೋಗಿಗಳು, ಜ್ಞಾನಯೋಗಿಗಳು, ಮತ್ತು ಏಕಾಂತಭಕ್ತರು ಎಂಬುದಾಗಿ ಮೂರುವಿಧ. ಶೌನಕಾದಿಗಳ ಗುಂಪಿನಲ್ಲಿ ಈ ಮೂರುವಿಧವಾದ ಅಧಿಕಾರಿಗಳೂ ಸೇರಿದುದರಿಂದ ಆಯಾಯಾ ಅಧಿಕಾರಿಗಳು ಅವರವರ ಯೋಗ್ಯತಾನುಸಾರವಾಗಿ ಅಂದರೆ ಕರ್ಮಯೋಗಿಗಳು ಕರ್ಮಾನುಷ್ಠಾನದಿಂದಲೂ, ಜ್ಞಾನಯೋಗಿಗಳು ತಮ್ಮ ದಿವ್ಯದೃಷ್ಟಿಯಿಂದಲೂ, ಏಕಾಂತಭಕ್ತರು ಅತಿಶಯವಾದ ಭಕ್ತಿಯಿಂದಲೂ ಶ್ರೀನಾರಾಯಣನನ್ನು ಆರಾಧಿಸಿದರು ಎಂದು ತಾತ್ಪರ್ಯ.

೧೦-೧೧. ಒಂದಾನೊಂದು ಕಾಲದಲ್ಲಿ ಮಹಾತ್ಮರು, ಶ್ರೇಷ್ಠರು, ಬ್ರಹ್ಮಚಾರಿಗಳೂ ಆದ ಇಪ್ಪತ್ತಾರುಸಾವಿರ ಋಷಿಗಳು ಧರ್ಮ, ಅರ್ಥ, ಕಾಮ

ಷಡ್ವಿಂಶತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಂ ।
ತೇಷಾಂ ಶಿಷ್ಯಪ್ರಶಿಷ್ಯಾಣಾಂ ಸಂಖ್ಯಾ ವಕ್ತುಂ ನ ಶಕ್ಯತೇ ॥ ೧೧ ॥

ಮುನಯೋ ಭಾವಿತಾತ್ಮಾನೋ ಮಿಲಿತಾಸ್ತೇ ಮಹೌಜಸಃ ।
ಲೋಕಾನುಗ್ರಹಕರ್ತಾರೋ ವೀತರಾಗಾ ವಿಮತ್ಸರಾಃ ॥ ೧೨ ॥

ಕಾನಿ ಕ್ಷೇತ್ರಾಣಿ ಪುಣ್ಯಾನಿ ಕಾನಿ ತೀರ್ಥಾನಿ ಭೂತಲೇ ।
ಕಥಂ ವಾ ಪ್ರಾಪ್ಯತೇ ಮುಕ್ತಿರ್ನೃಣಾಂ ತಾಪಾರ್ತಚೇತಸಾಂ ॥ ೧೩ ॥

ಕಥಂ ಹರೌ ಮನುಷ್ಯಾಣಾಂ ಭಕ್ತಿರವ್ಯಭಿಚಾರಿಣೀ ।
ಕೇನ ಸಿದ್ಧ್ಯೇತ ಚ ಫಲಂ ಕರ್ಮಣಸ್ತ್ರಿವಿಧಾತ್ಮನಃ ॥ ೧೪ ॥

ಇತ್ಯೇವಂ ಪ್ರಷ್ಟುಮಾತ್ಮಾನಮುದ್ಯತಾನ್ಪ್ರೇಕ್ಷ್ಯ ಶೌನಕಃ ।
ಪ್ರಾಂಜಲಿರ್ವಾಕ್ಯಮಾಹೇದಂ ವಿನಯಾವನತಃ ಸುಧೀಃ ॥ ೧೫ ॥

---

ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಿಗೆ ಸಾಧನಗಳನ್ನು ತಿಳಿದುಕೊಳ್ಳಬೇಕೆಂದು ಒಟ್ಟಾಗಿಸೇರಿ ಸಭೆಯನ್ನು ಮಾಡಿದರು. ಆ ಸಭೆಯಲ್ಲಿ ಆ ಶೌನಕಾದಿ ಋಷಿಗಳ ಶಿಷ್ಯರೂ, ಅವರ ಶಿಷ್ಯರೂ ಹೇರಳವಾಗಿ ನೆರದಿದ್ದರು. ಶಿಷ್ಯಪರಂಪರೆಯು ಬಹಳ ಹೆಚ್ಚಾಗಿದ್ದುದರಿಂದ ಅವರ ಸಂಖ್ಯೆಯನ್ನು ಹೇಳಲು ಸಾಧ್ಯವಿಲ್ಲ.

೧೨-೧೫. ಸಭೆಯಲ್ಲಿ ನೆರೆದಿದ್ದ, ಆತ್ಮಗುಣಸಂಪನ್ನರು, ಮಹಾತೇಜಸ್ವಿಗಳು, ಜನರಿಗೆ ಪುರುಷಾರ್ಥೋಪಾಯವನ್ನು ತಿಳಿಸಿ ಅನುಗ್ರಹಮಾಡುವವರು, ರಾಗ ಮತ್ತು ಮಾತ್ಸರ್ಯಗಳೆಂಬ ದೋಷಗಳನ್ನು ದೂರಮಾಡಿರುವವರೂ ಆದ ಆ ಋಷಿಗಳು ಈ ಭೂಲೋಕದಲ್ಲಿ ಪುಣ್ಯಕರವಾದ ಕ್ಷೇತ್ರಗಳು ಮತ್ತು ತೀರ್ಥಗಳು ಯಾವುವು ? ಸಂಸಾರತಾಪದಿಂದ ದುಃಖಿಸುತ್ತಿರುವ ಜೀವರುಗಳಿಗೆ ಮುಕ್ತಿಯು ಹೇಗೆ ಲಭಿಸುತ್ತದೆ ? ಶ್ರೀವಿಷ್ಣುವಿನಲ್ಲಿ ನಿಯತವಾದ ಭಕ್ತಿಯು ಹೇಗೆ ಉಂಟಾಗುತ್ತದೆ ? ಪ್ರಾರಬ್ಧ, ಸಂಚಿತ, ಆಗಾಮಿ ಎಂಬುದಾಗಿ ಮೂರು ವಿಧವಾದ ಕರ್ಮಗಳಿಗೆ ಫಲವು ಹೇಗೆ ಲಭಿಸುತ್ತದೆ ? ಎಂಬುದಾಗಿ ನಾಲ್ಕು ಪ್ರಶ್ನೆಗಳನ್ನು ಕೇಳಬೇಕೆಂದು ಉದ್ಯುಕ್ತರಾದ ಸಂದರ್ಭವನ್ನು ಜ್ಞಾನಿಗಳಾದ ಶೌನಕರು ತಿಳಿದು ವಿನಯದಿಂದ ನಮಸ್ಕರಿಸಿ ಕೈಮುಗಿದುಕೊಂಡು ಮುಂದೆ ಹೇಳುವಪ್ರಕಾರ ಮಾತನಾಡಿದರು.

**ಶೌನಕ ಉವಾಚ**

**ಅಸ್ತೇ ಸಿದ್ಧಾಶ್ರಮೇ ಪುಣ್ಯೇ ಸೂತಃ ಪೌರಾಣಿಕೋತ್ತಮಃ ।**
**ಯಜನ್ಯಜ್ಞೈರ್ಬಹುಮುಖೈರ್ವಿಶ್ವರೂಪಂ ಜನಾರ್ದನಂ ॥ ೧೬ ॥**

**ಸ ಏತದಖಿಲಂ ವೇತ್ತಿ ವ್ಯಾಸಶಿಷ್ಯೋ ಮಹಾಮುನಿಃ ।**
**ಪುರಾಣಸಂಹಿತಾವಕ್ತಾ ಶಾಂತೋ ವೈ ರೋಮಹರ್ಷಣಿಃ ॥ ೧೭ ॥**

**ಯುಗೇ ಯುಗೇಽಲ್ಪಕಾನ್ಧರ್ಮಾನ್ನಿರೀಕ್ಷ್ಯ ಮಧುಸೂದನಃ ।**
**ವೇದವ್ಯಾಸಸ್ವರೂಪೇಣ ವೇದಭಾಗಂ ಕರೋತಿ ವೈ ॥ ೧೮ ॥**

**ವೇದವ್ಯಾಸಮುನಿಸ್ಸಾಕ್ಷಾನ್ನಾರಾಯಣ ಇತಿ ದ್ವಿಜಾಃ ।**
**ಶುಶ್ರುಮಃ ಸರ್ವಶಾಸ್ತ್ರೇಷು ಸೂತಸ್ತು ವ್ಯಾಸಶಾಸಿತಃ ॥ ೧೯ ॥**

---

೧೬. ಶೌನಕರು ಹೇಳುತ್ತಾರೆ:—ಪುಣ್ಯಕ್ಷೇತ್ರವಾದ ಸಿದ್ಧಾಶ್ರಮದಲ್ಲಿ ಪೌರಾಣಿಕಶ್ರೇಷ್ಠರಾದ ಸೂತರು ನಾನಾವಿಧವಾದ ಯಜ್ಞಗಳಿಂದ ವಿಶ್ವರೂಪಿಯಾದ ಜನಾರ್ದನನನ್ನು ಪೂಜಿಸುತ್ತಿದ್ದಾರೆ.

೧೭. ವೇದವ್ಯಾಸರ ಶಿಷ್ಯರು, ಮಹಾಜ್ಞಾನಿಗಳು, ಪುರಾಣವನ್ನು ಹೇಳುತ್ತಿರುವವರು, ಶಾಂತಿಸಂಪನ್ನರು, *ರೋಮಹರ್ಷಣಿನಾಮಕರೂ ಆದ ಆ ಸೂತರು ನೀವು ಕೇಳಿರುವ ವಿಷಯಗಳೆಲ್ಲವನ್ನೂ ತಿಳಿದಿರುತ್ತಾರೆ.

೧೮. ಮಧುವೆಂಬ ರಾಕ್ಷಸನನ್ನು ಸಂಹರಿಸಿದ ಶ್ರೀನಾರಾಯಣನು ಪ್ರತಿಯೊಂದು ದ್ವಾಪರಯುಗದಲ್ಲಿಯೂ ಧರ್ಮಗಳು ಬಹುಮಟ್ಟಿಗೆ ಮರೆಯಾಗಿ ಅತ್ಯಲ್ಪವಾಗಿದ್ದುದನ್ನು ಕಂಡು ವೇದವ್ಯಾಸರೆಂಬ ಅವತಾರರೂಪದಿಂದ ವೇದವಿಭಾಗವನ್ನು ಮಾಡುತ್ತಿರುವುದು ಪ್ರಸಿದ್ಧವು.

೧೯. ಎಲೈ ದ್ವಿಜರುಗಳಿರಾ! ನಾರಾಯಣನೇ ಸಾಕ್ಷಾತ್ತಾಗಿ ವೇದವ್ಯಾಸಋಷಿಯಾಗಿರುವನು. ಸೂತನು ವ್ಯಾಸರಿಂದ ಸರ್ವಶಾಸ್ತ್ರಗಳಲ್ಲಿಯೂ ಉಪದೇಶವನ್ನು ಪಡೆದಿರುತ್ತಾನೆ ಎಂಬುದಾಗಿ ನಾವು ಕೇಳಿರುತ್ತೇವೆ.

---

*ರೋಮಹರ್ಷವೆಂದರೆ ರೋಮಾಂಚವು. ಸೂತರ ವಾಗ್ಧೋರಣೆಯಿಂದ ರೋಮಾಂಚವುಂಟಾಗುತ್ತಿದ್ದುದರಿಂದ ವೇದವ್ಯಾಸರು ಸೂತರಿಗೆ ರೋಮಹರ್ಷಣಿ ಎಂಬುದಾಗಿ ಹೆಸರಿಟ್ಟಿರುತ್ತಾರೆ.

ತೇನ ಸಂಶಾಸಿತಸ್ಸೂತೋ ವೇದವ್ಯಾಸೇನ ಧೀಮತಾ ।
ಪುರಾಣಾನಿ ಸ ವೇತ್ತ್ಯೇವ ನಾನ್ಯೋ ಲೋಕೇ ತತಃ ಪರಃ ॥ ೨೦ ॥

ಸ ಪುರಾಣಾರ್ಥವಿಲ್ಲೋಕೇ ಸ ಸರ್ವಜ್ಞಃ ಸ ಬುದ್ಧಿಮಾನ್ ।
ಸ ಶಾಂತೋ ಮೋಕ್ಷಧರ್ಮಜ್ಞಃ ಕರ್ಮಭಕ್ತಿಕಲಾಪವಿತ್ ॥ ೨೧ ॥

ವೇದವೇದಾಂಗಶಾಸ್ತ್ರಾಣಾಂ ಸಾರಭೂತಂ ಮುನೀಶ್ವರಾಃ ।
ಜಗದ್ಧಿತಾರ್ಥಂ ತತ್ಸರ್ವಂ ಪುರಾಣೇಷೂಕ್ತವಾನ್ ಮುನಿಃ ॥ ೨೨ ॥

ಜ್ಞಾನಾರ್ಣವೋ ವೈ ಸೂತಸ್ತತ್ಸರ್ವತತ್ತ್ವಾರ್ಥಕೋವಿದಃ ।
ತಸ್ಮಾತ್ತಮೇವ ಪೃಚ್ಛಾಮ ಇತ್ಯೂಚೇ ಶೌನಕೋ ಮುನೀನ್ ॥ ೨೩ ॥

---

೨೦. ಪ್ರಾಜ್ಞರಾದ ವೇದವ್ಯಾಸರಿಂದ ಉಪದೇಶವನ್ನು ಪಡೆದಿರುವ ಆ ಸೂತರೊಬ್ಬರೇ ಪುರಾಣತತ್ವವನ್ನು ತಿಳಿದಿರುತ್ತಾರೆ. ಜಗತ್ತಿನಲ್ಲಿ ಅವರ ಹೊರತು ಮತ್ತಾರೂ ಅದನ್ನು ತಿಳಿದಿಲ್ಲ.

೨೧. ಜಗತ್ತಿನಲ್ಲಿ ಸೂತರೇ ಪುರಾಣಾರ್ಥವನ್ನು ತಿಳಿದಿರುವವರು. ಆತನೇ ಸರ್ವಜ್ಞನು, ಅತನೇ ಪ್ರಾಜ್ಞನು, ಶಾಂತಸ್ವಭಾವವುಳ್ಳವನು, ಮೋಕ್ಷ ಧರ್ಮಗಳನ್ನು ತಿಳಿದಿರುವವನು ಮತ್ತು ಆತನೇ ಕರ್ಮ, ಭಕ್ತಿ ಇವುಗಳನ್ನು ಸಾಂಗವಾಗಿ ತಿಳಿದಿರುವವನು.

೨೨. ಋಷಿಶ್ರೇಷ್ಠರೇ! ವೇದವ್ಯಾಸಮಹರ್ಷಿಗಳು ಲೋಕಹಿತಕ್ಕೋಸ್ಕರವೇ ವೇದ ಮತ್ತು ವೇದಾಂಗವಾದ ಶಾಸ್ತ್ರಗಳು ಇವುಗಳಲ್ಲಿ ಹೇಳಲ್ಪಟ್ಟಿರುವ ಸಾರಭೂತವಾದ ಸಕಲತತ್ವಗಳನ್ನೂ ಪುರಾಣದಲ್ಲಿ ನಿರೂಪಿಸಿರುತ್ತಾರೆ.

೨೩. ಪುರಾಣಗಳಲ್ಲಿ ಹೇಳಲ್ಪಟ್ಟಿರುವ ಸಕಲತತ್ತ್ವಾರ್ಥಗಳನ್ನೂ ಚೆನ್ನಾಗಿ ತಿಳಿದುಕೊಂಡಿರುವ ಸೂತರು ಜ್ಞಾನಸಾಗರರೆಂಬುದು ಸುಪ್ರಸಿದ್ಧವು. ಆದಕಾರಣ ನಾವುಗಳೆಲ್ಲರೂ ಅವರನ್ನೇ ಪ್ರಶ್ನೆಮಾಡೋಣ ಎಂಬುದಾಗಿ ಶೌನಕರು ಋಷಿಗಳಿಗೆ ಹೇಳಿದರು.

ತತಸ್ತೇ ಮುನಯಸ್ಸರ್ವೇ ಶೌನಕಂ ವಾಗ್ವಿದಾಂ ವರಂ।
ಸಮಾಶ್ಲಿಷ್ಯ ಸುಸಂಪ್ರೀತಾಃ ಸಾಧು ಸಾಧ್ವಿತಿ ಚಾಬ್ರುವನ್ ॥ ೨೪ ॥

ಅಥ ತೇ ಮುನಯೋ ಜಗ್ಮುಃ ಪುಣ್ಯಂ ಸಿದ್ಧಾಶ್ರಮಂ ವನಂ।
ಮೃಗವ್ರಜಸಮಾಕೀರ್ಣಂ ಮುನಿಭಿಃ ಪರಿಶೋಭಿತಂ ॥ ೨೫ ॥

ಮನೋಜ್ಞಭೂರುಹಲತಾಫಲಪುಷ್ಪವಿಭೂಷಿತಂ।
ಯುಕ್ತಂ ಸರೋಭಿರಚ್ಛೋದೈರತಿಥ್ಯಾತಿಥ್ಯಸಂಕುಲಂ ॥ ೨೬ ॥

ತೇ ತು ನಾರಾಯಣಂ ದೇವಮನಂತಮಪರಾಜಿತಂ।
ಯಜಂತಮಗ್ನಿಷ್ಟೋಮೇನ ದದೃಶೂ ರೋಮಹರ್ಷಣಿಂ ॥ ೨೭ ॥

ಯಥಾರ್ಹಮರ್ಚಿತಾಸ್ತೇನ ಸೂತೇನ ಪ್ರಥಿತೌಜಸಃ।
ತಸ್ಯಾವಭೃಥಮಿಷ್ಟಂತಸ್ತತ್ರ ತಸ್ಥುರ್ಮಖಾಲಯೇ ॥ ೨೮ ॥

---

೨೪. ಅನಂತರದಲ್ಲಿ ಆ ಋಷಿಗಳೆಲ್ಲರೂ ವಕ್ತೃಶ್ರೇಷ್ಠರಾದ ಶೌನಕರನ್ನು ಆಲಿಂಗನೆಮಾಡಿಕೊಂಡು ಬಹಳ ಸಂತೋಷವನ್ನು ಹೊಂದಿದವರಾಗಿ ಒಳ್ಳೆಯದು, ಒಳ್ಳೆಯದು ಎಂಬುದಾಗಿ ಹೇಳಿದರು.

೨೫-೨೬. ತರುವಾಯ ಆ ಋಷಿಗಳು ಜಿಂಕೆಗಳ ಸಮೂಹದಿಂದ ತುಂಬಿರುವ, ಋಷಿಗಳಿಂದ ಅಲಂಕೃತವಾದ, ಮನೋಹರವಾದ ವೃಕ್ಷಗಳು, ಬಳ್ಳಿಗಳು, ಹಣ್ಣು ಮತ್ತು ಹೂವುಗಳಿಂದ ವಿರಾಜಮಾನವಾದ, ಸ್ವಚ್ಛವಾದ ನೀರುಳ್ಳ ಸರೋವರಗಳಿಂದ ಕೂಡಿದ, ಅತಿಥಿಗಳಿಗೆ ಸತ್ಕಾರವನ್ನು ಮಾಡುತ್ತಿರುವ ಪರಿಜನರಿಂದ ಕೂಡಿರುವ, ಪುಣ್ಯಕ್ಷೇತ್ರವಾದ, ಸಿದ್ಧಾಶ್ರಮವೆಂಬ, ವನಕ್ಕೆ ಹೊರಟರು.

೨೭. ಸಿದ್ಧಾಶ್ರಮಕ್ಕೆ ಬಂದ ಋಷಿಗಳು ಅಲ್ಲಿ ಕ್ರೀಡಾದಿಗುಣವಿಶಿಷ್ಟನು, ವ್ಯಾಪ್ತನು, ವಿಜಯಶೀಲನೂ ಆದ ನಾರಾಯಣನನ್ನು ಅಗ್ನಿಷ್ಟೋಮವೆಂಬ ಯಾಗಪೂರ್ವಕವಾಗಿ ಪೂಜಿಸುತ್ತಿದ್ದ ಸೂತರನ್ನು ನೋಡಿದರು.

೨೮. ಪ್ರಸಿದ್ಧತೇಜಸ್ವಿಗಳಾದ ಶೌನಕಾದಿಗಳು ತಮ್ಮತಮ್ಮ ಯೋಗ್ಯತಾನುಸಾರವಾಗಿ ಆ ಸೂತರಿಂದ ಸತ್ಕರಿಸಲ್ಪಟ್ಟು ಅಲ್ಲಿ ನಡೆಯುತ್ತಿದ್ದ ಅಗ್ನಿ

**ಅಧ್ವರಾವಭೃಥಸ್ನಾತಂ ಸೂತಂ ಪೌರಾಣಿಕೋತ್ತಮಂ ।**
**ಪಪ್ರಚ್ಛುಸ್ತೇ ಸುಖಾಸೀನಂ ನೈಮಿಷಾರಣ್ಯವಾಸಿನಃ ॥ ೨೯ ॥**

**ಋಷಯ ಊಚುಃ**

**ವಯಂ ತ್ವತಿಥಯಃ ಪ್ರಾಪ್ತಾ ಆತಿಥೇಯೋಽಸಿ ಸುವ್ರತ ।**
**ಜ್ಞಾನದಾನೋಪಚಾರೇಣ ಪೂಜಯಾಸ್ಮಾನ್ಯಥಾವಿಧಿ ॥ ೩೦ ॥**

**ದಿವೌಕಸೋ ಹಿ ಜೀವಂತಿ ಪೀತ್ವಾ ಚಂದ್ರಕಲಾಮೃತಂ ।**
**ಜ್ಞಾನಾಮೃತಂ ಭೂಸುರಾಸ್ತು ಮುನೇ ತ್ವನ್ಮುಖನಿಸ್ಸೃತಂ ॥ ೩೧ ॥**

**ಯೇನೇದಮಖಿಲಂ ಜಾತಂ ಯದಾಧಾರಂ ಯದಾತ್ಮಕಂ ।**
**ಯಸ್ಮಿನ್ ಪ್ರತಿಷ್ಠಿತಂ ತಾತ ಯಸ್ಮಿನ್ವಾ ಲಯಮೇಷ್ಯತಿ ॥ ೩೨ ॥**

---

ಷ್ಟೋಮಯಾಗದ ಅವಭೃಥವೆಂಬ, ಯಾಗದ ಕೊನೆಯಲ್ಲಿ ಮಾಡುವ ಉತ್ಸವವನ್ನು ನೋಡುತ್ತಾ ಆ ಯಜ್ಞಶಾಲೆಯಲ್ಲಿ ನಿಂತರು.

೨೯. ನೈಮಿಷಾರಣ್ಯದಲ್ಲಿ ವಾಸಿಸುತ್ತಿದ್ದ ಆ ಋಷಿಗಳು ಯಜ್ಞಸಂಬಂಧಿಯಾದ ಅವಭೃಥಸ್ನಾನವನ್ನು ಮಾಡಿ ಸುಖವಾಗಿ ಕುಳಿತಿದ್ದ ಪೌರಾಣಿಕಶ್ರೇಷ್ಠರಾದ ಸೂತರನ್ನು ಪ್ರಶ್ನೆ ಮಾಡಿದರು.

೩೦. ಋಷಿಗಳು ಮಾತನಾಡುತ್ತಾರೆ:—ಸಮೀಚೀನವ್ರತವನ್ನು ಆಚರಿಸುತ್ತಿರುವ ಸೂತರೇ ! ನಿಮ್ಮಿಂದ ಸತ್ಕಾರಕ್ಕೆ ಅರ್ಹರಾದ ನಾವು ಅತಿಥಿಗಳಾಗಿ ನಿಮ್ಮಲ್ಲಿಗೆ ಬಂದಿದ್ದೇವೆ. ನಮಗೆ ತತ್ವಜ್ಞಾನವನ್ನನುಗ್ರಹಿಸಿ ವಿಧಾನೋಕ್ತಪ್ರಕಾರ ಅತಿಥಿಪೂಜೆಯನ್ನು ಮಾಡಿರಿ.

೩೧. ಎಲೈ ಸೂತಮುನಿಯೇ! ದೇವತೆಗಳು ಚಂದ್ರಕಿರಣಗಳಿಂದ ಸ್ರವಿಸುತ್ತಿರುವ ಅಮೃತವನ್ನು ಪಾನಮಾಡಿ ಜೀವಿಸುತ್ತಾರೆ. ಬ್ರಾಹ್ಮಣರಾದರೋ ನಿಮ್ಮ ಬಾಯಿಮಾತು ಎಂದರೆ ಉಪದೇಶವಾಣಿಯಿಂದುಂಟಾಗುವ ತತ್ವಜ್ಞಾನವೆಂಬ ಅಮೃತವನ್ನು ಪಾನಮಾಡಿ ಜೀವಿಸುತ್ತಾರೆ.

೩೨–೩೫. ಈ ಸಮಸ್ತ ಪ್ರಪಂಚವೂ ಯಾರಿಂದ ಸೃಷ್ಟಿಸಲ್ಪಟ್ಟಿತು? ಇದಕ್ಕೆ ಆಶ್ರಯವಾವುದು? ನಿಯಾಮಕನು (ಒಡೆಯನು) ಯಾರು?

**ಕೇನ ವಿಷ್ಣುಃ ಪ್ರಸನ್ನಃ ಸ್ಯಾತ್ಸ ಕಥಂ ಪೂಜ್ಯತೇ ಹರಿಃ ।**
**ಕಥಂ ವರ್ಣಾಶ್ರಮಾಚಾರಶ್ಚಾತಿಥೇಃ ಪೂಜನಂ ಕಥಂ ॥ ೩೩ ॥**

**ಸಫಲಂ ಸ್ಯಾದ್ಯಥಾ ಕರ್ಮ ಮೋಕ್ಷೋಪಾಯಃ ಕಥಂ ನೃಣಾಂ ।**
**ಭಕ್ತ್ಯಾ ಕಿಂ ಪ್ರಾಪ್ಯತೇ ಪುಂಭಿಸ್ತಥಾ ಭಕ್ತಿಶ್ಚ ಕೀದೃಶೀ ॥ ೩೪ ॥**

**ವದ ಸೂತ ಮುನಿಶ್ರೇಷ್ಠ ಸರ್ವಮೇತದಸಂಶಯಂ ।**
**ಕಸ್ಯ ನೋ ಜಾಯತೇ ಶ್ರದ್ಧಾ ಶ್ರೋತುಂ ತ್ವದ್ವಚನಾಮೃತಂ ॥ ೩೫ ॥**

---

ಅಪ್ಪಾ! ಈ ಪ್ರಪಂಚದ ಸ್ಥಿತಿಯು ಯಾರ ಅಧೀನವು? ಇದು ಯಾರಿಂದ ಎಲ್ಲಿ ಲಯ (ನಾಶ) ವನ್ನು ಹೊಂದುತ್ತದೆ? ಶ್ರೀ ಮಹಾವಿಷ್ಣುವಿನ ಅನುಗ್ರಹವು ಹೇಗೆ ಉಂಟಾದೀತು? ಆತನನ್ನು ಪೂಜಿಸುವ ಬಗೆ ಹೇಗೆ? ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳು ಮತ್ತು ಬ್ರಹ್ಮಚರ್ಯ, ಗೃಹಸ್ಥ ವಾನಪ್ರಸ್ಥ, ಯತಿ ಎಂಬ ನಾಲ್ಕು ಆಶ್ರಮಗಳು ಇವುಗಳ ಧರ್ಮಗಳು ಆವುವು? ಅತಿಥಿಯನ್ನು ಸತ್ಕರಿಸುವ ಬಗೆ ಹೇಗೆ? ನಾವು ಆಚರಿಸುವ ಕರ್ಮಗಳು ಹೇಗೆ ಫಲಪ್ರದವಾಗುತ್ತವೆ? ಮನುಷ್ಯರಿಗೆ ಮೋಕ್ಷವನ್ನು ಕೊಡುವ ಸಾಧನವಾವುದು? ಭಕ್ತಿಯಿಂದ ಪುರುಷರಿಗೆ ಯಾವ ಫಲವು ಲಭಿಸುತ್ತದೆ? ಭಕ್ತಿಯೆಂದರೇನು? ಎಂಬೀ ಸಕಲ ವಿಷಯಗಳನ್ನೂ ಮುನಿಶ್ರೇಷ್ಠರಾದ ಸೂತರೇ! ಖಚಿತವಾಗಿ ಉಪದೇಶಿಸಿರಿ. ಅಮೃತದಂತಿರುವ ನಿಮ್ಮ ಉಪದೇಶವಾಕ್ಯಗಳನ್ನು ಕೇಳಲು ಯಾರಿಗೆ ತಾನೆ ಶ್ರದ್ಧೆಯಿರಲಾರದು ಎಂದರೆ ಅಮೃತವನ್ನು ಹೇಗೆ ಸರ್ವರೂ ಆದರದಿಂದ ಸ್ವೀಕರಿಸುತ್ತಾರೆಯೋ ಅದರಂತೆ ಸರ್ವರೂ ಮುಕ್ತಿಸಾಧನವಾದ ತತ್ವಜ್ಞಾನವನ್ನುಂಟುಮಾಡುವ ನಿಮ್ಮ ಉಪದೇಶವನ್ನು ಆದರಾತಿಶಯದಿಂದ ಕೇಳುತ್ತಾರೆ. ಆದುದರಿಂದ ತಾವು ಮೇಲ್ಕಂಡ ವಿಷಯಗಳನ್ನು ಉಪದೇಶಿಸಬೇಕೆಂದು ಶೌನಕಾದಿ ಋಷಿಗಳು ಸೂತರನ್ನು ಪ್ರಾರ್ಥಿಸಿದರು ಎಂದು ತಾತ್ಪರ್ಯ.

ಸೂತ ಉವಾಚ

ಶೃಣುಧ್ವಂ ಋಷಯಃ ಸರ್ವೇ ಯದಿಷ್ಟಂ ವೋ ವದಾಮಿ ತತ್ ।
ಗೀತಂ ಸನಕಮುಖ್ಯೈಸ್ತು ನಾರದಾಯ ಮಹಾತ್ಮನೇ ॥ ೩೬ ॥

ಪುರಾಣಂ ನಾರದೋಪಾಖ್ಯಮೇತದ್ವೇದಾರ್ಥಸಂಮಿತಂ ।
ಸರ್ವಪಾಪಪ್ರಶಮನಂ ದುಷ್ಟಗ್ರಹನಿವಾರಣಂ ॥ ೩೭ ॥

ದುಃಸ್ವಪ್ನನಾಶನಂ ಧನ್ಯಂ ಭುಕ್ತಿಮುಕ್ತಿಫಲಪ್ರದಂ ।
ನಾರಾಯಣಕಥೋಪೇತಂ ಸರ್ವಕಲ್ಯಾಣಕಾರಕಂ ॥ ೩೮ ॥

ಧರ್ಮಾರ್ಥಕಾಮಮೋಕ್ಷಾಣಾಂ ಹೇತುಭೂತಂ ಮಹಾಫಲಂ ।
ಅಪೂರ್ವಪುಣ್ಯಫಲದಂ ಶೃಣುಧ್ವಂ ಸುಸಮಾಹಿತಾಃ ॥ ೩೯ ॥

---

೩೬. ಸೂತರು ಹೇಳುತ್ತಾರೆ:—ಋಷಿಗಳಿರಾ ನಿಮಗೆ ಇಷ್ಟವಾದುದನ್ನು ಹೇಳುತ್ತೇನೆ ಕೇಳಿರಿ. ಇದೇ ವಿಷಯವು ಪೂರ್ವದಲ್ಲಿ ಮಹಾತ್ಮರಾದ ನಾರದರಿಗೆ ಸನಕಾದಿಋಷಿಗಳಿಂದ ಉಪದೇಶಿಸಲ್ಪಟ್ಟಿದೆ.

೩೭-೩೯. ಋಷಿಗಳಿರಾ ! ವೇದಗಳತತ್ತ್ವಾರ್ಥವನ್ನೊಳಗೊಂಡ ಸಕಲ ಪಾಪವನ್ನೂ ಪರಿಹರಿಸುವಂತಹ, ದುಷ್ಟವಾದ ಪಿಶಾಚಾದಿ ಬಾಧೆಯನ್ನು ಪರಿಹರಿಸುವ, ಕೆಟ್ಟ ಸ್ವಪ್ನಗಳನ್ನು ನಾಶಗೊಳಿಸುವ, ಪುಣ್ಯಸಾಧನವಾದ, ಐಹಿಕ ಭೋಗ ಮತ್ತು ಮೋಕ್ಷರೂಪ ಫಲವನ್ನು ಕೊಡುವ, ಶ್ರೀ ನಾರಾಯಣನ ದಿವ್ಯ ಚರಿತ್ರೆಯಿಂದ ಕೂಡಿರುವ, ಸಮಸ್ತ ಶ್ರೇಯಸ್ಸಿಗೂ ಕಾರಣವಾಗಿರುವ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳಿಗೂ ಕಾರಣವಾದ, ಉತ್ತಮಫಲಹೇತುವಾದ, ಅಪೂರ್ವ ಪುಣ್ಯಫಲವನ್ನು ಕೊಡುವ ನಾರದ ಎಂಬ ಉಪಪದವುಳ್ಳ, ಈ ಪುರಾಣವನ್ನು ಎಂದರೆ ನಾರದೀಯ ಪುರಾಣವನ್ನು ಸಮಾಧಾನಚಿತ್ತರಾಗಿ ಕೇಳಿ.

**ಮಹಾಪಾತಕಯುಕ್ತೋ ವಾ ಯುಕ್ತೋ ವಾ ಹ್ಯುಪಪಾತಕೈಃ ।**
**ಶ್ರುತ್ವೈತದಾರ್ಷಂ ದಿವ್ಯಂ ಚ ಪುರಾಣಂ ಶುದ್ಧಿಮಾಪ್ನುಯಾತ್ ॥ ೪೦ ॥**

**ಯಸ್ಯೈಕಾಧ್ಯಾಯಪಠನಾದ್ವಾಜಿಮೇಧಫಲಂ ಲಭೇತ್ ।**
**ಅಧ್ಯಾಯದ್ವಯಪಾಠೇನ ರಾಜಸೂಯಫಲಂ ತಥಾ ॥ ೪೧ ॥**

**ಜ್ಯೇಷ್ಠಮಾಸೇ ಪೂರ್ಣಿಮಾಯಾಂ ಮೂಲರ್ಕ್ಷೇ ಪ್ರಯತೋ ನರಃ ।**
**ಸ್ನಾತ್ವಾ ಚ ಯಮುನಾತೋಯೇ ಮಧುರಾಯಾಮುಪೋಷಿತಃ ॥ ೪೨ ॥**

**ಅಭ್ಯರ್ಚ್ಯ ವಿಧಿವತ್ಕೃಷ್ಣಂ ಯತ್ಫಲಂ ಲಭತೇ ದ್ವಿಜಾಃ**
**ತತ್ಫಲಂ ಸಮವಾಪ್ನೋತಿ ಅಧ್ಯಾಯತ್ರಯ ಪಾಠತಃ ॥ ೪೩ ॥**

**ತತ್ಪ್ರವಕ್ಷ್ಯಾಮಿ ವಸ್ಸಮ್ಯಕ್ ಶ್ರುಣುಧ್ವಂ ಗದತೋ ಮಮ ।**
**ಜನ್ಮಾಯುತಾರ್ಜಿತೈಃ ಪಾಪೈರ್ಮುಕ್ತಃ ಕೋಟಿಕುಲಾನ್ವಿತಃ ॥ ೪೪ ॥**

---

೪೦. ಮಹಾಪಾತಕವನ್ನು ಮಾಡಿದವನು, ಅಥವಾ ಉಪಪಾತಕ ಎಂದರೆ ಸಣ್ಣ ನಿಷಿದ್ಧ ಕರ್ಮಗಳನ್ನು ಮಾಡಿದವನಾದರೂ ದಿವ್ಯ ಮಹಿಮೆಯನ್ನು ಹೇಳುವ, ಋಷಿಪ್ರಣೀತವಾದ ಈ ನಾರದ ಪುರಾಣವನ್ನು ಶ್ರವಣ ಮಾಡಿದರೆ ಶುದ್ಧನಾಗುವನು.

೪೧-೪೮. ಯಾವ ಪುರಾಣದ ಒಂದು ಅಧ್ಯಾಯವನ್ನು ಮಾತ್ರ ಪಠನ ಮಾಡುವುದರಿಂದ ಅಶ್ವಮೇಧಯಾಗದ ಫಲವು ಲಭಿಸುತ್ತದೆಯೋ, ಎರಡು ಅಧ್ಯಾಯಗಳನ್ನು ಪಠನಮಾಡುವುದರಿಂದ ರಾಜಸೂಯಯಾಗದ ಫಲವುಂಟಾಗುತ್ತದೆಯೋ, ಮನುಜನು ಮೂಲನಕ್ಷತ್ರಯುಕ್ತವಾದ ಜ್ಯೇಷ್ಠಮಾಸದ ಪೂರ್ಣಿಮಾದಿನದಲ್ಲಿ ನಿಯಮದಿಂದ ಮಧುರೆಯೆಂಬ ಕ್ಷೇತ್ರದಲ್ಲಿ ಯಮುನಾನದಿಯ ಜಲದಲ್ಲಿ ಸ್ನಾನಮಾಡಿ ಉಪವಾಸಮಾಡಿದವನಾಗಿ, ಶ್ರೀಕೃಷ್ಣನನ್ನು ಶಾಸ್ತ್ರೋಕ್ತ ಪ್ರಕಾರವಾಗಿ ಪೂಜಿಸಿದರೆ ಯಾವ ಫಲವುಂಟಾಗುತ್ತದೆಯೋ ಅಂತಹ ಫಲವನ್ನೂ ಯಾವ ಪುರಾಣದ ಮೂರು ಅಧ್ಯಾಯಗಳನ್ನು ಪಠನಮಾಡುವುದರಿಂದ ಹೊಂದುತ್ತಾನೆಯೋ ಅಂತಹ ಪುರಾಣವನ್ನು ನಿಮಗೆ ಹೇಳುತ್ತೇನೆ. ಚೆನ್ನಾಗಿ ಶ್ರವಣಮಾಡಿ. ಈ ಪುರಾಣವನ್ನು ಭಕ್ತಿಯಿಂದ ಶ್ರವಣಮಾಡುವವನು ಹತ್ತು

ಬ್ರಹ್ಮಣಃ ಪದಮಾಸಾದ್ಯ ತತ್ರೈವ ಪ್ರತಿತಿಷ್ಠತಿ ।
ಶ್ರುತ್ವಾಸ್ಯ ತು ದಶಾಧ್ಯಾಯಾನ್ಭಕ್ತಿಭಾವೇನ ಮಾನವಃ ॥ ೫೪ ॥

ನಿರ್ವಾಣಮುಕ್ತಿಂ ಲಭತೇ ನಾತ್ರ ಕಾರ್ಯಾ ವಿಚಾರಣಾ ।
ಶ್ರೇಯಸಾಂ ಪರಮಂ ಶ್ರೇಯಃ ಪವಿತ್ರಾಣಾಮನುತ್ತಮಂ ॥ ೫೬ ॥

ದುಸ್ವಪ್ನನಾಶನಂ ಪುಣ್ಯಂ ಶ್ರೋತವ್ಯಂ ಯತ್ನತೋ ದ್ವಿಜಾಃ ।
ಶ್ರದ್ಧಯಾ ಸಹಿತೋ ಮರ್ತ್ಯಃ ಶ್ಲೋಕಂ ಶ್ಲೋಕಾರ್ಧಮೇವವಾ ॥ ೫೭ ॥

ಪಠಿತ್ವಾ ಮುಚ್ಯತೇ ಸದ್ಯಃ ಮಹಾಪಾತಕರಾಶಿಭಿಃ ।
ಸತಾಮೇವ ಪ್ರವಕ್ತವ್ಯಂ ಗುಹ್ಯಾದ್ಗುಹ್ಯತರಂ ಯತಃ ॥ ೫೮ ॥

---

ಸಾವಿರ ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳನ್ನು ಕಳೆದುಕೊಂಡು ಒಂದುಕೋಟಿ ಕುಲಸಹಿತನಾಗಿ ಪರಬ್ರಹ್ಮನ ಆವಾಸಸ್ಥಾನವಾದ ವೈಕುಂಠಾದಿ ಲೋಕಕ್ಕೆ ಹೋಗಿ ಅಲ್ಲಿಯೇ ಶಾಶ್ವತವಾಗಿ ಸುಖವನ್ನು ಅನುಭವಿಸಿಕೊಂಡಿರುತ್ತಾನೆ. ಈ ಪುರಾಣದ ಹತ್ತು ಅಧ್ಯಾಯಗಳನ್ನು ಭಕ್ತಿಯಿಂದ ಶ್ರವಣಮಾಡುವ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. ಓ ದ್ವಿಜರುಗಳಿರಾ! ಶ್ರೇಯಸ್ಕರವಾದವುಗಲ್ಲಿ ಅತ್ಯಂತ ಶ್ರೇಯಸ್ಕರವೂ, ಪರಿಶುದ್ಧವಾದವುಗಳಲ್ಲಿ ಶ್ರೇಷ್ಠವೂ, ದುಸ್ವಪ್ನನಾಶಕವೂ ಮತ್ತು ಪುಣ್ಯಸಂಪಾದಕವೂ ಆದ ಈ ಪುರಾಣವು ಪ್ರಯತ್ನಪೂರ್ವಕವಾಗಿ ನಿಮ್ಮಿಂದ ಶ್ರವಣಮಾಡಲ್ಪಡತಕ್ಕದ್ದು. ಮನುಷ್ಯನು ಭಕ್ತಿಪುರಸ್ಸರವಾಗಿ ಈ ಪುರಾಣದ ಒಂದು ಶ್ಲೋಕ ಅಥವಾ ಅರ್ಧಶ್ಲೋಕವನ್ನಾದರೂ ಪಠನಮಾಡಿದರೆ ತಕ್ಷಣ ತನ್ನ ಮಹಾಪಾತಕಸಮೂಹಗಳಿಂದ ಮುಕ್ತನಾಗುತ್ತಾನೆ (ಒಟ್ಟಿನಲ್ಲಿ ನಾರದೀಯ ಪುರಾಣವು ಉತ್ತಮವಾದದ್ದು. ಅದನ್ನು ತಮ್ಮ ಶಕ್ತ್ಯನುಸಾರವಾಗಿ ಶ್ರವಣ ಪಠನಮಾಡುವುದರಿಂದ ಈ ಲೋಕದಲ್ಲಿ ಇಷ್ಟಾರ್ಥಗಳುಂಟಾಗಿ ಪರಲೋಕದಲ್ಲಿ ಮೋಕ್ಷಪರ್ಯಂತವಾದ ಸದ್ಗತಿಯುಂಟಾಗುತ್ತದೆಂದು ತಾತ್ಪರ್ಯ.)

ಈ ಪುರಾಣವು ಗೋಪ್ಯ (ಬಚ್ಚಿಡುವ) ವಸ್ತುಗಳಿಗಿಂತಲೂ ಅತಿಶಯವಾಗಿ ಗೋಪ್ಯವಾಗಿಡಬೇಕಾದ ಗ್ರಂಥವಾದುದರಿಂದ ಇದನ್ನು ಸಜ್ಜನರಿಗೆ ಮಾತ್ರವೇ ಹೇಳಬೇಕು.

ವಾಚಯೇತ್ಪುರತೋ ವಿಷ್ಣೋಃ ಪುಣ್ಯಕ್ಷೇತ್ರೇ ದ್ವಿಜಾಂತಿಕೇ ।
ಬ್ರಹ್ಮದ್ರೋಹಪರಾಣಾಂ ಚ ದಂಭಾಚಾರಯುತಾತ್ಮನಾಂ ॥ ೪೯ ॥

ಜನಾನಾಂ ಬಕವೃತ್ತೀನಾಂ ನ ಬ್ರೂಯಾದಿದಮುತ್ತಮಂ ।
ತ್ಯಕ್ತ ಕಾಮಾದಿದೋಷಾಣಾಂ ವಿಷ್ಣುಭಕ್ತಿರತಾತ್ಮನಾಂ ॥ ೫೦ ॥

ಸದಾಚಾರಪರಾಣಾಂ ಚ ವಕ್ತವ್ಯಂ ಮೋಕ್ಷಸಾಧನಂ ।
ಸರ್ವದೇವಮಯೋ ವಿಷ್ಣುಃ ಸ್ಮರತಾಮಾರ್ತಿನಾಶನಃ ॥ ೫೧ ॥

ಸದ್ಭಕ್ತಿವತ್ಸಲೋ ವಿಪ್ರಾ ಭಕ್ತ್ಯಾ ತುಷ್ಯತಿ ನಾನ್ಯಥಾ ।
ಅಶ್ರದ್ಧಯಾಪಿ ಯನ್ನಾಮ್ನಿ ಕೀರ್ತಿತೇಥ ಸ್ಮೃತೇಽಪಿ ವಾ ॥ ೫೨ ॥

ವಿಮುಕ್ತಃ ಪಾತಕೈರ್ಮರ್ತ್ಯೋ ಲಭತೇ ಪದಮವ್ಯಯಂ ।
ಸಂಸಾರಘೋರಕಾಂತಾರದಾವಾಗ್ನಿರ್ಮಧುಸೂದನಃ ॥ ೫೩ ॥

---

೪೯–೫೬. ದ್ವಿಜ ಎಂದರೆ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಇವರುಗಳು ಸೇರಿದೆಡೆಯಲ್ಲಿ, ಪುಣ್ಯಕ್ಷೇತ್ರದಲ್ಲಿ ಶ್ರೀ ನಾರಾಯಣನ ಸನ್ನಿಧಿಯಲ್ಲಿ ಈ ಪುರಾಣವನ್ನು ಹೇಳಿಸಬೇಕು. ಬ್ರಹ್ಮದ್ರೋಹಪರರಿಗೂ ಬಾಹ್ಯದಲ್ಲಿ ಮಾತ್ರ ಧರ್ಮಾನುಷ್ಠಾನವನ್ನು ತೋರಿಸುವವರಿಗೂ, ಮೋಸಗಾರರಾದ ಜನರಿಗೂ ಈ ಉತ್ತಮವಾದ ಪುರಾಣವನ್ನು ಉಪದೇಶಿಸಬಾರದು. ಕಾಮ, ಮೋಹ, ಮದ ಮಾತ್ಸರ್ಯ ಮುಂತಾದ ದೋಷಗಳನ್ನು ಬಿಟ್ಟಿರುವ ಕೇವಲ ವಿಷ್ಣುಭಕ್ತರಾದ ಸದ್ಧರ್ಮಾನುಷ್ಠಾನದಲ್ಲಿ ಆಸಕ್ತಿಯುಳ್ಳ ಜನರಿಗೇ ಮೋಕ್ಷಸಾಧಕವಾದ ಈ ಪುರಾಣವನ್ನು ಉಪದೇಶಿಸಬೇಕು. ಸಕಲ ದೇವತೆಗಳಿಗೂ ನಿಯಾಮಕನು, ತನ್ನನ್ನು ಧ್ಯಾನಿಸುವವರಿಗೆ ರೋಗಾದಿಬಾಧೆಯನ್ನು ಪರಿಹರಿಸುವವನು, ಸಮಿಾಚೀನವಾದ ಭಕ್ತಿಯುಳ್ಳವರಲ್ಲಿ ಪ್ರೀತಿಯನ್ನು ಮಾಡುವವನೂ ಆದ ವಿಷ್ಣುವು ಭಕ್ತಿಯಿಂದಲೇ ಸಂತುಷ್ಟನಾಗುತ್ತಾನೆ. ಆತನು ಬೇರೆ ಯಾವುದರಿಂದಲೂ ಪ್ರಸನ್ನನಾಗಲಾರನು. ಆದರವಿಲ್ಲದೆಉದಾಸೀನಭಾವದಿಂದಲಾದರೂ ನಾರಾಯಣ, ಗೋವಿಂದ ಮುಂತಾದ ಭಗವಂತನ ನಾಮಗಳನ್ನು ಕೀರ್ತನೆ ಅಥವಾ ಸ್ಮರಣೆಮಾಡಿದರೂ ಸಹ ಮನುಷ್ಯನು ಅಷ್ಟುಮಾತ್ರದಿಂದಲೇ ಪಾಪಗಳನ್ನು

ಸ್ಮರತಾಂ ಸರ್ವಪಾಪಾನಿ ನಾಶಯತ್ಯಾಶು ಸತ್ತಮಾಃ ।
ತದರ್ಥದ್ಯೋತಕಮಿದಂ ಪುರಾಣಂ ಶ್ರಾವ್ಯಮುತ್ತಮಂ　　　॥ ೫೪ ॥

ಶ್ರವಣಾತ್ಪಠನಾದ್ವಾಪಿ ಸರ್ವಪಾಪ ವಿನಾಶಕೃತ್ ।
ಯಸ್ಯಾಸ್ಯ ಶ್ರವಣೇ ಬುದ್ಧಿರ್ಜಾಯತೇ ಭಕ್ತಿಸಂಯುತಾ　　　॥ ೫೫ ॥

ಸ ಏವ ಕೃತಕೃತ್ಯಸ್ತು ಸರ್ವಶಾಸ್ತ್ರಾರ್ಥಕೋವಿದಃ ।
ಯದರ್ಜಿತಂ ತಪಃ ಪುಣ್ಯಂ ತನ್ಮನ್ಯೇ ಸಫಲಂ ದ್ವಿಜಾಃ　　　॥ ೫೬ ॥

ಯದಸ್ಯ ಶ್ರವಣೇ ಬುದ್ಧಿರನ್ಯಥಾ ನಹಿ ಜಾಯತೇ ।
ಸತ್ಕಥಾಸು ಪ್ರವರ್ತಂತೇ ಸಜ್ಜನಾ ಯೇ ಜಗದ್ಧಿತಾಃ　　　॥ ೫೭ ॥

---

ಕಳೆದುಕೊಂಡು ಶಾಶ್ವತವಾದ ಸ್ಥಾನ ಎಂದರೆ ವೈಕುಂಠಾದಿಮುಕ್ತಲೋಕವನ್ನು ಹೊಂದುತ್ತಾನೆ. ಸಜ್ಜನೋತ್ತಮರೇ ! ಸಂಸಾರವೆಂಬ ಭಯಂಕರವಾದ ಅರಣ್ಯಕ್ಕೆ ಕಾಡುಕಿಚ್ಚಿನೋಪಾದಿಯಲ್ಲಿರುವಂತಹ ಶ್ರೀ ಕೃಷ್ಣನು ತನ್ನನ್ನು ಧ್ಯಾನಿಸುವವರ ಸಕಲ ಪಾಪಗಳನ್ನೂ ಶೀಘ್ರವಾಗಿ ನಾಶಪಡಿಸುತ್ತಾನೆ. ಶ್ರೀ ನಾರಾಯಣನ ಮಹಿಮೆಯನ್ನು ಪ್ರಕಾಶಪಡಿಸುವ, ಶ್ರೇಷ್ಠವಾದ, ಕೇಳುವುದರಿಂದ ಅಥವಾ ತಾನೇ ಓದುವುದರಿಂದಲಾದರೂ ಸಮಸ್ತಪಾಪಗಳನ್ನು ನಾಶಪಡಿಸುವಂತಹ, ಈ ಪುರಾಣವನ್ನು ಸರ್ವರೂ ಶ್ರವಣಮಾಡಬೇಕು. ಯಾರಿಗೆ ಭಕ್ತಿಯಿಂದ ಈ ಪುರಾಣಶ್ರವಣಮಾಡಬೇಕೆಂಬ ಬುದ್ಧಿಯುಂಟಾಗುತ್ತದೆಯೋ ಅಂತಹ ಮನುಷ್ಯನೇ ತನ್ನ ಕರ್ತವ್ಯವನ್ನು ನೆರವೇರಿಸಿದವನು ಮತ್ತು ಸಮಸ್ತವಾದ ಶಾಸ್ತ್ರತತ್ವಾರ್ಥಗಳನ್ನು ತಿಳಿದಿರುವವನು. ಅಂತಹವನಿಂದ ಮಾಡಲ್ಪಟ್ಟ ತಪಸ್ಸೇ ಸಫಲವಾಗಿ ಪುಣ್ಯಸಾಧನವಾಗುತ್ತದೆಂದು ನಾನು ಭಾವಿಸುತ್ತೇನೆ.

೫೭. ಭಕ್ತರಲ್ಲದವರಿಗೆ ಈ ಪುರಾಣವನ್ನು ಶ್ರವಣಮಾಡಬೇಕೆಂಬ ಬುದ್ಧಿಯುಂಟಾಗುವುದಿಲ್ಲ. ಆದಕಾರಣ ಜಗತ್ತಿಗೆ ಒಳ್ಳೆಯದನ್ನು ಕೋರುವ ಭಕ್ತರಾದ ಸಜ್ಜನರುಗಳೇ ಇಂತಹ ಸಮೀಚೀನಕಥೆಗಳ ಶ್ರವಣಪಠನಾದಿಗಳಲ್ಲಿ ಉದ್ಯುಕ್ತರಾಗುತ್ತಾರೆ.

ನಿಂದಾಯಾಂ ಕಲಹೇ ವಾಪಿ ಹ್ಯಸಂತಃ ಪಾಪತತ್ಪರಾಃ ।
ಪುರಾಣೇಷ್ವರ್ಥವಾದತ್ವಂ ಯೇ ವದಂತಿ ನರಾಧಮಾಃ ॥ ೫೮ ॥

ತೈರಾರ್ಜಿತಾನಿ ಪುಣ್ಯಾನಿ ಕ್ಷಯಂ ಯಾಂತಿ ದ್ವಿಜೋತ್ತಮಾಃ ।
ಸಮಸ್ತಕರ್ಮನಿರ್ಮೂಲ ಸಾಧನಾನಿ ನರಾಧಮಃ ॥ ೫೯ ॥

ಪುರಾಣಾನ್ಯರ್ಥವಾದೇನ ಬ್ರುವನ್ನರಕಮಶ್ನುತೇ ।
ಅನ್ಯೇ ಚ ಸಾಧಯಂತ್ಯೇವ ಕಾರ್ಯಾಣಿ ವಿಧಿನಾ ನರಾಃ ॥ ೬೦ ॥

ಅನಾಯಾಸೇನ ಯಃ ಪುಣ್ಯಾನೀಚ್ಛತೀಹ ದ್ವಿಜೋತ್ತಮಾಃ ।
ಶ್ರೋತವ್ಯಾನಿ ಪುರಾಣಾನಿ ತೇನ ವೈ ಭಕ್ತಿಭಾವತಃ ॥ ೬೧ ॥

---

೫೮. ಪಾಪಕೃತ್ಯಗಳನ್ನು ಮಾಡುವುದರಲ್ಲಿ ಆಸಕ್ತರಾದ ದುಷ್ಟಜನರು, ದೂಷಣೆಯಲ್ಲಿಯೂ ಜಗಳವಾಡುವುದರಲ್ಲಿಯೂ ನಿರತರಾಗಿರುತ್ತಾರೆ. ದ್ವಿಜೋತ್ತಮರೇ! ಪುರಾಣಗಳು ಕೇವಲ ಅರ್ಥವಾದ ಎಂದರೆ ಸ್ತೋತ್ರವನ್ನು ಮಾಡುವುದಕ್ಕಾಗಿಯೇ ರಚಿಸಲ್ಪಟ್ಟಿವೆ, ತತ್ವವನ್ನು ಪ್ರತಿಪಾದಿಸುವುದಿಲ್ಲವೆಂಬುದಾಗಿ ಹೇಳುವವರು ನೀಚರು.

೫೯-೬೦. ಅಂತಹವರಿಂದ ಪೂರ್ವದಲ್ಲಿ ಸಂಪಾದಿಸಲ್ಪಟ್ಟ ಪುಣ್ಯಗಳೂ ಸಹ ಕ್ಷಯಿಸಿಹೋಗುತ್ತವೆ. ಪುರಾಣಗಳು ಅರ್ಥವಾದಗಳೆಂದು ತಿಳಿದು ಅವುಗಳಲ್ಲಿ ವಿಧಿಸಿರುವ ಕರ್ಮಗಳೆಲ್ಲವೂ ನಿಷ್ಫಲವಾದುವುಗಳೆಂದು ಹೇಳುವ ನೀಚ ಮನುಷ್ಯನು ನರಕವನ್ನು ಹೊಂದುತ್ತಾನೆ. ಪುರಾಣಗಳು ಯಥಾವತ್ತಾಗಿ ತತ್ವವನ್ನು ನಿರೂಪಿಸುತ್ತವೆಯೆಂದು ತಿಳಿಯುವ ಇತರ ಮನುಷ್ಯರು ವಿಧ್ಯುಕ್ತ ಪ್ರಕಾರವಾಗಿ ಕಾರ್ಯಸಿದ್ಧಿಯನ್ನು ಹೊಂದುತ್ತಾರೆ.

೬೧. ದ್ವಿಜಶ್ರೇಷ್ಠರೇ! ಹೆಚ್ಚು ಶ್ರಮವಿಲ್ಲದೆ ಪುಣ್ಯಗಳನ್ನು ಅಪೇಕ್ಷಿಸುವವನು ಭಕ್ತಿಭಾವದಿಂದ ಪುರಾಣಗಳನ್ನು ಶ್ರವಣಮಾಡಬೇಕು.

ಪುರಾಣಶ್ರವಣೇ ಬುದ್ಧಿರ್ಯಸ್ಯ ಪುಂಸಃ ಪ್ರವರ್ತತೇ ।
ಪುರಾರ್ಜಿತಾನಿ ಪಾಪಾನಿ ತಸ್ಯ ನಶ್ಯಂತ್ಯಸಂಶಯಂ ॥ ೬೨ ॥

ಪುರಾಣೇ ವರ್ತಮಾನೇಽಪಿ ಪಾಪಪಾಶೇನ ಯಂತ್ರಿತಃ ।
ಅದರೇಣಾನ್ಯಗಾಥಾಸು ಸಕ್ತಬುದ್ಧಿಃ ಪತತ್ಯಧಃ ॥ ೬೩ ॥

ಸತ್ಸಂಗದೇವಾರ್ಚನ ಸತ್ಕಥಾಸು
ಹಿತೋಪದೇಶೇ ನಿರತೋ ಮನುಷ್ಯಃ ।
ಪ್ರಯಾತಿ ವಿಷ್ಣೋಃ ಪರಮಂ ಪದಂ ತದ್
ದೇಹಾವಸಾನೇಽಚ್ಯುತತುಲ್ಯತೇಜಾಃ ॥ ೬೪ ॥

ತಸ್ಮಾದಿದಂ ನಾರದನಾಮಧೇಯಂ
ಪುಣ್ಯಂ ಪುರಾಣಂ ಶೃಣುತ ದ್ವಿಜೇಂದ್ರಾಃ ।
ಯಸ್ಮಿನ್ ಶ್ರುತೇ ಜನ್ಮಜರಾದಿಹೀನೋ
ನರೋ ಭವೇದಚ್ಯುತನಿಷ್ಠಚೇತಾಃ ॥ ೬೫ ॥

---

೬೨. ಯಾರಿಗೆ ಪುರಾಣಗಳನ್ನು ಕೇಳಬೇಕೆಂಬ ವಿಷಯದಲ್ಲಿ ಬುದ್ಧಿಯು ಪ್ರವರ್ತಿಸುತ್ತದೆಯೋ ಅಂತಹವರಿಗೆ ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪಗಳು ಸಂದೇಹವಿಲ್ಲದೆ ನಾಶವಾಗುತ್ತವೆ.

೬೩. ಪುರಾಣಗಳಿದ್ದಾಗ್ಯೂ ಅವನ್ನು ಬಿಟ್ಟು, ಪಾಪವೆಂಬ ಹಗ್ಗದಿಂದ ಕಟ್ಟಲ್ಪಟ್ಟವನಾಗಿ ಇತರ ವಿಷಯಗಳಲ್ಲಿಯೇ ಆದರದಿಂದ ಬುದ್ಧಿಯನ್ನು ಹಾಕುವವನು ನರಕಾದಿ ಅಧೋಲೋಕಗಳಲ್ಲಿ ಬೀಳುತ್ತಾನೆ.

೬೪. ಸಜ್ಜನರ ಸಹವಾಸ, ದೇವರಪೂಜೆ, ಸಮೀಚೀನಕಥೆಗಳಶ್ರವಣ ಇವುಗಳಲ್ಲಿ ಮತ್ತು ಇತರರಿಗೆ ಹಿತವನ್ನು ಉಪದೇಶಮಾಡುವುದರಲ್ಲಿಯೂ ಆಸಕ್ತನಾದ ಮನುಷ್ಯನು ಮರಣಾನಂತರದಲ್ಲಿ ಅಚ್ಯುತನಿಗೆ ಸದೃಶವಾದ ತೇಜಸ್ಸುಳ್ಳವನಾಗಿ ಉತ್ತಮವಾದ ವಿಷ್ಣುಸ್ಥಾನ ಅಂದರೆ ವೈಕುಂಠಾದಿಲೋಕಕ್ಕೆ ಹೋಗುತ್ತಾನೆ.

೬೫. ದ್ವಿಜವರರೇ! ಮನುಷ್ಯನು ಯಾವ ಪುರಾಣವನ್ನು ಶ್ರವಣ ಮಾಡಿದರೆ ಜನನ, ವಾರ್ಧಿಕ್ಯ, ಮರಣ ಇವುಗಳಿಲ್ಲದವನಾಗಿ ಭಗವಂತನನ್ನೇ ಧ್ಯಾನಿಸುವವನಾಗುತ್ತಾನೆಯೋ ಅಂತಹ ನಾರದನಾಮಕವಾದ, ಪುಣ್ಯಕರವಾದ ಈ ಪುರಾಣವನ್ನು ಶ್ರವಣಮಾಡಿರಿ.

ವರಂ ವರೇಣ್ಯಂ ವರದಂ ಪುರಾಣಂ
ನಿಜಪ್ರಭಾಭಾಸಿತಸರ್ವಲೋಕಂ ।
ಸಂಕಲ್ಪಿತಾರ್ಥಪ್ರದಮಾದಿದೇವಂ
ಸ್ಮೃತ್ವಾ ವ್ರಜೇನ್ಮುಕ್ತಿಪದಂ ಮನುಷ್ಯಃ ॥ ೬೬ ॥

ಬ್ರಹ್ಮೇಶವಿಷ್ಣ್ವಾದಿಶರೀರಭೇದೈ
ರ್ವಿಶ್ವಂ ಸೃಜತ್ಯತ್ತಿ ಚ ಪಾತಿ ವಿಪ್ರಾಃ ।
ತಮಾದಿದೇವಂ ಪರಮಂ ಪರೇಶ
ಮಾಧಾಯ ಚೇತಸ್ಯುಪಯಾತಿ ಮುಕ್ತಿಂ ॥ ೬೭ ॥

ಯೋ ನಾಮಜಾತ್ಯಾದಿವಿಕಲ್ಪಹೀನಃ
ಪರಃ ಪರಾಣಾಂ ಪರಮಃ ಪರಸ್ಮಾತ್ ।
ವೇದಾಂತವೇದ್ಯಃ ಸ್ವರುಚಾ ಪ್ರಕಾಶಃ
ಸ ಇಜ್ಯತೇ ಸರ್ವಪುರಾಣವೇದ್ಯೈಃ ॥ ೬೮ ॥

---

೬೬. ಮನುಷ್ಯನು ಉತ್ತಮೋತ್ತಮನಾದ, ವರ ಎಂದರೆ ಇಷ್ಟಾರ್ಥವನ್ನು ಕೊಡುವ, ಅನಾದಿಯಾದ, ತನ್ನ ಪ್ರಭೆಯಿಂದ ಸಕಲಲೋಕಗಳನ್ನೂ ಬೆಳಗುತ್ತಿರುವ, ಸಂಕಲ್ಪಾನುಸಾರವಾಗಿ ಫಲವನ್ನು ಕೊಡುವ, ಜಗತ್ಕಾರಣನಾದ ಪರಬ್ರಹ್ಮನನ್ನು ಧ್ಯಾನಮಾಡಿ ಮುಕ್ತಿಯನ್ನು ಹೊಂದಬೇಕು.

೬೭. ಯಾವ ಪರಬ್ರಹ್ಮನು ಚತುರ್ಮುಖಬ್ರಹ್ಮ, ಈಶ್ವರ, ವಿಷ್ಣು ಮುಂತಾದ ಭಿನ್ನಭಿನ್ನ ಶರೀರಗಳಲ್ಲಿ ಆವಿಷ್ಟನಾಗಿ ಈ ಪ್ರಪಂಚಕ್ಕೆ ಸೃಷ್ಟಿ, ಲಯ, ರಕ್ಷಣೆಗಳನ್ನು ಮಾಡಿಸುತ್ತಾನೆಯೋ ಅಂತಹ ಶ್ರೇಷ್ಠವಾದ ಉತ್ತಮೋತ್ತಮವಾದ ಮೂಲದೇವತೆಯನ್ನು ಮನಸ್ಸಿನಲ್ಲಿ ಧ್ಯಾನಿಸಿ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

೬೮. ಯಾವಾತನು ಜಾತಿ, ಗೋತ್ರ ಮುಂತಾದ ವಿಕಲ್ಪಗಳಿಲ್ಲದವನು ಉತ್ತಮರಾದ ದೇವತೆಗಳಿಗಿಂತಲೂ ಉತ್ತಮನು, ವೇದಾಂತಶಾಸ್ತ್ರದಿಂದಲೇ ತಿಳಿಯಲರ್ಹನು ಮತ್ತು ಸ್ವಪ್ರಕಾಶನೂ ಆಗಿರುವನೋ ಅಂತಹ ಪರಮಾತ್ಮನು ಸಮಸ್ತ ಪುರಾಣ ಮತ್ತು ವೇದಗಳಿಂದ ಸ್ತುತಿಸಲ್ಪಡುವನು.

ತಸ್ಮಾತ್ತ್ವಮೀಶಂ ಭಜತಾಂ ವಿಮುಕ್ತಿ
ಮುಪಾಸನಾರ್ಹಂ ಸ್ತ್ವಜಂ ಮುರಾರಿಂ ।
ಪರಂ ರಹಸ್ಯಂ ಪುರುಷಾರ್ಥಹೇತುಂ
ಸ್ಮೃತ್ವಾ ನರೋ ಯಾತಿ ಭವಾಬ್ಧಿಪಾರಂ ॥ ೬೯ ॥

ವಕ್ತವ್ಯಂ ಧಾರ್ಮಿಕೇಭ್ಯಸ್ತು ಶ್ರದ್ಧಧಾನೇಭ್ಯ ಏವ ಚ ।
ಮುಮುಕ್ಷುಭ್ಯೋ ಯತಿಭ್ಯಶ್ಚ ವೀತರಾಗೇಭ್ಯ ಏವ ಚ ॥ ೭೦ ॥

ವಕ್ತವ್ಯಂ ಪುಣ್ಯದೇಶೇ ಚ ಸಭಾಯಾಂ ದೇವತಾಗೃಹೇ ।
ಪುಣ್ಯಕ್ಷೇತ್ರೇ ಪುಣ್ಯತೀರ್ಥೇ ದೇವಬ್ರಾಹ್ಮಣಸನ್ನಿಧೌ ॥ ೭೧ ॥

ಉಚ್ಛಿಷ್ಟದೇಶೇ ವಕ್ತಾರ ಅಸತಾಮಿದಮುತ್ತಮಂ ।
ಪಚ್ಯಂತಿ ನರಕೇ ಘೋರೇ ಯಾವದಾಭೂತಸಂಪ್ಲವಂ ॥ ೭೨ ॥

---

೬೯. ಭಜಿಸುವವರಿಗೆ ಮುಕ್ತಿಯನ್ನು ಕೊಡುವವನು, ಧ್ಯಾನಮಾಡಲು ಅರ್ಹನೂ, ಅನಾದಿಯೂ, ಮುರ ಎಂಬ ದೈತ್ಯನಿಗೆ ಶತ್ರುವೂ, ಅತ್ಯಂತ ಗೋಪ್ಯನು, ಮೋಕ್ಷಾದಿಪುರುಷಾರ್ಥಗಳಿಗೆ ಕಾರಣನು, ಸ್ವಾಮಿಯೂ ಆದ ಪರಬ್ರಹ್ಮನನ್ನು ಧ್ಯಾನಿಸಿ ಮನುಷ್ಯನು ಸಂಸಾರವೆಂಬ ಸಮುದ್ರವನ್ನು ದಾಟುತ್ತಾನೆ.

೭೦. ಈ ಪುರಾಣವನ್ನು ಧರ್ಮಿಷ್ಠರು, ಆಸ್ತಿಕರು, ಮೋಕ್ಷವನ್ನು ಬಯಸುವವರು, ಸನ್ಯಾಸಿಗಳು, ರಾಗದ್ವೇಷಾದಿರಹಿತರೂ ಆಗಿರುವವರಿಗೇ ಹೇಳಬೇಕು.

೭೧. ಆರ್ಯಾವರ್ತವೆಂಬ ಪುಣ್ಯಭೂಮಿಯಲ್ಲಿ, ಸಜ್ಜನರಸಭೆಯಲ್ಲಿ, ದೇವಸ್ಥಾನ ತೀರ್ಥಕ್ಷೇತ್ರಗಳಲ್ಲಿ, ದೇವಬ್ರಾಹ್ಮಣರ ಸನ್ನಿಧಾನದಲ್ಲಿಯಾದರೂ ಈ ಪುರಾಣವನ್ನು ಹೇಳಬೇಕು.

೭೨. ಅಶುದ್ಧವಾದ ದೇಶದಲ್ಲಿ ಅಯೋಗ್ಯರಿಗೆ ಈ ಉತ್ತಮವಾದ ಪುರಾಣಕಥೆಯನ್ನು ಹೇಳುವವರು ಭೂತಪ್ರಳಯವಾಗುವವರೆಗೂ ಭಯಂಕರ ನರಕದಲ್ಲಿ ಬಿದ್ದು ದುಃಖಿಸುತ್ತಾರೆ.

ವೃಥಾ ಶೃಣೋತಿ ಯೋ ಮೂಢೋ ದಂಭೀ ಭಕ್ತಿವಿವರ್ಜಿತಃ ।
ಸೋऽಪಿ ತದ್ವನ್ಮಹಾಘೋರೇ ನರಕೇ ಪಚ್ಯತೇऽಕ್ಷಯೇ ॥ ೭೩ ॥

ನರೋ ಯಃ ಸತ್ಕಥಾಮಧ್ಯೇ ಸಂಭಾಷಾಂ ಕುರುತೇऽನ್ಯತಃ ।
ಸ ಯಾತಿ ನರಕಂ ಘೋರಂ ತದೇಕಾಗ್ರಮನಾ ಭವೇತ್ ॥ ೭೪ ॥

ಶ್ರೋತಾ ವಕ್ತಾ ಚ ವಿಪ್ರೇಂದ್ರಾಸ್ಸಮಾಹಿತಮನಾ ಭವೇತ್ ।
ಅಸಮಾಹಿತಚಿತ್ತಸ್ತು ನ ಜಾನಾತಿ ಹಿ ಕಿಂಚನ ॥ ೭೫ ॥

ತತ ಏಕಮನಾ ಭೂತ್ವಾ ಪಿಬೇದ್ಧರಿಕಥಾಮೃತಂ ।
ಕಥಂ ಸಂಭ್ರಾಂತಚಿತ್ತಸ್ಯ ಕಥಾಸ್ವಾದಃ ಪ್ರಜಾಯತೇ ॥ ೭೬ ॥

ಕಿಂ ಸುಖಂ ಪ್ರಾಪ್ಯತೇ ಲೋಕೇ ಪುಂಸಾಂ ಸಂಭ್ರಾಂತಚೇತಸಾಂ ।
ತಸ್ಮಾತ್ಸರ್ವಂ ಪರಿತ್ಯಜ್ಯ ಕಾಮಂ ದುಃಖಸ್ಯಸಾಧನಂ ॥ ೭೭ ॥

---

೭೩. ಭಕ್ತಿಯಿಲ್ಲದೇ ಜಂಭದಿಂದ ಈ ಪುರಾಣವನ್ನು ವ್ಯರ್ಥವಾಗಿ ಕೇಳುವ ಮೂಢನೂ ಸಹ ನಾಶವಾಗದಿರುವ, ಅತಿಭಯಂಕರವಾದ ನರಕದಲ್ಲಿ ದುಃಖಕ್ಕೆ ಗುರಿಮಾಡಲ್ಪಡುವನು.

೭೪. ಯಾವ ಮನುಷ್ಯನು ಸತ್ಕಥೆಯನ್ನು ಹೇಳುತ್ತಿರುವಾಗ ಮಧ್ಯದಲ್ಲಿ ಬೇರೆಮಾತುಗಳನ್ನಾಡುತ್ತಾನೆಯೋ ಅವನೂ ಭಯಂಕರವಾದ ನರಕಕ್ಕೆ ಹೋಗುತ್ತಾನೆ. ಆದುದರಿಂದ ಅಂತಹ ಸಂದರ್ಭದಲ್ಲಿ ಏಕಾಗ್ರಚಿತ್ತರಾಗಿ ಅದನ್ನೇ ಶ್ರವಣಮಾಡಬೇಕು.

೭೫. ಪುರಾಣಶ್ರವಣವನ್ನು ಮಾಡುವವನು ಮತ್ತು ಹೇಳುವವನೂ ಸಹ ಸಮಾಧಾನಮನಸ್ಕನಾಗಿರಬೇಕು. ಮನಸ್ಸಮಾಧಾನವಿಲ್ಲದವನಿಗೆ ಏನೂ ತಿಳಿಯುವುದಿಲ್ಲ.

೭೬. ಆದುದರಿಂದ ಬೇರೆ ವಿಷಯಗಳನ್ನು ಬಿಟ್ಟು ಅದರಲ್ಲಿಯೇ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿಕೊಂಡು ಹರಿಕಥೆಯೆಂಬ ಅಮೃತವನ್ನು ಪಾನ ಮಾಡಬೇಕು. ಮನಸ್ಸು ಅನೇಕ ವಿಷಯಗಳಲ್ಲಿ ಸಂಚರಿಸುತ್ತಿದ್ದರೆ ಕಥೆಯ ರಸಾಸ್ವಾದವು ಹೇಗಾದೀತು ?

೭೭-೭೯. ಅವ್ಯವಸ್ಥಿತಚಿತ್ತರಾದ ಮನುಷ್ಯರಿಗೆ ಲೋಕದಲ್ಲಿ ಯಾವ ಸುಖವು ತಾನೇ ಲಭಿಸೀತು ? ಅಂದರೆ ಯಾವ ಸುಖವೂ ಆಗುವುದಿಲ್ಲ. ಆದ

ಸಮಾಹಿತಮನಾ ಭೂತ್ವಾ ಕುರ್ಯಾದಚ್ಯುತಚಿಂತನಂ ।
ಯೇನ ಕೇನಾಪ್ಯುಪಾಯೇನ ಸ್ಮೃತೋ ನಾರಾಯಣೋಽವ್ಯಯಃ ॥ ೭೮ ॥

ಅಪಿ ಪಾತಕಯುಕ್ತಸ್ಯ ಪ್ರಸನ್ನಃ ಸ್ಯಾನ್ನ ಸಂಶಯಃ ।
ಯಸ್ಯ ನಾರಾಯಣೇ ಭಕ್ತಿರ್ವಿಭೌ ವಿಶ್ವೇಶ್ವರೇಽವ್ಯಯೇ ।
ತಸ್ಯ ಸ್ಯಾತ್ಸಫಲಂ ಜನ್ಮ ಮುಕ್ತಿಶ್ಚೈವ ಕರೇ ಸ್ಥಿತಾ ॥ ೭೯ ॥

ಧರ್ಮಾರ್ಥಕಾಮಮೋಕ್ಷಾಖ್ಯಾ ಪುರುಷಾರ್ಥಾ ದ್ವಿಜೋತ್ತಮಾಃ ।
ಹರಿಭಕ್ತಿಪರಾಣಾಂ ವೈ ಸಂಪದ್ಯಂತೇ ನ ಸಂಶಯಃ ॥ ೮೦ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ
ಪ್ರಥಮಪಾದೇ ಸೂತರ್ಷಿಸಂವಾದೋ ನಾಮ
ಪ್ರಥಮೋಽಧ್ಯಾಯಃ

---

ಕಾರಣ ದುಃಖಸಾಧನವಾದ ಕಾಮನೆಗಳೆಲ್ಲವನ್ನೂ ಬಿಟ್ಟು ಮನಸ್ಸಮಾಧಾನವುಳ್ಳವನಾಗಿ ಭಗವಂತನ ಧ್ಯಾನಮಾಡಬೇಕು. ಪಾಪಿಯಾದರೂ ಸರಿ ಯಾವುದಾದರೊಂದು ನಿಮಿತ್ತದಿಂದ ನಾರಾಯಣನನ್ನು ಸ್ಮರಿಸಿದರೆ ಆತನು ಅನುಗ್ರಹಮಾಡುವನು, ಸಂಶಯವಿಲ್ಲ, ಯಾರಿಗೆ ವ್ಯಾಪ್ತನು, ಈ ಸಕಲ ಪ್ರಪಂಚಕ್ಕೂ ನಿಯಾಮಕನು, ನಾಶರಹಿತನೂ ಆದ ನಾರಾಯಣನಲ್ಲಿ ನಿರ್ಮಲ ಭಕ್ತಿಯುಂಟೋ ಅಂತಹವರ ಜನ್ಮವು ಸಫಲವು. ಅಂತಹವರಿಗೆ ಮುಕ್ತಿಯು ಹಸ್ತಗತವಾಗುವುದು.

೮೦. ದ್ವಿಜಶ್ರೇಷ್ಠರಿರಾ! ಶ್ರೀಹರಿಯಲ್ಲಿ ಭಕ್ತಿಮಾಡುವವರಿಗೆ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೂ ಲಭಿಸುತ್ತವೆ; ಸಂದೇಹವಿಲ್ಲ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಮೊದಲನೆಯ
ಪಾದದಲ್ಲಿ ಸೂತಋಷಿಗಳ ಸಂಭಾಷಣೆಯೆಂಬ ಮೊದಲನೆಯ
ಅಧ್ಯಾಯವು ಮುಗಿದುದು.

## ಕಥಾ ಸಂಗ್ರಹ

ಈ ಅಧ್ಯಾಯದ ಪ್ರಾರಂಭದಲ್ಲಿ ಮಂಗಳಾಚರಣವು ಮಾಡಲ್ಪಟ್ಟಿದೆ. ತರುವಾಯ ನೈಮಿಷಾರಣ್ಯದಲ್ಲಿದ್ದ ವೇದವ್ಯಾಸರ ಶಿಷ್ಯರಾದ ಇಪ್ಪತ್ತಾರುಸಾವಿರ ಋಷಿಗಳು ಅವರವರ ಶಿಷ್ಯರೊಡನೆ ಒಂದು ದಿವಸ ತತ್ವನಿರ್ಣಯಕ್ಕೋಸ್ಕರ ಸಭೆ (Meeting) ಸೇರಿ ಜ್ಞಾನಿಗಳಾದ ಶೌನಕರನ್ನು ಕುರಿತು ಈ ಭೂಲೋಕದಲ್ಲಿ ಪುಣ್ಯತೀರ್ಥಗಳು ಮತ್ತು ಕ್ಷೇತ್ರಗಳು ಯಾವುವು ? ಈ ಸಂಸಾರ ದುಃಖವನ್ನು ಅನುಭವಿಸುತ್ತಿರುವ ಜನರಿಗೆ ಮುಕ್ತಿಯು ಹೇಗೆ ಉಂಟಾದೀತು ? ಭಗವಂತನಲ್ಲಿ ಭಕ್ತಿಯುಂಟಾಗುವಬಗೆ ಹೇಗೆ ? ಎಂದು ಮುಂತಾಗಿ ಪ್ರಶ್ನೆ ಮಾಡತೊಡಗಿದರು. ಆಗ ಶೌನಕರು ಈ ವಿಷಯಗಳನ್ನೆಲ್ಲಾ ಸಿದ್ಧಾಶ್ರಮದಲ್ಲಿರುವ ಸೂತರು ಚೆನ್ನಾಗಿ ತಿಳಿದಿರುತ್ತಾರೆ, ನಾವೆಲ್ಲರೂ ಅವರನ್ನು ಪ್ರಶ್ನೆ ಮಾಡಿ ತತ್ವನಿರ್ಣಯವನ್ನು ಹೊಂದೋಣವೆಂದು ಋಷಿಗಳಿಗೆ ತಿಳಿಸಿದರು. ತರುವಾಯ ಎಲ್ಲರೂ ಸಿದ್ಧಾಶ್ರಮಕ್ಕೆ ಹೋಗಿ ಸೂತರನ್ನು ವಂದಿಸಿ ಅವರಿಂದ ಸತ್ಕರಿಸಲ್ಪಟ್ಟು ತತ್ವನಿರ್ಣಯಾಪೇಕ್ಷೆಯಿಂದ ಅತಿಥಿಗಳಾಗಿ ನಿಮ್ಮಲ್ಲಿಗೆ ಬಂದಿರುತ್ತೇವೆ. ಆದುದರಿಂದ ನೀವು ನಮಗೆ ತತ್ವವನ್ನುಪದೇಶಿಸಿ ಸತ್ಕರಿಸಬೇಕೆಂದು ಪ್ರಾರ್ಥಿಸಿ ಈ ರೀತಿಯಾಗಿ ಪ್ರಶ್ನೆಗಳನ್ನು ಕೇಳಿದರು :—ಈ ಸಮಸ್ತ ಪ್ರಪಂಚವನ್ನೂ ಸೃಷ್ಟಿಸಿದವರು ಯಾರು ? ಇದಕ್ಕೆ ಆಶ್ರಯ ಮತ್ತು ನಿಯಾಮಕರು ಯಾರು ? ಇದರ ಸ್ಥಿತಿಗೆ ಕಾರಣವಾವುದು ? ಇದರ ವಿನಾಶವು ಯಾರಿಂದ ಉಂಟಾಗುತ್ತದೆ ? ವಿಷ್ಣುವಿನ ಅನುಗ್ರಹವನ್ನು ಸಂಪಾದಿಸುವ ಬಗೆ ಹೇಗೆ ? ಆತನನ್ನು ಹೇಗೆ ಪೂಜಿಸಬೇಕು ? ವರ್ಣಾಶ್ರಮಧರ್ಮಗಳಾವುವು ? ಅತಿಥಿಯನ್ನು ಸತ್ಕರಿಸುವುದು ಹೇಗೆ ? ನಾವು ಮಾಡುವ ಕರ್ಮಗಳನ್ನು ಸಫಲಗೊಳಿಸುವ ಉಪಾಯವಾವುದು ? ಮೋಕ್ಷ ಪ್ರಾಪ್ತಿಗೆ ಯಾವುದು ಸಾಧನವು ? ಭಕ್ತಿಗೆ ಫಲವೇನು ? ಭಕ್ತಿಯು ಎಂತಹುದು ? ಎಂಬುದಾಗಿ ಪ್ರಶ್ನೆಗಳನ್ನು ವಿವರಿಸಿ ನಿರ್ಣಯವಾಗಿ ಉತ್ತರವನ್ನು ಹೇಳಬೇಕೆಂದು ಋಷಿಗಳು ಸೂತರನ್ನು ಪ್ರಾರ್ಥಿಸಿದರು.

ಸೂತರಾದರೋ ಈ ಪ್ರಶ್ನೆಗಳಿಗೆ ಸ್ವತಃ ನಾನು ಉತ್ತರ ಹೇಳುವ ಆವಶ್ಯಕತೆಯಿಲ್ಲ. ಪೂರ್ವದಲ್ಲಿಯೇ ಈ ವಿಷಯಗಳನ್ನೆಲ್ಲಾ ಸನಕಾದಿ ಋಷಿಗಳು ನಾರದರಿಗೆ ಉಪದೇಶಿಸಿರುತ್ತಾರೆ. ಅದಕ್ಕೆ ನಾರದೀಯ ಪುರಾಣವೆಂದು ಹೆಸರು. ಅದನ್ನೇ ನಿಮಗೆ ಉಪದೇಶಿಸುತ್ತೇನೆ. ಅದರಿಂದ ನಿಮ್ಮ ಇಷ್ಟಾರ್ಥವು ನೆರವೇರುವುದೆಂದು ಹೇಳಿ ಪುರಾಣವನ್ನು ಬಹಳವಾಗಿ ಪ್ರಶಂಸಿಸಿ, ಅದರ ಶ್ರವಣ ಮತ್ತು ಅಧ್ಯಯನಗಳ ಫಲಗಳನ್ನು ವಿಶದವಾಗಿ ನಿರೂಪಿಸಿ, ಹರಿಭಕ್ತರಿಗೆ ಮೋಕ್ಷಾದಿ ಸಕಲ ಪುರುಷಾರ್ಥಗಳೂ ಸಿದ್ಧವಾಗುತ್ತವೆಂದು ಹೇಳಿ ಅಧ್ಯಾಯವನ್ನು ಮುಗಿಸಿರುತ್ತಾರೆ.

# ದ್ವಿತೀಯೋಽಧ್ಯಾಯಃ

ಋಷಯ ಊಚುಃ

ಕಥಂ ಸನತ್ಕುಮಾರಸ್ತು ನಾರದಾಯ ಮಹಾತ್ಮನೇ ।
ಪ್ರೋಕ್ತವಾನ್ ಸಕಲಾನ್ಧರ್ಮಾನ್ ಕಥಂ ತೌ ಮಿಲಿತಾವುಭೌ ॥ ೧ ॥

ಕಸ್ಮಿನ್ ಸ್ಥಾನೇ ಸ್ಥಿತೌ ಸೂತ ತಾವುಭೌ ಬ್ರಹ್ಮವಾದಿನೌ ।
ಹರಿಗೀತಸಮುದ್ಗಾನಂ ಚಕ್ರತುಸ್ತದ್ವದಸ್ವ ನಃ ॥ ೨ ॥

ಸೂತ ಉವಾಚ

ಸನಕಾದ್ಯಾ ಮಹಾತ್ಮಾನೋ ಬ್ರಹ್ಮಣೋ ಮಾನಸಾಸ್ಸುತಾಃ ।
ನಿರ್ಮಮಾ ನಿರಹಂಕಾರಾಃ ಸರ್ವೇ ತೇ ಹ್ಯೂರ್ಧ್ವರೇತಸಃ ॥ ೩ ॥

ತೇಷಾಂ ನಾಮಾನಿ ವಕ್ಷ್ಯಾಮಿ ಸನಕಶ್ಚ ಸನಂದನಃ ।
ಸನತ್ಕುಮಾರಶ್ಚ ವಿಭುಃ ಸನಾತನ ಇತಿ ಸ್ಮೃತಃ ॥ ೪ ॥

---

## ಎರಡನೆಯ ಅಧ್ಯಾಯವು

೧. ಋಷಿಗಳು ಹೇಳುತ್ತಾರೆ :—ಸೂತರೇ, ಸನತ್ಕುಮಾರರು ಮಹಾತ್ಮರಾದ ನಾರದರಿಗೆ ಸಮಸ್ತ ಧರ್ಮಗಳನ್ನೂ ಹೇಗೆ ಉಪದೇಶಿಸಿರುವರು? ಅವರಿಬ್ಬರು ಒಂದು ಸ್ಥಳದಲ್ಲಿ ಹೇಗೆ ಸೇರಿದರು?

೨. ಆ ಇಬ್ಬರು ಯಾವ ಸ್ಥಳದಲ್ಲಿದ್ದು ಬ್ರಹ್ಮಸ್ತುತಿಮಾಡುವವರಾಗಿ ತತ್ವವಿಷಯದಲ್ಲಿ ಸಂಭಾಷಣೆಯನ್ನು ನಡೆಯಿಸಿದರು. ಅವುಗಳೆಲ್ಲವನ್ನೂ ನಮಗೆ ತಿಳಿಸಬೇಕೆಂದು ಋಷಿಗಳು ಸೂತರನ್ನು ಪ್ರಾರ್ಥಿಸಿದರು.

೩-೬. ಸೂತರು ಹೇಳಿದರು :—ಮಹಾತ್ಮರು ಚತುರ್ಮುಖಬ್ರಹ್ಮನ ಮಾನಸಪುತ್ರರು ಜಂಭ ಮತ್ತು ಗರ್ವಗಳಿಲ್ಲದವರೂ ಆದ ಆ ಸನಕ ಮುಂತಾದ ಋಷಿಗಳೆಲ್ಲರೂ ಬ್ರಹ್ಮಚಾರಿಗಳು, ಅವರ ಹೆಸರನ್ನು ಹೇಳುತ್ತೇನೆ. ಸನಕ,

**ವಿಷ್ಣುಭಕ್ತಾ ಮಹಾತ್ಮಾನೋ ಬ್ರಹ್ಮಧ್ಯಾನಪರಾಯಣಾಃ ।**
**ಸಹಸ್ರಸೂರ್ಯಸಂಕಾಶಾ ಸತ್ಯಸಂಧಾ ಮುಮುಕ್ಷವಃ ॥ ೫ ॥**

**ಏಕದಾ ಮೇರುಶೃಂಗಂ ತೇ ಪ್ರಸ್ಥಿತಾ ಬ್ರಹ್ಮಣಃ ಸಭಾಂ ।**
**ದ್ರಷ್ಟುಂ ಮಾರ್ಗೇಽಥ ದದೃಶುಃ ಗಂಗಾಂ ವಿಷ್ಣುಪದೀಂ ದ್ವಿಜಾಃ ॥ ೬ ॥**

**ತಾಂ ನಿರೀಕ್ಷ್ಯ ಸಮುದ್ಯುಕ್ತಾಃ ಸ್ನಾತುಂ ಸೀತಾಜಲೇಽಭವನ್ ।**
**ಏತಸ್ಮಿನ್ನಂತರೇ ತತ್ರ ದೇವರ್ಷಿರ್ನಾರದೋ ಮುನಿಃ ॥ ೭ ॥**

**ಆಜಗಾಮ ದ್ವಿಜಶ್ರೇಷ್ಠಾ ದೃಷ್ಟ್ವಾ ಭ್ರಾತೄನ್ ಸ್ವಕಾಗ್ರಜಾನ್ ।**
**ತಾನ್ ದೃಷ್ಟ್ವಾ ಸ್ನಾತುಮುದ್ಯುಕ್ತಾನ್ನಮಸ್ಕೃತ್ಯ ಕೃತಾಂಜಲಿಃ ॥ ೮ ॥**

---

ಸನಂದನ, ಸನತ್ಕುಮಾರ ಮತ್ತು ಸನಾತನ ಎಂಬುದಾಗಿ ಅವರ ನಾಮಧೇಯ ಗಳು. ವಿಷ್ಣುಭಕ್ತರು, ಮಹಾತ್ಮರು, ಯಾವಾಗಲೂ ಪರಬ್ರಹ್ಮನನ್ನು ಧ್ಯಾನಿ ಸುವವರು, ಒಂದು ಸಾವಿರ ಸೂರ್ಯಪ್ರಕಾಶಕ್ಕೆ ಸಮಾನವಾದ ತೇಜಸ್ಸುಳ್ಳವರು, ನಿಜವನ್ನೇ ಹೇಳುವವರು, ಕೇವಲ ಮೋಕ್ಷವನ್ನೇ ಬಯಸುವವರೂ ಆದ ಆ ಸನಕಾದಿ ಋಷಿಗಳು ಒಂದು ಸಮಯದಲ್ಲಿ ಚತುರ್ಮುಖನ ಸಭೆಯನ್ನು ನೋಡುವ ಉದ್ದೇಶದಿಂದ ಮೇರುಪರ್ವತದ ಶಿಖರವನ್ನು ಕುರಿತು ಪ್ರಯಾಣ ಮಾಡಿದವರಾಗಿ ದಾರಿಯಲ್ಲಿ ವಿಷ್ಣುಪಾದದಲ್ಲಿ ಉದ್ಭವಿಸಿದ ಗಂಗಾನದಿಯನ್ನು ನೋಡಿದರು.

೭-೧೦. ಸನಕಾದಿಗಳು ಆ ಗಂಗಾನದಿಯನ್ನು ನೋಡಿ, ಅದರ ಜಲದಲ್ಲಿ ಸ್ನಾನಮಾಡತೊಡಗಿದರು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ದೇವರ್ಷಿಗಳಾದ ನಾರದಮುನಿಗಳು ಬಂದರು. ಓ ದ್ವಿಜವರರೇ ! ಅವರು ತಮ್ಮ ಜ್ಯೇಷ್ಠ ಸೋದರರಾದ, ಸ್ನಾನಮಾಡಲುದ್ಯುಕ್ತರಾಗಿದ್ದ, ಆ ಸನಕಾದಿಗಳನ್ನು ನೋಡಿ ಅವರಿಗೆ ನಮಸ್ಕರಿಸಿ, ಕೈಮುಗಿದುಕೊಂಡು, ಸ್ನಿಗ್ಧವಾದ ಭಕ್ತಿಯುಳ್ಳವರಾಗಿ, ಮಧುವೆಂಬ ದೈತ್ಯನಿಗೆ ಶತ್ರುವಾದ ಶ್ರೀಕೃಷ್ಣನ ನಾಮಗಳನ್ನು ಕೀರ್ತನೆ ಮಾಡುತ್ತಾ, ನಾರಾಯಣ, ಅಚ್ಯುತ, ಅನಂತ, ವಾಸುದೇವ, ಜನಾರ್ದನ,

ಗೃಣನ್ನಾಮಾನಿ ಸ ಪ್ರೇಮ ಭಕ್ತಿಯುಕ್ತೋ ಮಧುದ್ವಿಷಃ ।
ನಾರಾಯಣಾಚ್ಯುತಾನಂತ ವಾಸುದೇವ ಜನಾರ್ದನ ॥ ೯ ॥

ಯಜ್ಞೇಶ ಯಜ್ಞಪುರುಷ ಕೃಷ್ಣ ವಿಷ್ಣೋ ನಮೋಽಸ್ತು ತೇ ।
ಪದ್ಮಾಕ್ಷ ಕಮಲಾಕಾಂತ ಗಂಗಾಜನಕ ಕೇಶವ ।
ಕ್ಷೀರೋದಶಾಯಿನ್ ದೇವೇಶ ದಾಮೋದರ ನಮೋಽಸ್ತು ತೇ ॥ ೧೦ ॥

ಶ್ರೀರಾಮ ವಿಷ್ಣೋ ನೃಹರೇ ಮುರಾರೇ
ಪ್ರದ್ಯುಮ್ನ ಸಂಕರ್ಷಣ ವಾಸುದೇವ ।
ಅಜಾನಿರುದ್ಧಾಚ್ಯುತ ವಿಶ್ವರೂಪ
ತ್ವಂ ಪಾಹಿ ನಃ ಸರ್ವಭಯಾದಜಸ್ರಂ ॥ ೧೧ ॥

ಇತ್ಯುಚ್ಚರನ್ ಹರೇರ್ನಾಮ ನತ್ವಾ ತಾನ್ ಸ್ವಾಗ್ರಜಾನ್ ಮುನೀನ್ ।
ಉಪಾಸೀನಶ್ಚ ತೈಃ ಸಾರ್ಧಂ ಸಸ್ನೌ ಪ್ರೀತಿಸಮನ್ವಿತಃ ॥ ೧೨ ॥

---

ಯಜ್ಞೇಶ, ಯಜ್ಞಪುರುಷ, ಕೃಷ್ಣ ಎಂಬ ನಾಮಧೇಯಗಳುಳ್ಳ ಶ್ರೀ ನಾರಾಯಣನೇ ನಿನಗೆ ನಮಸ್ಕಾರ, ಕಮಲನೇತ್ರ, ಲಕ್ಷ್ಮೀಪತಿ, ಗಂಗಾನದಿಗೆ ಉತ್ಪತ್ತಿಸ್ಥಾನನು, ಕೇಶವ ಎಂದರೆ ಬ್ರಹ್ಮರುದ್ರಪ್ರವರ್ತಕನು, ಕ್ಷೀರಸಮುದ್ರದಲ್ಲಿ ಶಯನಮಾಡಿರುವವನು, ದೇವತೆಗಳಿಗೊಡೆಯನೂ ಆದ ದಾಮೋದರನೇ ನಿನಗೆ ನಮಸ್ಕಾರವು.

೧೧-೧೨. ಶ್ರೀರಾಮ, ವಿಷ್ಣು, ನರಸಿಂಹ, ಮುರಾರಿ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಅಜ, ಅನಿರುದ್ಧ, ಅಚ್ಯುತ ಎಂಬ ನಾಮಧೇಯಗಳುಳ್ಳ ಸಮಸ್ತವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ವಿಶ್ವರೂಪನೆಂದೆನಿಸಿಕೊಂಡಿರುವ ಭಗವಂತನೇ ನಮಗೆ ಯಾವ ಭಯವೂ ಉಂಟಾಗದಂತೆ ಸರ್ವದಾ ರಕ್ಷಿಸು ಎಂಬುದಾಗಿ ಭಗವಂತನ ನಾಮಗಳನ್ನು ಹೇಳುತ್ತಾ ನಾರದರೂ ಸಹ ಅಣ್ಣಂದಿರಾದ ಸನಕಾದಿಮುನಿಗಳನ್ನು ನಮಸ್ಕರಿಸಿ ಅವರೊಡನೆ ಧ್ಯಾನಮಾಡುವವರಾಗಿ ಭಕ್ತಿಯಿಂದ ಸ್ನಾನಮಾಡಿದರು.

ತೇ ಸರ್ವೇಪಿತು ಸಿತಾಯಾ ಜಲೇ ಲೋಕಾಮಲಾಪಹೇ ।
ಸ್ನಾತ್ವಾ ಸಂತರ್ಪ್ಯ ದೇವರ್ಷಿಪಿತೄನ್ ವಿಗತಕಲ್ಮಷಾಃ ॥ ೧೩ ॥

ಉತ್ತೀರ್ಯ ಸಂಧ್ಯೋಪಾಸ್ತ್ಯಾದಿ ಕೃತ್ವಾಚಾರಂ ಸ್ವಕಂ ದ್ವಿಜಾಃ ।
ಕಥಾ ಪ್ರಚಕ್ರುರ್ವಿವಿಧಾಃ ನಾರಾಯಣಗುಣಾಶ್ರಿತಾಃ ॥ ೧೪ ॥

ಕೃತಕ್ರಿಯೇಷು ಮುನಿಷು ಗಂಗಾತೀರೇ ಮನೋರಮೇ ।
ಚಕಾರ ನಾರದಃ ಪ್ರಶ್ನಂ ನಾನಾಖ್ಯಾನಕಥಾಂತರೇ ॥ ೧೫ ॥

ನಾರದ ಉವಾಚ

ಸರ್ವಜ್ಞಾಃ ಸ್ಥ ಮುನಿಶ್ರೇಷ್ಠಾಃ ಭಗವದ್ಭಕ್ತಿತತ್ಪರಾಃ ।
ಯೂಯಂ ಸರ್ವೇ ಜಗನ್ನಾಥಾ ಭಗವಂತಃ ಸನಾತನಾಃ ॥ ೧೬ ॥

ಲೋಕೋದ್ಧಾರಪರಾನ್ ಯುಷ್ಮಾನ್ದೀನೇಷು ಕೃತಸೌಹೃದಾನ್ ।
ಪೃಚ್ಛೇ ತತೋ ವದತ ಮೇ ಭಗವಲ್ಲಕ್ಷಣಂ ಬುಧಾಃ ॥ ೧೭ ॥

---

೧೩-೧೪. ನಾರದ ಮತ್ತು ಸನಕಾದಿಗಳೆಲ್ಲರೂ ಪಾಪಪರಿಹಾರಕವಾದ ಗಂಗೋದಕದಲ್ಲಿ ಸ್ನಾನಮಾಡಿ, ಪಾಪವನ್ನು ಹೋಲಾಡಿಸಿಕೊಂಡು ದೇವ, ಋಷಿ, ಪಿತೃಗಳಿಗೆ, ತರ್ಪಣವನ್ನು ಮಾಡಿ, ಸಂಧ್ಯಾವಂದನೆ, ಔಪಾಸನೆ ಮುಂತಾದ ತಮ್ಮ ನಿತ್ಯಕರ್ಮಗಳನ್ನು ಮುಗಿಸಿಕೊಂಡು, ನಾರಾಯಣನ ಗುಣೋತ್ಕರ್ಷ ವಿಷಯದಲ್ಲಿ ಅನೇಕವಿಧ ಸಂಭಾಷಣೆಗಳನ್ನು ನಡೆಸಿದರು.

೧೫. ಮನೋಹರವಾದ ಗಂಗಾತೀರದಲ್ಲಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಆ ಸನಕಾದಿಗಳು ಅನೇಕವಿಷಯ ವಿಚಾರಮಾಡುತ್ತಿರುವ ಸಂದರ್ಭದಲ್ಲಿ ನಾರದನು ಪ್ರಶ್ನೆಮಾಡಿದನು.

೧೬-೧೭. ನಾರದನು ಹೇಳಿದನು:—ಭಗವದ್ಭಕ್ತರಾದ ಮುನಿಶ್ರೇಷ್ಠರೇ! ನೀವೆಲ್ಲರೂ ಸರ್ವಜ್ಞರು, ಜಗತ್ತಿಗೆ ಉಪದೇಶಕರು, ಪೂಜ್ಯರು ಮತ್ತು ಹಿರಿಯರೂ ಆಗಿರುತ್ತೀರಿ, ಆದುದರಿಂದ ಲೋಕೋಪಕಾರನಿರತರಾದ ನಿಮ್ಮನ್ನು ಪ್ರಶ್ನೆಮಾಡುತ್ತೇನೆ. ಎಲೈ ಜ್ಞಾನಿಗಳೇ! ಭಗವಂತನ ಲಕ್ಷಣವನ್ನು ಉಪದೇಶಿಸಿರಿ.

ಯೇನೇದಮಖಿಲಂ ಜಾತಂ ಜಗತ್ಸ್ಥಾವರಜಂಗಮಂ ।
ಗಂಗಾಪಾದೋದಕಂ ಯಸ್ಯ ಸ ಕಥಂ ಜ್ಞಾಯತೇ ಹರಿಃ ॥ ೧೮ ॥

ಕಥಂ ಚ ತ್ರಿವಿಧಂ ಕರ್ಮ ಸಫಲಂ ಜಾಯತೇ ನೃಣಾಂ ।
ಜ್ಞಾನಸ್ಯ ಲಕ್ಷಣಂ ಬ್ರೂತ ತಪಸಶ್ಚಾಪಿ ಮಾನದಾಃ ॥ ೧೯ ॥

ಅತಿಥೇಃ ಪೂಜನಂ ವಾಪಿ ಯೇನ ವಿಷ್ಣುಃ ಪ್ರಸೀದತಿ ।
ಏವಮಾದೀನಿ ಗುಹ್ಯಾನಿ ಹರಿತುಷ್ಟಿಕರಾಣಿ ಚ ।
ಅನುಗೃಹ್ಯ ಚ ಮಾಂ ನಾಥಾಸ್ತತ್ವತೋ ವಕ್ತುಮರ್ಹಥ ॥ ೨೦ ॥

ಶೌನಕ ಉವಾಚ

ನಮಃ ಪರಾಯ ದೇವಾಯ ಪರಸ್ಮಾತ್ಪರಮಾಯ ಚ ।
ಪರಾವರ ನಿವಾಸಾಯ ಸಗುಣಾಯಾಗುಣಾಯ ಚ ॥ ೨೧ ॥

---

೧೮. ಈ ಚರಾಚರಾತ್ಮಕವಾದ ಸಕಲ ಪ್ರಪಂಚವೂ ಯಾರಿಂದ ಸೃಷ್ಟಿಸಲ್ಪಟ್ಟಿತೋ? ಗಂಗೆಯು ಯಾರ ಪಾದದಲ್ಲಿ ಉದ್ಭವಿಸಿತೋ? ಅಂತಹ ವಿಷ್ಣುವು ಹೇಗೆ ತಿಳಿಯಲ್ಪಡುತ್ತಾನೆ?

೧೯. ಮನುಷ್ಯರಿಂದ ಆಚರಿಸಲ್ಪಡುವ ಕಾಯಿಕ, ವಾಚನಿಕ, ಮಾನಸಿಕವೆಂಬ ಮೂರುವಿಧವಾದ ಕರ್ಮಗಳು ಸಫಲವಾಗುವ ಬಗೆ ಹೇಗೆ? ಜ್ಞಾನ ಮತ್ತು ತಪಸ್ಸುಗಳ ಲಕ್ಷಣವನ್ನು ಹೇಳಿ.

೨೦. ಎಲೈ ನಾಥರೇ ವಿಷ್ಣುವಿನ ಅನುಗ್ರಹಕ್ಕೆ ಕಾರಣವಾದ ಅತಿಥಿ ಸತ್ಕಾರ ಮುಂತಾದ ಹರಿಪ್ರೀತಿಕರಗಳಾದ ರಹಸ್ಯಗಳನ್ನು ನನ್ನಲ್ಲಿ ಅನುಗ್ರಹ ಮಾಡಿ ನೀವು ಯಥಾವತ್ತಾಗಿ ಹೇಳಲು ಅರ್ಹರಾಗಿರುತ್ತೀರಿ.

೨೧-೨೪. ಶೌನಕರು ಹೇಳುತ್ತಾರೆ:—ಉತ್ತಮನು, ಕ್ರೀಡಾದಿಗುಣ ವಿಶಿಷ್ಟನು, ಉತ್ತಮರಾದ ಬ್ರಹ್ಮಾದಿದೇವತೆಗಳಿಂತಲೂ ಶ್ರೇಷ್ಠನು, ಉತ್ತಮ ಮತ್ತು ಅಧಮ ವಸ್ತುಗಳೆರಡರಲ್ಲಿಯೂ ನಿಯಾಮಕನಾಗಿ ವಾಸಿಸುತ್ತಿರುವವನು, ಮಂಗಳಕರವಾದ ಗುಣಗಳುಳ್ಳವನು, ಪ್ರಾಕೃತಗುಣರಹಿತನು, ಮಾಯೆಗೆ

ಅಮಾಯಾಯಾತ್ಮಸಂಜ್ಞಾಯ ಮಾಯಿನೇ ವಿಶ್ವರೂಪಿಣೇ ।
ಯೋಗೀಶ್ವರಾಯ ಯೋಗಾಯ ಯೋಗಗಮ್ಯಾಯ ವಿಷ್ಣವೇ ॥ ೨೨ ॥

ಜ್ಞಾನಾಯ ಜ್ಞಾನಗಮ್ಯಾಯ ಸರ್ವಜ್ಞಾನೈಕಹೇತವೇ ।
ಜ್ಞಾನೇಶ್ವರಾಯ ಜ್ಞೇಯಾಯ ಜ್ಞಾತ್ರೇವಿಜ್ಞಾನಸಂಪದೇ ॥ ೨೩ ॥

ಧ್ಯಾನಾಯ ಧ್ಯಾನಗಮ್ಯಾಯ ಧ್ಯಾತೃಪಾಪಹರಾಯ ಚ ।
ಧ್ಯಾನೇಶ್ವರಾಯ ಸುಧಿಯೇ ತಸ್ಮೈ ಶುದ್ಧಾತ್ಮನೇ ನಮಃ ॥ ೨೪ ॥

ಆದಿತ್ಯಚಂದ್ರಾಗ್ನಿವಿಧಾತೃದೇವಾಃ
ಸಿದ್ಧಾಶ್ಚ ಯಕ್ಷಾಸುರ ನಾಗಸಂಘಾಃ ।
ಯಚ್ಛಕ್ತಿಯುಕ್ತಾಸ್ತಮಜಂ ಪುರಾಣಂ
ಸತ್ಯಂ ಸುರೇಶಂ ಸತತಂ ನತೋಽಸ್ಮಿ ॥ ೨೫ ॥

---

ಅಧೀನನಲ್ಲದವನು, ಆತ್ಮಪದಮುಖ್ಯವಾಚ್ಯನು, ಮಾಯೆಗೆ ಸ್ವಾಮಿಯು, ಸರ್ವಾಂತರ್ಯಾಮಿಯು, ಯೋಗಿಗಳೊಡೆಯನು ಯೋಗಪ್ರವರ್ತಕನು, ಯೋಗದಿಂದ ತಿಳಿಯಲ್ಪಡುವವನು, ಜ್ಞಾನಸ್ವರೂಪನು, ಅಪರೋಕ್ಷಜ್ಞಾನದಿಂದ ಗಮ್ಯನು, ಸರ್ವರಿಗೂ ಜ್ಞಾನವುಂಟಾಗುವುದಕ್ಕೆ ಮುಖ್ಯಕಾರಣನು, ಜ್ಞಾನಸ್ವಾಮಿಯು, ಭಕ್ತರಿಂದ ಜ್ಞೇಯನು, ಜ್ಞಾನವುಳ್ಳವನು, ವಿಜ್ಞಾನವೆಂಬ ಸಂಪತ್ತುಳ್ಳವನು, ಧ್ಯಾನನಿಯಾಮಕನು, ಧ್ಯಾನದಿಂದ ಪ್ರಸನ್ನನಾಗುವವನು, ಧ್ಯಾನಮಾಡುವವರ ಪಾಪಗಳನ್ನು ಪರಿಹಾರಮಾಡುವವನು, ಧ್ಯಾನಸ್ವಾಮಿಯು, ಸರ್ವಜ್ಞನು ಮತ್ತು ನಿರ್ದೋಷನೂ ಆಗಿರುವ ವಿಷ್ಣುವಿಗೆ ನಮಸ್ಕಾರ.

೨೫. ಸೂರ್ಯ, ಚಂದ್ರ, ಅಗ್ನಿ, ಚತುರ್ಮುಖ ಮುಂತಾದ ದೇವತೆಗಳು, ಸಿದ್ಧರು, ಯಕ್ಷರು, ಅಸುರರು, ಮತ್ತು ನಾಗಸಂಘವೂ ಸಹ ಯಾರಿಂದ ಅನುಗ್ರಹಿಸಲ್ಪಟ್ಟ ಸಾಮರ್ಥ್ಯವುಳ್ಳವರಾಗಿತ್ತಾರೆಯೋ ಅಂತಹ ಅನಾದಿನಿತ್ಯನಾದ ಜಗತ್ಕಾರಣನಾದ ದೇವೇಶನನ್ನು ನಮಸ್ಕರಿಸುತ್ತೇನೆ

ಯೋ ಬ್ರಹ್ಮರೂಪೀ ಜಗತಾಂ ವಿಧಾತಾ
ಸ ಏವ ಪಾತಾ ದ್ವಿಜವಿಷ್ಣುರೂಪೀ ।
ಕಲ್ಪಾಂತರುದ್ರಾಖ್ಯತನುಶ್ಚ ವಿಶ್ವಂ
ಸಂಗೃಹ್ಯ ಶೇತೇ ತಮುಜಂ ನಮಾಮಿ ॥ ೨೬ ॥

ಯನ್ನಾಮ ಸಂಕೀರ್ತನತೋ ಗಜೇಂದ್ರೋ
ಗ್ರಾಹೋಗ್ರಬಂಧಾನ್ಮುಮುಚೇ ಸ ದೇವಃ ।
ವಿರಾಜಮಾನಃ ಸ್ವಪದೇ ಪರಾಖ್ಯೇ
ತಂ ವಿಷ್ಣುಮಾದ್ಯಂ ಶರಣಂ ಪ್ರಪದ್ಯೇ ॥ ೨೭ ॥

ಯಃ ಕೇಶಿಹಂತಾ ನರಕಾಂತಕಶ್ಚ
ಬಾಲೋ ಭುಜಾಗ್ರೇಣ ದಧಾರಗೋತ್ರಂ ।
ದೇವಂ ಚ ಭೂಭಾರವಿನಾಶಶೀಲಂ
ತಂ ವಾಸುದೇವಂ ಸತತಂ ನತೋಽಸ್ಮಿ ॥ ೨೮ ॥

---

೨೬. ಯಾವಾತನು ಬ್ರಹ್ಮನಲ್ಲಿದ್ದು ಜಗತ್ತನ್ನು ಸೃಷ್ಟಿಸುತ್ತಾನೆಯೋ, ಯಾವನು ತಾನೇ ವಿಷ್ಣುರೂಪಿಯಾಗಿ ಜಗತ್ತನ್ನು ಪಾಲಿಸುತ್ತಾನೆಯೋ ಕಲ್ಪಾವಸಾನದಲ್ಲಿ ರುದ್ರನೆಂಬ ಶರೀರವುಳ್ಳವನಾಗಿ ಅನಿತ್ಯ ಜಗತ್ತನ್ನು ನಾಶ ಪಡಿಸಿ ಶಯನವಮಾಡುತ್ತಾನೆಯೋ ಅಂತಹ ಉತ್ಪತ್ತ್ಯಾದಿ ರಹಿತನಾದ ನಾರಾಯಣನನ್ನು ನಮುಸ್ಕರಿಸುತ್ತೇನೆ.

೨೭. ಗಜೇಂದ್ರನು ಯಾರ ನಾಮ ಸಂಕೀರ್ತನದಿಂದ ಕ್ರೂರವಾದ ಗ್ರಹ ಬಂಧ (ಮೊಸಳೆಯ ಹಿಡಿತ) ದಿಂದ ಬಿಡಿಸಲ್ಪಟ್ಟನೋ ಪರನಾಮಕವಾದ ವೈಕುಂಠಾದಿ ಲೋಕದಲ್ಲಿ ಯಾವ ದೇವನು ವಿರಾಜಮಾನನಾಗಿರುತ್ತಾನೆಯೋ ಅಂತಹ ವಿಷ್ಣುವನ್ನು ಶರಣುಹೊಂದುತ್ತೇನೆ.

೨೮. ಯಾವನು ಕೇಶಿ ಮತ್ತು ನರಕ ಎಂಬ ದೈತ್ಯರುಗಳನ್ನು ಸಂಹರಿಸಿದನೋ ಬಾಲಕನಾಗಿರುವಾಗಲೇ ಕೊನೆಗೈಯಿಂದ ಪರ್ವತವನ್ನು ಎತ್ತಿದನೋ ಅಂತಹ ಭೂಭಾರನಾಶಕನಾದ ಕ್ರೀಡಾದಿಗುಣವಿಶಿಷ್ಟನಾದ ಶ್ರೀ ಕೃಷ್ಣನನ್ನು ಸದಾ ನಮುಸ್ಕರಿಸುತ್ತೇನೆ.

ಶಿವಸ್ವರೂಪೀ ಶಿವಶಕ್ತಿಭಾಜಾಂ
ಯೋ ವಿಷ್ಣುರೂಪೀ ಹರಿಭಾವಿತಾನಾಂ ।
ಸಂಕಲ್ಪಪೂರ್ವಾತ್ಮಕ ದೇಹ ಹೇತು
ಸ್ತಮೇವ ನಿತ್ಯಂ ಶರಣಂ ಪ್ರಪದ್ಯೇ ॥ ೨೯ ॥

ಸ್ತಂಭೇಽವತೀರ್ಯೋಗ್ರನೃಸಿಂಹರೂಪೀ
ಯೋ ದೈತ್ಯವಕ್ಷಃ ಕಠಿಣಂ ಶಿಲಾವತ್ ।
ವಿದಾರ್ಯ ಸಂರಕ್ಷಿತವಾನ್ ಸ್ವಭಕ್ತಂ
ಪ್ರಹ್ಲಾದಮೀಶಂ ತಮಜಂ ನಮಾಮಿ ॥ ೩೦ ॥

ವ್ಯೋಮಾದಿಭಿರ್ಭೂಷಿತಮಾತ್ಮಸಂಜ್ಞಂ
ನಿರಂಜನಂ ನಿತ್ಯಮಮೇಯತತ್ತ್ವಂ ।
ಜಗದ್ವಿಧಾತಾರಮಕರ್ಮಕಂ ಚ
ಪರಂ ಪುರಾಣಂ ಪುರುಷಂ ನತೋಽಸ್ಮಿ ॥ ೩೧ ॥

---

೨೯. ಯಾವನು ಶಿವಭಕ್ತರಿಗೆ ಶಿವರೂಪಿಯಾಗಿ ಎಂದರೆ ಶಿವನಲ್ಲಿ ಸನ್ನಿಹಿತನಾಗಿ ಹರಿಭಕ್ತರಿಗೆ ವಿಷ್ಣುರೂಪಿಯಾಗಿ ತನ್ನ ಸಂಕಲ್ಪ ಮತ್ತು ಅವರವರ ಪೂರ್ವಾರ್ಜಿತಕರ್ಮಾನುಸಾರವಾಗಿ ಜನ್ಮವನ್ನು ಕೊಡುತ್ತಾನೆಯೋ ಅಂತಹ ನಾರಾಯಣನನ್ನು ಯಾವಾಗಲೂ ಶರಣುಹೊಂದಿರುತ್ತೇನೆ.

೩೦. ಯಾವಾತನು ಭಯಂಕರವಾದ ನರಸಿಂಹಾಕಾರವಾಗಿ ಕಂಭದಲ್ಲಿ ಅವತರಿಸಿ ಕಲ್ಲಿನಂತೆ ಕಠಿಣವಾದ ಹಿರಣ್ಯಕಶಿಪು ಎಂಬ ದೈತ್ಯನ ಎದೆಯನ್ನು ಸೀಳಿ ತನ್ನ ಭಕ್ತನಾದ ಪ್ರಹ್ಲಾದನನ್ನು ರಕ್ಷಿಸಿದನೋ ಅಂತಹ ಅನಾದಿಯಾದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೩೧. ವ್ಯೋಮಾದಿಗಳಿಂದ ಭೂಷಿತನು, ಆತ್ಮನಾಮಕನು, ದೋಷರಹಿತನು, ನಾಶವಿಲ್ಲದವನು, ತಿಳಿಯಲಶಕ್ಯವಾದ ಮಾಹಾತ್ಮ್ಯೆಯುಳ್ಳವನು, ಜಗತ್ತನ್ನು ಸೃಷ್ಟಿಸಿರುವವನು, ಕರ್ಮಬಂಧವಿಲ್ಲದವನು, ಉತ್ತಮ ಮತ್ತು ಸನಾತನನೂ ಆಗಿರುವ ಪುರುಷನಾಮಕ ಭಗವಂತನನ್ನು ನಮಸ್ಕರಿಸುತ್ತೇನೆ.

ಬ್ರಹ್ಮೇಂದ್ರರುದ್ರಾಗ್ನಿ ಮರುನ್ಮನುಷ್ಯ
ಗಂಧರ್ವಯಕ್ಷಾಸುರ ಸಿದ್ಧಭೇದೈಃ ।
ಸರ್ವತ್ರ ತಿಷ್ಠತ್ಯನಿಶಂ ಯ ಈಶಸ್ತಮಾದಿ
ಮಾತ್ಮಾನಮಹಂ ಭಜಾಮಿ ॥ ೩೨ ॥

ಯತೋ ಭಿನ್ನಮಿದಂ ಸರ್ವಂ ಸಮುದ್ಭೂತಂ ಸ್ಥಿತಂ ಚ ವೈ ।
ಯಸ್ಮಿನ್ನೇಷ್ಯತಿ ಪಶ್ಚಾಚ್ಚ ತಮಸ್ಮಿ ಶರಣಂ ಗತಃ ॥ ೩೩ ॥

ಯಃ ಸ್ಥಿತೋ ವಿಶ್ವರೂಪೇಣ ಸಂಗೀವಾತ್ರ ಪ್ರತೀಯತೇ ।
ಅಸಂಗೀ ಪರಿಪೂರ್ಣಶ್ಚ ತಮಸ್ಮಿ ಶರಣಂ ಗತಃ ॥ ೩೪ ॥

ಹೃದಿ ಸ್ಥಿತೋಽಪಿ ಯೋ ದೇವೋ ಮಾಯಯಾ ಮೋಹಿತಾತ್ಮನಾಂ ।
ನ ಜ್ಞಾಯತೇ ಪರಃ ಶುದ್ಧಸ್ತಮಸ್ಮಿ ಶರಣಂ ಗತಃ ॥ ೩೫ ॥

---

೩೨. ಯಾವ ಸ್ವಾಮಿಯು ಬ್ರಹ್ಮ, ಇಂದ್ರ, ರುದ್ರ, ಅಗ್ನಿ, ವಾಯು, ಮನುಷ್ಯ, ಗಂಧರ್ವ, ಯಕ್ಷ, ಅಸುರ ಮತ್ತು ಸಿದ್ಧ ಮುಂತಾದ ಪ್ರಭೇದಗಳಿಂದ ಕೂಡಿದ ಸರ್ವಪ್ರಪಂಚದಲ್ಲಿಯೂ ಯಾವಾಗಲೂ ಇರುವನೋ ಅಂತಹ ಜಗತ್ಕಾರಣನಾದ ಪರಮಾತ್ಮನನ್ನು ಭಜಿಸುತ್ತೇನೆ.

೩೩. ಭಿನ್ನವಾದ ಈ ಸಮಸ್ತ ಪ್ರಪಂಚವೂ ಯಾರಿಂದ ಸೃಷ್ಟಿಸಲ್ಪಟ್ಟಿತೋ ಮತ್ತು ರಕ್ಷಿಸಲ್ಪಟ್ಟಿದೆಯೋ ಅನಂತರ ಯಾರಲ್ಲಿ ಲಯವನ್ನು ಹೊಂದುತ್ತದೆಯೋ ಅಂತಹ ಭಗವಂತನನ್ನು ಶರಣು ಹೊಂದುತ್ತೇನೆ.

೩೪. ಯಾವನು ವಿಶ್ವರೂಪವನ್ನು ಧರಿಸಿ ಸಂಗವುಳ್ಳವನೆಂದು ತೋರುತ್ತಾನೆಯೋ ಯಾವನು ಸಂಗರಹಿತನಾದರೂ ಪರಿಪೂರ್ಣನಾಗಿರುವನೋ ಅವನಿಗೆ ಶರಣಾಗತನಾಗಿದ್ದೇನೆ.

೩೫. ಯಾವದೇವನು ಪ್ರಾಣಿಗಳ ಹೃದಯದಲ್ಲಿದ್ದಾಗ್ಯೂ ಅಜ್ಞಾನದಿಂದ ಮೋಹಿತರಾದ ಅವರಿಗೆ ಗೋಚರನಾಗುವುದಿಲ್ಲವೋ ಅಂತಹ ಉತ್ತಮ ಮತ್ತು ನಿರ್ದೋಷನಾದ ದೇವನನ್ನು ಶರಣುಹೊಂದುತ್ತೇನೆ.

ಸರ್ವಸಂಗನಿವೃತ್ತಾನಾಂ ಧ್ಯಾನಯೋಗರತಾತ್ಮನಾಂ ।
ಸರ್ವತ್ರ ಭಾತಿ ಜ್ಞಾನಾತ್ಮಾ ತಮಸ್ಮಿ ಶರಣಂ ಗತಃ ॥ ೩೬ ॥

ದಧಾರ ಮಂದರಂ ಪೃಷ್ಠೇ ಕ್ಷೀರೋದೇಽಮೃತಮಂಥನೇ ।
ದೇವತಾನಾಂ ಹಿತಾರ್ಥಾಯ ತಂ ಕೂರ್ಮಂ ಶರಣಂ ಗತಃ ॥ ೩೭ ॥

ದಂಷ್ಟ್ರಾಂಕುಶೇನ ಯೋಽನಂತಃ ಸಮುದ್ಧೃತ್ಯಾರ್ಣವಾದ್ಧರಾಂ ।
ತಸ್ಥಾವಿದಂ ಜಗತ್ಕೃತ್ಸ್ನಂ ವಾರಾಹಂ ತಂ ನತೋಽಸ್ಮ್ಯಹಂ ॥ ೩೮ ॥

ಲಬ್ಧ್ವಾ ವೈರೋಚನಾದ್ಭೂಮಿಂ ದ್ವಾಭ್ಯಾಂ ಪದ್ಭ್ಯಾಮತೀತ್ಯ ಯಃ ।
ಆಬ್ರಹ್ಮಭುವನಂ ಪ್ರಾದಾತ್ಸುರೇಭ್ಯಸ್ತಂ ನಮಾಮ್ಯಹಂ ॥ ೩೯ ॥

---

೩೬. ಸರ್ವಸಂಗ ಪರಿತ್ಯಾಗಮಾಡಿ ಕೇವಲ ಧ್ಯಾನಯೋಗದಲ್ಲಿ ಆಸಕ್ತರಾದ ಯೋಗಿಗಳಿಗೆ ಯಾವ ಜ್ಞಾನರೂಪಿಯಾದ ಪರಮಾತ್ಮನು ಎಲ್ಲಾ ಸ್ಥಳಗಳಲ್ಲಿಯೂ ಪ್ರತ್ಯಕ್ಷಗೋಚರನಾಗುತ್ತಾನೆಯೋ ಅಂತಹ ಭಗವಂತನಿಗೆ ಶರಣಾಗತನಾಗುತ್ತೇನೆ.

೩೭. ಕ್ಷೀರಸಮುದ್ರದಲ್ಲಿ ಅಮೃತಕ್ಕೋಸ್ಕರ ಮಥನಮಾಡುವಾಗ ದೇವತೆಗಳಿಗೆ ಅನುಕೂಲಮಾಡುವುದಕ್ಕಾಗಿ ಬೆನ್ನಿನಿಂದ ಮಂದರಪರ್ವತವನ್ನು ಎತ್ತಿದ ಕೂರ್ಮರೂಪಿಯಾದ ಭಗವಂತನನ್ನು ಶರಣುಹೊಂದುತ್ತೇನೆ.

೩೮. ದಂಷ್ಟ್ರಾ (ಕೋರೇಹಲ್ಲು) ಎಂಬ ಅಂಕುಶದಿಂದ ಯಾವ ನಾಶರಹಿತನಾದ ಪರಮಾತ್ಮನು ಸುಮುದ್ರದಿಂದ. ಭೂಮಿಯನ್ನು ಎತ್ತಿ ಈ ಸಕಲ ಜಗತ್ತನ್ನೂ ಸ್ಥಾಪನೆಮಾಡಿರುವನೋ ಅಂತಹ ವರಹಾರೂಪಿಯಾದ ಭಗವಂತನನ್ನು ನಮಸ್ಕರಿಸುತ್ತೇನೆ.

೩೯. ಯಾವಾತನು ಬಲಿಚಕ್ರವರ್ತಿಯಿಂದ ಭೂಮಿಯನ್ನು ದಾನ ತೆಗೆದುಕೊಂಡು ಅದನ್ನು ಬ್ರಹ್ಮಲೋಕದವರೆಗೂ, ಎರಡುಪಾದಗಳಿಂದ ಅಳೆದು ದೇವತೆಗಳಿಗೆ ಕೊಟ್ಟನೋ ಅಂತಹ ವಾಮುಸ್ವಾಮಿಯನ್ನು ನಮಸ್ಕರಿಸುತ್ತೇನೆ.

ಹೈಹಯಸ್ಯಾಪರಾಧೇನ ಹ್ಯೇಕವಿಂಶತಿಸಂಖ್ಯಯಾ ।
ಕ್ಷತ್ರಿಯಾನ್ವಯಭೇತ್ತಾ ಯೋ ಜಾಮದಗ್ನ್ಯಂ ನತೋಽಸ್ಮಿ ತಂ ॥ ೪೦ ॥

ಭೂಮ್ಯಾದಿಲೋಕತ್ರಿತಯಂ ಸಂಹೃತ್ಯಾತ್ಮಾನಮಾತ್ಮನಿ ।
ಪಶ್ಯಂತಿ ಯೋಗಿನಃ ಸರ್ವೇ ತಮೀಶಾನಂ ಭಜಾಮ್ಯಹಂ ॥ ೪೧ ॥

ಯುಗಾಂತೇ ಪಾಪಿನೋಽಶುದ್ಧಾನ್ಭಿತ್ವಾ ತೀಕ್ಷ್ಣಾಸಿಧಾರಯಾ ।
ಸ್ಥಾಪಯಾಮಾಸ ಯೋ ಧರ್ಮಂ ಕೃತಾದೌ ತನ್ನಮಾಮ್ಯಹಂ ॥ ೪೨ ॥

ಏವಮಾದೀನ್ಯನೇಕಾನಿ ರೂಪಾಣ್ಯಸ್ಯ ಮಹಾತ್ಮನಃ ।
ತೇಷಾಂ ನಾಮಾನಿ ಸಂಖ್ಯಾತುಂ ಶಕ್ಯಂತೇ ನಾಬ್ದಕೋಟಿಭಿಃ ॥ ೪೩ ॥

---

೪೦. ಯಾವ ಸ್ವಾಮಿಯು ಹೈಹಯನ ಅಪರಾಧದಿಂದ ಕ್ಷತ್ರಿಯಕುಲವನ್ನು ಇಪ್ಪತ್ತೊಂದಾವರ್ತಿ ನಾಶಪಡಿಸಿದನೋ ಅಂತಹ ಜಮದಗ್ನಿ ಪುತ್ರನಾದ ಪರಶುರಾಮನನ್ನು ನಮಸ್ಕರಿಸುತ್ತೇನೆ.

೪೧. ಭೂಮಿ ಮುಂತಾದ ಮೂರು ಲೋಕಗಳನ್ನೂ ಸಂಹರಿಸಿ ತನ್ನಲ್ಲಿಯೇ ಅಡಗಿಸಿಕೊಂಡಿರುವ ಯಾವ ಪರಮಾತ್ಮನನ್ನು ಸಕಲ ಯೋಗಿಗಳು ಸಾಕ್ಷಾತ್ಕರಿಸಿಕೊಳ್ಳುತ್ತಾರೆಯೋ ಅಂತಹ ಸ್ವಾಮಿಯನ್ನು ನಾನು ಭಜಿಸುತ್ತೇನೆ.

೪೨. ಯಾವ ದೇವನು ಪ್ರಳಯಕಾಲದಲ್ಲಿ ಅಶುದ್ಧರಾದ ಪಾಪಿಷ್ಠರನ್ನು ಹರಿತವಾದ ಕತ್ತಿಯಿಂದ ಸೀಳಿ ಪುನಃ ಕೃತಯುಗದ ಪ್ರಾರಂಭದಲ್ಲಿ ಧರ್ಮವನ್ನು ಸ್ಥಾಪಿಸಿದನೋ, ಅಂತಹ ದೇವನನ್ನು ನಮಸ್ಕರಿಸುತ್ತೇನೆ.

೪೩. ಇದುವರೆಗೂ ವರ್ಣಿಸಲ್ಪಟ್ಟ ಅವತಾರರೂಪಗಳೇ ಮುಂತಾಗಿ ಮಹಾಮಹಿಮೆಯುಳ್ಳ ಭಗವಂತನ ರೂಪಗಳು ಅನೇಕವಾಗಿವೆ. ಅನೇಕ ಕೋಟಿವರ್ಷಗಳಾದಾಗ್ಯೂ ಅವುಗಳ ಹೆಸರುಗಳನ್ನು ಎಣಿಸಲು ಸಾಧ್ಯವಾಗುವುದಿಲ್ಲ. ಎಂದರೆ ಭಗವದವತಾರಗಳು ಅಸಂಖ್ಯಾತವಾಗಿವೆಯೆಂದು ತಾತ್ಪರ್ಯ.

ಮಹಿಮಾನಂ ತು ಯನ್ನಾಮ್ನಃ ಪರಂ ಗಂತುಂ ಮುನೀಶ್ವರಾಃ ।
ದೇವಾಸುರಾಶ್ಚ ಮನವಃ ಕಥಂ ತಂ ಕ್ಷುಲ್ಲಕೋ ಭಜೇ ॥ ೪೪ ॥

ಯನ್ನಾಮಶ್ರವಣೇನಾಪಿ ಮಹಾಪಾತಕಿನೋ ನರಾಃ ।
ಪವಿತ್ರತಾಂ ಪ್ರಪದ್ಯಂತೇ ತಂ ಕಥಂ ಸ್ತೌಮಿ ಚಾಲ್ಪಧೀಃ ॥ ೪೫ ॥

ಯಥಾಕಥಂಚಿದ್ಯನ್ನಾಮ್ನಿ ಕೀರ್ತಿತೇ ವಾ ಶ್ರುತೇಽಪಿ ವಾ ।
ಪಾಪಿನಸ್ತು ವಿಶುದ್ಧಾಃ ಸ್ಯುಃ ಶುದ್ಧಾ ಮೋಕ್ಷಮವಾಪ್ನುಯುಃ ॥ ೪೬ ॥

ಆತ್ಮನ್ಯಾತ್ಮಾನಮಾಧಾಯ ಯೋಗಿನೋ ಗತಕಲ್ಮಷಾಃ ।
ಪಶ್ಯಂತಿ ಯಂ ಜ್ಞಾನರೂಪಂ ತಮಸ್ಮಿ ಶರಣಂ ಗತಃ ॥ ೪೭ ॥

---

೪೪. ಋಷಿಶ್ರೇಷ್ಠರು, ದೇವತೆಗಳು, ಅಸುರರು ಮತ್ತು ಮನುಗಳೂ ಸಹ ಯಾವ ಭಗವಂತನ ನಾಮಮಹಿಮೆಯನ್ನು ಸಂಪೂರ್ಣವಾಗಿ ತಿಳಿಯಲಾರರೋ ಅಂತಹ ಭಗವಂತನನ್ನು ಅಲ್ಪನಾದ ನಾನು ಹೇಗೆ ಭಜಿಸಲಿ?

೪೫. ಮಹಾಪಾತಕಗಳನ್ನು ಮಾಡಿರುವ ಮನುಜರೂ ಸಹ ಯಾರ ನಾಮಶ್ರವಣಮಾತ್ರದಿಂದ ಪರಿಶುದ್ಧರಾಗುತ್ತಾರೆಯೋ ಅಂತಹ ಭಗವಂತನನ್ನು ಮಂದಬುದ್ಧಿಯಾದ ನಾನು ಹೇಗೆ ಸ್ತುತಿಸಲಿ?

೪೬. ಯಾವ ಉದ್ದೇಶದಿಂದಲಾದರೂ ಆಗಲಿ ಭಗವನ್ನಾಮಸಂಕೀರ್ತನೆ ಅಥವಾ ಶ್ರವಣಮಾಡಿದರೆ ಪಾಪಿಗಳು ಶುದ್ಧರಾಗುತ್ತಾರೆ. ಶುದ್ಧರಾಗಿರುವವರು ಮಾಡಿದರೆ ಮೋಕ್ಷವನ್ನು ಹೊಂದುತ್ತಾರೆ.

೪೭. ಯೋಗಿಗಳು ಮನಸ್ಸಿನಲ್ಲಿ ಪರಮಾತ್ಮನನ್ನು ಧ್ಯಾನಿಸಿ ತಮ್ಮ ಪಾಪಗಳನ್ನು ಕಳೆದುಕೊಂಡು ಯಾವ ಜ್ಞಾನಸ್ವರೂಪಿಯಾದ ಭಗವಂತನನ್ನು ಸಾಕ್ಷಾತ್ಕರಿಸುತ್ತಾರೋ ಅಂತಹ ದೇವನನ್ನು ಶರಣುಹೊಂದುತ್ತೇನೆ.

ಸಾಂಖ್ಯಾಸ್ಸರ್ವೇಷು ಪಶ್ಯಂತಿ ಪರಿಪೂರ್ಣಾತ್ಮಕಂ ಹರಿಂ ।
ತಮಾದಿದೇವಮಜರಂ ಜ್ಞಾನರೂಪಂ ಭಜಾಮ್ಯಹಂ ॥ ೪೮ ॥

ಸರ್ವಸತ್ವಮಯಂ ಶಾಂತಂ ಸರ್ವಸ್ರಷ್ಟಾರಮೀಶ್ವರಂ ।
ಸಹಸ್ರಶೀರ್ಷಕಂ ದೇವಂ ವಂದೇ ಭಾವಾತ್ಮಕಂ ಹರಿಂ ॥ ೪೯ ॥

ಯದ್ಭೂತಂ ಯಚ್ಚ ವೈ ಭಾವ್ಯಂ ಸ್ಥಾವರಂ ಜಂಗಮಂ ಜಗತ್ ।
ದಶಾಂಗುಲಂ ಯೋಽತ್ಯತಿಷ್ಠತ್ತಮೀಶಮಜರಂ ಭಜೇ ॥ ೫೦ ॥

ಅಣೋರಣೀಯಾಂಸಮಜಂ ಮಹತಶ್ಚ ಮಹತ್ತರಂ ।
ಗುಹ್ಯಾದ್ಗುಹ್ಯತಮಂ ದೇವಂ ಪ್ರಣಮಾಮಿ ಪುನಃ ಪುನಃ ॥ ೫೧ ॥

---

೪೮. ಜ್ಞಾನಯೋಗಿಗಳು, ಪರಿಪೂರ್ಣಸ್ವರೂಪನಾದ ವಿಷ್ಣುವನ್ನು ಸಕಲ ಪದಾರ್ಥಗಳಲ್ಲಿಯೂ ನೋಡುತ್ತಾರೆ. ನಾನು ಜ್ಞಾನರೂಪಿಯಾದ ನಿರ್ದೋಷನಾದ, ಜ್ಞಾನಗಮ್ಯನಾದ, ಮೂಲದೇವನನ್ನು ಭಜಿಸುತ್ತೇನೆ.

೪೯. ಸಕಲಪ್ರಾಣಿಗಳಿಗೂ ಪ್ರೇರಕನು, ಶಾಂತಸ್ವಭಾವವುಳ್ಳವನು, ಸರ್ವಕ್ಕೂ ಸೃಷ್ಟಿಕರ್ತನು, ಜಗನ್ನಿಯಾಮಕನು, ಸಾವಿರತಲೆಗಳುಳ್ಳವನು, ಭಾವರೂಪನೂ, ಆದ ನಾರಾಯಣದೇವನನ್ನು ನಮಸ್ಕರಿಸುತ್ತೇನೆ.

೫೦. ಯಾವಾತನು ಭೂತಕಾಲದಲ್ಲಿದ್ದ ಭವಿಷ್ಯತ್ಕಾಲದಲ್ಲುಂಟಾಗ ಬಹುದಾದ, ಸ್ಥಿರ ಮತ್ತು ಚರವಾದ ಸಮಸ್ತವಸ್ತುಗಳಿಗಿಂತಲೂ ಆಕಾರದಲ್ಲಿ ಹತ್ತು ಅಂಗುಲ ಹೆಚ್ಚು ಪರಿಮಿತಿಯುಳ್ಳವನೋ ಅಂತಹ ನಿರ್ದೋಷನಾದ ಹರಿಯನ್ನು ಭಜಿಸುತ್ತೇನೆ.

೫೧. ಚಿಕ್ಕ ಪದಾರ್ಥಗಳಲ್ಲಿ ಅದಕ್ಕಿಂತ ಚಿಕ್ಕದಾಗಿಯೂ ದೊಡ್ಡ ಪದಾರ್ಥಗಳಲ್ಲಿ ಅದಕ್ಕಿಂತ ದೊಡ್ಡದಾಗಿಯೂ ಇರುವ ರೂಪಗಳಿಂದ ಅಂತರ್ಯಾಮಿಯಾಗಿರುವ, ಉತ್ಪತ್ತಿರಹಿತನಾದ, ಎಲ್ಲಾ ಗೋಪ್ಯವಸ್ತುಗಳಿಗಿಂತಲೂ ಅತ್ಯಂತಗೋಪ್ಯನಾದ ಸ್ವಾಮಿಯನ್ನು ಪುನಃ ಪುನಃ ಎಂದರೆ ಅನೇಕಾವರ್ತಿ ನಮಸ್ಕರಿಸುತ್ತೇನೆ.

ಧ್ಯಾತಸ್ಸ್ಮೃತಃ ಪೂಜಿತೋ ವಾ ಶ್ರುತಃ ಪ್ರಣಮಿತೋಽಪಿ ವಾ ।
ಸ್ವಪದಂ ಯೋ ದದಾತೀಶಸ್ತಂ ವಂದೇ ಪುರುಷೋತ್ತಮಂ ॥ ೫೨ ॥

ಇತಿ ಸ್ತುವಂತಃ ಪರಮಂ ಪರೇಶಂ
ಹರ್ಷಾಂಬುಸಂರುದ್ಧವಿಲೋಚನಾಸ್ತೇ ।
ಮುನೀಶ್ವರಾ ನಾರದಸಂಯುತಾಸ್ತು
ಸನಂದನಾದ್ಯಾಃ ಪ್ರಮುದಂ ಪ್ರಜಗ್ಮುಃ ॥ ೫೩ ॥

ಯ ಇದಂ ಪ್ರಾತರುತ್ಥಾಯ ಪಠೇದ್ವೈ ಪೌರುಷಂ ಸ್ತವಂ ।
ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಂ ಸ ಗಚ್ಛತಿ ॥ ೫೪ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ಸನತ್ಕುಮಾರನಾರದಸಂವಾದೇ ನಾರದಕೃತ
ವಿಷ್ಣುಸ್ತುತಿರ್ನಾಮ ದ್ವಿತೀಯೋಽಧ್ಯಾಯಃ

---

೫೨. ಧ್ಯಾನ, ಸ್ಮರಣೆ, ಪೂಜೆ, ಶ್ರವಣ, ನಮಸ್ಕಾರ ಇವುಗಳಲ್ಲಿ ಯಾವುದನ್ನು ಮಾಡಿದರೂ ಸರಿ, ಅಂತಹವರಿಗೆ ಯಾವನು ತನ್ನ ಸ್ಥಾನವಾದ ವೈಕುಂಠಾದಿಲೋಕವನ್ನು ಕೊಡುತ್ತಾನೆಯೋ ಅಂತಹ ಪುರುಷಶ್ರೇಷ್ಠನಾದ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

೫೩. ಈ ಪ್ರಕಾರವಾಗಿ ಉತ್ತಮೋತ್ತಮನಾದ ಪರಮಾತ್ಮನನ್ನು ಸ್ತುತಿಸಿ, ಕಂಬನಿಗಳಿಂದ ತುಂಬಿದ ಕಣ್ಣುಗಳುಳ್ಳವರಾದ, ಆ ಸನಕಾದಿಋಷಿ ಶ್ರೇಷ್ಠರು ನಾರದಸಹಿತರಾಗಿ ಮಹಾಸಂತೋಷದಲ್ಲಿ ಮಗ್ನರಾದರು.

೫೪. ಯಾರು ಪ್ರಾತಃಕಾಲದಲ್ಲಿ ಎದ್ದಕೂಡಲೇ ಈ ಪುರುಷನಾಮಕನಾದ ಭಗವಂತನ ಸ್ತೋತ್ರವನ್ನು ಪಠನಮಾಡುತ್ತಾರೆಯೋ ಅವನು ತನ್ನ ಸಮಸ್ತಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದ
ದಲ್ಲಿ ಸನತ್ಕುಮಾರ ಮತ್ತು ನಾರದರ ಸಂಭಾಷಣದಲ್ಲಿ ನಾರದರು ಮಾಡಿರುವ
''ವಿಷ್ಣುಸ್ತುತಿ'' ಎಂಬ ಎರಡನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ಈ ಅಧ್ಯಾಯದ ಆದಿಯಲ್ಲಿ ಸನತ್ಕುಮಾರರು ನಾರದರಿಗೆ ಸಕಲ ಧರ್ಮಗಳನ್ನೂ ಹೇಳಿದ ಬಗೆ ಹೇಗೆ? ಅವರಿಬ್ಬರೂ ಯಾವ ಸಂದರ್ಭದಲ್ಲಿ ಎಲ್ಲಿ ಸೇರಿ ತತ್ವವಿಚಾರಮಾಡಿದರು? ಎಂಬುದಾಗಿ ಶೌನಕಾದಿ ಋಷಿಗಳು ಸೂತರನ್ನು ಕೇಳಿದ ಪ್ರಶ್ನೆಯು ಉಕ್ತವಾಗಿದೆ. ತರುವಾಯ ಚತುರ್ಮುಖಬ್ರಹ್ಮನ ಮಾನಸಪುತ್ರರಾದ, ಸನಕ, ಸನಂದನ, ಸನತ್ಕುಮಾರ ಮತ್ತು ಸನಾತನ ಎಂಬ ನಾಲ್ಕು ಋಷಿಗಳು ಒಂದಾನೊಂದು ದಿವಸ ಬ್ರಹ್ಮಸಭೆಯನ್ನು ನೋಡಬೇಕೆಂಬ ಅಪೇಕ್ಷೆಯಿಂದ ಮೇರುಶಿಖರದಲ್ಲಿರುವ ಬ್ರಹ್ಮಸದನಕ್ಕೆ ಹೊರಟರು. ದಾರಿಯಲ್ಲಿ ಕಂಡ ಗಂಗಾನದಿಯಲ್ಲಿ ಸ್ನಾನಮಾಡಲು ನಿಂತಿರುವಾಗ ನಾರದಮಹರ್ಷಿಗಳು ಅಲ್ಲಿಗೆ ಬಂದು ತಮ್ಮ ಅಣ್ಣಂದಿರಾದ ಸನಕಾದಿಗಳಿಗೆ ನಮಸ್ಕರಿಸಿ, ಅನ್ಯೋನ್ಯವಾಗಿ ಯೋಗಕ್ಷೇಮ ವಿಚಾರವಾದನಂತರ ಎಲ್ಲರೂ ನದಿಯಲ್ಲಿ ಸ್ನಾನಮಾಡಿ, ನಿತ್ಯಾಹ್ನಿಕ, ದೇವರ್ಷಿತರ್ಪಣಗಳನ್ನು ನೆರವೇರಿಸಿ, ತತ್ವವಿಚಾರ ಮಾಡುತ್ತಿರುವಾಗ ನಾರದರು, ಎಲೈ ಸನಕಾದಿಗಳೇ ಮಹಾಜ್ಞಾನಿಗಳಾದ ನಿಮ್ಮ ಸಮಾಗಮವಾದದ್ದು ನಮ್ಮ ಭಾಗ್ಯೋದಯವೇ ಸರಿ, ನೀವು ಹರಿಭಕ್ತರು, ಮಹಾಪ್ರಾಜ್ಞರೂ ಆಗಿರುವುದರಿಂದ ಕೆಲವು ತತ್ವಗಳನ್ನು ಯಥಾವತ್ತಾಗಿ ಉಪದೇಶಿಸಬೇಕೆಂದು ಪ್ರಾರ್ಥಿಸಿ, ಈ ಚರಾಚರಾತ್ಮಕವಾದ ಸಕಲ ಪ್ರಪಂಚಕ್ಕೆ ಕಾರಣನು, ಗಂಗಾಜನಕನೂ ಆದ ವಿಷ್ಣುವಿನ ಮಾಹಾತ್ಮ್ಯಯನ್ನು ತಿಳಿದು, ಆತನನ್ನು ಸಾಕ್ಷಾತ್ಕರಿಸಿಕೊಳ್ಳುವ ಬಗೆ ಹೇಗೆ? ನಾವು ಮಾಡುತ್ತಿರುವ ಕಾಯಿಕ, ವಾಚನಿಕ, ಮಾನಸಿಕವೆಂಬ ಮೂರುವಿಧವಾದ ಕರ್ಮಗಳು ಹೇಗೆ ಸಫಲವಾಗುತ್ತವೆ? ಮನುಷ್ಯರಿಗೆ ಜ್ಞಾನತಪಸ್ಸುಗಳು ಹೇಗೆ ಸಿದ್ಧಿಸುತ್ತವೆ? ಎಂಬುದಾಗಿ ಪ್ರಶ್ನೆಮಾಡಿ, ಅನೇಕ ಅವತಾರರೂಪಗಳನ್ನು ವರ್ಣಿಸಿ, ಭಗವಂತನನ್ನು ಬಹುವಿಧವಾಗಿ ಸ್ತೋತ್ರಮಾಡಿರುತ್ತಾರೆ. ಈಪ್ರಕಾರ ನಾರದರು ಮಾಡಿರುವ ವಿಷ್ಣುಸ್ತುತಿಯಲ್ಲಿಯೇ ಅಧ್ಯಾಯವು ಕೊನೆಗೊಂಡಿದೆ. ಆದುದರಿಂದ ಈ ಅಧ್ಯಾಯಕ್ಕೆ ‘‘ನಾರದಕೃತವಿಷ್ಣುಸ್ತುತಿ’’ ಎಂಬುದಾಗಿ ಅಂಕಿತವೂ ಪ್ರಸಿದ್ಧವಾಗಿದೆ. ಈ ಸ್ತೋತ್ರವನ್ನು ಪಠನಮಾಡುವವರಿಗೆ ಮುಕ್ತಿಯೆಂಬ ಮಹಾಫಲವು ಲಭಿಸುತ್ತದೆಂದು ಅಧ್ಯಾಯದ ಕೊನೆಯಲ್ಲಿ ಉಕ್ತವಾಗಿದೆ.

# ತೃತೀಯೋಽಧ್ಯಾಯಃ

ನಾರದ ಉವಾಚ

**ಕಥಂ ಸಸರ್ಜ ಬ್ರಹ್ಮಾದೀನಾದಿದೇವಃ ಪುರಾ ವಿಭುಃ ।**
**ತನ್ಮಮಾಖ್ಯಾಹಿ ಸನಕ ಸರ್ವಜ್ಞೋಽಸ್ತಿ ಯತೋ ಭವಾನ್ ॥ ೧ ॥**

ಶೌನಕ ಉವಾಚ

**ನಾರಾಯಣೋಽಕ್ಷರೋಽನಂತಃ ಸರ್ವವ್ಯಾಪೀ ನಿರಂಜನಃ ।**
**ತೇನೇದಮಖಿಲಂ ವ್ಯಾಪ್ತಂ ಜಗತ್ಸ್ಥಾವರಜಂಗಮಂ ॥ ೨ ॥**

**ಆದಿಸರ್ಗೇ ಮಹಾವಿಷ್ಣುಃ ಸ್ವಪ್ರಕಾಶೋ ಜಗನ್ಮಯಃ ।**
**ಗುಣಭೇದಮಧಿಷ್ಠಾಯ ಮೂರ್ತಿತ್ರಿಕಮವಾಸೃಜತ್ ॥ ೩ ॥**

---

## ಮೂರನೆಯ ಅಧ್ಯಾಯವು

ನಾರದನು ಹೇಳಿದನು—ಸನಕನೇ ! ವ್ಯಾಪ್ತನು, ಜಗತ್ಕಾರಣನೂ ಆದ ವಿಷ್ಣುವು ಚತುರ್ಮುಖಬ್ರಹ್ಮ ಮುಂತಾದವರನ್ನು ಮೊದಲು ಹೇಗೆ ಸೃಷ್ಟಿಸಿದನು? ನೀನು ಸರ್ವಜ್ಞನಾದುದರಿಂದ ಆ ಸೃಷ್ಟಿಕ್ರಮವನ್ನು ನನಗೆ ತಿಳಿಸು.

೨. ಶೌನಕಮುನಿಯು ಹೇಳಿದನು.—ನಾಶರಹಿತನು, ಅಪರಿಮಿತನು, ಸರ್ವಾಂತರ್ಯಾಮಿಯು ಮತ್ತು ದೋಷರಹಿತನೂ ಆದ ನಾರಾಯಣನಿಂದ ಚರಾಚರಾತ್ಮಕವಾದ ಸಮಸ್ತ ಪ್ರಪಂಚವೂ ವ್ಯಾಪಿಸಲ್ಪಟ್ಟಿದೆ.

೩. ಸ್ವಯಂಪ್ರಕಾಶನು, ಜಗದಂತರ್ಯಾಮಿಯೂ ಆದ ಮಹಾವಿಷ್ಣುವು ಸೃಷ್ಟ್ಯಾರಂಭಕಾಲದಲ್ಲಿ ಸತ್ವಗುಣ, ರಜೋಗುಣ ಮತ್ತು ತಮೋಗುಣ ಎಂಬ ಮೂರನ್ನು ಆಧಾರವಾಗಿಟ್ಟುಕೊಂಡು ತ್ರಿಮೂರ್ತಿಗಳನ್ನು ಸೃಷ್ಟಿ ಮಾಡಿದನು.

ಸೃಷ್ಟ್ಯರ್ಥಮಸೃಜದ್ದೇವೋ ದಕ್ಷಿಣಾಂಗಾತ್ಪ್ರಜಾಪತಿಂ ।
ಮಧ್ಯೇ ರುದ್ರಾಖ್ಯಮೀಶಾನಂ ಜಗದಂತಕರಂ ಮುನೇ ॥ ೪ ॥

ಪಾಲನಾಯಾಸ್ಯ ಜಗತೋ ಸ್ವರೂಪಾದ್ವಿಷ್ಣುಮವ್ಯಯಂ ।
ತಮಾದಿದೇವಮಜರಂ ಕೇಚಿದಾಹುಃ ಶಿವಾಭಿಧಂ ॥ ೫ ॥

ಕೇಚಿದ್ವಿಷ್ಣುಂ ಸದಾಸತ್ಯಂ ಬ್ರಹ್ಮಾಣಂ ಕೇಚಿದೂಚಿರೇ ।
ತಸ್ಯ ಶಕ್ತಿಃ ಪರಾ ವಿಷ್ಣೋಃ ಜಗತ್ಕಾರ್ಯಪ್ರವರ್ತಿನೀ ॥ ೬ ॥

ಭಾವಾಭಾವಸ್ವರೂಪಾ ಸಾ ವಿದ್ಯಾವಿದ್ಯೇತಿ ಗೀಯತೇ ।
ಯದಾ ಶಕ್ತಿರ್ಮಹಾವಿಷ್ಣೋರ್ಭಿನ್ನತ್ವೇನ ಪ್ರತೀಯತೇ ॥ ೭ ॥

ಶಕ್ತ್ಯೈಕಭಾವನಾಬುದ್ಧಿಃ ಸಾ ವಿದ್ಯೇತ್ಯಭಿಧೀಯತೇ ॥ ೮ ॥

---

೪-೮. ಮಹಾವಿಷ್ಣುವು ಜಗತ್ತನ್ನು ಸೃಷ್ಟಿಸುವುದಕ್ಕಾಗಿ ತನ್ನ ಬಲ ಪಾರ್ಶ್ವದ ಅವಯವಗಳಿಂದ ಬ್ರಹ್ಮನನ್ನೂ, ಮಧ್ಯಭಾಗದ ಅವಯವದಿಂದ ಜಗತ್ತನ್ನು ಸಂಹರಿಸುವ ರುದ್ರನನ್ನೂ ಜಗತ್ತನ್ನು ರಕ್ಷಿಸುವುದಕ್ಕಾಗಿ ತನ್ನ ಸ್ವರೂಪದಿಂದ ನಾಶರಹಿತನಾದ ವಿಷ್ಣುವನ್ನೂ ಸಹ ಸೃಷ್ಟಿಸಿದನು. ದೋಷ ರಹಿತನಾದ ಆ ಮೂಲದೇವತೆಯನ್ನು ಕೆಲವರು ಶಿವ ಎಂಬುದಾಗಿಯೂ ಕೆಲವರು ವಿಷ್ಣು ಎಂಬುದಾಗಿಯೂ, ಕೆಲವರು ಬ್ರಹ್ಮನೆಂಬುದಾಗಿಯೂ ಹೇಳು ತ್ತಾರೆ. ಜಗತ್ತೆಂಬ ಕಾರ್ಯಚಕ್ರವನ್ನು ನಡೆಯಿಸುತ್ತಿರುವ ಆ ವಿಷ್ಣುವಿನ ಉತ್ಕೃಷ್ಟ ವಾದ ಶಕ್ತಿಯು ಭಾವಸ್ವರೂಪವಾಗಿ ವಿದ್ಯೆಯೆಂಬುದಾಗಿಯೂ, ಅಭಾವಸ್ವರೂಪ ವಾಗಿ ಅವಿದ್ಯೆಯೆಂಬುದಾಗಿಯೂ ಹೇಳಲ್ಪಟ್ಟಿದೆ. ಆ ಪರಶಕ್ತಿಯು ಮಹಾವಿಷ್ಣುವಿ ನಿಂದ ಭಿನ್ನವಾದುದೆಂದು ತಿಳಿಯುವುದು ಅವಿದ್ಯೆಯೆನಿಸುವುದು. ಅದು ದುಃಖ ಸಾಧನವು (ಎಂದರೆ ವಿಷ್ಣುವಿನಶಕ್ತಿಯೂ ವಿಷ್ಣುವೂಬೇರೆಯೆಂದು ತಿಳಿಯಬಾರದು. ಹಾಗೆ ತಿಳಿದರೆ ದುಃಖವು ಪ್ರಾಪ್ತವಾಗುತ್ತದೆಂದು ತಾತ್ಪರ್ಯ) ಶಕ್ತಿ, ವಿಷ್ಣು ಇವುಗಳು ಒಂದೇ ಎಂಬ ಬುದ್ಧಿಯು ವಿದ್ಯೆಯೆನಿಸಿಕೊಳ್ಳುತ್ತದೆ.

ಏವಂ ಮಾಯಾ ಮಹಾವಿಷ್ಣೋರ್ಭಿನ್ನಾ ಸಂಸಾರದಾಯಿನೀ ।
ಅಭೇದಬುದ್ಧ್ಯಾ ದೃಷ್ಟಾ ಚೇತ್ಸಂಸಾರಕ್ಷಯಕಾರಿಣೀ ॥ ೯ ॥

ವಿಷ್ಣುಶಕ್ತಿಸಮುದ್ಭೂತಮೇತತ್ಸರ್ವಂ ಚರಾಚರಂ ।
ಯಥಾ ಹರಿರ್ಜಗದ್ವ್ಯಾಪೀ ತಸ್ಯ ಶಕ್ತಿಸ್ತಥಾ ಮುನೇ ॥ ೧೦ ॥

ದಾಹಶಕ್ತಿರ್ಯಥಾಂಗಾರೇ ಸ್ವಾಶ್ರಯಂ ವ್ಯಾಪ್ಯ ತಿಷ್ಠತಿ ।
ಉಮೇತಿ ಕೇಚಿದಾಹುಸ್ತಾಂ ಶಕ್ತಿಂ ಲಕ್ಷ್ಮೀಂ ತಥಾ ಪರೇ ॥ ೧೧ ॥

ಭಾರತೀತ್ಯಪರೇ ಚೈನಾಂ ಗಿರಿಜೇತ್ಯಂಬಿಕೇತಿ ಚ ।
ದುರ್ಗೇತಿ ಭದ್ರಕಾಳೀತಿ ಚಂಡೀ ಮಾಹೇಶ್ವರೀತ್ಯಪಿ ॥ ೧೨ ॥

ಕೌಮಾರೀ ವೈಷ್ಣವೀ ಚೇತಿ ವಾರಾಹ್ಯೈಂದ್ರೀ ಚ ಶಾಂಭವೀ ।
ಬ್ರಾಹ್ಮೀತಿ ವಿದ್ಯಾವಿದ್ಯೇತಿ ಮಾಯೇತಿ ಚ ತಥಾಪರೇ ॥ ೧೩ ॥

---

೯. ಈರೀತಿಯಾಗಿ ವಿಷ್ಣುಮಾಯೆಯು (ಶಕ್ತಿ) ಮಹಾವಿಷ್ಣುವಿನಿಂದ ಭಿನ್ನವೆಂದು ತಿಳಿದರೆ ದುಃಖಮಯವಾದ ಸಂಸಾರವೂ ಅಭಿನ್ನವೆಂದು ತಿಳಿದರೆ ಸಂಸಾರನಾಶ ಎಂದರೆ ಮೋಕ್ಷವೂ ಲಭಿಸುತ್ತದೆ.

೧೦-೧೪. ಈ ಚರಾಚರಾತ್ಮಕವಾದ ಸಕಲ ಪ್ರಪಂಚವೂ ವಿಷ್ಣುಶಕ್ತಿಯಿಂದ ಉದ್ಭವಿಸಿದುದು. ಎಲೈ ಋಷಿಯೇ ಬೆಂಕಿಯಲ್ಲಿರುವ ಸುಡುವ ಶಕ್ತಿಯು ಬೆಂಕಿಗೆ ಆಶ್ರಯವಾದ ಇದ್ದಲಿನಲ್ಲಿ ಹೇಗೆ ವ್ಯಾಪಿಸಿರುತ್ತದೆಯೋ, ಅದರಂತೆ ಜಗದ್ವ್ಯಾಪಕನಾದ ಹರಿಯ ಶಕ್ತಿಯು ಜಗತ್ತಿನಲ್ಲೆಲ್ಲಾ ವ್ಯಾಪಿಸಿಕೊಂಡಿದೆ. ಹಲವು ಋಷಿಗಳು ಆ ಶಕ್ತಿಯನ್ನು "ಉಮಾ" ಎಂದೂ ಮತ್ತೆ ಕೆಲವರು "ಲಕ್ಷ್ಮಿ" ಎಂದೂ ಇನ್ನಿತರರು "ಭಾರತಿ" ಎಂದೂ, ಕೆಲಕೆಲವು ಋಷಿಗಳು ಅದನ್ನು "ಗಿರಿಜಾ, ಅಂಬಿಕಾ, ದುರ್ಗಾ, ಭದ್ರಕಾಳೀ, ಚಂಡೀ, ಮಾಹೇಶ್ವರೀ ಕೌಮಾರೀ, ವೈಷ್ಣವೀ, ವಾರಾಹೀ, ಐಂದ್ರೀ, ಶಾಂಭವೀ, ಬ್ರಾಹ್ಮೀ, ವಿದ್ಯಾ ಅವಿದ್ಯಾ, ಮಾಯಾ, ಪ್ರಕೃತಿ, ಪರಶಕ್ತಿ" ಎಂಬುದಾಗಿಯೂ ಅನೇಕ ಹೆಸರು

ಪ್ರಕೃತಿಶ್ಚ ಪರಾ ಚೇತಿ ವದಂತಿ ಪರಮರ್ಷಯಃ ।
ಸೇಯಂ ಶಕ್ತಿಃ ಪರಾ ವಿಷ್ಣೋರ್ಜಗತ್ಸರ್ಗಾದಿಕಾರಿಣೀ ॥ ೧೪ ॥

ವ್ಯಕ್ತಾವ್ಯಕ್ತಸ್ವರೂಪೇಣ ಜಗದ್ವ್ಯಾಪ್ಯ ವ್ಯವಸ್ಥಿತಾ ।
ಪ್ರಕೃತಿಶ್ಚ ಪುಮಾಂಶ್ಚೈವ ಕಾಲಶ್ಚೇತಿ ತ್ರಿಧಾ ಸ್ಥಿತಾ ॥ ೧೫ ॥

ಸೃಷ್ಟಿಸ್ಥಿತಿವಿನಾಶಾನಾಮೇಕಾ ಕಾರಣತಾಂ ಗತಾ ।
ಯೇನೇದಮಖಿಲಂ ಜಾತಂ ಬ್ರಹ್ಮರೂಪಧರೇಣ ವೈ ॥ ೧೬ ॥

ತಸ್ಮಾತ್ಪರತರೋ ದೇವೋ ನಿತ್ಯ ಇತ್ಯಭಿಧೀಯತೇ ।
ರಕ್ಷಾಂ ಕರೋತಿ ಯೋ ದೇವೋ ಜಗತಾಂ ಪರಮಃ ಪುಮಾನ್ ॥ ೧೭ ॥

ತಸ್ಮಾತ್ಪರತರಂ ಯತ್ತದವ್ಯಯಂ ಪರಮಂ ಪದಂ ।
ಅಕ್ಷರೋ ನಿರ್ಗುಣಃ ಶುದ್ಧಃ ಪರಿಪೂರ್ಣಸ್ಸನಾತನಃ ॥ ೧೮ ॥

---

ಗಳಿಂದ ಕರೆದಿರುತ್ತಾರೆ. ಈರೀತಿಯಾಗಿ ನಾನಾ ನಾಮಧೇಯಗಳಿಂದ ವರ್ಣಿತ ವಾಗಿರುವ ವಿಷ್ಣುವಿನ ಪರಶಕ್ತಿಯು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣ ವಾಗಿದೆ.

೧೫-೧೯. ಅದು ಕೆಲವುಕಡೆ ವ್ಯಕ್ತವಾಗಿ ತನ್ನ ಪ್ರಭಾವವನ್ನು ತೋರಿ ಸುತ್ತಲೂ, ಕೆಲವು ಕಡೆಗಳಲ್ಲಿ ತಾನು ಗೋಪ್ಯವಾಗಿದ್ದು ಕಾರ್ಯವನ್ನು ನಡೆ ಯಿಸುತ್ತಲೂ ಈ ಸಕಲ ಜಗತ್ತಿನಲ್ಲಿಯೂ ವ್ಯಾಪಿಸಿದೆ. ಶಕ್ತಿಯೊಂದೇ ಪ್ರಕೃತಿ ಪುರುಷ ಮತ್ತು ಕಾಲ ಎಂದು ಮೂರು ವಿಧವಾಗಿ ಈ ಜಗತ್ತಿನ ಸೃಷ್ಟಿ, ಪಾಲನೆ ಮತ್ತು ವಿನಾಶಗಳಿಗೆ ಕಾರಣವಾಗಿದೆ. ಸರ್ವೋತ್ತಮನಾದ ದೇವನು ಬ್ರಹ್ಮ ನಲ್ಲಿದ್ದು ಆ ರೂಪದಿಂದ ಈ ಸಕಲ ಪ್ರಪಂಚವನ್ನೂ ಸೃಷ್ಟಿಸಿರುವುದರಿಂದ ನಿತ್ಯ ಎಂಬುದಾಗಿ ಹೇಳಿಸಿಕೊಳ್ಳುತ್ತಾನೆ. ಪರಮಪುರುಷರೂಪಿಯಾದ ದೇವನು ಲೋಕಗಳ ಪಾಲನೆಯನ್ನು ಮಾಡುತ್ತಾನೆಯಾಗಿ ಅವನ ಪರಮಪದವು ನಾಶ ರಹಿತವಾಗಿ ಉತ್ತಮವೆನಿಸಿದೆ. ಅವನು ನಾಶರಹಿತನು, ಪ್ರಾಕೃತಗುಣಹೀನನು ನಿರ್ದೋಷನು, ಗುಣಪರಿಪೂರ್ಣನು, ಅನಾದಿಯು, ಉತ್ತಮನು, ಕಾಲರೂಪ

ಯಃ ಪರಃ ಕಾಲರೂಪಾಖ್ಯೋ ಯೋಗಿಧ್ಯೇಯಃ ಪರಾತ್ಪರಃ ।
ಪರಮಾತ್ಮಾ ಪರಾನಂದಃ ಸರ್ವೋಪಾಧಿ ವಿವರ್ಜಿತಃ ॥ ೧೯ ॥

ಜ್ಞಾನೈಕವೇದ್ಯಃ ಪರಮಃ ಸಚ್ಚಿದಾನಂದವಿಗ್ರಹಃ ।
ಯೋಽಸೌ ಶುದ್ಧೋಽಪಿ ಪರಮೋಹ್ಯಹಂಕಾರೇಣ ಸಂಯುತಃ ॥ ೨೦ ॥

ದೇಹೀತಿ ಪ್ರೋಚ್ಯತೇ ಮೂಢೈರಹೋಽಜ್ಞಾನವಿಡಂಬನಂ ।
ಸದೇವಃ ಪರಮಃ ಶುದ್ಧಃ ಸತ್ವಾದಿ ಗುಣಭೇದತಃ ॥ ೨೧ ॥

ಮೂರ್ತಿತ್ರಯಂ ಸಮಾಪನ್ನಃ ಸೃಷ್ಟಿಸ್ಥಿತ್ಯಂತಕಾರಣಂ ।
ಯೋಽಸೌ ಬ್ರಹ್ಮಾ ಜಗತ್ಕರ್ತಾ ಯನ್ನಾಭಿಕಮಲೋದ್ಭವಃ ॥ ೨೨ ॥

ಸ ಏವಾನಂದರೂಪಾತ್ಮಾ ತಸ್ಮಾನ್ನಾಸ್ತ್ಯಪರೋ ಮುನೇ ।
ಅಂತರ್ಯಾಮೀ ಜಗದ್ವ್ಯಾಪೀ ಸರ್ವಸಾಕ್ಷೀ ನಿರಂಜನಃ ॥ ೨೩ ॥

---

ನೆಂಬ ಹೆಸರುಳ್ಳವನು, ಯೋಗಿಗಳ ಧ್ಯಾನಕ್ಕೆ ವಿಷಯನು, ಉತ್ತಮೋತ್ತಮನು, ಉತ್ಕೃಷ್ಟಾನಂದಸ್ವರೂಪನು, ಸಮಸ್ತೋಪಾಧಿಶೂನ್ಯನೂ ಆಗಿರುವನು.

೨೦-೨೮. ಮತ್ತು ಕೇವಲ ಜ್ಞಾನದಿಂದಲೇ ಪ್ರಸನ್ನನಾಗುವವನು, ಶ್ರೇಷ್ಠನು, ಜ್ಞಾನಾನಂದಾತ್ಮಕವಾದ ಶರೀರವುಳ್ಳವನೂ ಆಗಿರುವ ಆ ಪರಮಾತ್ಮನು ನಿರ್ದೋಷನಾದರೂ, ಉತ್ತಮನಾದಾಗ್ಯೂ, ಅಹಂಕಾರದಿಂದ ಕೂಡಿದವನಾಗಿ ನಮ್ಮಂತೆ ಶರೀರವನ್ನು ಧರಿಸಿರುವವನೆಂದು ಅಜ್ಞರಿಂದ ಹೇಳಿಸಿಕೊಳ್ಳಲ್ಪಡುತ್ತಾನೆ. ಇದು ಆಶ್ಚರ್ಯಕರವಾದ ಅಜ್ಞಾನದ ವಿಲಾಸವು. ಯಾವ ವಿಷ್ಣುವಿನ ನಾಭಿಕಮಲದಲ್ಲಿ ಉದ್ಭವಿಸಿದ ಚತುರ್ಮುಖನು ಜಗತ್ಸೃಷ್ಟಿಕರ್ತೃವೊ, ಅವನೇ ಆನಂದಸ್ವರೂಪನು ಅವನಿಗಿಂತ ಬೇರೆಯಾದ ಅಂತಹ ವಸ್ತುವಿಲ್ಲ. ಸಕಲ ಜಗದಂತರ್ಯಾಮಿಯು, ಸಕಲ ಪದಾರ್ಥಗಳಲ್ಲಿಯೂ ವ್ಯಾಪಿಸಿರುವವನು, ಒಳಗೆ ಮತ್ತು ಹೊರಗೆ ನಡೆಯುವ ಎಲ್ಲಾ ವ್ಯಾಪಾರಗಳನ್ನೂ ಸಾಕ್ಷಾತ್ತಾಗಿ ನೋಡುವವನು ಮತ್ತು ದೋಷವಿಲ್ಲದವನೂ ಆಗಿರುವ ಪರಮೇಶ್ವರನು, ಭಿನ್ನವಾದ ವಸ್ತುಗಳಲ್ಲಿಯೂ ಅಭಿನ್ನಸ್ವರೂಪದಿಂದ ಇರು

ಭಿನ್ನಾಭಿನ್ನಸ್ವರೂಪೇಣ ಸ್ಥಿತೋ ವೈ ಪರಮೇಶ್ವರಃ ।
ಯಸ್ಯ ಶಕ್ತಿರ್ಮಹಾಮಾಯಾ ಜಗದ್ವಿಸ್ರಂಭಕಾರಿಣೀ ॥ ೨೪ ॥

ವಿಶ್ವೋತ್ಪತ್ತೇರ್ನಿದಾನತ್ವಾತ್ಪ್ರಕೃತಿಃ ಪ್ರೋಚ್ಯತೇ ಬುಧೈಃ ।
ಆದಿಸರ್ಗೇ ಮಹಾವಿಷ್ಣುಃ ಲೋಕಾನ್ಕರ್ತುಂ ಸಮುದ್ಯತಃ ॥ ೨೫ ॥

ಪ್ರಕೃತಿಃ ಪುರುಷಶ್ಚೇತಿ ಕಾಲಶ್ಚೇತಿ ತ್ರಿಧಾಭವತ್ ।
ಪಶ್ಯಂತಿ ಭಾವಿತಾತ್ಮಾನೋ ಪರಬ್ರಹ್ಮೇತಿ ಸಂಜ್ಞಿತಂ ॥ ೨೬ ॥

ಶುದ್ಧಂ ಯತ್ಪರಮಂ ಧಾಮ ತದ್ವಿಷ್ಣೋಃ ಪರಮಂ ಪದಂ ।
ಏವಂ ಶುದ್ಧೋಽಕ್ಷರೋಽನಂತಃ ಕಾಲರೂಪೀ ಮಹೇಶ್ವರಃ ॥ ೨೭ ॥

ಗುಣರೂಪೀ ಗುಣಾಧಾರೋ ಜಗತಾಮಾದಿಕೃದ್ವಿಭುಃ ।
ಪ್ರಕೃತಿಃ ಕ್ಷೋಭಮಾಪನ್ನಾ ಪುರುಷಾಖ್ಯೇ ಜಗದ್ಗುರೌ ॥ ೨೮ ॥

---

ತ್ತಾನೆ. ಜಗತ್ತಿಗೆ ವಿಸ್ಮಯವನ್ನುಂಟುಮಾಡುವ ಮಹಾಮಾಯೆಯೆಂಬ ಪರಮಾತ್ಮನ ಶಕ್ತಿಯು ಪ್ರಪಂಚದ ಉತ್ಪತ್ತಿಗೆ ಕಾರಣವಾಗಿರುವುದರಿಂದ "ಪ್ರಕೃತಿ" ಎಂಬುದಾಗಿ ಜ್ಞಾನಿಗಳಿಂದ ಕರೆಯಲ್ಪಟ್ಟಿದೆ. ಸೃಷ್ಟಿಯ ಪ್ರಾರಂಭದಲ್ಲಿ ಮಹಾವಿಷ್ಣುವು ಲೋಕಗಳನ್ನು ನಿರ್ಮಾಣಮಾಡಲುದ್ಯುಕ್ತನಾಗಿ ಪ್ರಕೃತಿ, ಪುರುಷ, ಕಾಲ ಎಂಬುದಾಗಿ ಮೂರು ವಿಧವಾದನು. ಆತ್ಮತತ್ವಜ್ಞರು ಯಾವ ಸ್ಥಾನವನ್ನು ಪರಬ್ರಹ್ಮನಾಮಕವು, ನಿಷ್ಕಳಂಕವು ಮತ್ತು ಉತ್ತಮವೆಂದು ತಿಳಿಯುತ್ತಾರೆಯೋ ಅದೇ ವಿಷ್ಣುವಿನ ಪರಮಪದವಿಯು. ಈ ಪ್ರಕಾರವಾಗಿ ನಿಷ್ಕಲಂಕನು, ನಾಶರಹಿತನು, ದೇಶಕಾಲಗಳಲ್ಲಿ ವ್ಯಾಪ್ತನು, ಕಾಲರೂಪಿಯು, ಗುಣಸ್ವರೂಪನು, ಗುಣಗಳಿಗೆ ಆಶ್ರಯನು ಮತ್ತು ಸರ್ವಶಕ್ತನೂ ಆಗಿರುವ ಮಹೇಶ್ವರನು ಜಗತ್ತಿಗೆ ಸೃಷ್ಟಿಕರ್ತನಾಗಿರುತ್ತಾನೆ. ಜಗದ್ಗುರುವಾದ ಪುರುಷನೆಂಬ ಆ ಭಗವಂತನು ಸೃಷ್ಟಿಸಬೇಕೆಂದು ಇಚ್ಛಿಸಿದಕೂಡಲೇ ಜಡಪ್ರಕೃತಿಯು ಪರಿಣಾಮವನ್ನು ಹೊಂದಿತು.

ಮಹಾನ್ ಪ್ರಾದುರಭೂದ್ಬುದ್ಧಿಸ್ತತೋಽಹಂ ಸಮವರ್ತತ ।
ಅಹಂಕಾರಾಚ್ಚ ಸೂಕ್ಷ್ಮಾಣಿ ತನ್ಮಾತ್ರಾಣೀಂದ್ರಿಯಾಣಿ ಚ ॥ ೨೯ ॥

ತನ್ಮಾತ್ರೇಭ್ಯೋ ಹಿ ಜಾತಾನಿ ಭೂತಾನಿ ಜಗತಃ ಕೃತೇ ।
ಆಕಾಶವಾಯ್ವಗ್ನಿಜಲಭೂಮಯೋಽಬ್ಜಭವಾತ್ಮಜ ॥ ೩೦ ॥

ಯಥಾಕ್ರಮಂ ಕಾರಣತಾಮೇಕೈಕಸ್ಯೋಪಯಾಂತಿ ಚ ।
ತತೋ ಬ್ರಹ್ಮಾ ಜಗದ್ಧಾತಾ ತಾಮಸಾನಸೃಜತ್ಪ್ರಭುಃ ॥ ೩೧ ॥

ತಿರ್ಯಗ್ಯೋನಿ ಗತಾನ್ ಜಂತೂನ್ಪಶುಪಕ್ಷಿಮೃಗಾದಿಕಾನ್ ।
ತಮಪ್ಯಸಾಧಕಂ ಮತ್ವಾ ದೇವಸರ್ಗಂ ಸಮಾತನೋತ್ ॥ ೩೨ ॥

---

೨೯-೩೧. ಆ ಪರಿಣಾಮವೇ ಬುದ್ಧಿಯೆಂಬ ಮಹತ್ತತ್ತ್ವವಾಯಿತು. ಆ ಮಹತ್ತತ್ತ್ವದಿಂದ ಅಹಂಕಾರ ತತ್ತ್ವವು ಜನಿಸಿತು. ಅಹಂಕಾರತತ್ತ್ವದಿಂದ ಸೂಕ್ಷ್ಮಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ತನ್ಮಾತ್ರಗಳೆಂಬ ಐದು ತನ್ಮಾತ್ರಗಳು ಮತ್ತು ಇಂದ್ರಿಯಗಳು (ಶ್ರೋತ್ರ, ತ್ವಕ್, ಚಕ್ಷುಸ್ಸು, ರಸನ, ಘ್ರಾಣ ಎಂಬ ಐದು ಇಂದ್ರಿಯಗಳು) ಹುಟ್ಟಿದುವು. ಆ ಶಬ್ದಾದಿ ಪಂಚ ತನ್ಮಾತ್ರಗಳಿಂದ ಆಕಾಶ, ವಾಯು, ತೇಜಸ್ಸು, ಜಲ, ಪೃಥಿವಿಯೆಂಬ ಪಂಚಭೂತಗಳು ಜಗತ್ಸೃಷ್ಟಿಗಾಗಿ ನಿರ್ಮಿತವಾದುವು. ಬ್ರಹ್ಮಪುತ್ರನಾದ ನಾರದನೇ ! ಆ ಪಂಚಭೂತಗಳೇ ಕ್ರಮವಾಗಿ ಜಗತ್ತಿನ ಪ್ರತಿಯೊಂದು ಪದಾರ್ಥಕ್ಕೂ ಕಾರಣವಾಗಿವೆ. ತರುವಾಯ ಸೃಷ್ಟಿಕರ್ತನಾದ ಚತುರ್ಮುಖನು ತಮೋಗುಣಮಯ ಪದಾರ್ಥಗಳನ್ನು ಸೃಷ್ಟಿಸಿದನು. ಅದೇ ತಾಮಸಸೃಷ್ಟಿಯು.

೩೨. ಪಶು, ಪಕ್ಷಿ, ಮೃಗ ಮುಂತಾದ ತಿರ್ಯಗ್ಜಂತುಗಳನ್ನೂ ಸಹ ಸೃಷ್ಟಿಸಿದನು. ಅಷ್ಟುಮಾತ್ರವೇ ಸಾಲದೆಂದರಿತು ದೇವತೆಗಳನ್ನೂ ಸೃಷ್ಟಿಸಿದನು.

ತತೋ ವೈ ಮಾನುಷಂ ಸರ್ಗಂ ಕಲ್ಪಯಾಮಾಸ ಪದ್ಮಜಃ ।
ತತೋ ದಕ್ಷಾದಿಕಾನ್ಪುತ್ರಾನ್ ಸೃಷ್ಟಿಸಾಧನತತ್ಪರಾನ್ ॥ ೩೩ ॥

ಏಭಿಃ ಪುತ್ರೈರಿದಂ ವ್ಯಾಪ್ತಂ ಸ ದೇವಾಸುರಮಾನುಷಂ ।
ಭೂರ್ಭುವಶ್ಚ ತಥಾ ಸ್ವಶ್ಚ ಮಹಶ್ಚೈವ ಜನಸ್ತಥಾ ॥ ೩೪ ॥

ತಪಶ್ಚ ಸತ್ಯಮಿತ್ಯೇವಂ ಲೋಕಾಸ್ಸಪ್ತೋಪರಿ ಸ್ಥಿತಾಃ ।
ಅತಲಂ ವಿತಲಂ ಚೈವ ಸುತಲಂ ಚ ತಲಾತಲಂ ॥ ೩೫ ॥

ಮಹಾತಲಂ ಚ ವಿಪ್ರೇಂದ್ರ ತತೋಧಶ್ಚ ರಸಾತಲಂ ।
ಪಾತಾಲಂ ಚೈವ ಸಪ್ತೈವ ಪಾತಾಲಾನಿ ಕ್ರಮಾದಧಃ ॥ ೩೬ ॥

ಏಷು ಸರ್ವೇಷು ಲೋಕೇಷು ಲೋಕನಾಥಾಂಶ್ಚ ಸೃಷ್ಟವಾನ್ ।
ಕುಲಾಚಲಾನ್ನದೀಂಶ್ಚಾಸೌ ತತ್ತಲ್ಲೋಕನಿವಾಸಿನಾಂ ॥ ೩೭ ॥

---

೩೩-೩೬. ಅನಂತರ ನಾರಾಯಣನ ನಾಭಿಕಮಲದಲ್ಲಿ ಉದ್ಭವಿಸಿದ ಚತುರ್ಮುಖನು ಮನುಷ್ಯರನ್ನು ಸೃಷ್ಟಿಸಿದನು. ಅನಂತರ ಸೃಷ್ಟಿಗೆ ಸಾಧಕರಾದ ದಕ್ಷಪ್ರಜೇಶ್ವರ ಮುಂತಾದ ಕುಮಾರರನ್ನು ಸೃಷ್ಟಿಸಿದನು. ಈ ಪುತ್ರರುಗಳು ದೇವ, ಅಸುರ ಮತ್ತು ಮನುಷ್ಯಸಂಬಂಧಿಯಾದ ಈ ಲೋಕವನ್ನು ವ್ಯಾಪಿಸಿದರು. ಭೂಲೋಕ, ಅಂತರಿಕ್ಷಲೋಕ, ಸ್ವರ್ಗಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕ ಎಂಬುದಾಗಿ ಮೇಲ್ಭಾಗದಲ್ಲಿ ಏಳು ಲೋಕಗಳಿವೆ. ಬ್ರಾಹ್ಮಣೋತ್ತಮನೇ-ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಳವೆಂಬುದಾಗಿ ಏಳುಲೋಕಗಳು ಒಂದರ ಕೆಳಗೊಂದಾಗಿ ಈ ಭೂಲೋಕದ ಅಧೋಭಾಗದಲ್ಲಿವೆ.

೩೭-೪೪. ಈ ಹದಿನಾಲ್ಕು ಲೋಕಗಳಲ್ಲಿಯೂ ಲೋಕಪಾಲಕರನ್ನು ಸೃಷ್ಟಿಸಿದನು. ಆಯಾಯಾ ಲೋಕಗಳಲ್ಲಿ ವಾಸಮಾಡುವವರಿಗೆ ಬೇಕಾಗುವ ಕುಲಾಚಲಪರ್ವತ ಮತ್ತು ನದಿಗಳನ್ನು ಮತ್ತು ಅವರಿಗೆ ಯೋಗ್ಯವಾದ ಸಮಸ್ತ ಜೀವಿಕಾಸಾಧನಗಳನ್ನೂ ಕಲ್ಪಿಸಿದನು. ಭೂಲೋಕದ ಮಧ್ಯಭಾಗದಲ್ಲಿ ಸಕಲ ದೇವತೆಗಳಿಗೂ ಆಶ್ರಯವಾದ ಮೇರುಪರ್ವತವೂ ಅಂತ್ಯಭಾಗದಲ್ಲಿ ಲೋಕಾ

**ವರ್ತನಾದೀನಿ ಸರ್ವಾಣಿ ಯಥಾಯೋಗ್ಯಮಕಲ್ಪಯತ್ ।**
**ಭೂತಲೇ ಮಧ್ಯಗೋಮೇರುಃ ಸರ್ವದೇವ ಸಮಾಶ್ರಯಃ ॥ ೩೮ ॥**

**ಲೋಕಾಲೋಕಶ್ಚ ಭೂಮ್ಯಂತೇ ತನ್ಮಧ್ಯೇ ಸಪ್ತಸಾಗರಾಃ ।**
**ದ್ವೀಪಾಶ್ಚ ಸಪ್ತ ವಿಪ್ರೇಂದ್ರ ದ್ವೀಪೇ ದ್ವೀಪೇ ಕುಲಾಚಲಾಃ ॥ ೩೯ ॥**

**ಬಾಹ್ಯೋ ನದ್ಯಶ್ಚ ವಿಖ್ಯಾತಾ ಜನಾಶ್ಚಾಮರಸನ್ನಿಭಾಃ ।**
**ಜಂಬೂ ಪ್ಲಕ್ಷಾಭಿಧಾನೌ ಚ ಶಾಲ್ಮಲಶ್ಚ ಕುಶಸ್ತಥಾ ॥ ೪೦ ॥**

**ಕ್ರೌಂಚಶಾಕೌ ಪುಷ್ಕರಶ್ಚ ತೇ ಸರ್ವೇ ದೇವಭೂಮಯಃ ।**
**ಏತೇ ದ್ವೀಪಾಃ ಸಮುದ್ರೈಸ್ತು ಸಪ್ತಸಪ್ತಭಿರಾವೃತಾಃ ॥ ೪೧ ॥**

**ಲವಣೇಕ್ಷುಸುರಾಸರ್ಪಿದಧಿಕ್ಷೀರಜಲೈಃ ಸಮಂ ।**
**ಏತೇ ದ್ವಿಪಾಃ ಸಮುದ್ರಾಶ್ಚ ಪೂರ್ವಸ್ಮಾದುತ್ತರೋತ್ತರಾಃ ॥ ೪೨ ॥**

---

ಲೋಕವೆಂಬ ಪರ್ವತವೂ ಇವೆರಡರ ಮಧ್ಯದಲ್ಲಿ ಏಳು ಸಮುದ್ರಗಳೂ, ಅವುಗಳಲ್ಲಿ ಏಳು ದ್ವೀಪಗಳೂ, ಪ್ರತಿಯೊಂದು ದ್ವೀಪದಲ್ಲಿಯೂ ಕುಲಾಚಲಗಳೂ, ಬಹಿರಂಗವಾದ ನದಿಗಳು ಮತ್ತು ದೇವತೆಗಳಿಗೆ ಸಮಾನರಾದ ಜನಗಳೂ ಇರುತ್ತಾರೆ. ಜಂಬು, ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬುದಾಗಿ ನಾಮಾಂಕಿತೆಗಳಾದ ಆ ಏಳು ದ್ವೀಪಗಳೂ, ದೇವತೆಗಳಿಗೆ ಆಶ್ರಯಸ್ಥಾನವು. ಈ ದ್ವೀಪಗಳು ಉಪ್ಪುನೀರು, ಕಬ್ಬಿನರಸ, ಹೆಂಡ, ತುಪ್ಪ, ಮೊಸರು, ಹಾಲು, ನೀರು ಇವುಗಳಿಂದ ಪೂರ್ಣವಾದ ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿವೆ. ಈ ದ್ವೀಪಗಳು ಮತ್ತು ಸಮುದ್ರಗಳಲ್ಲಿ ಪೂರ್ವ ಪೂರ್ವಕ್ಕಿಂತ ಉತ್ತರೋತ್ತರವಾದವುಗಳು ಎರಡರಷ್ಟು ವಿಸ್ತಾರವಾಗಿವೆ. ಲೋಕಾಲೋಕ ಪರ್ವತ ಮತ್ತು ಕ್ಷೀರಸಮುದ್ರಕ್ಕೆ ಉತ್ತರಭಾಗದಲ್ಲಿಯೂ, ಹಿಮವತ್ಪರ್ವತಕ್ಕೆ ದಕ್ಷಿಣದಿಕ್ಕಿನಲ್ಲಿಯೂ ಇರುವ ದೇಶವನ್ನು ಭರತಖಂಡವೆಂದು ತಿಳಿಯಬೇಕು. ಈ ಭಾರತವರ್ಷವು ಸಕಲ ಕರ್ಮಗಳಿಗೂ ಫಲವನ್ನು ಕೊಡುವ ಪುಣ್ಯ

ಜ್ಞೇಯಾ ದ್ವಿಗುಣವಿಸ್ತಾರಾ ಲೋಕಾಲೋಕಾಚ್ಚ ಪರ್ವತಾತ್ ।
ಕ್ಷೀರೋದಧೇರುತ್ತರಂ ಯದ್ಧಿಮಾದ್ರೇಶ್ಚೈವ ದಕ್ಷಿಣಂ ॥ ೪೩ ॥

ಜ್ಞೇಯಂ ತದ್ಭಾರತಂ ವರ್ಷಂ ಸರ್ವಕರ್ಮಫಲಪ್ರದಂ ।
ಅತ್ರ ಕರ್ಮಾಣಿ ಕುರ್ವಂತಿ ತ್ರಿವಿಧಾನಿ ತು ನಾರದ ॥ ೪೪ ॥

ತತ್ಫಲಂ ಭುಜ್ಯತೇ ಚೈವ ಭೋಗಭೂಮಿಷ್ವನುಕ್ರಮಾತ್ ।
ಭಾರತೇ ತು ಕೃತಂ ಕರ್ಮ ಶುಭಂ ವಾಶುಭಮೇವ ಚ ॥ ೪೫ ॥

ಆಫಲಕ್ಷಯಣಂ ವಿಪ್ರ ಭುಜ್ಯತೇನ್ಯತ್ರ ಜಂತುಭಿಃ ।
ಅದ್ಯಾಪಿ ದೇವಾ ಇಚ್ಛಂತಿ ಜನ್ಮ ಭಾರತಭೂತಲೇ ॥ ೪೬ ॥

ಸಞ್ಚಿತಂ ಸುಮಹತ್ಪುಣ್ಯಮಕ್ಷಯ್ಯಮಮಲಂ ಶುಭಂ ।
ಕದಾ ವಯಂ ಹಿ ಲಪ್ಸ್ಯಾಮೋ ಜನ್ಮ ಭಾರತಭೂತಲೇ ॥ ೪೭ ॥

---

ಭೂಮಿಯು. ಇಲ್ಲಿ ಜನರು ಮೂರು ವಿಧವಾದ ಕರ್ಮಗಳನ್ನೂ (ಪ್ರಾರಬ್ಧ, ಸಂಚಿತ ಆಗಾಮಿ ಅಥವಾ ಕಾಯಿಕ, ವಾಚನಿಕ, ಮಾನಸಿಕ ಅಥವಾ, ಶುಭ, ಅಶುಭ, ಉದಾಸೀನ ಎಂಬುದಾಗಿ ಮೂರುವಿಧಗಳು) ಮಾಡುತ್ತಾರೆ.

೪೫-೪೬. ಅವುಗಳ ಫಲವನ್ನೂ ಸಹ ಕ್ರಮವಾಗಿ ಆಯಾಯಾ ಕರ್ಮ ಫಲಗಳನ್ನು ಅನುಭವಿಸುವುದಕ್ಕೆ ಕ್ಲೃಪ್ತವಾಗಿರುವ ಪ್ರದೇಶಗಳಲ್ಲಿ ಅನುಭವಿಸುತ್ತಾರೆ. ಭರತಭೂಮಿಯಲ್ಲಿ ಆಚರಿಸಿದ ಕರ್ಮವು ಒಳ್ಳೆಯದಾಗಲೀ ಅಥವಾ ಕೆಟ್ಟುದಾಗಲೀ ಅದು ಫಲವನ್ನು ಕೊಟ್ಟೇ ಕ್ಷೀಣವಾಗುತ್ತದೆ. ಅದರ ಫಲವು ಪ್ರಾಣಿಗಳಿಂದ ಇತರ ಲೋಕಗಳಲ್ಲಿ ಅನುಭವಿಸಲ್ಪಡುತ್ತದೆ. ಈಗಲೂ ಸಹ ದೇವತೆಗಳು ಭರತಖಂಡದಲ್ಲಿ ಜನ್ಮವನ್ನು ಬಯಸುತ್ತಾರೆ.

೪೭. ಮಹಾಪುಣ್ಯಕರವೂ, ಶಾಶ್ವತಲೋಕಪ್ರದವೂ ನಿರ್ಮಲವೂ ಮತ್ತು ಮಂಗಳಪ್ರದವೆಂದು ಸಿದ್ಧವಾದ ಭರತಖಂಡದಲ್ಲಿನ ಜನ್ಮವನ್ನು ನಾವು ಯಾವಾಗ ಹೊಂದುವೆವು?

ಕದಾ ಪುಣ್ಯೇನ ಮಹತಾ ಯಾಸ್ಯಾಮಃ ಪರಮಂ ಪದಂ ।
ದಾನೈರ್ವಾ ವಿವಿಧೈರ್ಯಜ್ಞೈಸ್ತಪೋಭಿರ್ವಾಥವಾ ಹರಿಂ ॥ ೪೮ ॥

ಜಗದೀಶಂ ಸಮೇಷ್ಯಾಮೋ ನಿತ್ಯಾನಂದಮನಾಮಯಂ ।
ಯೋ ಭಾರತಭುವಂ ಪ್ರಾಪ್ಯ ವಿಷ್ಣುಪೂಜಾಪರೋ ಭವೇತ್ ॥ ೪೯ ॥

ನ ತಸ್ಯ ಸದೃಶೋಽನ್ಯೋಽಸ್ತಿ ತ್ರಿಷು ಲೋಕೇಷು ನಾರದ ।
ಹರಿಕೀರ್ತನಶೀಲೋ ವಾ ತದ್ಭಕ್ತಾನಾಂ ಪ್ರಿಯೋಪಿ ವಾ ॥ ೫೦ ॥

ಶುಶ್ರೂಷುರ್ವಾಪಿ ಮಹತಃ ಸ ವಂದ್ಯೋ ದಿವಿಜೈರಪಿ ।
ಹರಿಪೂಜಾರತೋ ನಿತ್ಯಂ ಭಕ್ತಪೂಜಾರತೋಽಪಿ ವಾ ॥ ೫೧ ॥

ಭಕ್ತೋಚ್ಛಿಷ್ಟಾನ್ನಸೇವೀ ಚ ಯಾತಿ ವಿಷ್ಣೋಃ ಪರಂ ಪದಂ ।
ನಾರಾಯಣೇತಿ ಕೃಷ್ಣೇತಿ ವಾಸುದೇವೇತಿ ಯೋ ವದೇತ್ ॥ ೫೨ ॥

---

೪೮-೪೯. ಅಲ್ಲಿ ಆಚರಿಸಲ್ಪಟ್ಟ ಮಹಾಪುಣ್ಯದಿಂದ ಯಾವಾಗ ಮೋಕ್ಷಕ್ಕೆ ಹೋಗುವೆವು? ಅಥವಾ ದಾನಗಳು, ನಾನಾ ವಿಧವಾದ ಯಜ್ಞಗಳು ಅಥವಾ ತಪಸ್ಸು ಇವುಗಳಿಂದ ನಿತ್ಯನು, ಆನಂದಸ್ವರೂಪನು, ದುಃಖರಹಿತನು ಮತ್ತು ಜಗದೊಡೆಯನೂ ಆಗಿರುವ ವಿಷ್ಣುವನ್ನು ಯಾವಾಗ ಹೊಂದುವೆವು?

೪೯-೫೦. ಎಲೈ ನಾರದನೇ ಯಾವಾತನು ಭಾರತಭೂಮಿಯಲ್ಲಿ ಜನ್ಮವೆತ್ತಿ ಭಕ್ತಿಯಿಂದ ವಿಷ್ಣುಪೂಜೆಯನ್ನು ಮಾಡುತ್ತಾನೆಯೋ ಅಂತಹನಿಗೆ ಸಮಾನನಾದ ಮತ್ತೊಬ್ಬ ಪುಣ್ಯವಂತನು ಮೂರು ಲೋಕಗಳಲ್ಲಿಯೂ ದೊರೆಯುವುದಿಲ್ಲ; ಎಂದರೆ ಅವನು ಮಹಾಪುಣ್ಯವಂತನೆಂದು ತಾತ್ಪರ್ಯ.

೫೦-೫೧. ಯಾವಾತನು ಸ್ವಾಭಾವಿಕವಾಗಿ ಹರಿಭಜನೆಮಾಡುತ್ತಾನೆಯೋ ಅಥವಾ ಹರಿಭಕ್ತರ ಅನುಗ್ರಹಕ್ಕೆ ಪಾತ್ರನೋ ಅಥವಾ ದೊಡ್ಡವರ ಸೇವೆಯನ್ನು ಮಾಡಿರುತ್ತಾನೆಯೋ ಅಂತಹ ಮಹಾಪುರುಷನು ದೇವತೆಗಳಿಗೂ ಸಹ ಪೂಜ್ಯನು.

೫೧-೫೨. ವಿಷ್ಣುಪೂಜೆ ಅಥವಾ ವಿಷ್ಣುಭಕ್ತರ ಸೇವೆ ಇವುಗಳಲ್ಲಿ ಯಾವಾಗಲೂ ನಿರತನಾದವನು, ಭಕ್ತರು ಭೋಜನಮಾಡಿ ಮಿಕ್ಕ ಅನ್ನವನ್ನು

**ಅಹಿಂಸಾದಿಪರಃ ಶಾಂತಃ ಸೋಽಪಿ ವಂದ್ಯಃ ಸುರೋತ್ತಮೈಃ ।**
**ಶಿವೇತಿ ನೀಲಕಂಠೇತಿ ಶಂಕರೇತಿ ಚ ಯಃ ಸ್ಮರೇತ್ ॥ ೫೩ ॥**

**ಸರ್ವಭೂತಹಿತೋ ನಿತ್ಯಂ ಸೋಽಭ್ಯರ್ಚ್ಯೋ ದಿವಿಜೈಃ ಸ್ಮೃತಃ ।**
**ಗುರುಭಕ್ತಃ ಶಿವಧ್ಯಾನೀ ಸ್ವಾಶ್ರಮಾಚಾರತತ್ಪರಃ ॥ ೫೪ ॥**

**ಅನಸೂಯುಃ ಶುಚಿರ್ದಕ್ಷೋ ಯಃ ಸೋಽಪ್ಯರ್ಚ್ಯಃ ಸುರೇಶ್ವರೈಃ ।**
**ಬ್ರಾಹ್ಮಣಾನಾಂ ಹಿತಕರಃ ಶ್ರದ್ಧಾವಾನ್ ಸರ್ವಕರ್ಮಸು ॥ ೫೫ ॥**

**ವೇದವಾದರತೋ ನಿತ್ಯಂ ಸ ಜ್ಞೇಯಃ ಪಂಕ್ತಿಪಾವನಃ ।**
**ಅಭೇದದರ್ಶೀ ದೇವೇಶೇ ನಾರಾಯಣಶಿವಾಭಿಧೇ ॥ ೫೬ ॥**

---

ತಿನ್ನುವವನೂ ಸಹ ವಿಷ್ಣುವಿನ ಪರಮಪದ ಎಂದರೆ ವೈಕುಂಠಲೋಕವನ್ನು ಹೊಂದುತ್ತಾನೆ. ಅಂತಹವನು ಮುಕ್ತನಾಗುತ್ತಾನೆಂದು ತಾತ್ಪರ್ಯ.

೫೨-೫೩. ಅಹಿಂಸಾ ಸತ್ಯ ಮುಂತಾದ ಸಾಮಾನ್ಯ ಧರ್ಮಾಚರಣೆಯಲ್ಲಿ ಆಸಕ್ತನು, ಶಾಂತಿ ಸಂಪನ್ನನೂ ಆದ ಯಾವ ಪ್ರಾಣಿಯು ನಾರಾಯಣ, ಕೃಷ್ಣ, ವಾಸುದೇವ ಎಂಬುದಾಗಿ ಭಗವನ್ನಾಮಗಳ ಕೀರ್ತನೆಮಾಡುತ್ತಾನೆಯೋ ಅಂತಹವನೂ ಸಹ ದೇವಶ್ರೇಷ್ಠರಿಂದ ವಂದ್ಯನಾಗುತ್ತಾನೆ.

೫೩-೫೪. ಯಾವಾತನು ಯಾವಾಗಲೂ ಸರ್ವಪ್ರಾಣಿಗಳಿಗೂ ಹಿತವನ್ನು ಬಯಸುವವನಾಗಿ ಶಿವ, ನೀಲಕಂಠ, ಶಂಕರ ಎಂಬುದಾಗಿ ಸ್ಮರಿಸುತ್ತಾನೆಯೋ ಅಂತಹವನು ದೇವತೆಗಳಿಂದ ಪೂಜ್ಯನಾಗುತ್ತಾನೆ.

೫೪-೫೫. ಯಾವನು ಗುರುಗಳಲ್ಲಿ ಭಕ್ತಿಯುಳ್ಳವನಾಗಿ ಶಿವಧ್ಯಾನ ಮಾಡುತ್ತಾ ವರ್ಣಾಶ್ರಮಾಚಾರ ನಿರತನು, ಅಸೂಯೆ ಇಲ್ಲದವನು, ಶುದ್ಧನು, ಸಮರ್ಥನೂ ಆಗಿರುತ್ತಾನೆಯೋ ಅಂತಹವನೂ ಸಹ ದೇವಶ್ರೇಷ್ಠರಿಂದ ಪೂಜಿಸಿ ಕೊಳ್ಳಲ್ಪಡುತ್ತಾನೆ.

೫೫-೫೬. ಬ್ರಾಹ್ಮಣರಿಗೆ ಹಿತವನ್ನು ಮಾಡುವವನು, ಸಕಲ ಕರ್ಮಗಳಲ್ಲಿಯೂ ಶ್ರದ್ಧೆಯುಳ್ಳವನು, ವೇದಾಧ್ಯಯನ ನಿರತನೂ ಆಗಿರುವ ಮನುಜನು ಪಂಕ್ತಿಪಾವನನೆಂದು ತಿಳಿಯಬೇಕು. ಎಂದರೆ ಅಂತಹವನ ಸಹವಾಸವೇ ಪವಿತ್ರವಾದುದೆಂದು ಭಾವವು.

ಸ ವಂದ್ಯೋ ಬ್ರಾಹ್ಮಣೋ ನಿತ್ಯಮಸ್ಮಾಭಿಃ ಕಿಮು ಸತ್ತಮಃ ।
ಗೋಷು ಕ್ಷಾಂತೋ ಬ್ರಹ್ಮಚಾರೀ ಪರನಿಂದಾವಿವರ್ಜಿತಃ ॥ ೫೭ ॥

ಅಪರಿಗ್ರಹಶೀಲಶ್ಚ ದೇವಪೂಜ್ಯಃ ಸ ನಾರದ ।
ಸ್ತೇಯಾದಿ ದೋಷವಿಮುಖಃ ಕೃತಜ್ಞಃ ಸತ್ಯವಾನ್ ಶುಚಿಃ ॥ ೫೮ ॥

ಪರೋಪಕಾರನಿರತಃ ಪೂಜನೀಯಃ ಸುರೋತ್ತಮೈಃ ।
ವೇದಾರ್ಥಶ್ರವಣೇ ಬುದ್ಧಿಃ ಪುರಾಣಶ್ರವಣೇ ತಥಾ ॥ ೫೯ ॥

ಸತ್ಸಂಗೇಪಿ ಚ ಯಸ್ಯಾಸ್ತಿ ಸೋಪಿ ವಂದ್ಯಃ ಸುರೋತ್ತಮೈಃ ।
ಏವಮಾದೀನ್ಯನೇಕಾನಿ ಕರ್ಮಾಣಿ ಶ್ರದ್ಧಯಾನ್ವಿತಃ ॥ ೬೦ ॥

---

೫೬-೫೭- ನಾರಾಯಣ ಶಿವ ಮುಂತಾದ ನಾಮಧೇಯಗಳುಳ್ಳ ದೇವೇಶನಲ್ಲಿ ಅಭೇದಜ್ಞಾನಿಯಾದ ಉತ್ತಮಬ್ರಾಹ್ಮಣನು ಯಾವಾಗಲೂ ನಮ್ಮಿಂದ ವಂದನಾರ್ಹನೆಂದು ಹೇಳತಕ್ಕದ್ದೇನು-

೫೭-೫೮. ನಾರದನೇ! ಗೋವುಗಳನ್ನು ರಕ್ಷಿಸುವವನು, ಬ್ರಹ್ಮಚಾರಿಯು, ಇತರರನ್ನು ದೂಷಿಸದಿರುವವನು, ದಾನವನ್ನು ಸ್ವೀಕರಿಸದಿರುವವನೂ ಆದ ಮನುಜನು ದೇವತೆಗಳಿಂದ ಪೂಜಿಸಿಕೊಳ್ಳಲು ಅರ್ಹನಾಗಿರುತ್ತಾನೆ.

೫೮–೫೯. ಕಳ್ಳತನ ಮುಂತಾದ ದುಷ್ಕೃತ್ಯಗಳನ್ನು ಮಾಡದಿರುವವನು, ಉಪಕಾರಸ್ಮರಣೆಯುಳ್ಳವನು, ನಿಜವನ್ನೇ ಹೇಳುವವನು, ಶುದ್ಧನು ಇತರರಿಗೆ ಉಪಕಾರಮಾಡುವುದರಲ್ಲಿ ಆಸಕ್ತನೂ ಆದ ಮನುಷ್ಯನು ದೇವೋತ್ತಮರಿಂದಲೂ ಪೂಜಿಸಿಕೊಳ್ಳಲರ್ಹನಾಗುತ್ತಾನೆ.

೫೯-೬೦. ವೇದಾರ್ಥವನ್ನು ತಿಳಿಯಬೇಕು, ಹಾಗೆಯೇ ಪುರಾಣವನ್ನು ಕೇಳಬೇಕು ಮತ್ತು ಸಜ್ಜನರ ಸಹವಾಸದಲ್ಲಿರಬೇಕು ಎಂಬ ಬುದ್ಧಿಯಿರುವವನೂ ಸಹ ದೇವಶ್ರೇಷ್ಠರಿಗೆ ವಂದ್ಯನಾಗುತ್ತಾನೆ.

ಕರೋತಿ ಭಾರತೇ ವರ್ಷೇ ಸ ವಂದ್ಯೋಽಸ್ಮಾಭಿರುತ್ತಮಃ ।
ಏತೇಷ್ವನ್ಯತಮೇನಾಪಿ ನಾತ್ಮಾನಂ ಭಾವಯೇನ್ನರಃ ॥ ೬೧ ॥

ಸ ಏವ ದುಷ್ಕೃತಿರ್ಮೂಢಃ ಕೋಽನ್ಯಸ್ತಸ್ಮಾದಚೇತನಃ ।
ಸಂಪ್ರಾಪ್ಯ ಭಾರತೇ ಜನ್ಮ ಸತ್ಕರ್ಮಸು ಪರಾಙ್ಮುಖಃ ॥ ೬೨ ॥

ಪೀಯೂಷಕಲಶಂ ಮುಕ್ತ್ವಾ ವಿಷಭಾಂಡಮುಪಾಶ್ರಿತಃ ।
ಶ್ರುತಿಸ್ಮೃತ್ಯುದಿತೈರ್ಧರ್ಮೈರ್ನಾತ್ಮಾನಂ ಭಾವಯೇನ್ನರಃ ॥ ೬೩ ॥

ಸ ಏವಾತ್ಮವಿಘಾತೀ ಸ್ಯಾತ್ಪಾಪೀನಾಮಗ್ರಣೀರ್ಮುನೇ ।
ಕರ್ಮಭೂಮಿಂ ಸಮಾಸಾದ್ಯ ಯೋ ನ ಧರ್ಮಂ ಸಮಾಚರೇತ್ ॥ ೬೪ ॥

---

೬೦-೬೧. ಇದುವರೆಗೆ ಹೇಳಲ್ಪಟ್ಟಿರುವ ಅನೇಕ ಕರ್ಮಗಳನ್ನು ಭರತ ಖಂಡದಲ್ಲಿ ಆದರದಿಂದ ಯಾವನು ಮಾಡುತ್ತಾನೆಯೋ ಅಂತಹ ಉತ್ತಮ ಮನುಷ್ಯನನ್ನು ನಾವು ವಂದಿಸಬೇಕು.

೬೧-೬೨. ಯಾವ ಮನುಷ್ಯನು ಉಕ್ತಕರ್ಮಗಳಲ್ಲಿ ಒಂದನ್ನೂ ಸಹ ಅನುಷ್ಠಾನ ಮಾಡುವುದಿಲ್ಲವೋ ಅವನು ಕೇವಲ ಪಾಪಿಷ್ಠನು ಮತ್ತು ಮೂಢನು ಅಂತಹವನಿಗಿಂತ ಬೇರೆ ಜಡವಸ್ತುವಿಲ್ಲ ಎಂದರೆ ಅಂತಹವನು ಕೇವಲ ಕಲ್ಲು ಮುಂತಾದ ಜಡವಸ್ತುಗಳಿಗೆ ಸಮನೆಂದು ತಾತ್ಪರ್ಯ.

೬೨-೬೩. ಭರತಭೂಮಿಯಲ್ಲಿ ಜನ್ಮವೆತ್ತಿ ಸತ್ಕರ್ಮಗಳಲ್ಲಿ ವಿಮುಖನಾಗಿರುವವನು ಕೈಗೆ ಬಂದ ಅಮೃತಕಲಶವನ್ನು ಅನಾದರಿಸಿ ವಿಷಪೂರಿತವಾದ ಪಾತ್ರೆಯನ್ನು ಸ್ವೀಕರಿಸುವಂತಹ ಮೂಢನು.

೬೩-೬೪. ಯಾವ ಮನುಷ್ಯನು ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟ ಧರ್ಮಗಳನ್ನನುಷ್ಠಾನವಾಡಿ ಆತ್ಮನನ್ನು ಶುದ್ಧಿಗೊಳಿಸುವುದಿಲ್ಲವೋ ಅಂತಹವನು ಆತ್ಮನನ್ನು ಸಂಹರಿಸಿದ ಪಾಪಕ್ಕೆ ಭಾಗಿಯಾಗಿ ಪಾಪಿಶ್ರೇಷ್ಠನಾಗುತ್ತಾನೆ.

**ಸ ಚ ಸರ್ವಾಧಮಃ ಪ್ರೋಕ್ತೋ ವೇದವಿದ್ಭಿರ್ಮುನೀಶ್ವರ ।**
**ಶುಭಂ ಕರ್ಮ ಸಮುತ್ಸೃಜ್ಯ ದುಷ್ಕರ್ಮಾಣಿ ಕರೋತಿ ಯಃ ॥ ೬೫ ॥**

**ಕಾಮಧೇನುಂ ಪರಿತ್ಯಜ್ಯ ಅರ್ಕಕ್ಷೀರಂ ಸ ಮಾರ್ಗತಿ ।**
**ಏವಂ ಭಾರತಭೂಭಾಗಂ ಪ್ರಶಂಸಂತಿ ದಿವೌಕಸಃ ॥ ೬೬ ॥**

**ಬ್ರಹ್ಮಾದ್ಯಾ ಅಪಿ ವಿಪ್ರೇಂದ್ರ ಸ್ವಭೋಗಕ್ಷಯಭೀರವಃ ।**
**ತಸ್ಮಾತ್ಪುಣ್ಯತಮಂ ಜ್ಞೇಯಂ ಭಾರತಂ ವರ್ಷಮುತ್ತಮಂ ॥ ೬೭ ॥**

**ದೇವಾನಾಂ ದುರ್ಲಭಂ ವಾಽಪಿ ಸರ್ವಕರ್ಮಫಲಪ್ರದಂ ।**
**ಅಸ್ಮಿನ್ಪುಣ್ಯೇ ಚ ಭೂಭಾಗೇ ಯಸ್ತು ಸತ್ಕರ್ಮಸೂದ್ಯತಃ ॥ ೬೮ ॥**

**ನ ತಸ್ಯ ಸದೃಶಂ ಕಶ್ಚಿತ್ತ್ರಿಷು ಲೋಕೇಷು ವಿದ್ಯತೇ ।**
**ಅಸ್ಮಿನ್ಜಾತೋ ನರೋ ಯಸ್ತು ಸ್ವಕರ್ಮಕ್ಷಯಣೋದ್ಯತಃ ॥ ೬೯ ॥**

---

೬೪-೬೫. ಮುನೀಶ್ವರನೇ! ಕರ್ಮಭೂಮಿಯಾದ ಈ ಭರತಖಂಡದಲ್ಲಿ ಹುಟ್ಟಿ ಯಾವನು ಸತ್ಕರ್ಮಾನುಷ್ಠಾನಮಾಡುವುದಿಲ್ಲವೋ ಅಂತಹವನು ಸರ್ವಾಧಮ ಎಂದರೆ ನೀಚನೆಂದು ವೇದಜ್ಞಾನಿಗಳಿಂದ ಉಕ್ತವಾಗಿದೆ.

೬೫-೬೬. ಸತ್ಕರ್ಮವನ್ನು ಬಿಟ್ಟು ಯಾವನು ದುಷ್ಕೃತ್ಯವನ್ನು ಮಾಡುತ್ತಾನೆಯೋ ಅಂತಹವನು ಕಾಮಧೇನುವನ್ನು ಬಿಟ್ಟು ಎಕ್ಕದ ಹಾಲನ್ನು ಹುಡುಕಿದಂತಾಗಿ ದುಃಖಭಾಗಿಯಾಗುತ್ತಾನೆ.

೬೬-೬೮. ಬ್ರಾಹ್ಮಣಶ್ರೇಷ್ಠನೇ ! ಭೋಗವು ಕ್ಷಯಿಸೀತೆಂದು ಭಯಪಡುವ ಬ್ರಹ್ಮಾದಿದೇವತೆಗಳೂ ಸಹ ಈರೀತಿಯಾಗಿ ಭಾರತಭೂಮಿಯನ್ನು ಸ್ತೋತ್ರ ಮಾಡುತ್ತಾರೆ. ಆದುದರಿಂದ ದೇವತೆಗಳಿಗೂ ದುರ್ಲಭವಾದ, ಸಕಲಕರ್ಮಗಳಿಗೂ ಫಲವನ್ನು ಕೊಡುವಂತಹ ಭಾರತದೇಶವು ಅತ್ಯಂತ ಪುಣ್ಯಕರವಾದ ಉತ್ತಮಕ್ಷೇತ್ರವೆಂದು ತಿಳಿಯಬೇಕು.

೬೮-೬೯. ಈ ಪುಣ್ಯಭೂಮಿಯಲ್ಲಿ ಯಾವಾತನು ಸತ್ಕರ್ಮಗಳನ್ನಾಚರಿಸಲು ಉದ್ಯುಕ್ತನಾಗುವನೋ ಅಂತಹವನಿಗೆ ಸಮಾನರು ಮೂರು ಲೋಕಗಳಲ್ಲಿ ಯಾರೂ ಸಿಕ್ಕುವುದಿಲ್ಲ.

ನರರೂಪಪರಿಚ್ಛಿನ್ನಃ ಸ ಹರಿರ್ನಾತ್ರ ಸಂಶಯಃ ।
ಪರಲೋಕಫಲಂ ಪ್ರೇಪ್ಸುಃ ಕುರ್ಯಾತ್ಕರ್ಮಾಣ್ಯತಂದ್ರಿತಃ ॥ ೭೦ ॥

ಹರೇರ್ನಿವೇದಯೇತ್ತಾನಿ ತತ್ಫಲಂ ಹ್ಯಕ್ಷಯಂ ಭವೇತ್ ।
ವಿರಾಗೀ ಚೇತ್ಕರ್ಮಫಲೇ ಸ್ಪೃಹಾಂ ಕಾಂಚಿನ್ನ ಕಾರಯೇತ್ ॥ ೭೧ ॥

ಅರ್ಪಯೇತ್ಸ್ವಕೃತಂ ಕರ್ಮ ಪ್ರೀಯತಾಮಿತಿ ಮೇ ಹರಿಃ ।
ಆಬ್ರಹ್ಮಭುವನಾಲ್ಲೋಕಾಃ ಪುನರುತ್ಪತ್ತಿದಾಯಕಾಃ ॥ ೭೨ ॥

ಫಲಾಗೃಧ್ನುಃ ಕರ್ಮಣಾಂ ತತ್ಪ್ರಾಪ್ನೋತಿ ಪರಮಂ ಪದಂ ।
ವೇದೋದಿತಾನಿ ಕರ್ಮಾಣಿ ಕುರ್ಯಾದೀಶ್ವರತುಷ್ಟಯೇ ॥ ೭೩ ॥

---

೬೯-೭೦. ಈ ಭರತವರ್ಷದಲ್ಲಿ ಹುಟ್ಟಿದ ಯಾವ ಮನುಷ್ಯನು ಐಹಿಕಫಲಾಪೇಕ್ಷೆಯಿಲ್ಲದೆ ಸ್ವಧರ್ಮಾನುಷ್ಠಾನದಲ್ಲಿ ಉದ್ಯುಕ್ತನಾಗುವನೋ ಅಂತಹವನು ನರವೇಷಧಾರಿಯಾದ ಹರಿಯು. ಸಂಶಯವಿಲ್ಲ. ಎಂದರೆ ಹರ್ಯನುಗ್ರಹಕ್ಕೆ ಪಾತ್ರನಾಗಿ ಮುಕ್ತನಾಗುವನು ಎಂದು ತಾತ್ಪರ್ಯ.

೭೦-೭೧. ಸೋಮಾರಿತನವನ್ನು ಬಿಟ್ಟು ಮನುಜನು ವೈಕುಂಠಾದಿರೂಪವಾದ ಪರಲೋಕವು ಲಭಿಸಬೇಕೆಂಬ ಉದ್ದೇಶದಿಂದ ಕರ್ಮಗಳನ್ನು ಮಾಡಬೇಕು, ಹಾಗೆ ಮಾಡಿದ ಕರ್ಮಗಳನ್ನು ಹರಿಗೆ ಸಮರ್ಪಣೆಮಾಡಬೇಕು, ಹರಿಗೆ ಅರ್ಪಿತವಾದ ಕರ್ಮಗಳ ಫಲವು ಅಕ್ಷಯವಾಗುತ್ತದೆ.

೭೧-೭೨. ವಿರಕ್ತನಾದವನು ಕರ್ಮಫಲವನ್ನು ಸ್ವಲ್ಪವೂ ಅಪೇಕ್ಷಿಸಬಾರದು. ಶ್ರೀಹರಿಯು ಸಂತುಷ್ಟನಾಗಲೆಂದು ತಾನು ಮಾಡಿದ ಕರ್ಮವನ್ನು ಹರಿಗೆ ಸಮರ್ಪಿಸಬೇಕು.

೭೨-೭೩. ಬ್ರಹ್ಮಲೋಕಪರ್ಯಂತವಾಗಿರುವ ಲೋಕಗಳೆಲ್ಲವೂ ಶಾಶ್ವತಗಳಲ್ಲ. ಅಲ್ಲಿರುವವರಿಗೆ ಪುಣ್ಯಕ್ಷಯವಾದ ಕೂಡಲೇ ಈ ಭೂಲೋಕದಲ್ಲಿ ಜನ್ಮವುಂಟಾಗುತ್ತದೆಯಾದಕಾರಣ ಅಂತಹ ಲೋಕಪ್ರಾಪ್ತಿಯು ಮಹಾಫಲವಲ್ಲ.

ಯಥಾಶ್ರಮಂ ತ್ಯಕ್ತಕಾಮಃ ಪ್ರಾಪ್ನೋತಿ ಪದಮವ್ಯಯಂ ।
ನಿಷ್ಕಾಮೋ ವಾ ಸಕಾಮೋ ವಾ ಕುರ್ಯಾತ್ಕರ್ಮ ಯಥಾವಿಧಿ ॥ ೭೪ ॥

ಸ್ವಾಶ್ರಮಾಚಾರಶೂನ್ಯಶ್ಚ ಪತಿತಃ ಪ್ರೋಚ್ಯತೇ ಬುಧೈಃ ।
ಸದಾಚಾರಪರೋ ವಿಪ್ರೋ ವರ್ಧತೇ ಬ್ರಹ್ಮತೇಜಸಾ ॥ ೭೫ ॥

ತಸ್ಯ ವಿಷ್ಣುಶ್ಚ ತುಷ್ಟಃ ಸ್ಯಾದ್ಭಕ್ತಿಯುಕ್ತಸ್ಯ ನಾರದ ।
ಭಾರತೇ ಜನ್ಮ ಸಂಪ್ರಾಪ್ಯ ನಾತ್ಮಾನಂ ತಾರಯೇತ್ತು ಯಃ ॥ ೭೬ ॥

ಪಚ್ಯತೇ ನಿರಯೇ ಘೋರೇ ಸ ತ್ವಾಚಂದ್ರಾರ್ಕತಾರಕಂ ।
ವಾಸುದೇವಪರೋ ಧರ್ಮೋ ವಾಸುದೇವಪರಂ ತಪಃ ॥ ೭೭ ॥

---

ಫಲಾಕಾಂಕ್ಷೆಯಿಲ್ಲದೆ ಕರ್ಮವನ್ನು ಮಾಡುವವರಿಗೆ ಶಾಶ್ವತವಾದ ವೈಕುಂಠಾದಿ ವಿಷ್ಣುಲೋಕವು ಲಭಿಸುತ್ತದೆ. ಅಲ್ಲಿ ಪ್ರವೇಶಮಾಡಿದವರಿಗೆ ಪುನರ್ಜನ್ಮವಿಲ್ಲ.

೭೩-೭೪. ವರ್ಣಾಶ್ರಮಾನುಸಾರವಾಗಿ ವೇದವಿಹಿತವಾದ ಕರ್ಮಗಳನ್ನು ಈಶ್ವರತೃಪ್ತ್ಯರ್ಥವಾಗಿ ಫಲಾಕಾಂಕ್ಷೆಯಿಲ್ಲದೆ ಮಾಡಬೇಕು. ಅಂತಹವರಿಗೆ ಶಾಶ್ವತವಾದ ಮುಕ್ತಿಸ್ಥಾನವು ಲಭಿಸುತ್ತದೆ.

೭೪-೭೫. ಫಲವನ್ನು ಅಪೇಕ್ಷಿಸದೇ ಅಥವಾ ಅಪೇಕ್ಷಿಸಿಯಾದರೂ ವಿಧ್ಯುಕ್ತ ಕರ್ಮಗಳನ್ನು ಸರ್ವರೂ ಅನುಷ್ಠಾನ ಮಾಡಲೇಬೇಕು. ಜ್ಞಾನಿಗಳು ವರ್ಣಾಶ್ರಮವಿಹಿತಗಳಾದ ಧರ್ಮಗಳನ್ನು ಬಿಟ್ಟವನನ್ನು ಪತಿತನೆಂದು ಹೇಳಿರುತ್ತಾರೆ.

೭೫-೭೬. ಸದ್ಧರ್ಮಾನುಷ್ಠಾನಪರನಾದ ಬ್ರಾಹ್ಮಣನಿಗೆ ಬ್ರಹ್ಮತೇಜಸ್ಸು ವೃದ್ಧಿಯಾಗುತ್ತದೆ. ಭಕ್ತನಾದ ಅಂತಹವನ ವಿಷಯದಲ್ಲಿ ವಿಷ್ಣುವು ಪ್ರಸನ್ನನಾಗುತ್ತಾನೆ.

೭೬-೭೭. ಯಾವನು ಭರತಭೂಮಿಯಲ್ಲಿ ಜನ್ಮವನ್ನು ತಾಳಿಯೂ ಸತ್ಕರ್ಮಾನುಷ್ಠಾನಮಾಡಿ ಆತ್ಮನನ್ನುದ್ಧರಿಸಿಕೊಳ್ಳುವುದಿಲ್ಲವೋ ಅಂತಹವನು ನಕ್ಷತ್ರಚಂದ್ರಸೂರ್ಯರಿರುವವರೆಗೂ, ಭಯಂಕರವಾದ ನರಕದಲ್ಲಿ ಬಿದ್ದು ದುಃಖಭಾಗಿಯಾಗುತ್ತಾನೆ.

ವಾಸುದೇವಪರಂ ಜ್ಞಾನಂ ವಾಸುದೇವಪರಾ ಗತಿಃ ।
ವಾಸುದೇವಾತ್ಮಕಂ ಸರ್ವಂ ಜಗತ್ಸ್ಥಾವರಜಂಗಮಂ ।
ಆಬ್ರಹ್ಮಸ್ತಂಬಪರ್ಯಂತಂ ತಸ್ಮಾದನ್ಯಂ ನ ವಿದ್ಯತೇ ॥ ೭೮ ॥

ಸ ಏವ ಧಾತಾ ತ್ರಿಪುರಾಂತಕಶ್ಚ
ಸ ಏವ ದೇವಾಸುರ ಯಕ್ಷರೂಪಃ ।
ಸ ಏವ ಬ್ರಹ್ಮಾಂಡಮಿದಂ ತತೋಽನ್ಯತ್
ನ ಕಿಂಚಿದಸ್ತಿ ವ್ಯತಿರಿಕ್ತರೂಪಂ ॥ ೭೯ ॥

ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್
ಯಸ್ಮಾದಣೀಯಾನ್ನ ತಥಾ ಮಹೀಯಾನ್ ।

---

೭೭–೭೮. ವಾಸುದೇವವಿಷಯಕವಾದುದೇ ಧರ್ಮವು ಎಂದರೆ ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಅನುಷ್ಠಿತವಾದ ಕರ್ಮವೇ ಧರ್ಮವೆನಿಸುವುದು ಎಂದು ತಾತ್ಪರ್ಯ. ವಾಸುದೇವನನ್ನು ಧ್ಯಾನಿಸುವುದೇ ತಪಸ್ಸು. ವಾಸುದೇವನ ಮಾಹಾತ್ಮ್ಯೆಯನ್ನು ತಿಳಿಯುವುದೇ ಜ್ಞಾನವು. ಈ ಸಾಧನೆಗಳಿಂದ ಹೊಂದ ಬೇಕಾದ ಸ್ಥಾನವೂ ವಾಸುದೇವನೇ ಆಗಿರುತ್ತಾನೆ.

೭೮. ಚತುರ್ಮುಖಬ್ರಹ್ಮನಿಂದ ಹಿಡಿದು ಅಧಮಜೀವನವರೆಗಿರುವ ಚೇತನಸಮುದಾಯವು ಮತ್ತು ಚರಾಚರಾತ್ಮಕವಾದ ಸಕಲ ಜಗತ್ತು ವಾಸುದೇವನ ಅಧೀನವಾದುದು. ಆ ಪರಮಾತ್ಮನಿಗೆ ಅಧೀನವಲ್ಲದ ಬೇರೆ ವಸ್ತುವಿಲ್ಲ.

೭೯. ಚತುರ್ಮುಖನು, ರುದ್ರನು, ದೇವತೆಗಳು, ದೈತ್ಯರು, ಯಕ್ಷರು ಮತ್ತು ಈ ಬ್ರಹ್ಮಾಂಡವೆಲ್ಲವೂ ಆ ವಾಸುದೇವನೇ ಎಂದರೆ ಎಲ್ಲವೂ ಅವನ ಅಧೀನವಾಗಿದೆ ಎಂದರ್ಥ. ಅವನಿಗಿಂತ ಬೇರೆಯಾದ ಸ್ವತಂತ್ರವಸ್ತುವು ಯಾವುದೂ ಇಲ್ಲ. ಎಂದರೆ ಜಗತ್ತೆಲ್ಲವೂ ಪರಮಾತ್ಮನ ಅಧೀನವು. ಅವ

ವ್ಯಾಪ್ತಂ ಹಿ ತೇನೇದಮಿದಂ ವಿಚಿತ್ರಂ
ತಂ ದೇವದೇವಂ ಪ್ರಣಮೇತ್ಸುಖಾರ್ಥೀ ॥ ೮೦ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಸೃಷ್ಟಿ ಭರತಖಂಡಪ್ರಾಶಸ್ತ್ಯ ಭೂಗೋಳಾನಾಂ ವರ್ಣನಂ ನಾಮ ತೃತೀಯೋಽಧ್ಯಾಯಃ

---

ನೊಬ್ಬನೇ ಸ್ವತಂತ್ರನಾಗಿ ಎಲ್ಲಾ ಪದಾರ್ಥಗಳಲ್ಲಿಯೂ ಅಂತರ್ಯಾಮಿಯಾಗಿರುವುದರಿಂದ ಅವನೇ ಜಗತ್ತೆಂದು ವ್ಯವಹರಿಸಲ್ಪಟ್ಟಿದೆ ಎಂದು ತಾತ್ಪರ್ಯ.

೮೦. ಯಾರಿಗಿಂತಲೂ ಉತ್ತಮವಾದ ಮತ್ತೊಂದು ವಸ್ತುವಿಲ್ಲವೋ, ಯಾರಿಗಿಂತಲೂ ಸೂಕ್ಷ್ಮನಾದ ಮತ್ತು ದೊಡ್ಡದಾದ ವಸ್ತುವಿಲ್ಲವೋ ಅಂತಹ ಭಗವಂತನಿಂದ ಈ ಪ್ರಪಂಚವು ವ್ಯಾಪಿಸಲ್ಪಟ್ಟಿದೆ. ಶಾಶ್ವತಸುಖವನ್ನು ಬಯಸುವವನು ದೇವತೆಗಳಿಗೊಡೆಯನಾದ, ವಿಲಕ್ಷಣನಾದ, ಅಂತಹ ಪರಮಾತ್ಮನನ್ನು ನಮಸ್ಕರಿಸಬೇಕು.

ಇಂತು ಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮ ಪಾದದಲ್ಲಿ ಸೃಷ್ಟಿ ಭರತಖಂಡ ಪ್ರಾಶಸ್ತ್ಯ ಮತ್ತು ಭೂಗೋಳಗಳ ವರ್ಣನೆಯೆಂಬ ಮೂರನೆಯ ಅಧ್ಯಾಯವು ಮುಗಿದುದು.

---

## ಕಥಾ ಸಂಗ್ರಹ

ಈ ಅಧ್ಯಾಯದ ಆದಿಯಲ್ಲಿ ನಾರಾಯಣನ ಮಹಿಮಾತಿಶಯವು ವರ್ಣಿತವಾಗಿ, ಅವನ ಶಕ್ತಿ, ಮತಭೇದದಿಂದ ಅದರ ನಾಮಾಂತರ ಮುಂತಾದುವುಗಳು ಹೇಳಲ್ಪಟ್ಟಿವೆ. ತರುವಾಯ ಪುರುಷರೂಪಿಯಾದ ಭಗವಂತನ ಸಾನ್ನಿಧ್ಯದಿಂದ ಪ್ರಕೃತಿಯ ಪರಿಣಾಮವು, ಅದರಿಂದ ಮಹತ್ತತ್ವಾದಿಯಾಗಿ ಪಂಚಭೂತ ಸೃಷ್ಟಿಯು ಉಕ್ತವಾಗಿದೆ. ಇದು ತಾಮಸಸೃಷ್ಟಿಯು ಎಂದರೆ ಅಬುದ್ಧಿ

ಪೂರ್ವಕವು. ಅನಂತರ ತಿರ್ಯಗ್ಜಂತುಗಳ ಸೃಷ್ಟಿ, ದೇವಸೃಷ್ಟಿ, ಮಾನುಷ ಸೃಷ್ಟಿ, ಇವುಗಳನ್ನು ವಿಶದಪಡಿಸಿ, ಈ ಜಗತ್ತಿಗೆ ಮೇಲ್ಭಾಗದಲ್ಲಿ ಏಳು, ಕೆಳ ಭಾಗದಲ್ಲಿ ಏಳು ಲೋಕಗಳು, ಅವುಗಳಲ್ಲೆಲ್ಲಾ ಲೋಕಪಾಲರು, ಕುಲಾಚಲಗಳು, ನದಿಗಳು ಮತ್ತು ಆಯಾಯಾ ಲೋಕನಿವಾಸಿಗಳಿಗೆ ಯೋಗ್ಯವಾದ ಗೃಹಾರಾಮಾ ದಿಗಳು ಸೃಷ್ಟವಾಗಿವೆಯೆಂದು ವಿಸ್ತಾರವಾಗಿ ಸೃಷ್ಟಿಕ್ರಮವು ವರ್ಣಿತವಾಗಿದೆ. ಹೀಗೆ ಸೃಷ್ಟವಾದ ಭೂಲೋಕದ ಮಧ್ಯದಲ್ಲಿ ಮೇರುಪರ್ವತವು, ಅಂತ್ಯಭಾಗದಲ್ಲಿ ಲೋಕಾಲೋಕಪರ್ವತವು, ಅವುಗಳ ಮಧ್ಯದಲ್ಲಿ ಏಳು ಸಮುದ್ರಗಳು, ಸಪ್ತ ದ್ವೀಪಗಳು ಒಂದೊಂದು ದ್ವೀಪದಲ್ಲಿಯೂ ಎಂಟೆಂಟು ಕುಲಾಚಲಗಳು, ಅನೇಕ ನದಿಗಳೂ ಸಹ ಸೃಷ್ಟಿಸಲ್ಪಟ್ಟಿವೆ. ಜಂಬು, ಪ್ಲಕ್ಷ, ಶಾಲ್ಮಲ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬುವುಗಳೇ ಸಪ್ತದ್ವೀಪಗಳು. ಈ ಒಂದೊಂದು ದ್ವೀಪವೂ ಏಳು ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿದೆ.

ಕ್ಷೀರಸಮುದ್ರಕ್ಕೆ ಉತ್ತರ ದಿಗ್ಭಾಗದಲ್ಲಿಯೂ, ಹಿಮವತ್ಪರ್ವತಕ್ಕೆ ದಕ್ಷಿಣ ದಲ್ಲಿಯೂ, ಇರುವ ದೇಶವೇ ಭರತಖಂಡವು. ಇದು ಕರ್ಮಭೂಮಿಯೆನಿಸಿ ಸಕಲ ಕರ್ಮಗಳಿಗೂ ಫಲವನ್ನು ನೀಡುವ ಪುಣ್ಯಭೂಮಿಯು, ಉಳಿದ ಖಂಡ ಗಳು ಭೋಗಭೂಮಿಗಳು ಮುಂತಾಗಿ ಭರತಖಂಡದ ಪ್ರಾಶಸ್ತ್ಯವನ್ನು ವಿಸ್ತಾರ ವಾಗಿ ನಿರೂಪಿಸಿ, ಸತ್ಕರ್ಮ ಮತ್ತು ತದನುಷ್ಠಾತೃಗಳ ಪ್ರಶಂಸೆಯು. ಇಂತಹ ಪುಣ್ಯಭೂಮಿಯಲ್ಲಿಯೂ ಜನಿಸಿ ಸತ್ಕರ್ಮವನ್ನಾಚರಿಸದಿರುವವನ ನಿಂದೆಯೂ ಸಹ ಅನೇಕ ದೃಷ್ಟಾಂತಗಳಿಂದ ಸ್ಪಷ್ಟಗೊಳಿಸಲ್ಪಟ್ಟು ಕೊನೆಯಲ್ಲಿ ಈ ಚರಾ ಚರಾತ್ಮಕವಾದ ಸಕಲ ಪ್ರಪಂಚವೂ ವಾಸುದೇವನಾಮಕನಾದ ಪರಮಾತ್ಮನ ಅಧೀನವಾಗಿರುವುದರಿಂದ ತನ್ಮಯವೆಂದು ಭಗವಂತನ ಮೇಲ್ಮೆಯನ್ನು ಕೊಂಡಾಡಿ ಅಧ್ಯಾಯವು ಮುಗಿಸಲ್ಪಟ್ಟಿದೆ.

## ಚತುರ್ಥೋಽಧ್ಯಾಯಃ

ಶೌನಕ ಉವಾಚ

ಶ್ರದ್ಧಾಪೂರ್ವಾ ಸರ್ವಧರ್ಮಾ ಮನೋರಥ ಫಲಪ್ರದಾಃ ।
ಶ್ರದ್ಧಯಾ ಸಾಧ್ಯತೇ ಸರ್ವಂ ಶ್ರದ್ಧಯಾ ತುಷ್ಯತೇ ಹರಿಃ ॥ ೧ ॥

ಭಕ್ತಿರ್ಭಕ್ತ್ಯೈವ ಕರ್ತವ್ಯಾ ತಥಾ ಕರ್ಮಾಣಿ ಭಕ್ತಿತಃ ।
ಕರ್ಮಾಣಿ ಶ್ರದ್ಧಾಹೀನಾನಿ ನ ಸಿಧ್ಯಂತಿ ದ್ವಿಜೋತ್ತಮಾಃ ॥ ೨ ॥

ಯಥಾಽಽಲೋಕೋ ಹಿ ಜಂತೂನಾಂ ಚೇಷ್ಟಾಕಾರಣತಾಂ ಗತಃ ।
ತಥೈವ ಸರ್ವಸಿದ್ಧೀನಾಂ ಭಕ್ತಿಃ ಪರಮಕಾರಣಂ ॥ ೩ ॥

---

### ನಾಲ್ಕನೆಯ ಅಧ್ಯಾಯವು

೧. ಶೌನಕರು ಹೇಳುತ್ತಾರೆ:—ಸಕಲಧರ್ಮಗಳನ್ನೂ ಭಕ್ತಿಯಿಂದ ಆಚರಿಸಿದರೆ ಅವು ಇಷ್ಟಾರ್ಥವನ್ನು ಕೊಡುತ್ತವೆ. ಭಕ್ತಿಯಿಂದಲೇ ಸರ್ವವನ್ನೂ ಸಾಧಿಸಬಹುದು. ವಿಷ್ಣುವೂ ಸಹ ಭಕ್ತಿಯಿಂದಲೇ ಸಂತುಷ್ಟನಾಗುತ್ತಾನೆ.

೨. ಭಕ್ತಿಯನ್ನೂ ಸಹ ಭಕ್ತಿಯಿಂದಲೇ ಮಾಡಬೇಕು. ಹಾಗೆಯೇ ಕರ್ಮಗಳನ್ನೂ ಭಕ್ತಿಸಹಿತವಾಗಿಯೇ ಆಚರಿಸಬೇಕು. ಎಲೈ ದ್ವಿಜೋತ್ತಮರೇ ಭಕ್ತಿಯಿಲ್ಲದೇ ಮಾಡುವ ಕರ್ಮಗಳು ಸಫಲವಾಗುವುದಿಲ್ಲ.

೩. ಪ್ರಾಣಿಗಳ ಗಮನಾಗಮನಾದಿಕ್ರಿಯೆಗಳಿಗೆ ಬೆಳಕು ಹೇಗೆ ಮುಖ್ಯಕಾರಣವೋ ಅದರಂತೆ ಕರ್ಮದಿಂದುಂಟಾಗುವ ಸಕಲಸಿದ್ಧಿಗಳಿಗೂ ಭಕ್ತಿಯು ಮುಖ್ಯವಾದ ಕಾರಣವು.

ಯಥಾ ಸಮಸ್ತಲೋಕಾನಾಂ ಜೀವನಂ ಸಲಿಲಂ ಸ್ಮೃತಂ ।
ತಥಾ ಸಮಸ್ತಸಿದ್ಧೀನಾಂ ಜೀವನಂ ಭಕ್ತಿರಿಷ್ಯತೇ ॥ ೪ ॥

ಯಥಾ ಭೂಮಿಂ ಸಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ ।
ತಥಾ ಭಕ್ತಿಂ ಸಮಾಶ್ರಿತ್ಯ ಸರ್ವಕಾರ್ಯಾಣಿ ಸಾಧಯೇತ್ ॥ ೫ ॥

ಶ್ರದ್ಧಾವಾನ್ ಲಭತೇ ಧರ್ಮಂ ಶ್ರದ್ಧಾವಾನರ್ಥಮಾಪ್ನುಯಾತ್ ।
ಶ್ರದ್ಧಯಾ ಸಾಧ್ಯತೇ ಕಾಮಃ ಶ್ರದ್ಧಾವಾನ್ ಮೋಕ್ಷಮಾಪ್ನುಯಾತ್ ॥ ೬ ॥

ನ ದಾನೈರ್ನತಪೋಭಿರ್ವಾ ಯಜ್ಞೈರ್ವಾ ಬಹುದಕ್ಷಿಣೈಃ ।
ಭಕ್ತಿಹೀನೈರ್ಮುನಿಶ್ರೇಷ್ಠ ತುಷ್ಯತೇ ಭಗವಾನ್ ಹರಿಃ ॥ ೭ ॥

ಮೇರುಮಾತ್ರಸುವರ್ಣಾನಾಂ ಕೋಟಿಃ ಕೋಟಿಸಹಸ್ರಶಃ ।
ದತ್ತಾ ಚಾಪ್ಯರ್ಥನಾಶಾಯ ಯತೋ ಭಕ್ತಿವಿವರ್ಜಿತಾ ॥ ೮ ॥

---

೪. ಸಮಸ್ತ ಪ್ರಾಣಗಳಿಗೂ ಜೀವಿಸುವುದಕ್ಕೆ ನೀರು ಹೇಗೆ ಮುಖ್ಯ ಸಾಧನವೋ ಅದರಂತೆ ಸಕಲಸಿದ್ಧಿಗಳಿಗೂ ಭಕ್ತಿಯೇ ಮುಖ್ಯ ಸಾಧನವು.

೫. ಸಕಲ ಪ್ರಾಣಿಗಳೂ ಹೇಗೆ ಭೂಮಿಯನ್ನು ಆಶ್ರಯಿಸಿಕೊಂಡು ಜೀವಿಸುತ್ತವೆಯೋ ಅದರಂತೆ ಭಕ್ತಿಯನ್ನು ಆಶ್ರಯಿಸಿದರೆ ಸಕಲ ಕಾರ್ಯಗಳೂ ಸಿದ್ಧಿಸುತ್ತವೆ.

೬. ಭಕ್ತಿಯುಳ್ಳವನಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ ಲಭಿಸುತ್ತವೆ.

೭. ಮುನಿಶ್ರೇಷ್ಠನೇ! ಭಕ್ತಿರಹಿತವಾದ ದಾನಗಳು ಅಂತಹ ತಪಸ್ಸು ಹೇರಳವಾಗಿ ದಕ್ಷಿಣಾಪ್ರದಾನಪೂರ್ವಕವಾದ ಭಕ್ತಿಶೂನ್ಯವಾದ ಯಜ್ಞಗಳು ಇವುಗಳಿಂದ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಹರಿಯು ಸಂತುಷ್ಟನಾಗುವುದಿಲ್ಲ.

೮. ಒಂದು ಕೋಟಿ ಮೇರುಪರ್ವತಕ್ಕೆ ಸಮಪರಿಮಾಣವಾದ ಭಂಗಾರಗಳನ್ನು ಭಕ್ತಿಯಿಲ್ಲದೆ ಸಾವಿರಾರುಕೋಟಿಸಲ ದಾನಮಾಡುವುದೂ ಸಹ ಧರ್ಮ

ಅಭಕ್ತ್ಯಾ ಯತ್ತಪಸ್ತಪ್ತಂ ಕೇವಲಂ ಕಾಯಶೋಷಣಂ ।
ಅಭಕ್ತ್ಯಾ ಯದ್ಧುತಂ ಹವ್ಯಂ ಭಸ್ಮನಿ ನ್ಯಸ್ತಹವ್ಯವತ್ ॥ ೯ ॥

ಯತ್ಕಿಂಚಿತ್ಕುರುತೇ ಕರ್ಮ ಶ್ರದ್ಧಯಾಪ್ಯಣುಮಾತ್ರಕಂ ।
ತನ್ನಾಮ ಜಾಯತೇ ಪುಂಸಾಂ ಶಾಶ್ವತಪ್ರೀತಿದಾಯಕಂ ॥ ೧೦ ॥

ಅಶ್ವಮೇಧಸಹಸ್ರಂ ವಾ ಕರ್ಮ ವೇದೋದಿತಂ ಕೃತಂ ।
ತತ್ಸರ್ವಂ ನಿಷ್ಫಲಂ ಬ್ರಹ್ಮನ್ ಯತೋ ಭಕ್ತಿವಿವರ್ಜಿತಂ ॥ ೧೧ ॥

ಹರಿಭಕ್ತಿಃ ಪರಾ ನೄಣಾಂ ಕಾಮಧೇನೂಪಮಾ ಸ್ಮೃತಾ ।
ತಸ್ಯಾಂ ಸತ್ಯಾಂ ಪಿಬಂತ್ಯಜ್ಞಾಃ ಸಂಸಾರಗರಲಂ ಹ್ಯಹೋ ॥ ೧೨ ॥

---

ಸಾಧನವಾಗುವುದಿಲ್ಲ. ಅಂತಹ ದಾನವು ಕೇವಲ ದ್ರವ್ಯವನ್ನು ಕಳೆದುಕೊಳ್ಳುವುದಕ್ಕೆ ಮಾತ್ರ ಸಾಧನವಾಗುತ್ತದೆ.

೯. ಭಕ್ತಿಯಿಲ್ಲದೆ ಮಾಡುವ ತಪಸ್ಸೆಲ್ಲವೂ ನಮ್ಮ ದೇಹವನ್ನು ಒಣಗಿಸುತ್ತದೆ. ಭಗವಂತನ ಅನುಗ್ರಹವನ್ನುಂಟುಮಾಡುವುದಿಲ್ಲ. ಭಕ್ತಿಯಿಲ್ಲದೆ ಮಾಡಿದ ಹೋಮವು ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವು.

೧೦. ಭಕ್ತಿಯಿಂದ ಅತ್ಯಲ್ಪವಾಗಿ ಕರ್ಮವನ್ನು ಮಾಡಿದಾಗ್ಯೂ ಅದು ಶಾಶ್ವತವಾದ ಭಗವಂತನ ಅನುಗ್ರಹಕ್ಕೆ ಸಾಧಕವಾಗುತ್ತದೆ.

೧೧. ವೇದವಿಹಿತವಾದ ಸಾವಿರ ಅಶ್ವಮೇಧಯಾಗಗಳನ್ನು ಮಾಡಿದರೂ ಅವೆಲ್ಲವೂ ಭಕ್ತಿಯಿಲ್ಲದಿದ್ದರೆ ನಿಷ್ಫಲವಾಗುತ್ತವೆ.

೧೨. ಮನುಷ್ಯರಿಗೆ ಉತ್ಕೃಷ್ಟವಾದ ಹರಿಭಕ್ತಿಯು ಕಾಮಧೇನುವಿನಂತೆ ಸಕಲ ಇಷ್ಟಾರ್ಥಪ್ರದವೆಂದು ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿದೆ. ಅಂತಹ ಕಾಮಧೇನುವಿದ್ದಾಗ್ಯೂ ಅಜ್ಞಾನಿಗಳು ಅದನ್ನು ಬಿಟ್ಟು ಸಂಸಾರವೆಂಬ ವಿಷವನ್ನು ಪಾನಮಾಡುತ್ತಾರೆ. ಇದು ಆಶ್ಚರ್ಯ !

ಅಸಾರಭೂತೇ ಸಂಸಾರೇ ಸಾರಮೇತದಜಾತ್ಮಜ ।
ಭಗವದ್ಭಕ್ತಸಂಗಶ್ಚ ಹರಿಭಕ್ತಿಸ್ತಿತಿಕ್ಷತಾ ॥ ೧೩ ॥

ಅಸೂಯೋಪೇತಮನಸಾಂ ಭಕ್ತಿದಾನಾದಿಕರ್ಮಯತ್ ।
ಅವೇಹಿ ನಿಷ್ಫಲಂ ಬ್ರಹ್ಮನ್ ತೇಷಾಂ ದೂರತರೋ ಹರಿಃ ॥ ೧೪ ॥

ಪರಶ್ರಿಯಾಭಿತಪ್ತಾನಾಂ ದಂಭಾಚಾರರತಾತ್ಮನಾಂ ।
ವೃಷಾ ತು ಕುರ್ವತಾಂ ಕರ್ಮ ತೇಷಾಂ ದೂರತರೋ ಹರಿಃ ॥ ೧೫ ॥

ಪೃಚ್ಛತಾಂ ಚ ಮಹಾಧರ್ಮಾನ್ವದತಾಂ ವೈ ವೃಷಾ ಚ ತಾನ್ ।
ಧರ್ಮೇಷ್ವಭಕ್ತಿಮನಸಾಂ ತೇಷಾಂ ದೂರತರೋ ಹರಿಃ ॥ ೧೬ ॥

---

೧೩. ಬ್ರಹ್ಮಪುತ್ರನೇ ! ನಿಸ್ಸಾರವಾದ ಈ ಸಂಸಾರದಲ್ಲಿ ಭಗವದ್ಭಕ್ತ ಸಹವಾಸ, ವಿಷ್ಣುಭಕ್ತಿ, ಸುಖದುಃಖಾದಿಗಳನ್ನು ಸಮಾನವಾಗಿ ತಿಳಿದು ಸಹಿಸುವಿಕೆ (ತಿತಿಕ್ಷುತಾ = ದ್ವಂದ್ವಸಹಿಷ್ಣುತ್ವ) ಎಂಬಮೂರುಮಾತ್ರ ಸಾರವಾದುವೆಂದು ತಿಳಿಯಬೇಕು.

೧೪. ಹೊಟ್ಟೇಕಿಚ್ಚಿನಿಂದ ಕಲುಷಿತಮನಸ್ಕರಾದ ಮನುಷ್ಯರಿಂದ ಕೃತವಾದ ಭಕ್ತಿ, ತತ್ಪೂರ್ವಕವಾದ ದಾನ ಮುಂತಾದ ಕರ್ಮಗಳೆಲ್ಲವೂ ನಿಷ್ಫಲವು. ಅಂತಹವರಿಗೆ ಭಗವಂತನು ದೂರಸ್ಥನು ಎಂದರೆ ಅಂತಹವರ ವಿಷಯದಲ್ಲಿ ಶ್ರೀಹರಿಯು ಪ್ರಸನ್ನನಾಗುವುದಿಲ್ಲ.

೧೫. ಪರಕೀಯ ಸಂಪತ್ತನ್ನು ನೋಡಿ ದುಃಖಪಡುವವರಿಗೂ ಬಾಹ್ಯಾಚಾರವನ್ನು ಪ್ರದರ್ಶಿಸಿ ಜಂಭಪಡುವವರಿಗೂ ಮತ್ತು ಭಕ್ತಿಯಿಲ್ಲದೆ ಕರ್ಮ ಮಾಡುವವರಿಗೂ ಸಹ ಹರಿಯು ಪ್ರಸನ್ನನಾಗುವುದಿಲ್ಲ.

೧೬. ಮಹಾಧರ್ಮಗಳನ್ನು ಪ್ರಶ್ನೆಮಾಡುವವರಿಗೆ ಅವುಗಳನ್ನು ವಿಪರೀತವಾಗಿ ಉಪದೇಶಿಸುವವರಿಗೂ, ಧರ್ಮಶ್ರದ್ಧೆಯಿಲ್ಲದವರಿಗೂ ಸಹ ಹರಿಯು ಅನುಗ್ರಹವಾಗುವುದಿಲ್ಲ.

ವೇದಪ್ರಣಿಹಿತೋ ಧರ್ಮೋ ವೇದೋ ನಾರಾಯಣಃ ಪರಃ ।
ತತ್ರಾಶ್ರದ್ಧಾಪರಾ ಯೇ ತು ತೇಷಾಂ ದೂರತರೋ ಹರಿಃ ॥ ೧೭ ॥

ಯಸ್ಯ ಧರ್ಮವಿಹೀನಾನಿ ದಿನಾನ್ಯಾಯಾಂತಿ ಯಾಂತಿ ಚ ।
ಸ ಲೋಹಕಾರಭಸ್ತ್ರೇವ ಶ್ವಸನ್ನಪಿ ನ ಜೀವತಿ ॥ ೧೮ ॥

ಧರ್ಮಾರ್ಥಕಾಮಮೋಕ್ಷಾಖ್ಯಾಃ ಪುರುಷಾರ್ಥಾಃ ಸನಾತನಾಃ ।
ಶ್ರದ್ಧಾವತಾಂ ಹಿ ಸಿಧ್ಯಂತಿ ನಾನ್ಯಥಾ ಬ್ರಹ್ಮನಂದನ ॥ ೧೯ ॥

ಸ್ವಾಚಾರಮನತಿಕ್ರಮ್ಯ ಹರಿಭಕ್ತಿಪರೋ ಹಿ ಯಃ ।
ಸ ಯಾತಿ ವಿಷ್ಣುಭವನಂ ಯದ್ವೈ ಪಶ್ಯಂತಿ ಸೂರಯಃ ॥ ೨೦ ॥

---

೧೭. ವೇದದಲ್ಲಿ ಕರ್ತವ್ಯವೆಂದು ವಿಧಿಸಿರುವುದೇ ಧರ್ಮವು. ವೇದವು ನಾರಾಯಣನನ್ನು ಬೋಧಿಸುತ್ತದೆ. ಆದುದರಿಂದ ವೇದೋಕ್ತಧರ್ಮಗಳಲ್ಲಿ ಶ್ರದ್ಧೆಯಿಲ್ಲದಿರುವವರಿಗೆ ಹರಿಯು ಅನುಗ್ರಹಮಾಡುವುದಿಲ್ಲ.

೧೮. ಯಾವನು ಧರ್ಮಾಚರಣೆಯಿಲ್ಲದೆ ದಿನಗಳನ್ನು (ಆಯುಸ್ಸನ್ನು) ಕಳೆಯುತ್ತಾನೆಯೋ ಅಂತಹವನು ಕೊಲಿಮೆಯ ತಿದಿಯಂತೆ ಶ್ವಾಸವನ್ನು ಬಿಡುವವನಾದಾಗ್ಯೂ ಜೀವಂತನೆನಿಸುವುದಿಲ್ಲ, ಎಂದರೆ ಅಂತಹವನ ಬದುಕು ವ್ಯರ್ಥವು ಪರಲೋಕಸಾಧಕವಲ್ಲವೆಂದು ತಾತ್ಪರ್ಯ.

೧೯. ಬ್ರಹ್ಮಕುಮಾರನೇ ! ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು ಭಕ್ತಿಯುಳ್ಳವರಿಗೇ ಸಿದ್ಧಿಸುತ್ತವೆ. ಬೇರೆವಿಧವಾಗಿ ಸಿದ್ಧಿಸುವುದಿಲ್ಲ.

೨೦. ಯಾವಾತನು ವರ್ಣಾಶ್ರಮ ವಿಹಿತವಾದ ಸ್ವಧರ್ಮವನ್ನುಲ್ಲಂಘಿಸದೆ ಕ್ರಮವಾಗಿ ಆಚರಿಸುತ್ತಾ ವಿಷ್ಣುಭಕ್ತಿನಿರತನಾಗುವನೋ ಅಂತಹವನು ಜ್ಞಾನಿಪ್ರಾಪ್ಯವಾದ ವಿಷ್ಣುಲೋಕವನ್ನು ಹೊಂದುತ್ತಾನೆ.

ಕುರ್ವನ್ವೇದೋದಿತಾನ್ಧರ್ಮಾನ್ಮುನೀಂದ್ರ ಸ್ವಾಶ್ರಮೋಚಿತಾನ್ ।
ಹರಿಧ್ಯಾನಪರೋ ಯಸ್ತು ಸ ಯಾತಿ ಪರಮಂ ಪದಂ ॥ ೨೧ ॥

ಆಚಾರಪ್ರಭವೋ ಧರ್ಮಃ ಧರ್ಮಸ್ಯ ಪ್ರಭುರಚ್ಯುತಃ ।
ಆಶ್ರಮಾಚಾರಯುಕ್ತೇನ ಪೂಜಿತಃ ಸರ್ವದಾ ಹರಿಃ ॥ ೨೨ ॥

ಯಸ್ತ್ವಾಚಾರಪರಿಭ್ರಷ್ಟಃ ಸಾಂಗವೇದಾಂತಗೋಽಪಿ ವಾ ।
ಸ ಏವ ಪತಿತೋ ಜ್ಞೇಯೋ ಯತಃ ಕರ್ಮಬಹಿಷ್ಕೃತಃ ॥ ೨೩ ॥

ಹರಿಭಕ್ತಿಪರೋ ವಾಪಿ ಹರಿಧ್ಯಾನಪರೋಽಪಿ ವಾ ।
ಭ್ರಷ್ಟೋ ಯಃ ಸ್ವಾಶ್ರಮಾಚಾರಾತ್ಪತಿತಃ ಸೋಽಭಿಧೀಯತೇ ॥ ೨೪ ॥

---

೨೧. ಋಷಿಶ್ರೇಷ್ಠನೇ! ತಮ್ಮ ಆಶ್ರಮಕ್ಕೆ ಯೋಗ್ಯವಾದ ವೇದವಿಹಿತ ಕರ್ಮಗಳನ್ನು ಅನುಷ್ಠಾನಮಾಡುವವನಾಗಿ ಯಾವನು ವಿಷ್ಣುಧ್ಯಾನವನ್ನು ಆಸಕ್ತಿಯಿಂದ ಮಾಡುತ್ತಾನೆಯೋ ಅಂತಹವನು ವಿಷ್ಣುಲೋಕಕ್ಕೆ ಹೋಗುತ್ತಾನೆ.

೨೨. ವಿಹಿತಕರ್ಮಾಚರಣೆಯಿಂದ ಧರ್ಮವು ಲಭಿಸುತ್ತದೆ. ಹರಿಯೇ ಧರ್ಮಕ್ಕೆ ನಿಯಾಮಕನು. ಆತನು ಯಾವಾಗಲೂ ಆಶ್ರಮಧರ್ಮಾನುಷ್ಠಾನ ಪರರಾದವರಿಂದ ಪೂಜಿಸಲ್ಪಡುತ್ತಾನೆ.

೨೩. ವಿಹಿತಕರ್ಮವನ್ನು ಬಿಟ್ಟಿರುವವನು, ಅಂಗಶಾಸ್ತ್ರಸಹಿತವಾಗಿ ವೇದಾಂತದಲ್ಲಿ ಪಂಡಿತನಾದಾಗ್ಯೂ, ಕರ್ಮಬಹಿಷ್ಕೃತನಾದುದರಿಂದ ಅಂತಹ ವನನ್ನು ಪತಿತನೆಂದು ತಿಳಿಯಬೇಕು.

೨೪. ವಿಷ್ಣುಭಕ್ತಿನಿರತನಾಗಲೀ ಅಥವಾ ಹರಿಧ್ಯಾನದಲ್ಲಿ ಆಸಕ್ತನಾಗಲೀ, ವಿಹಿತವಾದ ಆಶ್ರಮಧರ್ಮಗಳನ್ನು ಬಿಟ್ಟಿರುವವನು ಪತಿತನೆಂಬುದಾಗಿ ಹೇಳಿಸಿಕೊಳ್ಳಲ್ಪಡುತ್ತಾನೆ.

ವೇದೋ ವಾ ಹರಿಭಕ್ತಿರ್ವಾ ಭಕ್ತಿರ್ವಾಪಿ ಮಹೇಶ್ವರೇ ।
ಆಚಾರಾತ್ಪತಿತಂ ಮೂಢಂ ನ ಪುನಾತಿ ದ್ವಿಜೋತ್ತಮ ॥ ೨೫ ॥

ಪುಣ್ಯಕ್ಷೇತ್ರಾಭಿಗಮನಂ ಪುಣ್ಯತೀರ್ಥನಿಷೇವಣಂ ।
ಯಜ್ಞೋ ವಾ ವಿವಿಧೋ ಬ್ರಹ್ಮನ್ ತ್ಯಕ್ತಾಚಾರಂ ನ ರಕ್ಷತಿ ॥ ೨೬ ॥

ಆಚಾರಾತ್ಪ್ರಾಪ್ಯತೇ ಸ್ವರ್ಗಃ ಆಚಾರಾತ್ಪ್ರಾಪ್ಯತೇ ಸುಖಂ ।
ಆಚಾರಾತ್ಪ್ರಾಪ್ಯತೇ ಮೋಕ್ಷ ಆಚಾರಾತ್ಕಿಂ ನ ಲಭ್ಯತೇ ॥ ೨೭ ॥

ಆಚಾರಾಣಾಂ ತು ಸರ್ವೇಷಾಂ ಯೋಗಾನಾಂ ಚೈವ ಸತ್ತಮ ।
ಹರಿಭಕ್ತೇರಪಿ ತಥಾ ನಿದಾನಂ ಭಕ್ತಿರಿಷ್ಯತೇ ॥ ೨೮ ॥

ಭಕ್ತ್ಯೈವ ಪೂಜ್ಯತೇ ವಿಷ್ಣುರ್ವಾಂಛಿತಾರ್ಥಫಲಪ್ರದಃ ।
ತಸ್ಮಾತ್ಸಮಸ್ತಲೋಕಾನಾಂ ಭಕ್ತಿರ್ಮಾತೇತಿ ಗೀಯತೇ ॥ ೨೯ ॥

---

೨೫. ದ್ವಿಜಶ್ರೇಷ್ಠನೇ! ವೇದವಾಗಲೀ ವಿಷ್ಣುಭಕ್ತಿಯಾಗಲೀ ಅಥವಾ ಮಹೇಶ್ವರನ ಭಕ್ತಿಯಾಗಲೀ ಆಚಾರಭ್ರಷ್ಟನಾದ ಮೂಢನನ್ನು ಶುದ್ಧಿಗೊಳಿಸ ಲಾಗದು.

೨೬. ಪುಣ್ಯಕ್ಷೇತ್ರಗಳಿಗೆ ಹೋಗುವುದು, ಪುಣ್ಯತೀರ್ಥಗಳನ್ನು ಸೇವಿಸು ವುದು ಮತ್ತು ನಾನಾವಿಧವಾದ ಯಜ್ಞಗಳನ್ನು ಮಾಡುವುದು, ಇವುಗಳಾವುದೂ ಸ್ವಧರ್ಮತ್ಯಾಗಮಾಡಿರುವವನನ್ನು ಕಾಪಾಡುವುದಿಲ್ಲ.

೨೭. ಸ್ವರ್ಗ, ಸುಖ, ಮೋಕ್ಷ, ಇವುಗಳೆಲ್ಲವೂ ಸದಾಚಾರದಿಂದ ಲಭಿ ಸುತ್ತವೆ. ಸದಾಚಾರದಿಂದ ಏನು ತಾನೇ ಲಭಿಸಲಾರದು? ಎಲ್ಲವೂ ಸಿದ್ಧಿಸು ತ್ತದೆಂದು ಅಭಿಪ್ರಾಯ.

೨೮. ಸಕಲವಾದ ಆಚಾರಗಳು, ಯೋಗಗಳು ಮತ್ತು ಹರಿಭಕ್ತಿ ಇವು ಗಳಿಗೆಲ್ಲಾ ಭಕ್ತಿಯೇ ಮೂಲಕಾರಣವು ಎಂಬುದು ಜ್ಞಾನಿಗಳ ಮತವು.

೨೯. ಇಷ್ಟಾರ್ಥಗಳನ್ನು ಕೊಡುವ ವಿಷ್ಣುವು ಭಕ್ತಿಯಿಂದಲೇ ಪೂಜಿಸಿ ಕೊಳ್ಳಲ್ಪಡುತ್ತಾನೆ. ಆದಕಾರಣ ಸಮಸ್ತ ಜನರಿಗೂ ಭಕ್ತಿಯೇ ತಾಯಿಯೆಂದು ಉಕ್ತವಾಗಿದೆ.

ಜೀವಂತಿ ಜಂತವಃ ಸರ್ವೇ ಯಥಾ ಮಾತರಮಾಶ್ರಿತಾಃ ।
ತಥಾ ಭಕ್ತಿಂ ಸಮಾಶ್ರಿತ್ಯ ಸರ್ವೇ ಜೀವಂತಿ ಧಾರ್ಮಿಕಾಃ ॥ ೩೦ ॥

ಸ್ವಾಶ್ರಮಾಚಾರಯುಕ್ತಸ್ಯ ಹರಿಭಕ್ತಿರ್ಯದಾ ಭವೇತ್ ।
ನ ತಸ್ಯ ತ್ರಿಷು ಲೋಕೇಷು ಸದೃಶೋಽಸ್ತ್ಯಜನಂದನ ॥ ೩೧ ॥

ಭಕ್ತ್ಯಾ ಸಿಧ್ಯಂತಿ ಕರ್ಮಾಣಿ ಕರ್ಮಭಿಸ್ತುಷ್ಯತೇ ಹರಿಃ ।
ತಸ್ಮಿನ್ ತುಷ್ಟೇ ಭವೇದ್ ಜ್ಞಾನಂ ಜ್ಞಾನಾನ್ಮೋಕ್ಷಮವಾಪ್ಯತೇ ॥ ೩೨ ॥

ಭಕ್ತಿಸ್ತು ಭಗವದ್ಭಕ್ತಸಂಗೇನ ಖಲು ಜಾಯತೇ ।
ತತ್ಸಂಗಂ ಪ್ರಾಪ್ಯತೇ ಪುಂಭಿಃ ಸುಕೃತೈಃ ಪೂರ್ವಸಂಚಿತೈಃ ॥ ೩೩ ॥

ವರ್ಣಾಶ್ರಮಾಚಾರರತಾ ಭಗವದ್ಭಕ್ತಲಾಲಸಾಃ ।
ಕಾಮಾದಿದೋಷನಿರ್ಮುಕ್ತಾಸ್ತೇ ಸಂತೋ ಲೋಕಶಿಕ್ಷಕಾಃ ॥ ೩೪ ॥

---

೩೦. ಸಕಲ ಪ್ರಾಣಿಗಳೂ ಹೇಗೆ ತಾಯಿಯ ಆಶ್ರಯದಿಂದ ಬದಕುತ್ತವೆಯೋ, ಅದರಂತೆ ಸಕಲ ಧಾರ್ಮಿಕರೂ ಭಕ್ತಿಯನ್ನಾಶ್ರಯಿಸಿ ಬದಕುತ್ತಾರೆ.

೩೧. ಬ್ರಹ್ಮಕುಮಾರನೇ ! ವಿಹಿತವಾದ ಸ್ವಧರ್ಮಗಳನ್ನು ಆಚರಿಸುವವನಿಗೆ ಹರಿಭಕ್ತಿಯುಂಟಾದರೆ ಅಂತಹವನಿಗೆ ಸಮಾನನು ಮೂರುಲೋಕಗಳಲ್ಲಿ ಯಾರೂ ಇಲ್ಲ.

೩೨. ಭಕ್ತಿಯಿಂದ ಕರ್ಮಗಳು ಸಿದ್ಧಿಸುತ್ತವೆ. ಕರ್ಮಗಳಿಂದ ಹರಿಯು ಸಂತುಷ್ಟನಾಗುತ್ತಾನೆ. ಹರಿಯು ಸಂತುಷ್ಟನಾದರೆ ಅವನ ಪ್ರಸಾದವುಂಟಾಗಿ ಸಾಕ್ಷಾತ್ಕಾರವುಂಟಾಗುತ್ತದೆ. ಸಾಕ್ಷಾತ್ಕಾರದಿಂದ ಮುಕ್ತಿಯು ಲಭಿಸುತ್ತದೆ.

೩೩. ಭಗವದ್ಭಕ್ತರ ಸಹವಾಸದಿಂದ ಹರಿಭಕ್ತಿಯುಂಟಾಗುತ್ತದೆಂಬುದು ಪ್ರಸಿದ್ಧವಾಗಿದೆ. ಭಗವದ್ಭಕ್ತಸಹವಾಸವು ಹಿಂದಿನ ಜನ್ಮಗಳಲ್ಲಿ ಮಾಡಲ್ಪಟ್ಟ ಸುಕೃತಗಳಿಂದ ಲಭಿಸುತ್ತದೆ.

೩೪. ವರ್ಣಾಶ್ರಮಧರ್ಮಗಳನ್ನು ಅನುಷ್ಠಾನಮಾಡುವವರು, ಉಕ್ತವಾದ ಭಗವದ್ಭಕ್ತಿಯುಳ್ಳವರು ಮತ್ತು ಕಾಮ, ಕ್ರೋಧ ಮುಂತಾದ ದೋಷಗಳನ್ನು ದೂರಮಾಡಿರುವವರು ಸಜ್ಜನರು. ಅವರೇ ಲೋಕಕ್ಕೆ ಸಂಪ್ರದಾಯವನ್ನು ಶಿಕ್ಷಿಸುವವರು.

ಸತ್ಸಂಗಃ ಪರಮೋ ಬ್ರಹ್ಮನ್ನ ಲಭ್ಯೇತಾಕೃತಾತ್ಮನಾಂ ।
ಯದಿ ಲಭ್ಯೇತ ವಿಜ್ಞೇಯಂ ಪುಣ್ಯಂ ಜನ್ಮಾಂತರಾರ್ಜಿತಂ ॥ ೩೫ ॥

ಪೂರ್ವಾರ್ಜಿತಾನಿ ಪಾಪಾನಿ ನಾಶಮಾಯಾಂತಿ ಯಸ್ಯ ವೈ ।
ಸತ್ಸಂಗತಿರ್ಭವೇತ್ತಸ್ಯ ನಾನ್ಯಥಾ ಘಟತೇ ಹಿ ಸಾ ॥ ೩೬ ॥

ರವಿರ್ಹಿ ರಶ್ಮಿಜಾಲೇನ ದಿವಾ ಹಂತಿ ಬಹಿಸ್ತಮಃ ।
ಸಂತಃ ಸೂಕ್ತಿಮರೀಚಿಯೇಘೈಶ್ಚಾಂತಧ್ವಾಂತಂ ಹಿ ಸರ್ವದಾ ॥ ೩೭ ॥

ದುರ್ಲಭಾಃ ಪುರುಷಾ ಲೋಕೇ ಭಗವದ್ಭಕ್ತಿಲಾಲಸಾಃ ।
ತೇಷಾಂ ಸಂಗೋ ಭವೇದ್ಯಸ್ಯ ತಸ್ಯ ಶಾಂತಿರ್ಹಿ ಶಾಶ್ವತೀ ॥ ೩೮ ॥

---

೩೫. ಸಜ್ಜನರ ಸಹವಾಸವು ಉತ್ಕೃಷ್ಟವಾದುದು. ಅದು ಪುಣ್ಯವಂತರಲ್ಲದವರಿಗೆ ಲಭಿಸುವುದಿಲ್ಲ. ಅದು ಲಭಿಸಿದರೆ, ಪೂರ್ವಜನ್ಮಗಳಲ್ಲಿ ಸಂಪಾದಿತವಾದ ಪುಣ್ಯದ ಫಲವೆಂದು ತಿಳಿಯಬೇಕು.

೩೬. ಯಾವಾತನಿಗೆ ಹಿಂದಿನ ಜನ್ಮಗಳಲ್ಲಿ ಸಂಪಾದಿಸಿದ ಪಾಪಗಳು ನಾಶವನ್ನು ಹೊಂದುತ್ತವೆಯೋ ಅಂತಹವನಿಗೇ ಸಜ್ಜನರ ಸಹವಾಸವು ಲಭಿಸುತ್ತದೆ. ಪಾಪನಾಶವಾಗದಿದ್ದರೆ ಸತ್ಸಂಗವು ಸಂಭವಿಸುವುದಿಲ್ಲ.

೩೭. ಸೂರ್ಯನು ತನ್ನ ಕಿರಣಸಮೂಹದಿಂದ ಹಗಲುಹೊತ್ತಿನಲ್ಲಿ ಬಾಹ್ಯಾಂಧಕಾರವನ್ನು ನಾಶಪಡಿಸುತ್ತಾನೆ. ಸಜ್ಜನರಾದರೋ ಹರಿಕಥಾರೂಪವಾದ ಸೂಕ್ತಿಗಳೆಂಬ ಕಿರಣಗಳ ಸಮೂಹಗಳಿಂದ ಯಾವಾಗಲೂ ಮಾನಸಿಕವಾದ ಅಜ್ಞಾನವೆಂಬ ಅಂಧಕಾರವನ್ನು ಪರಿಹರಿಸುತ್ತಾರೆ ಎಂದರೆ ಸದುಪದೇಶದಿಂದ ಭಗವನ್ಮಾಹಾತ್ಮ್ಯೆಯನ್ನು ತಿಳಿಸಿ ಅಜ್ಞಾನವನ್ನು ಹೋಗಲಾಡಿಸಿ ಮುಕ್ತಿಸೋಪಾನವಾದ ಜ್ಞಾನವನ್ನು ದಾನಮಾಡುತ್ತಾರೆಂದು ತಾತ್ಪರ್ಯ.

೩೮. ಲೋಕದಲ್ಲಿ ಉತ್ಕಟವಾದ ಭಗವದ್ಭಕ್ತಿಯುಳ್ಳ ಮನುಷ್ಯರು ದೊರಕುವುದು ಕಷ್ಟ. ಅಂತಹ ಭಕ್ತರ ಸಂಗವು ಯಾರಿಗೆ ಲಭಿಸುತ್ತದೆಯೋ ಅವರಿಗೆ ಶಾಶ್ವತವಾದ ಸುಖಪ್ರಾಪ್ತಿಯಾಗುತ್ತದೆ.

ಸನತ್ಕುಮಾರ ಉವಾಚ

ಕಿಂಲಕ್ಷಣಾ ಭಾಗವತಾಸ್ತೇ ಚ ಕಿಂ ಕರ್ಮ ಕುರ್ವತೇ ।
ತೇಷಾಂ ಲೋಕೋ ಭವೇತ್ಕೀದೃಕ್ತತ್ಸರ್ವಂ ಬ್ರೂಹಿ ತತ್ವತಃ ॥ ೩೯ ॥

ತ್ವಂ ಹಿ ಭಕ್ತೋ ಮಹೇಶಸ್ಯ ದೇವದೇವಸ್ಯ ಚಕ್ರಿಣಃ ।
ಏವಂ ನಿಗದಿತುಂ ಶಕ್ತಸ್ತ್ವತ್ತೋ ನಾಸ್ತ್ಯಧಿಕಃ ಪರಃ ॥ ೪೦ ॥

ನಾರದ ಉವಾಚ

ಶೃಣು ಬ್ರಹ್ಮನ್ ಪರಂ ಗುಹ್ಯಂ ಮಾರ್ಕಂಡೇಯಸ್ಯ ಧೀಮತಃ ।
ಯದುವಾಚ ಜಗನ್ನಾಥೋ ಯೋಗನಿದ್ರಾವಿಮೋಚಿತಃ ॥ ೪೧ ॥

ಯೋಽಸೌ ವಿಷ್ಣುಃ ಪರಂಜ್ಯೋತಿರ್ದೇವದೇವಃ ಸನಾತನಃ ।
ಜಗದ್ವ್ಯಾಪೀ ಜಗತ್ಕರ್ತಾ ಶಿವಬ್ರಹ್ಮಸ್ವರೂಪವಾನ್ ॥ ೪೨ ॥

---

೩೯. ಸನತ್ಕುಮಾರನು ಹೇಳುತ್ತಾನೆ—ಭಗವದ್ಭಕ್ತರಿಗೆ ಲಕ್ಷಣವೇನು? ಅವರು ಮಾಡುವ ಕರ್ಮ ಯಾವುದು? ಅವರು ವಾಸಮಾಡುವ ಲೋಕವೆಂತಹುದು? ಅವೆಲ್ಲವನ್ನೂ ಯಥಾವತ್ತಾಗಿ ಉಪದೇಶಮಾಡಿ.

೪೦. ನಾರದನೇ! ನೀನು ಚಕ್ರಾಯುಧಧಾರಿಯಾದ ದೇವೋತ್ತಮನಾದ ಜಗದೀಶ್ವರನ ಭಕ್ತನು. ನಾನು ಕೇಳಿರುವ ಭಕ್ತಲಕ್ಷಣಮುಂತಾದವುಗಳನ್ನು ಹೇಳಲು ನೀನೇ ಸಮರ್ಥನು. ನಿನಗಿಂತ ಹೆಚ್ಚಾದವನು ಬೇರೆಯಿಲ್ಲ.

೪೧. ನಾರದರು ಹೇಳುತ್ತಾರೆ—ಸನತ್ಕುಮಾರನೇ! ಯೋಗನಿದ್ರೆಯಿಂದ ಎಬ್ಬಿಸಲ್ಪಟ್ಟ ಜಗದೀಶ್ವರನು ಉಪದೇಶಿಸಿದ ಜ್ಞಾನಿಯಾದ ಭಕ್ತಮಾರ್ಕಂಡೇಯನ ರಹಸ್ಯವಾದ ಮತ್ತು ಉತ್ಕೃಷ್ಟವಾದ ಚರಿತ್ರೆಯನ್ನು ಹೇಳುತ್ತೇನೆ ಅದನ್ನು ಕೇಳು.

೪೨-೪೪. ಉತ್ಕೃಷ್ಟಪ್ರಕಾಶಸ್ವರೂಪನು, ದೇವತೆಗಳಿಗೆಲ್ಲಾ ನಿಯಾಮಕದೇವನು, ಅನಾದಿಯು, ಜಗತ್ತಿನಲ್ಲೆಲ್ಲಾ ವ್ಯಾಪಿಸಿರುವವನು, ಜಗತ್ತಿಗೆ ಸೃಷ್ಟ್ಯಾದಿಕರ್ತನು, ಶಿವಬ್ರಹ್ಮಸ್ವರೂಪಾಂತರ್ಗತನೂ ಆದ ಯಾವ ವಿಷ್ಣುವು ಭಯಂ

**ಯುಗಾಂತೇ ರೌದ್ರರೂಪೇಣ ಬ್ರಹ್ಮಾಂಡಗ್ರಾಸಬೃಂಹಿತಃ ।**
**ಜಗತ್ಯೇಕಾರ್ಣವೀಭೂತೇ ನಷ್ಟೇ ಸ್ಥಾವರಜಂಗಮೇ ॥ ೪೩ ॥**

**ಭಗವಾನೇವ ಶೇಷಾಖ್ಯಃ ಶೇತೇ ವಟದಲೇ ಹರಿಃ ।**
**ಅಸಂಖ್ಯಾತಾಬ್ಜಜನ್ಮಾದ್ಯೈರಾಭೂಷಿತತನೂರುಹಃ ॥ ೪೪ ॥**

**ಪಾದಾಂಗುಷ್ಠಾಗ್ರನಿರ್ಯಾತಾ ಗಂಗಾಽಶೇಷಾಂಬುಪಾವನೀ ।**
**ಸೂಕ್ಷ್ಮಾತ್ಸೂಕ್ಷ್ಮತರೋ ದೇವೋ ಬ್ರಹ್ಮಾಂಡಗ್ರಾಸಬೃಂಹಿತಃ ॥ ೪೫ ॥**

**ವಟಚ್ಛದೇ ಶಯಾನೋಽಭೂತ್ಸರ್ವಶಕ್ತಿಸಮನ್ವಿತಃ ।**
**ತಸ್ಮಿನ್ ಕಾಲೇ ಮಹಾಭಾಗೋ ನಾರಾಯಣಪರಾಯಣಃ ।**
**ಮಾರ್ಕಂಡೇಯಃ ಸ್ಥಿತಸ್ತಸ್ಯ ಲೀಲಾಃ ಪಶ್ಯನ್ಮಹೇಶಿತುಃ ॥ ೪೬ ॥**

---

ಕರರೂಪವನ್ನು ತಾಳಿ ಅಖಂಡಬ್ರಹ್ಮಾಂಡವನ್ನು ಉದರದಲ್ಲಿಟ್ಟುಕೊಂಡನೋ ಅಂತಹವನು ಮತ್ತು ಷಡ್ಗುಣೈಶ್ವರ್ಯಸಂಪನ್ನನು, ಅಸಂಖ್ಯಾತರಾದ ಚತುರ್ಮುಖಾದಿ ದೇವತೆಗಳಿಂದ ಅಲಂಕರಿಸಲ್ಪಟ್ಟ ರೋಮಗಳುಳ್ಳವನೂ ಆದ ಶೇಷನಾಮಕನಾದ ಹರಿಯು ಸ್ಥಿರಚರವಸ್ತುಗಳು ನಷ್ಟವಾಗಿ ಜಗತ್ತೆಲ್ಲವೂ ಸಮುದ್ರವಾಗಿರಲು ಅದರಲ್ಲಿ ತೇಲುತ್ತಿದ್ದ ಆಲದೆಲೆಯಲ್ಲಿ ಶಯನಮಾಡಿದನು.

೪೫–೪೬. ಯಾವಾತನ ಕಾಲಿನ ಹೆಬ್ಬೆರಳಿನ ಕೊನೆಯಭಾಗದಲ್ಲಿ ಉತ್ಪನ್ನವಾಗಿ ಹರಿಯುತ್ತಿರುವ ಗಂಗಾನದಿಯು ಸಮಸ್ತವಾದ ಉದಕಗಳಿಗೂ ಪವಿತ್ರತೆಯನ್ನುಂಟುಮಾಡುತ್ತದೆಯೋ ಅಂತಹವನು ಮತ್ತು ಸೂಕ್ಷ್ಮವಸ್ತುವಿಗಿಂತಲೂ ಅತ್ಯಂತ ಸೂಕ್ಷ್ಮನು, ಬ್ರಹ್ಮಾಂಡವೆಂಬ ಆಹಾರವನ್ನು ಉದರದಲ್ಲಿ ತುಂಬಿಕೊಂಡಿರುವವನು, ಸಕಲಶಕ್ತಿಗಳಿಂದ ಸಹಿತನೂ ಆದ ಹರಿಯು ಆಲದೆಲೆಯಲ್ಲಿ ಮಲಗಿದ ಕಾಲದಲ್ಲಿ ಮಹಾಯಶಸ್ವಿಯಾದ ನಾರಾಯಣಧ್ಯಾನನಿರತನಾದ ಮಾರ್ಕಂಡೇಯಋಷಿಯು ಆ ಮಹಾಸ್ವಾಮಿಯ ಲೀಲೆಗಳನ್ನು ನೋಡುತ್ತಿದ್ದನು.

ಋಷಯ ಊಚುಃ

ತಸ್ಮಿನ್ಕಾಲೇ ಮಹಾಘೋರೇ ನಷ್ಟೇ ಸ್ಥಾವರಜಂಗಮೇ ।
ಹರಿರೇಕಃ ಸ್ಥಿತ ಇತಿ ಮುನೇ ಪೂರ್ವಂ ಹಿ ಶುಶ್ರುಮ ॥ ೪೭ ॥

ಜಗತ್ಯೇಕಾರ್ಣವೀಭೂತೇ ನಷ್ಟೇ ಸ್ಥಾವರಜಂಗಮೇ ।
ಸರ್ವಗ್ರಸ್ತೇನ ಹರಿಣಾ ಕಿಮರ್ಥಂ ಸೋಽವಶೇಷಿತಃ ॥ ೪೮ ॥

ಪರಂ ಕೌತೂಹಲಂ ಹ್ಯತ್ರ ವರ್ತತೇಽತೀವ ಸೂತ ನಃ ।
ಹರಿಕೀರ್ತಿಸುಧಾಪಾನೇ ಕಸ್ಯಾಲಸ್ಯಂ ಪ್ರಜಾಯತೇ ॥ ೪೯ ॥

ಸೂತ ಉವಾಚ

ಆಸೀನ್ಮುನಿರ್ಮಹಾಭಾಗೋ ಮೃಕಂಡುರಿತಿ ವಿಶ್ರುತಃ ।
ಶಾಲಗ್ರಾಮೇ ಮಹಾತೀರ್ಥೇ ಸೋಽತಪ್ಯತ ಮಹತ್ತಪಃ ॥ ೫೦ ॥

---

೪೭. ಋಷಿಗಳು ಹೇಳುತ್ತಾರೆ:—ಮುನಿಯೇ! ಮಹಾಭಯಂಕರವಾದ ಆ ಕಾಲದಲ್ಲಿ ಸ್ಥಿರಚರವಸ್ತುಗಳು ನಷ್ಟವಾದಾಗ ಹರಿಯೊಬ್ಬನೇ ಇದ್ದನೆಂದು ಪೂರ್ವದಲ್ಲಿ ಕೇಳಿದ್ದೆವು.

೪೮. ಸ್ಥಿರಚರವಸ್ತುಗಳು ನಷ್ಟವಾಗಿ ಜಗತ್ತೆಲ್ಲವೂ ಉದಕಮಯವಾಗಿರುವಾಗ ಸಕಲಪದಾರ್ಥಗಳನ್ನೂ ನಾಶಪಡಿಸಿದ ಹರಿಯು ಆ ಮಾರ್ಕಂಡೇಯನನ್ನು ಏತಕ್ಕೋಸ್ಕರ ಉಳಿಸಿದನು ?

೪೯. ಸೂತನೇ! ಈ ವಿಷಯವನ್ನು ತಿಳಿದುಕೊಳ್ಳಲು ನಮಗೆ ಬಹಳ ಕುತೂಹಲವುಂಟಾಗಿದೆ. ಹರಿಮಾಹಾತ್ಮ್ಯೆಯೆಂಬ ಅಮೃತವನ್ನು ಪಾನ ಮಾಡುವುದರಲ್ಲಿ ಯಾರಿಗೆತಾನೇ ಬೇಸರವಾದೀತು? (ಆದುದರಿಂದ ಈ ವಿಷಯವನ್ನು ಉಪದೇಶಿಸಬೇಕೆಂದು ಋಷಿಗಳು ಹೇಳಿದರು.)

೫೦. ಸೂತರು ಹೇಳಿದರು—ಮೃಕಂಡು ಎಂಬ ಹೆಸರಿನಿಂದ ಪ್ರಸಿದ್ಧನಾದ ಪೂಜ್ಯನಾದ ಋಷಿಯಿದ್ದನು. ಆತನು ಸಾಲಗ್ರಾಮವೆಂಬ ಪುಣ್ಯಕ್ಷೇತ್ರದಲ್ಲಿ ಕಠಿಣ ತಪಸ್ಸನ್ನು ಮಾಡಿದನು.

ಯುಗಾನಾಮಯುತಂ ಬ್ರಹ್ಮನ್ ಗೃಣನ್ಬ್ರಹ್ಮ ಸನಾತನಂ ।
ನಿರಾಹಾರಃ ಕ್ಷಮಾಯುಕ್ತಃ ಸತ್ಯಸಂಧೋ ಜಿತೇಂದ್ರಿಯಃ ॥ ೫೧ ॥

ಆತ್ಮವತ್ಸರ್ವಭೂತಾನಿ ಪಶ್ಯನ್ ವಿಷಯನಿಸ್ಪೃಹಃ ।
ಸರ್ವಭೂತಹಿತೋ ದಾಂತಸ್ತತಾಪ ಸುಮಹತ್ತಪಃ ॥ ೫೨ ॥

ತತ್ತಪಃಶಂಕಿತಾಃ ಸರ್ವೇ ದೇವಾ ಇಂದ್ರಾದಯಸ್ತದಾ ।
ಪರೇಶಂ ಶರಣಂ ಜಗ್ಮುರ್ನಾರಾಯಣಮನಾಮಯಂ ॥ ೫೩ ॥

ಕ್ಷೀರಾಬ್ಧೇರುತ್ತರಂ ತೀರಂ ಸಂಪ್ರಾಪ್ಯ ತ್ರಿದಿವೌಕಸಃ ।
ತುಷ್ಟುವುರ್ದೇವದೇವೇಶಂ ಪದ್ಮನಾಭಂ ಜಗದ್ಗುರುಂ ॥ ೫೪ ॥

ದೇವಾ ಊಚುಃ

ನಾರಾಯಣಾಕ್ಷರಾನಂತ ಶರಣಾಗತಪಾಲಕ ।
ಮೃಕಂಡುತಪಸಾ ತ್ರಸ್ತಾನ್ ಪಾಹಿ ನಃ ಶರಣಾಗತಾನ್ ॥ ೫೫ ॥

---

೫೧-೫೨. ಬ್ರಾಹ್ಮಣನೇ! ಸಹನಶೀಲನು, ನಿಜವನ್ನೇ ನುಡಿಯುವವನು, ಇಂದ್ರಿಯಗಳನ್ನು ಜಯಿಸಿರುವವನು, ತನ್ನಂತೆ ಸರ್ವ ಪ್ರಾಣಿಗಳನ್ನೂ ನೋಡುವವನು, ವಿಷಯಭೋಗಗಳಲ್ಲಿ ಆಶೆಯಿಲ್ಲದವನು, ಸಮಸ್ತ ಪ್ರಾಣಿಗಳಿಗೂ ಒಳ್ಳೆಯದನ್ನೇ ಬಯಸುವವನು, ಶಾಂತಸ್ವಭಾವವುಳ್ಳವನೂ ಆದ ಆ ಮೃಕಂಡುಋಷಿಯು ಆಹಾರವನ್ನು ಬಿಟ್ಟು ಹತ್ತುಸಾವಿರ ಯುಗಪರ್ಯಂತವಾಗಿ ಅನಾದಿ ಬ್ರಹ್ಮನನ್ನು ಸ್ತುತಿಸುವವನಾಗಿ ಮಹತ್ತರವಾದ ತಪಸ್ಸನ್ನು ಮಾಡಿದನು.

೫೩. ಆಗ ಆ ಋಷಿಯ ತಪಸ್ಸಿನಿಂದ ಭಯಪಟ್ಟ ದೇವೇಂದ್ರನೇ ಮುಂತಾದ ಸಕಲ ದೇವತೆಗಳು, ಉತ್ತಮರಾದ ದೇವತೆಗಳಿಗೂ ಸ್ವಾಮಿಯಾದ ದೋಷರಹಿತನಾದ, ನಾರಾಯಣನನ್ನು ಶರಣುಹೊಂದಿದರು.

೫೪. ದೇವತೆಗಳು ಕ್ಷೀರಸಮುದ್ರದ ಉತ್ತರತೀರಕ್ಕೆ ಹೋಗಿ ದೇವೋತ್ತಮನು, ಜಗದ್ಗುರುವೂ ಆಗಿರುವ ಪದ್ಮನಾಭನನ್ನು ಸ್ತೋತ್ರಮಾಡಿದರು.

೫೫. ದೇವತೆಗಳು ಹೇಳುತ್ತಾರೆ—ನಾಶರಹಿತನು, ದೇಶಕಾಲವ್ಯಾಪ್ತನು, ಶರಣಾಗತರನ್ನು ರಕ್ಷಿಸುವವನೂ ಆದ ನಾರಾಯಣನೇ! ನಿನ್ನನ್ನೇ ಶರಣು

ಜಯ ದೇವಾಧಿದೇವೇಶ ಜಯ ಶಂಖಗದಾಧರ ।
ಜಯ ಲೋಕಸ್ವರೂಪಾಯ ಜಯ ಬ್ರಹ್ಮಾಂಡಹೇತವೇ ॥ ೫೬ ॥

ನಮಸ್ತೇ ದೇವದೇವೇಶ ನಮಸ್ತೇ ಲೋಕಪಾವನ ।
ನಮಸ್ತೇ ಲೋಕನಾಥಾಯ ನಮಸ್ತೇ ಲೋಕಸಾಕ್ಷಿಣೇ ॥ ೫೭ ॥

ನಮಸ್ತೇ ಧ್ಯಾನಗಮ್ಯಾಯ ನಮಸ್ತೇ ಧ್ಯಾನಹೇತವೇ ।
ನಮಸ್ತೇ ಧ್ಯಾನರೂಪಾಯ ನಮಸ್ತೇ ಧ್ಯಾನಸಾಕ್ಷಿಣೇ ॥ ೫೮ ॥

ಕೇಶಿಹಂತ್ರೇ ನಮಸ್ತುಭ್ಯಂ ಮಧುಹಂತ್ರೇ ಪರಾತ್ಮನೇ ।
ನಮೋ ಭೂಮ್ಯಾದಿರೂಪಾಯ ನಮಶ್ಚೈತನ್ಯರೂಪಿಣೇ ॥ ೫೯ ॥

---

ಹೊಂದಿರುವ, ಮೃಕಂಡುಋಷಿಯ ತಪಸ್ಸಿನಿಂದ ದುಃಖಪಡುತ್ತಿರುವ ನಮ್ಮನ್ನು ಕಾಪಾಡು.

೫೬. ದೇವದೇವೋತ್ತಮನೇ! ನಿನಗೆ ಜಯವಾಗಲಿ. ಶಂಖಗದೆಗಳನ್ನು ಧರಿಸಿರುವವನೇ! ನಿನಗೆ ಜಯವಾಗಲಿ. ಲೋಕಾಂತರ್ಗತನೇ! ನಿನಗೆ ಜಯವಾಗಲಿ. ಬಹ್ಮಾಂಡಕಾರಣನೇ! ನಿನಗೆ ಜಯವಾಗಲಿ.

೫೭. ದೇವದೇವೋತ್ತಮ! ನಿನಗೆ ನಮಸ್ಕಾರ. ಲೋಕವನ್ನೆಲ್ಲಾ ಪರಿಶುದ್ಧವನ್ನಾಗಿ ಮಾಡುವವನೇ! ನಿನಗೆ ನಮಸ್ಕಾರ. ಲೋಕಕ್ಕೆ ಒಡೆಯನೇ! ನಿನಗೆ ನಮಸ್ಕಾರ. ಜಗತ್ತಿನಲ್ಲಿ ನಡೆಯುವ ಸಕಲವ್ಯಾಪಾರಗಳನ್ನೂ ಸಾಕ್ಷಾತ್ತಾಗಿ ನೋಡುವವನೇ ನಿನಗೆ ನಮಸ್ಕಾರ.

೫೮. ಭಗವಂತನೇ! ಧ್ಯಾನಿಸುವವರಿಗೆ ದರ್ಶನಕೊಡುವ ನಿನಗೆ ನಮಸ್ಕಾರ. ಧ್ಯಾನಕ್ಕೆ ಕಾರಣನಾದ ನಿನಗೆ ನಮಸ್ಕಾರ. ಧ್ಯಾನಾಂತರ್ಗತನಾದ ನಿನಗೆ ನಮಸ್ಕಾರ. ಧ್ಯಾನವನ್ನು ಸಾಕ್ಷಾತ್ಕರಿಸುವ ನಿನಗೆ ನಮಸ್ಕಾರವು.

೫೯. ಕೇಶಿ ಮತ್ತು ಮಧುವೆಂಬ ದೈತ್ಯರನ್ನು ಸಂಹರಿಸಿದ ಪರಮಾತ್ಮನಾದ ನಿನಗೆ ನಮಸ್ಕಾರ. ಭೂಮಿ ಮುಂತಾದ ವಸ್ತುಗಳಲ್ಲಿ ಅಂತರ್ಗತನಾದ ನಿನಗೆ ನಮಸ್ಕಾರ. ಚೈತನ್ಯ ಎಂದರೆ ಜ್ಞಾನರೂಪಿಯಾದ ನಿನಗೆ ನಮಸ್ಕಾರ.

ನಮೋ ಜ್ಯೇಷ್ಠಾಯ ಶುದ್ಧಾಯ ನಿರ್ಗುಣಾಯ ಗುಣಾತ್ಮನೇ ।
ಅರೂಪಾಯ ಸುರೂಪಾಯ ಬಹುರೂಪಾಯ ತೇ ನಮಃ ॥ ೬೦ ॥

ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥ ೬೧ ॥

ನಮೋ ಹಿರಣ್ಯಗರ್ಭಾಯ ನಮೋ ಬ್ರಹ್ಮಾದಿರೂಪಿಣೇ ।
ನಮಃ ಸೂರ್ಯಾದಿರೂಪಾಯ ಹವ್ಯಕವ್ಯಭುಜೇ ನಮಃ ॥ ೬೨ ॥

ನಮೋ ನಿತ್ಯಾಯ ವಂದ್ಯಾಯ ಸದಾನಂದೈಕರೂಪಿಣೇ ।
ನಮಃ ಸ್ಮೃತಾರ್ತಿನಾಶಾಯ ಭೂಯೋಭೂಯೋ ನಮೋನಮಃ ॥ ೬೩ ॥

---

೬೦. ಭಗವಂತನೇ ! ಎಲ್ಲರಿಗಿಂತಲೂ ಹಿರಿಯನಾದ, ನಿರ್ದೋಷನಾದ, ಪ್ರಾಕೃತಗುಣರಹಿತನಾದ, ಅಪ್ರಾಕೃತಚಿದಾನಂದಾದಿಗುಣಸ್ವರೂಪನಾದ, ಪ್ರಾಕೃತಾಕಾರಶೂನ್ಯನಾದ, ಸಮೀಚೀನವಾದ ಅಪ್ರಾಕೃತದೇಹವುಳ್ಳ, ಅನೇಕ ಅವತಾರರೂಪಗಳನ್ನು ಸ್ವೀಕರಿಸಿರುವ ನಿನಗೆ ನಮಸ್ಕಾರ.

೬೧. ಬ್ರಹ್ಮಣ್ಯನಾಮಕದೇವನು, ಗೋವು ಮತ್ತು ಬ್ರಾಹ್ಮಣರು ಇವರುಗಳಿಗೆ ಶ್ರೇಯಸ್ಸನ್ನುಂಟುಮಾಡುವವನು ಲೋಕಕ್ಕೆಲ್ಲಾ ಶ್ರೇಯಸ್ಸನ್ನುಂಟುಮಾಡುವವನು, ವೇದಪ್ರತಿಪಾದ್ಯನೂ ಆದ ಶ್ರೀಕೃಷ್ಣನಿಗೆ ನಮಸ್ಕಾರ, ನಮಸ್ಕಾರ.

೬೨. ಹಿರಣ್ಯಗರ್ಭಪದಮುಖ್ಯವಾಚ್ಯನಾದ ಪರಮಾತ್ಮನಿಗೆ ನಮಸ್ಕಾರ. ಬ್ರಹ್ಮ ಮುಂತಾದವರಲ್ಲಿ ಅಂತರ್ಗತನಾಗಿರುವವನಿಗೆ ನಮಸ್ಕಾರ. ಸೂರ್ಯಾಂತರ್ಯಾಮಿಯಾದ ಭಗವಂತನಿಗೆ ನಮಸ್ಕಾರ. ಹವ್ಯಕವ್ಯಗಳ ಸಾರ ಭೋಕ್ತೃವಾದ ಪರಮಾತ್ಮನಿಗೆ ನಮಸ್ಕಾರ. (ಹವ್ಯವೆಂದರೆ ಇಂದ್ರಾದಿದೇತೆಗಳ ಉದ್ದೇಶದಿಂದ ಅಗ್ನಿಯಲ್ಲಿ ಹೋಮಮಾಡಿದ ಅನ್ನಾದಿಗಳು ಎಂದರ್ಥ. ಕವ್ಯವೆಂದರೆ ಪಿತೃಗಳ ತೃಪ್ತ್ಯುದ್ದೇಶದಿಂದ ಬ್ರಾಹ್ಮಣರ ಮುಖದಲ್ಲಿ ಕೊಡಲ್ಪಡುವ ಅನ್ನಾದಿಗಳು ಎಂದರ್ಥ.)

೬೩. ನಿತ್ಯನು ಎಂದರೆ ನಾಶವಿಲ್ಲದವನು, ಸರ್ವರಿಗೂ ಪೂಜ್ಯನು, ಯಾವಾಗಲೂ ಆನಂದಮಾತ್ರಸ್ವರಪನೂ ಆದ ಭಗವಂತನಿಗೆ ನಮಸ್ಕಾರ.

ಏವಂ ದೇವಸ್ತುತಿಂ ಶ್ರುತ್ವಾ ಭಗವಾನ್ ಕಮಲಾಪತಿಃ ।
ಪ್ರತ್ಯಕ್ಷತಾಮಗಾತ್ತೇಷಾಂ ಶಂಖಚಕ್ರಗದಾಧರಃ ॥ ೬೪ ॥

ವಿಕಚಾಂಬುಜಪತ್ರಾಕ್ಷಂ ಸೂರ್ಯಕೋಟಿಸಮಪ್ರಭಂ ।
ಸರ್ವಾಲಂಕಾರಸಂಯುಕ್ತಂ ಶ್ರೀವತ್ಸಾಂಕಿತವಕ್ಷಸಂ ॥ ೬೫ ॥

ಪೀತಾಂಬರಧರಂ ಸೌಮ್ಯಂ ಸ್ವರ್ಣಯಜ್ಞೋಪವೀತಿನಂ ।
ಸ್ತೂಯಮಾನಂ ಮುನಿವರ್ಯೈಃ ಪಾರ್ಷದಪ್ರವರಾವೃತಂ ॥ ೬೬ ॥

ತಂ ದೃಷ್ಟ್ವಾ ದೇವಸಂಘಾಸ್ತೇ ತತ್ತೇಜೋಹತತೇಜಸಃ ।
ನಮಶ್ಚಕ್ರುರ್ಮುದಾ ಯುಕ್ತಾ ಅಷ್ಟಾಂಗೈರವನಿಂ ಗತಾಃ ॥ ೬೭ ॥

---

ತನ್ನನ್ನು ಸ್ಮರಿಸುವವರಿಗೆ ದುಃಖವನ್ನು ಪರಿಹರಿಸುವವನಾದ ಶ್ರೀಹರಿಗೆ ಬಾರಿ ಬಾರಿಗೂ ನಮಸ್ಕಾರ, ನಮಸ್ಕಾರ.

೬೪. ಲಕ್ಷ್ಮೀಪತಿಯಾದ ಭಗವಂತನು ಈ ಪ್ರಕಾರ ದೇವತೆಗಳು ಮಾಡಿದ ಸ್ತೋತ್ರವನ್ನು ಕೇಳಿ ಅವರುಗಳಿಗೆ ಶಂಖಚಕ್ರಗದಾಪಾಣಿಯಾಗಿ ಪ್ರತ್ಯಕ್ಷನಾದನು.

೬೫-೬೮. ಅರಳಿದ ಕಮಲಪತ್ರದಂತೆ ವಿಶಾಲವಾದ ಕಣ್ಣುಗಳುಳ್ಳ, ಕೋಟಿಸೂರ್ಯರ ಪ್ರಕಾಶಕ್ಕೆ ಸಮಾನವಾದ ಪ್ರಕಾಶವುಳ್ಳ, ಸಮಸ್ತಾಭರಣಗಳನ್ನೂ ಧರಿಸಿರುವ, ಶ್ರೀವತ್ಸವೆಂಬ ಸೌಭಾಗ್ಯ ಚಿನ್ಹೆಯಿಂದ ಭೂಷಿತವಾದ ವಕ್ಷಃಸ್ಥಲವುಳ್ಳ, ಪಟ್ಟೆವಸ್ತ್ರವನ್ನು ಧರಿಸಿರುವ, ಶಾಂತಸ್ವಭಾವವುಳ್ಳ, ಭಂಗಾರದ ಯಜ್ಞೋಪವೀತವನ್ನು ಧರಿಸಿರುವ, ಋಷಿಶ್ರೇಷ್ಠರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರುವ, ಉತ್ತಮಸೇವಕರಿಂದ ಪರಿವೃತನಾದ, ಆ ಪರಮಾತ್ಮನನ್ನು ನೋಡಿ, ಶರಣಾಗತರಾದ ದೇವಸಮೂಹಗಳು ಆತನ ಮಹಾತೇಜಸ್ಸಿನಿಂದ ಅಪಹರಿಸಲ್ಪಟ್ಟ ತೇಜಸ್ಸುಳ್ಳವರಾಗಿ, ಸಂತೋಷದಿಂದ ಭೂಮಿಗೆಬಗ್ಗಿ ನಮಸ್ಕಾರ ಮಾಡಿದರು.

ತತಃ ಪ್ರಸನ್ನೋ ಭಗವಾನ್ಮೇಘಗಂಭೀರನಿಸ್ವನಃ ।
ಉವಾಚ ಪ್ರೀಣಯನ್ದೇವಾನ್ನತಾನಿಂದ್ರ ಪುರೋಗಮಾನ್ ॥ ೬೮ ॥

ಶ್ರೀ ಭಗವಾನುವಾಚ

ಜಾನೇ ವೋ ಮಾನಸಂ ದುಃಖಂ ಮೃಕಂಡುತಪಸೋದ್ಭವಂ ।
ಯುಷ್ಮಾನ್ನ ಬಾಧತೇ ದೇವಾಃ ಸ ಋಷಿಃ ಸಜ್ಜನಾಗ್ರಣೀಃ ॥ ೬೯ ॥

ಸಂಪದ್ಭಿಃ ಸಂಯುತಾ ವಾऽಪಿ ವಿಪದ್ಭಿರ್ವಾऽಪಿ ಸಜ್ಜನಾಃ ।
ಸರ್ವಥಾನ್ಯಂ ನ ಬಾಧಂತೇ ಸ್ವಪ್ನೇಽಪಿ ಸುರಸತ್ತಮಾಃ ॥ ೭೦ ॥

ಸತತಂ ಬಾಧ್ಯಮಾನೋऽಪಿ ವಿಷಯಾಖ್ಯೈರರಾತಿಭಿಃ ।
ಅವಿಧಾಯಾತ್ಮನೋ ರಕ್ಷಾ ಮನ್ಯಾನ್ದ್ವೇಷ್ಟಿ ಕಥಂ ಸುಧೀಃ ॥ ೭೧ ॥

---

೬೮. ತರುವಾಯ ಮೇಘನಾದದಂತೆ ಗಂಭೀರಧ್ವನಿಯುಳ್ಳ ಭಗವಂತನು ಪ್ರಸನ್ನನಾಗಿ, ನಮಸ್ಕರಿಸಿದ ಇಂದ್ರ ಮುಂತಾದ ದೇವತೆಗಳನ್ನು ಸಂತೈಸಿ ಹೇಳಿದನು.

೬೯. ಶ್ರೀಭಗವಂತನು ಈರೀತಿಯಾಗಿ ಹೇಳಿದನು—ದೇವತೆಗಳಿರಾ! ಮೃಕಂಡುಋಷಿಯ ತಪಸ್ಸಿನಿಂದುಂಟಾದ ನಿಮ್ಮ ಮಾನಸಿಕ ದುಃಖವನ್ನು ತಿಳಿದಿರುತ್ತೇನೆ. ಸಜ್ಜನೋತ್ತಮನಾದ ಆ ಋಷಿಯು ನಿಮ್ಮನ್ನು ಪೀಡಿಸುವುದಿಲ್ಲ.

೭೦. ಸಜ್ಜನರು ಐಶ್ವರ್ಯಮುಂತಾದವುಗಳಿಂದ ಸುಖಿಗಳಾಗಿರುವಾಗಲೂ, ಕಷ್ಟಗಳಿಂದ ದುಃಖಪಡುತ್ತಿರುವಾಗಲೂ, ಸ್ವಪ್ನದಲ್ಲಿಯೂ ಸಹ ಯಾವರೀತಿಯಿಂದಲೂ ಇತರರನ್ನು ಪೀಡಿಸುವುದಿಲ್ಲ.

೭೧. ತಿಳಿವಳಿಕೆಯುಳ್ಳವನು ತಾನು ವಿಷಯವೆಂಬ ಶತ್ರುಗಳಿಂದ ಸರ್ವಕಾಲದಲ್ಲಿಯೂ ಬಾಧಿಸಲ್ಪಡುವವನಾಗಿದ್ದಾಗ್ಯೂ ಆ ಶತ್ರುಗಳನ್ನು ನಾಶಪಡಿಸಿ ತನ್ನ ರಕ್ಷಣೆಯನ್ನು ಮಾಡಿಕೊಳ್ಳದೇ ಇತರರನ್ನು ಹೇಗೆ ದ್ವೇಷಿಸಿಯಾನು?

ತಾಪತ್ರಯಾಭಿಧಾನೇನ ಬಾಧ್ಯಮಾನೋಽರಿಣಾನರಃ ।
ಅನ್ಯಂ ಪೀಡಯಿತುಂ ಶಕ್ತಃ ಕಥಂ ಭವತಿ ಸತ್ತಮಃ ॥ ೭೨ ॥

ಕರ್ಮಣಾ ಮನಸಾ ವಾಚಾ ಬಾಧತೇ ಯಸ್ಸದಾ ಪರಾನ್ ।
ನಿತ್ಯಂ ಕಾಮಾದಿಭಿರ್ಯುಕ್ತೋ ಮೂಢಧೀಃ ಪ್ರೋಚ್ಯತೇ ತು ಸಃ ॥ ೭೩ ॥

ಯೋ ಲೋಕಹಿತಕೃನ್ಮರ್ತ್ಯೋ ಗತಾಸೂಯೋ ವಿಮತ್ಸರಃ ।
ನಿಃಶಂಕಃ ಪ್ರೋಚ್ಯತೇ ಸದ್ಭಿರಿಹಾಮುತ್ರ ಚ ಸತ್ತಮಃ ॥ ೭೪ ॥

ಸಶಂಕಃ ಸರ್ವದಾ ದುಃಖೀ ನಿಃಶಂಕಃ ಸುಖಮಾಪ್ನುಯಾತ್ ।
ಗಚ್ಛಧ್ವಂ ಸ್ವಾಲಯಂ ಸ್ವಸ್ಥಾಃ ಪೀಡಯಿಷ್ಯತಿ ವೋ ನ ಸಃ ॥ ೭೫ ॥

---

೭೨. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ತಾಪತ್ರಯನಾಮಕವಾದ ಶತ್ರುವಿನಿಂದ ಪೀಡಿಸಲ್ಪಡುತ್ತಿರುವ ಯೋಗ್ಯನಾದ ಮನುಷ್ಯನು ಇತರರನ್ನು ಬಾಧಿಸಲು ಹೇಗೆ ಸಮರ್ಥನಾದಾನು ?

೭೩. ಯಾವನು ಯಾವಾಗಲೂ ಕಾಮಕ್ರೋಧಾದಿಗಳಿಂದ ಸಹಿತನಾಗಿ ತಾನು ಮಾಡುವ ಕೆಲಸ, ಮನಸ್ಸಿನ ಹಾರೈಕೆ, ಬಾಯಿಮಾತು, ಇವುಗಳೆಲ್ಲದರಿಂದಲೂ ಇತರರನ್ನು ಸರ್ವದಾ ನೋಯಿಸುತ್ತಾನೆಯೋ ಅಂತಹವನು ಮೂಢನೆಂದು ಉಕ್ತವಾಗಿದೆ.

೭೪. ಯಾವ ಮನುಷ್ಯನು ಹೊಟ್ಟೆಕಿಚ್ಚು ಮತ್ತು ಮಾತ್ಸರ್ಯ ಇವುಗಳಿಲ್ಲದೇ ಶಂಕಾರಹಿತನಾಗಿ ಲೋಕಕ್ಕೆ ಉಪಕಾರವನ್ನು ಮಾಡುತ್ತಾನೆಯೋ ಅಂತಹವನು ಇಹಪರಲೋಕಗಳಲ್ಲಿ ಸಜ್ಜನೋತ್ತಮನೆಂದು ಹೇಳಿಸಿಕೊಳ್ಳುತ್ತಾನೆ.

೭೫. ಶಂಕೆಯುಳ್ಳವನು ಎಂದರೆ ಸಂಶಯಾತ್ಮನು ಯಾವಾಗಲೂ ದುಃಖಪಡುತ್ತಾನೆ. ಶಂಕೆಯಿಲ್ಲದವನು ಎಂದರೆ ವ್ಯವಸ್ಥಿತಚಿತ್ತನಾದವನು ಸುಖವನ್ನು ಹೊಂದುತ್ತಾನೆ. ದೇವತೆಗಳೇ! ನೀವು ಸ್ವಸ್ಥಚಿತ್ತರಾಗಿ ನಿಮ್ಮ ಸ್ಥಳಕ್ಕೆ ಹೋಗಿರಿ. ಆ ಮೃಕಂಡುಋಷಿಯು ನಿಮ್ಮನ್ನು ಬಾಧಿಸುವುದಿಲ್ಲ.

ಭವತಾಂ ರಕ್ಷಕಶ್ಚಾಹಂ ವಿಹರಧ್ವಂ ಯಥಾಸುಖಂ ।
ಇತಿ ದತ್ವಾ ವರಂ ತೇಷಾಮತಸೀಕುಸುಮಪ್ರಭಃ ॥ ೭೬ ॥

ಪಶ್ಯತಾಮೇವ ದೇವಾನಾಂ ತತ್ರೈವಾಂತರಧೀಯತ ।
ತುಷ್ಟಾತ್ಮಾನಃ ಸುರಗಣಾ ಯಯುರ್ನಾಕಂ ಯಥಾಗತಂ ॥ ೭೭ ॥

ಮೃಕಂಡೋರಪಿ ತುಷ್ಟಾತ್ಮಾ ಹರಿಃ ಪ್ರತ್ಯಕ್ಷತಾಮಗಾತ್ ।
ಅರೂಪಂ ಪರಮಂ ಬ್ರಹ್ಮ ಸ್ವಪ್ರಕಾಶಂ ನಿರಂಜನಂ ॥ ೭೮ ॥

ಅತಸೀಪುಷ್ಪಸಂಕಾಶಂ ಪೀತವಾಸಃಸಮನ್ವಿತಂ ।
ದಿವ್ಯಾಯುಧಧರಂ ದೃಷ್ಟ್ವಾ ಮೃಕಂಡುರ್ವಿಸ್ಮಿತೋಽಭವತ್ ॥ ೭೯ ॥

ಧ್ಯಾನಾದುನ್ಮೀಲ್ಯನಯನಮಪಶ್ಯದ್ಧರಿಮಗ್ರತಃ ।
ಪ್ರಸನ್ನವದನಂ ಶಾಂತಂ ಧಾತಾರಂ ವಿಶ್ವತೇಜಸಂ ॥ ೮೦ ॥

---

೭೬-೭೭. ಅಗಸೆಯಹೂವಿನ ಕಾಂತಿಯುಳ್ಳ ಭಗವಂತನು "ನಿಮಗೆ ನಾನು ರಕ್ಷಕನಾಗಿರುತ್ತೇನೆ ; ಸುಖವಾಗಿ ವಿಹಾರಮಾಡಿಕೊಂಡಿರಿ" ಎಂಬುದಾಗಿ ಆ ದೇವತೆಗಳಿಗೆ ವರವನ್ನು ಕೊಟ್ಟು ಅವರು ನೋಡುತ್ತಿರುವಾಗಲೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಬಳಿಕ ತುಷ್ಟವಾದ ದೇವ ಸಮೂಹವು ಬಂದ ಮಾರ್ಗವಾಗಿಯೇ ಸ್ವರ್ಗಲೋಕಕ್ಕೆ ಹಿಂದಿರುಗಿತು.

೭೮-೭೯. ಸಂತುಷ್ಟಚಿತ್ತನಾದ ಹರಿಯು ಮೃಕಂಡುಋಷಿಗೂ ಸಹ ಪ್ರತ್ಯಕ್ಷನಾದನು. ಆಗ ಮೃಕಂಡುಋಷಿಯು ಪ್ರಾಕೃತರೂಪಶೂನ್ಯನೂ, ಸ್ವಯಂಪ್ರಕಾಶನೂ, ದೋಷರಹಿತನೂ, ಅಗಸೆಯಹೂವಿಗೆ ಸದೃಶವಾದ ತೇಜಸ್ಸುಳ್ಳವನೂ, ಹಳದಿವಸ್ತ್ರದಿಂದಲಂಕೃತನೂ, ದೇವಯೋಗ್ಯವಾದ ಆಯುಧಗಳನ್ನು ಧರಿಸಿರುವವನೂ ಆಗಿರುವ ಪರಬ್ರಹ್ಮನನ್ನು ನೋಡಿ ವಿಸ್ಮಯಗೊಂಡನು.

೮೦-೮೧. ಮೃಕಂಡುಮುನಿಯು ಧ್ಯಾನದಿಂದೆದ್ದು, ಕಣ್ತೆರೆದು ಎದುರು ಭಾಗದಲ್ಲಿ ನಿಂತಿದ್ದ, ಪ್ರಸನ್ನಮುಖನು, ಸೌಮ್ಯನು, ಸೃಷ್ಟಿಕರ್ತನು, ಪ್ರಪಂಚದ

ರೋಮಾಂಚಿತಶರೀರೋऽಸಾವಾನಂದಾಶ್ರುವಿಲೋಚನಃ ।
ನನಾಮ ದಂಡವದ್ಭೂಮೌ ದೇವದೇವಂ ಸನಾತನಂ ॥ ೪೧ ॥

ಅಶ್ರುಭಿಃ ಕ್ಷಾಲಯಂಸ್ತಸ್ಯ ಚರಣೌ ಹರ್ಷಸಂಭವೈಃ ।
ಶಿರಸ್ಯಂಜಲಿಮಾಧಾಯ ಸ್ತೋತುಂ ಸಮುಪಚಕ್ರಮೇ ॥ ೪೨ ॥

ಮೃಕಂಡುರುವಾಚ

ನಮಃ ಪರೇಶಾಯ ಪರಾತ್ಮರೂಪಿಣೇ
ಪರಾತ್ಪರಸ್ಮಾತ್ಪರತಃ ಪರಾಯ ।
ಅಪಾರಪಾರಾಯ ಪರಾರ್ಥಕರ್ತ್ರೇ
ನಮಃ ಪರೇಭ್ಯಃ ಪರಪಾವನಾಯ ॥ ೪೩ ॥

---

ತೇಜಸ್ಸಿಗೆ ನಿಯಾಮಕನೂ ಆಗಿರುವ ಶ್ರೀಹರಿಯನ್ನು ನೋಡಿ ಶರೀರದಲ್ಲಿ ರೋಮಾಂಚವುಳ್ಳವನಾಗಿ ನೇತ್ರಗಳಲ್ಲಿ ಆನಂದಬಾಷ್ಪಗಳನ್ನು ತುಂಬಿಕೊಂಡು ಭೂಮಿಗೆ ಬಗ್ಗಿ ಅನಾದಿಯಾದ ದೇವೋತ್ತಮನಿಗೆ ದಂಡಪ್ರಣಾಮವನ್ನು ಮಾಡಿದನು.

೪೨. ನಮಸ್ಕಾರಮಾಡಿದನಂತರ ಮೃಕಂಡುಮುನಿಯು ಆ ಹರಿಯ ಪಾದಗಳನ್ನು ಆನಂದಬಾಷ್ಪಗಳಿಂದ ತೊಳೆದು ತಲೆಯಮೇಲೆ ಕೈಜೋಡಿಸಿ ಕೊಂಡು ಸ್ತೋತ್ರಮಾಡಲು ಪ್ರಾರಂಭಿಸಿದನು.

೪೩. ಮೃಕಂಡುವು ಹೇಳುತ್ತಾನೆ—ಉತ್ಕೃಷ್ಟಾತ್ಮಸ್ವರೂಪನು, ಉತ್ತಮರಾದ ದೇವತೆಗಳಿಗಿಂತಲೂ ಉತ್ತಮನಾದ ಚತುರ್ಮುಖನಗಿಂತಲೂ ಉತ್ತಮಳಾದ ಲಕ್ಷ್ಮೀದೇವಿಗಿಂತಲೂ ಶ್ರೇಷ್ಠನು, ನಿಸ್ಸೀಮವಾದ ಈ ಸಂಸಾರವನ್ನು ದಾಟಿಸುವವನು, ಪರಾರ್ಥವಾಗಿಯೇ ಸೃಷ್ಟ್ಯಾದಿಗಳನ್ನು ಮಾಡುವವನು, ಉತ್ತಮರಾದ ದೇವತೆಗಳಿಗೂ ಪವಿತ್ರತೆಯನ್ನುಂಟುಮಾಡುವವನೂ ಆದ ದೇವೇಶ್ವರನಿಗೆ ನಮಸ್ಕಾರ.

ಯೋ ನಾಮಜಾತ್ಯಾದಿವಿಕಲ್ಪಹೀನಃ
ಶಬ್ದಾದಿದೋಷವ್ಯತಿರೇಕರೂಪಃ ।
ಬಹುಸ್ವರೂಪೋऽಪಿ ನಿರಂಜನೋ ಯಃ
ತಮೀಶಮೀಡ್ಯಂ ಪರಮಂ ಭಜಾಮಿ ॥ ೮೪ ॥

ವೇದಾಂತವೇದ್ಯಂ ಪುರುಷಂ ಪುರಾಣಂ
ಹಿರಣ್ಯಗರ್ಭಾದಿ ಜಗತ್ಸ್ವರೂಪಂ ।
ಅನೂಪಮಂ ಭಕ್ತಜನಾನುಕಂಪಿನಂ
ಭಜಾಮಿ ಸರ್ವೇಶ್ವರಮಾದಿಮೀಡ್ಯಂ ॥ ೮೫ ॥

ಪಶ್ಯಂತಿ ಯಂ ವೀತಸಮಸ್ತದೋಷಾ
ಧ್ಯಾನೈಕನಿಷ್ಠಾ ವಿಗತಸ್ಪೃಹಾಶ್ಚ ।
ನಿವೃತ್ತಮೋಹಾಃ ಪರಮಂ ಪವಿತ್ರಂ
ನತೋಽಸ್ಮಿ ಸಂಸಾರನಿವರ್ತಕಂ ತಂ ॥ ೮೬ ॥

---

೮೪. ಯಾವಾತನು ನಾಮಧೇಯ, ಜಾತಿ, ಮುಂತಾದ ಧರ್ಮರಹಿತನು, ಶಬ್ದಾದಿದೋಷಗಳಿಲ್ಲದ ಸ್ವರೂಪವುಳ್ಳವನು, ಅನೇಕ ಶರೀರಗಳುಳ್ಳವನಾದಾಗ್ಯೂ ದೋಷರಹಿತನೂ ಆಗಿರುವನೋ ಅಂತಹ ಸ್ತುತ್ಯನೂ ಉತ್ತಮನೂ ಆದ ಸ್ವಾಮಿಯನ್ನು ಸೇವಿಸುತ್ತೇನೆ.

೮೫. ವೇದಾಂತಶಾಸ್ತ್ರಪ್ರತಿಪಾದ್ಯನು, ಸನಾತನನು, ಚತುರ್ಮುಖ ಮೊದಲಾದ ಜಗದಂತರ್ಗತನು, ಅಸದೃಶನು, ಭಕ್ತಜನರುಗಳಲ್ಲಿ ದಯೆಯುಳ್ಳವನು, ಜಗತ್ಕಾರಣನು, ಸ್ತುತ್ಯನು, ಸರ್ವಸ್ವಾಮಿಯೂ ಆದ ಪುರುಷನನ್ನು ವಂದಿಸುತ್ತೇನೆ.

೮೬. ಸಕಲದೋಷಗಳನ್ನೂ ದೂರಮಾಡಿರುವವರು, ಧ್ಯಾನಮಾತ್ರದಲ್ಲಿ ನಿರತರು, ಆಶೆಗಳನ್ನು ತೊರೆದಿರುವವರು, ಅಜ್ಞಾನವನ್ನು ಪರಿಹರಿಸಿಕೊಂಡಿರುವವರೂ ಆದ ಯೋಗಿಗಳು ಪರಿಶುದ್ಧನೂ, ಸರ್ವೋತ್ಕೃಷ್ಟನೂ, ಆದ ಯಾರನ್ನು ಸಾಕ್ಷಾತ್ಕರಿಸಿಕೊಳ್ಳುವರೋ ಅಂತಹ ಸಂಸಾರಪರಿಹಾರಕನಾದ ಭಗವಂತನನ್ನು ನಮಸ್ಕರಿಸುತ್ತೇನೆ.

ಸ್ಮೃತಾರ್ತಿನಾಶನಂ ವಿಷ್ಣುಂ ಶರಣಾಗತಪಾಲಕಂ ।
ಜಗತ್ಸೇವ್ಯಂ ಜಗದ್ಧಾಮ ಪರೇಶಂ ಕರುಣಾಮಯಂ ॥ ೮೭ ॥

ಏವಂ ಸ್ತುತಃ ಸ ಭಗವಾನ್ವಿಷ್ಣುಸ್ತೇನ ಮಹರ್ಷಿಣಾ ।
ಅವಾಪ ಪರಮಾಂ ತುಷ್ಟಿಂ ಶಂಖಚಕ್ರಗದಾಧರಃ ॥ ೮೮ ॥

ಅಥಾಲಿಂಗ್ಯ ಮುನಿಂ ದೇವಶ್ಚತುರ್ಭಿರ್ದೀರ್ಘಬಾಹುಭಿಃ ।
ಉವಾಚ ಪರಯಾ ಪ್ರೀತ್ಯಾ ವರಂ ವರಯ ಸುವ್ರತ ॥ ೮೯ ॥

ಪ್ರೀತೋಽಸ್ಮಿ ತಪಸಾ ತೇನ ಸ್ತೋತ್ರೇಣ ಚ ತವಾನಘ ।
ಮನಸಾ ಯದಭಿಪ್ರೇತಂ ವರಂ ವರಯ ಸುವ್ರತ ॥ ೯೦ ॥

ಮೃಕಂಡುರುವಾಚ

ದೇವದೇವ ಜಗನ್ನಾಥ ಕೃತಾರ್ಥೋಽಸ್ಮಿ ನ ಸಂಶಯಃ ।
ತ್ವದ್ದರ್ಶನಮಪುಣ್ಯಾನಾಂ ದುರ್ಲಭಂ ಚ ಯತಃಸ್ಮೃತಂ ॥ ೯೧ ॥

---

೮೭. ಧ್ಯಾನಿಸುವವರ ದುಃಖವನ್ನು ಪರಿಹರಿಸುವವನು, ಶರಣಾಗತರನ್ನು ರಕ್ಷಿಸುವವನು, ಸಮಸ್ತಪ್ರಾಣಿಗಳಿಂದಲೂ ಸೇವಿಸಲ್ಪಡುವವನು, ಜಗತ್ತಿಗೆ ಆಶ್ರಯನು, ಉತ್ತಮೋತ್ತಮನು, ದಯಾಳುವೂ ಆದ ವಿಷ್ಣುವನ್ನು ನನುಸ್ಮರಿಸುತ್ತೇನೆ.

೮೮. ಆ ಮೃಕಂಡುಮಹರ್ಷಿಯಿಂದ ಈ ಪ್ರಕಾರವಾಗಿ ಸ್ತುತಿಸಲ್ಪಟ್ಟ, ಶಂಖಚಕ್ರಗದಾಪಾಣಿಯಾದ, ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವು ಅತ್ಯಂತವಾಗಿ ಸಂತೋಷವನ್ನು ಹೊಂದಿದನು.

೮೯–೯೦. ತರುವಾಯ ಭಗವಂತನು ದೀರ್ಘವಾದ ಚತುರ್ಬಾಹುಗಳಿಂದ ಮುನಿಯನ್ನು ಆಲಿಂಗನಮಾಡಿ ಋಷಿಯೇ! ನಿನ್ನ ತಪಸ್ಸು ಮತ್ತು ಸ್ತೋತ್ರಗಳಿಂದ ನಾನು ಸಂತುಷ್ಟನಾಗಿ ಪ್ರಸನ್ನನಾಗಿದ್ದೇನೆ. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳು ಎಂಬುದಾಗಿ ಮಹಾವಿಶ್ವಾಸಪೂರ್ವಕವಾಗಿ ಹೇಳಿದನು.

೯೧. ಮೃಕಂಡುವು ಹೇಳಿದನು—ಜಗದೊಡೆಯನಾದ ದೇವೇಶನೇ! ಪುಣ್ಯವಂತರಲ್ಲದವರಿಗೆ ನಿನ್ನ ದರ್ಶನವು ಸಿಕ್ಕಲಾರದು. ಅಂತಹ ದರ್ಶನ

ಬ್ರಹ್ಮಾದ್ಯಾ ಯನ್ನ ಪಶ್ಯಂತಿ ಯೋಗಿನಃ ಸಂಶ್ರಿತವ್ರತಾಃ ।
ಧರ್ಮಿಷ್ಠಾ ದೀಕ್ಷಿತಾಶ್ಚಾಪಿ ವೀತರಾಗಾ ವಿಮತ್ಸರಾಃ ॥ ೯೨ ॥

ತಂ ಪಶ್ಯಾಮಿ ಪರಂಧಾಮ ಕಿಮತೋಽನ್ಯಂ ವರಂ ವೃಣೇ ।
ಏತೇನೈವ ಕೃತಾರ್ಥೋಽಸ್ಮಿ ಜನಾರ್ದನ ಜಗದ್ಗುರೋ ॥ ೯೩ ॥

ಯನ್ನಾಮಸ್ಮೃತಿಮಾತ್ರೇಣ ಮಹಾಪಾತಕಿನೋಽಪಿ ಯೇ ।
ತತ್ಪದಂ ಪರಮಂ ಯಾಂತಿ ತೇ ದೃಷ್ಟ್ವಾ ಕಿಮುತಾಚ್ಯುತ ॥ ೯೪ ॥

ಶ್ರೀ ಭಗವಾನುವಾಚ

ಸತ್ಯಮುಕ್ತಂ ತ್ವಯಾ ಬ್ರಹ್ಮನ್ ಪ್ರೀತೋಽಸ್ಮಿ ತವ ಪಂಡಿತ ।
ಮದ್ದರ್ಶನಂ ಹಿ ವಿಫಲಂ ನ ಕದಾಚಿದ್ಭವಿಷ್ಯತಿ ॥ ೯೫ ॥

---

ವನ್ನು ನನಗೆ ಅನುಗ್ರಹಿಸಿರುವುದರಿಂದಲೇ ನಾನು ಕೃತಾರ್ಥನಾಗಿದ್ದೇನೆ. ಸಂಶಯವಿಲ್ಲ.

೯೨-೯೩. ಬ್ರಹ್ಮಾದಿ ದೇವತೆಗಳು, ವ್ರತಾನುಷ್ಠಾನಪರರಾದ ಯೋಗಿಗಳು ಧಾರ್ಮಿಕರು, ಯಜ್ಞಾನುಷ್ಠಾತೃಗಳಾದ ದೀಕ್ಷಿತರು, ರಾಗ, ಮಾತ್ಸರ್ಯ, ಮುಂತಾದ ದೋಷಗಳಿಲ್ಲದವರೂ ಸಹ ಯಾರನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಿಲ್ಲವೋ ಅಂತಹ ಉತ್ಕೃಷ್ಟಸ್ವರೂಪನಾದ ಪರಮಾತ್ಮನನ್ನೇ ನೋಡುತ್ತಿರುತ್ತೇನೆ. ಇದಕ್ಕಿಂತಲೂ ಬೇರೆಯಾವ ವರವನ್ನು ಕೇಳಬೇಕು? ಜಗದ್ಗುರುವಾದ ಜನಾರ್ದನನೇ! ನಾನು ಇದರಿಂದಲೇ ಕೃತಾರ್ಥನಾಗಿದ್ದೇನೆ.

೯೪. ಮಹಾಪಾತಕಗಳನ್ನು ಮಾಡಿದವರಾದರೂ ಯಾವ ಭಗವಂತನ ನಾಮಸ್ಮರಣೆಮಾತ್ರದಿಂದ ಉತ್ತಮವಾದ ವೈಕುಂಠಾದಿಸ್ಥಾನವನ್ನು ಹೊಂದುತ್ತಾರೆಯೋ ಅಂತಹ ನಿನ್ನ ದರ್ಶನವೇ ಲಭಿಸಿದಮೇಲೆ ಉತ್ತಮಸ್ಥಾನವು ಎಂದರೆ ಮುಕ್ತಿಯು ಸ್ವತಃ ಸಿದ್ಧವೆಂದು ಹೇಳುವುದೇನು?

೯೫. ಶ್ರೀಭಗವಂತನು ಹೇಳುತ್ತಾನೆ—ಎಲೈ ಮೃಕಂಡುಋಷಿಯೇ! ನೀನು ಹೇಳುವುದು ನಿಜ. ನಿನ್ನ ವಿಷಯದಲ್ಲಿ ಸಂತುಷ್ಟವಾಗಿದ್ದೇನೆ. ನನ್ನ ದರ್ಶನವು ಯಾವಾಗಲೂ ನಿಷ್ಫಲವಾಗುವುದಿಲ್ಲ.

ವಿಷ್ಣುರ್ಭಕ್ತಕುಟುಂಬೀತಿ ವದಂತಿ ವಿಬುಧಾಃ ಸದಾ ।
ತದೇವ ಪಾಲಯಿಷ್ಯಾಮಿ ಸಜ್ಜನೋ ನಾನೃತಂ ವದೇತ್ ॥ ೯೬ ॥

ತಸ್ಮಾತ್ತ್ವತ್ತಪಸಾ ತುಷ್ಟೋ ಯಾಸ್ಯಾಮಿ ತವ ಪುತ್ರತಾಂ ।
ಸಮಸ್ತಗುಣ ಸಂಯುಕ್ತೋ ದೀರ್ಘಜೀವೀ ಸುರೂಪವಾನ್ ॥ ೯೭ ॥

ಮಮ ಜನ್ಮ ಕುಲೇ ಯಸ್ಯ ತತ್ಕುಲಂ ಮೋಕ್ಷಗಾಮಿ ವೈ ।
ಮಯಿ ತುಷ್ಟೇ ಮುನಿಶ್ರೇಷ್ಠ ಕಿಮಸಾಧ್ಯಂ ಜಗತ್ರಯೇ ॥ ೯೮ ॥

ಇತ್ಯುಕ್ತ್ವಾ ದೇವದೇವೇಶೋ ಮುನೇಸ್ತಸ್ಯ ಸಮೀಕ್ಷತಃ ।
ಅಂತರ್ದಧೇ ಮೃಕಂಡುಶ್ಚ ತಪಸಾ ಸಮವರ್ತತ ॥ ೯೯ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ಭಕ್ತಿವರ್ಣನಪ್ರಸಂಗೇನ ಮಾರ್ಕಂಡೇಯಚರಿತಾರಂಭೋ
ನಾಮ ಚತುರ್ಥೋಽಧ್ಯಾಯಃ

---

೯೬. ಜ್ಞಾನಿಗಳು ವಿಷ್ಣುವು ಯಾವಾಗಲೂ ಭಕ್ತರೆಂಬ ಸಂಸಾರವುಳ್ಳವನೆಂದು ಹೇಳುತ್ತಾರೆ. ಸಜ್ಜನರು ಸುಳ್ಳು ಹೇಳುವುದಿಲ್ಲ. ಆದುದರಿಂದ ನಾನು ಅದನ್ನೇ ಪಾಲಿಸುತ್ತೇನೆ.

೯೭. ಆದಕಾರಣ ನಿನ್ನ ತಪಸ್ಸಿನಿಂದ ಪ್ರಸನ್ನನಾದ ನಾನು ಸಕಲ ಗುಣಪೂರ್ಣನು, ಚಿರಂಜೀವಿಯು, ಒಳ್ಳೆಯರೂಪವಂತನೂ ಆಗಿ ನಿನ್ನ ಮಗನಾಗಿ ಅವತರಿಸುತ್ತೇನೆ.

೯೮. ಎಲೈ ಋಷಿಶ್ರೇಷ್ಠನೇ ಯಾವ ಕುಲದಲ್ಲಿ ನಾನು ಜನ್ಮವನ್ನು ತಾಳುವೆನೋ, ಆ ವಂಶಪರಂಪರೆಯೆಲ್ಲವೂ ಮೋಕ್ಷವನ್ನು ಹೊಂದುತ್ತದೆ. ನಾನು ಪ್ರಸನ್ನನಾದರೆ ಈ ಮೂರುಲೋಕಗಳಲ್ಲಿಯೂ ಯಾವುದುತಾನೇ ಅಸಾಧ್ಯವಾದೀತು ? ಭಗವಂತನು ಪ್ರಸನ್ನನಾದರೆ ಎಲ್ಲವೂ ಸಿದ್ಧಿಸುತ್ತದೆಂದು ತಾತ್ಪರ್ಯ.

೯೯. ದೇವೋತ್ತಮನಾದ ಹರಿಯು ಈಪ್ರಕಾರವಾಗಿ ಹೇಳಿ ಮುನಿಯು ತನ್ನನ್ನು ನೋಡುತ್ತಿರುವಾಗಲೇ ಅದೃಶ್ಯನಾದನು. ಮೃಕಂಡುಮುನಿಯೂ ಸಹ ತಪಸ್ಸನ್ನು ಅನುವರ್ತಿಸಿದನು.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದ
ದಲ್ಲಿ ಭಕ್ತಿವರ್ಣನೆಯ ಪ್ರಸಂಗದಿಂದ ಮಾರ್ಕಂಡೇಯನ ಚರಿತ್ರಕಥನ
ರೂಪವಾದ ನಾಲ್ಕನೆಯ ಅಧ್ಯಾಯವು ಮುಗಿದುದು.

---

## ಕಥಾಸಂಗ್ರಹ.

ಆದಿಯಲ್ಲಿ ಭಕ್ತಿಯನ್ನು ಬಹಳವಾಗಿ ಹೊಗಳಿ ಸಕಲ ಕರ್ಮಗಳನ್ನೂ ಭಕ್ತಿಯಿಂದಲೇ ಮಾಡಬೇಕು; ಭಕ್ತಿಯಿಲ್ಲದೆ ಮಾಡಿದ ಕರ್ಮಗಳೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತೆ ನಿಷ್ಫಲವಾಗುತ್ತದೆಂದು ಹೇಳಿದೆ. ಅನಂತರ ಸನತ್ಕುಮಾರರು ನಾರದರನ್ನು ಕುರಿತು ಭಗವದ್ಭಕ್ತರ ಲಕ್ಷಣ, ಕರ್ಮ, ಚೇಷ್ಟಾ ಮುಂತಾದವುಗಳನ್ನು ಪ್ರಶ್ನಿಸಲು ಅದಕ್ಕೆ ಉತ್ತರವಾಗಿ ನಾರದರು ಭಕ್ತಾಗ್ರೇಸರ ನಾದ ಮಾರ್ಕಂಡೇಯನ ಕಥೆಯನ್ನು ಹೇಳಿದರು. ಎಂತೆಂದರೆ :—

ಮೃಕಂಡು ಎಂಬ ಋಷಿಯು ಸಾಲಿಗ್ರಾಮನಾಮಕವಾದ ಮಹಾತೀರ್ಥ ದಲ್ಲಿ ಅನೇಕ ಸಹಸ್ರ ವರ್ಷಗಳು ತಪಸ್ಸುಮಾಡುತ್ತಿದ್ದನು. ಇಂದ್ರಾದಿದೇವತೆ ಗಳು ಅದರಿಂದ ತಮಗೇನಾದರೂ ತೊಂದರೆಯಾದೀತೆಂಬ ಭಯಶಂಕೆಯಿಂದ ಕ್ಷೀರಸಮುದ್ರದ ಉತ್ತರತೀರಕ್ಕೆ ಹೋಗಿ ನಾರಾಯಣನನ್ನು ಶರಣುಹೊಂದಿ ಬಹುವಿಧವಾಗಿ ಸ್ತೋತ್ರಮಾಡಿದರು. ಅದರಿಂದ ಸಂತುಷ್ಟನಾದ ನಾರಾಯಣನು ನಿಮ್ಮ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ; ಸಜ್ಜನನಾದ ಮೃಕಂಡುವಿನಿಂದ ನಿಮಗೆ ಯಾವ ಬಾಧೆಯೂ ಸಂಭವಿಸುವುದಿಲ್ಲವೆಂಬುದಾಗಿ ದೇವತೆಗಳಿಗೆ ಅಭಯವನ್ನಿತ್ತು ಸಮಾಧಿಯಲ್ಲಿದ್ದ ಮೃಕಂಡುಮುನಿಗೂ ಸಹ ಪ್ರತ್ಯಕ್ಷನಾದನು. ಮೃಕಂಡುವಾದರೋ ತಾನು ಧ್ಯಾನಿಸುತ್ತಿದ್ದ ಭಗವದ್ರೂ ಪವೇ ಸಾಕ್ಷಾತ್ತಾಗಿ ಎದುರಿಗೆ ಬಂದಿರುವುದನ್ನು ಕಂಡು, ಆಶ್ಚರ್ಯಚಕಿತನಾಗಿ ರೋಮಾಂಚದಿಂದ ಕೈಮುಗಿದು ನಿಂತು ಸ್ತೋತ್ರಮಾಡಿದನು. ಅದರಿಂದ ಪ್ರಸ ನ್ನನಾದ ನಾರಾಯಣನು ವರವನ್ನು ಕೇಳು ಕೊಡುತ್ತೇನೆಂಬುದಾಗಿ ಹೇಳಲು, ಆ ಮುನಿಯು ಭಗವಂತನೇ! ನಿನ್ನ ನಾಮಸ್ಮರಣಮಾತ್ರದಿಂದಲೇ ವೈಕುಂಠಾದಿ ಶ್ರೇಷ್ಠಸ್ಥಾನವು ಲಭಿಸುವಾಗ ನೀನೇ ಸಾಕ್ಷಾತ್ತಾಗಿ ನನಗೆ ದರ್ಶನ ಕೊಟ್ಟಿರುವೆ ಯಾದಕಾರಣ ನಾನು ಧನ್ಯನಾದೆನು. ಇದಕ್ಕಿಂತ ನಾನು ಕೇಳಬೇಕಾದ ವರವೇ ನಿದೆ ? ಎಂಬುದಾಗಿ ಹೇಳಿದನು. ಭಗವಂತನು ಅವನ ನಿಸ್ಪೃಹತೆಗೆ ಮೆಚ್ಚಿ, ನಾನೇ ನಿನ್ನ ಮಗನಾಗಿ ಅವತರಿಸಿ ನಿನ್ನ ಕುಲವನ್ನೇ ಪಾವನಮಾಡುತ್ತೇನೆಂದು ವರ ಕೊಟ್ಟು ಅದೃಶ್ಯನಾದನು. ಎಂಬಲ್ಲಿ ಈ ಅಧ್ಯಾಯವು ಕೊನೆಗೊಂಡಿದೆ.

## ಪಂಚಮೋಽಧ್ಯಾಯಃ

---

ನಾರದ ಉವಾಚ

ಬ್ರಹ್ಮನ್ ಕಥಂ ಸ ಭಗವಾನ್ ಮೃಕಂಡೋಃ ಪುತ್ರತಾಂಗತಃ ।
ಕಿಂ ಚಕಾರ ಚ ತದ್ಬ್ರೂಹಿ ಹರಿರ್ಭಾರ್ಗವವಂಶಜಃ ॥ ೧

ಸನಕ ಉವಾಚ

ಶೃಣು ನಾರದ ವಕ್ಷ್ಯಾಮಿ ಕಥಾಮೇತಾಂ ಸನಾತನೀಂ ।
ವಿಷ್ಣುಭಕ್ತಿಸಮಾಯುಕ್ತಾಂ ಮಾರ್ಕಂಡೇಯ ಮುನಿಂ ಪ್ರತಿ ॥ ೨ ॥

ತಪಸೋಽಂತೇ ಮೃಕಂಡುಸ್ತು ಭಾರ್ಯಾಮುದ್ವಾಹ್ಯ ಸತ್ತಮಃ ।
ಗಾರ್ಹಸ್ಥ್ಯಮಕರೋದ್ಧೃಷ್ಟಃ ಶಾಂತೋದಾಂತಃ ಕೃತಾರ್ಥಕಃ ॥ ೩ ॥

---

### ಐದನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ—ಬ್ರಹ್ಮಜ್ಞಾನಿಯಾದ ಸನಕನೇ ! ಭಾರ್ಗವಕುಲೋತ್ಪನ್ನನಾದ ಆ ಭಗವಂತನು ಮೃಕಂಡುಮುನಿಯ ಪುತ್ರನಾದ ಬಗೆ ಹೇಗೆ ? ಆಗ ಮಾಡಿದ ವಿಶೇಷಕಾರ್ಯವಾದರೂ ಏನು ? ಇವುಗಳೆಲ್ಲವನ್ನೂ ಹೇಳು.

೨. ಸನಕನು ಹೇಳಿದನು–ನಾರದನೇ ! ಕೇಳು, ಮಾರ್ಕಂಡೇಯಮುನಿವಿಷಯಕವಾದ, ವಿಷ್ಣುಭಕ್ತಿಪೂರಿತವಾದ ಅನಾದಿಕಥೆಯನ್ನು ಹೇಳುತ್ತೇನೆ.

೩. ಸಜ್ಜನೋತ್ತಮನಾದ ಮೃಕಂಡುಋಷಿಯಾದರೋ ತಪಸ್ಸನ್ನು ಮುಗಿಸಿ, ಮದುವೆಯನ್ನು ಮಾಡಿಕೊಂಡು ಶಮದಮಾದಿಯುಕ್ತನಾಗಿ ಕೃತಾರ್ಥನಾಗಲು ಸಂತೋಷದಿಂದ ಸಂಸಾರಮಾಡಿದನು.

ತಸ್ಯ ಭಾರ್ಯಾ ಶುಚಿರ್ದಕ್ಷಾ ನಿತ್ಯಂ ಪತಿಪರಾಯಣಾ ।
ಮನಸಾ ವಚಸಾ ಚಾಪಿ ದೇಹೇನ ಚ ಪತಿವ್ರತಾ ॥ ೪ ॥

ಕಾಲೇ ದಧಾರ ಸಾ ಗರ್ಭಂ ಹರಿತೇಜೋಂಶಸಂಭವಂ ।
ಸುಷುವೇ ದಶಮಾಸಾಂತೇ ಪುತ್ರಂ ತೇಜಸ್ವಿನಂ ಪರಂ ॥ ೫ ॥

ಸ ಋಷಿಃ ಪರಮಪ್ರೀತೋ ದೃಷ್ಟ್ವಾ ಪುತ್ರಂ ಸುಲಕ್ಷಣಂ ।
ಜಾತಕಂ ಕಾರಯಾಮಾಸ ಮಂಗಲಂ ವಿಧಿಪೂರ್ವಕಂ ॥ ೬ ॥

ಸ ಬಾಲೋ ವವೃಧೇ ತತ್ರ ಶುಕ್ಲಪಕ್ಷ ಇವೋಡುಪಃ ।
ತತಸ್ತು ಪಂಚಮೇ ವರ್ಷೇ ಉಪನೀಯ ಮುದಾನ್ವಿತಃ ॥ ೭ ॥

ಶಿಕ್ಷಾಂ ಚಕಾರ ವಿಪ್ರೇಂದ್ರ ವೈದಿಕೀಂ ಧರ್ಮಸಂಹಿತಾಂ ।
ನಮಸ್ಕಾರ್ಯಾ ದ್ವಿಜಾಃ ಪುತ್ರ ಸದಾ ದೃಷ್ಟ್ವಾ ವಿಧಾನತಃ ॥ ೮ ॥

---

೪. ಆ ಮೃಕಂಡುವಿಗೆ ಪರಿಶುದ್ಧಳು, ಸಮರ್ಥಳು, ಯಾವಾಗಲೂ ಪತಿಯನ್ನೇ ನೆನೆಯುತ್ತಿರುವವಳೂ, ಮನಸ್ಸು, ವಾಕ್ಕು, ಶಾರೀರವ್ಯಾಪಾರ ಇವುಗಳೆಲ್ಲದರಿಂದಲೂ ಪತಿಸೇವೆಯನ್ನೇ ಮಾಡುವವಳೂ ಆದ ಹೆಂಡತಿಯಿದ್ದಳು.

೫. ಆಕೆಯು ಕಾಲಕ್ರಮವಾಗಿ ವಿಷ್ಣುವಿನ ತೇಜೋಂಶಗಳಿಂದುಂಟಾದ ಗರ್ಭವನ್ನು ಧರಿಸಿದಳು. ಗರ್ಭಿಣಿಯಾದ ಹತ್ತು ತಿಂಗಳಾದಮೇಲೆ ವರ್ಚಸ್ವಿಯಾದ ಉತ್ತಮನಾದ ಮಗನನ್ನು ಹಡೆದಳು.

೬. ಆ ಋಷಿಯು ಸಲ್ಲಕ್ಷಣಯುಕ್ತನಾದ ಮಗನನ್ನು ನೋಡಿ, ಅತ್ಯಂತ ಸಂತುಷ್ಟನಾಗಿ ಶಾಸ್ತ್ರೋಕ್ತಪ್ರಕಾರ ಮಂಗಳಕರವಾದ ಜಾತಕರ್ಮಾದಿಗಳನ್ನು ಮಾಡಿಸಿದನು.

೭. ಆ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ಕ್ರಮವಾಗಿ ಅಭಿವೃದ್ಧಿಯನ್ನು ಹೊಂದಿದನು. ತರುವಾಯ ಐದನೆಯ ವರ್ಷದಲ್ಲಿ ಸಂತೋಷದಿಂದ ಉಪನಯನ ಮಾಡಿದನು.

೮-೧೨. ಬಳಿಕ ವೇದೋಕ್ತವಾದ ಧರ್ಮಸಂಹಿತೆಗಳನ್ನು ಅಧ್ಯಯನ ಮಾಡಿಸಿದನು. "ಮಗನೇ ! ಬ್ರಾಹ್ಮಣರನ್ನು ಕಂಡರೆ ವಿಧ್ಯುಕ್ತಪ್ರಕಾರವಾಗಿ

ತ್ರಿಕಾಲಂ ಸೂರ್ಯಮಭ್ಯರ್ಚ್ಯ ಸಲಿಲಾಂಜಲಿದಾನತಃ ।
ವೈದಿಕಂ ಕರ್ಮ ಕರ್ತವ್ಯಂ ವೇದಾಧ್ಯಯನಪೂರ್ವಕಂ ॥ ೯ ॥

ಬ್ರಹ್ಮಚರ್ಯೇಣ ತಪಸಾ ಪೂಜನೀಯೋ ಹರಿಃ ಸದಾ ।
ನಿಷಿದ್ಧಂ ವರ್ಜನೀಯಂ ಸ್ಯಾದ್ದುಷ್ಟಸಂಭಾಷಣಾದಿಕಂ ॥ ೧೦ ॥

ಸಾಧುಭಿಃ ಸಹ ವಸ್ತವ್ಯಂ ವಿಷ್ಣುಭಕ್ತಿಪರೈಃ ಸದಾ ।
ನ ದ್ವೇಷಃ ಕಸ್ಯಚಿತ್ಕಾರ್ಯಃ ಸರ್ವೇಷಾಂ ಹಿತಮಾಚರೇತ್ ॥ ೧೧ ॥

ಇಜ್ಯಾಧ್ಯಯನದಾನಾನಿ ಸದಾ ಕಾರ್ಯಾಣಿ ತೇ ಸುತ ।
ಏವಂ ಪಿತ್ರಾ ಸಮಾದಿಷ್ಟೋ ಮಾರ್ಕಂಡೇಯೋ ಮುನೀಶ್ವರಃ ॥ ೧೨ ॥

ಚಚಾರ ಧರ್ಮಂ ಸತತಂ ಸದಾ ಸಂಚಿಂತಯನ್ ಹರಿಂ ।
ಮಾರ್ಕಂಡೇಯೋ ಮಹಾಭಾಗೋ ದಯಾವಾನ್ ಧರ್ಮವತ್ಸಲಃ ॥ ೧೩ ॥

---

ಅವರಿಗೆ ನಮಸ್ಕಾರಮಾಡಬೇಕು. ಪ್ರಾತರ್ಮಧ್ಯಾಹ್ನಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿಯೂ ಉದಕದಿಂದ ಅರ್ಘ್ಯಪ್ರದಾನಪೂರ್ವಕವಾಗಿ ಸೂರ್ಯನನ್ನು ಪೂಜಿಸಿ, ವೇದಾಧ್ಯಯನಮಾಡುತ್ತಾ ವೇದೋಕ್ತವಾದ ಕರ್ಮಗಳನ್ನು ಆಚರಿಸಬೇಕು. ‘ಬ್ರಹ್ಮಚರ್ಯದಿಂದಲೂ, ತಪಸ್ಸಿನಿಂದಲೂ ಸರ್ವದಾ ಹರಿಯನ್ನು ಪೂಜಿಸಬೇಕು. ನಿಷಿದ್ಧವಾದ ದುರ್ಜನರೊಡನೆ ಸಂಭಾಷಣ ಮುಂತಾದುವನ್ನು ಪರಿತ್ಯಾಗಮಾಡಬೇಕು. ಯಾವಾಗಲೂ ವಿಷ್ಣುಭಕ್ತರಾದ ಸಜ್ಜನರ ಸಹವಾಸಮಾಡಬೇಕು. ಯಾರನ್ನೂ ದ್ವೇಷಿಸಕೂಡದು ಸರ್ವರಿಗೂ ಹಿತವನ್ನೇ ಮಾಡಬೇಕು. ಯಾಗ, ವೇದಾಧ್ಯಯನ, ದಾನವುಗಳು ಸರ್ವದಾ ಆಚರಿಸಲ್ಪಡಬೇಕು’’ ಎಂಬುದಾಗಿ ತಂದೆಯು ಋಷಿಶ್ರೇಷ್ಠನಾದ ಮಾರ್ಕಂಡೇಯನಿಗೆ ಉಪದೇಶಿಸಿದನು.

೧೩-೧೫. ಅವನು ಯಾವಾಗಲೂ ವಿಷ್ಣುವನ್ನು ಧ್ಯಾನಿಸುತ್ತಾ ಸರ್ವದಾ ಧರ್ಮಾನುಷ್ಠಾನತತ್ಪರನಾಗಿದ್ದನು. ಮಾನ್ಯನು, ದಯಾಳುವು, ಧರ್ಮಾಭಿಮಾನಿಯು, ಆತ್ಮಗುಣಸಂಪನ್ನನು, ಸತ್ಯವಾಕ್ಕನ್ನೇ ನುಡಿಯುವವನು,

ಆತ್ಮವಾನ್ ಸತ್ಯಸಂಧಶ್ಚ ಮಾರ್ತಾಂಡಸದೃಶಪ್ರಭಃ ।
ವಶೀ ಶಾಂತೋ ಮಹಾಜ್ಞಾನೀ ಸರ್ವತತ್ತ್ವಾರ್ಥಕೋವಿದಃ ॥ ೧೪ ॥

ತಪಶ್ಚಚಾರ ಪರಮಮಚ್ಯುತಪ್ರೀತಿಕಾರಣಂ ।
ಆರಾಧಿತೋ ಜಗನ್ನಾಥೋ ಮಾರ್ಕಂಡೇಯೇನ ಧೀಮತಾ ॥ ೧೫ ॥

ಪುರಾಣಸಂಹಿತಾನ್ ಕರ್ತುಂ ದತ್ತವಾನ್ ವರಮಚ್ಯುತಃ ।
ಮಾರ್ಕಂಡೇಯೋ ಮುನಿಸ್ತಸ್ಮಾನ್ನಾರಾಯಣ ಇತಿ ಸ್ಮೃತಃ ॥ ೧೬ ॥

ಚಿರಜೀವೀ ಮಹಾಭಕ್ತೋ ದೇವದೇವಸ್ಯ ಚಕ್ರಿಣಃ ।
ಜಗತ್ಯೇಕಾರ್ಣವೀಭೂತೇ ಸ್ವಪ್ರಭಾವಂ ಜನಾರ್ದನಃ ॥ ೧೭ ॥

ತಸ್ಯ ದರ್ಶಯಿತುಂ ವಿಪ್ರಾಸ್ತಂ ನ ಸಂಹೃತವಾನ್ ಹರಿಃ ।
ಮೃಕಂಡುತನಯೋ ಧೀಮಾನ್ವಿಷ್ಣುಭಕ್ತಿಸಮನ್ವಿತಃ ॥ ೧೮ ॥

---

ಸೂರ್ಯನಿಗೆ ಸಮನಾದ ತೇಜಸ್ಸುಳ್ಳವನು, ಜಗತ್ತನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು, ಶಾಂತನು, ದೊಡ್ಡಜ್ಞಾನಿಯು, ಸಕಲತತ್ತ್ವಾರ್ಥಗಳಲ್ಲಿ ಪಂಡಿತನೂ ಆಗಿರುವ ಮಾರ್ಕಂಡೇಯನು, ನಾಶರಹಿತನಾದ ಹರಿಯ ಪ್ರೀತಿಗೆ ಕಾರಣವಾದ, ಉತ್ತಮ ತಪಸ್ಸನ್ನು ಮಾಡಿ ಜ್ಞಾನಿಯಾದ ಅವನು ಜಗತ್ತಿಗೊಡೆಯನಾದ ಭ[illegible]ತನನ್ನು ಆರಾಧಿಸಿದನು.

೧೬–೧[illegible] ಆತನಿಗೆ ಅಚ್ಯುತನು ಪುರಾಣಸಂಹಿತೆಯನ್ನು ಮಾಡಲು ವರವನ್ನು ಕೊಟ್ಟ[illegible] ಆದುದರಿಂದ ಚಿರಂಜೀವಿಯೂ, ಚಕ್ರಾಯುಧಧಾರಿಯಾದ ದೇವೋತ್ತಮನ ಪರಮಭಕ್ತನೂ ಆದ ಮಾರ್ಕಂಡೇಯನು ನಾರಾಯಣನೆಂಬುದಾಗಿ [illegible]ಟ್ಟಿದೆ ಎಂದರೆ ಪುರಾಣಕರ್ತೃತ್ವವು ವೇದವ್ಯಾಸರೂಪಿಯಾದ ನಾರಾಯಣನಿಗೆ ಪ್ರಸಿದ್ಧವಾಗಿದೆ. ನಾರಾಯಣನು ತನ್ನ ಧರ್ಮವಾದ ಪುರಾಣಕರ್ತೃತ್ವವನ್ನು ಮಾರ್ಕಂಡೇಯನಿಗೆ ಕೊಟ್ಟದ್ದರಿಂದ ಆತನು ಸಾಕ್ಷಾನ್ನಾರಾಯಣನೆಂಬುದಾಗಿ ಅಲ್ಲಲ್ಲಿ ಹೇಳಲ್ಪಟ್ಟಿದೆಯೆಂದು ತಾತ್ಪರ್ಯ. ಜನಾರ್ದನನು ಪ್ರಳಯಕಾಲದಲ್ಲಿ ಜಗತ್ತೆಲ್ಲವೂ ಸಮುದ್ರಮಯವಾದಾಗ, ತನ್ನ ಸಾಮರ್ಥ್ಯಾತಿಶಯವನ್ನು ಆ ಮಾರ್ಕಂಡೇಯನಿಗೆ ತೋರಿಸುವುದಕ್ಕೋಸ್ಕರ ಅವನನ್ನು ಸಂಹ

ತಸ್ಮಿನ್ ಜಲೇ ಮಹಾಘೋರೇ ಸ್ಥಿತವಾನ್ ಶೀರ್ಣಪತ್ರವತ್ ।
ಮಾರ್ಕಂಡೇಯಃ ಸ್ಥಿತಸ್ತಾವದ್ಯಾವಚ್ಛೇತೇ ಹರಿಃ ಸ್ವಯಂ ॥ ೧೯ ॥

ತಸ್ಯ ಪ್ರಮಾಣಂ ವಕ್ಷ್ಯಾಮಿ ಕಾಲಸ್ಯ ವದತಃ ಶೃಣು ।
ದಶಭಿಃ ಪಂಚಭಿಶ್ಚೈವ ನಿಮೇಷೈಃ ಪರಿಕೀರ್ತಿತಾ ॥ ೨೦ ॥

ಕಾಷ್ಠಾ ತತ್ತ್ರಿಂಶತಾ ಜ್ಞೇಯಾ ಕಲಾ ಪದ್ಮಜನಂದನ ।
ತತ್ತ್ರಿಂಶತಾ ಕ್ಷಣೋ ಜ್ಞೇಯಸ್ತೈಃ ಷಡ್ಭಿರ್ಘಟಿಕಾ ಸ್ಮೃತಾ ॥ ೨೧ ॥

ತದ್ದ್ವಯೇನ ಮುಹೂರ್ತಂ ಸ್ಯಾದ್ದಿನಂ ತತ್ತ್ರಿಂಶತಾ ಭವೇತ್ ।
ತ್ರಿಂಶದ್ದಿನೈರ್ಭವೇನ್ಮಾಸಃ ಪಕ್ಷದ್ವಿತಯಸಂಯುತಃ ॥ ೨೨ ॥

ಋತುರ್ಮಾಸದ್ವಯೇನ ಸ್ಯಾತ್ತತ್ತ್ರಯೇಣಾಯನಂ ಸ್ಮೃತಂ ।
ತದ್ದ್ವಯೇನ ಭವೇದಬ್ದಃ ಸ ದೇವಾನಾಂ ದಿನಂ ಭವೇತ್ ॥ ೨೩ ॥

---

ರಿಸಲಿಲ್ಲ. ಮೃಕಂಡುಕುಮಾರನು, ಜ್ಞಾನಿಯು, ವಿಷ್ಣುಭಕ್ತಿಯುಳ್ಳವನೂ ಆದ ಮಾರ್ಕಂಡೇಯನು, ಮಹಾಭಯಂಕರವಾದ ಆ ಪ್ರಳಯೋದಕದಲ್ಲಿ ವಿಷ್ಣುವು ಮಲಗಿರುವವರೆಗೂ ತಾನು ಎಲೆಯಚೂರುಗಳಂತೆ ತೇಲಾಡುತ್ತಿದ್ದನು.

೨೦. ಆರೀತಿಯಾಗಿ ಪ್ರಳಯೋದಕದಲ್ಲಿ ವಾಸವಾಗಿದ್ದ ಕಾಲದ ಪರಿಮಿತಿಯನ್ನು ಹೇಳುತ್ತೇನೆ ಕೇಳು. ಬ್ರಹ್ಮಕುಮಾರನಾದ ನಾರದನೇ! ಹದಿನೈದುಸಾವಿರ ಸಾರಿ ರೆಪ್ಪೆ ಆಡಿಸುವಷ್ಟು ಹೊತ್ತಿಗೆ ಕಾಷ್ಠೆಯೆಂದು ಹೆಸರು.

೨೧. ಅಂತಹ ಮೂವತ್ತು ಕಾಷ್ಠೆಗಳು ಕಲೆಯೆನಿಸಿಕೊಳ್ಳುತ್ತವೆ. ಅಂತಹ ಮೂವತ್ತು ಕಲೆಗಳು ಸೇರಿ ಒಂದು ಕ್ಷಣವಾಗುತ್ತದೆ, ಆರು ಕ್ಷಣಗಳು ಒಂದು ಘಳಿಗೆಯು.

೨೨. ಎರಡು ಘಳಿಗೆಗಳು ಒಂದು ಮುಹೂರ್ತವೆನಿಸುವುವು, ಮೂವತ್ತು ಮುಹೂರ್ತಗಳು ಒಂದು ದಿನವಾಗುವುದು. ಮೂವತ್ತು ದಿನಗಳು ಒಂದು ತಿಂಗಳು, ಒಂದು ತಿಂಗಳಿಗೆ ಎರಡು ಪಕ್ಷಗಳು.

೨೩. ಎರಡು ತಿಂಗಳು ಒಂದು ಋತುವೆನಿಸಿಕೊಳ್ಳುವುದು. ಮೂರು ಋತುಗಳು ಸೇರಿ ಒಂದು ಅಯನವಾಗುತ್ತದೆ. ಎರಡು ಅಯನಗಳು ಕೂಡಿ ವರ್ಷವಾಗುತ್ತದೆ. ಅಂತಹ ಒಂದು ವರ್ಷವು ದೇವತೆಗಳಿಗೆ ಒಂದು ದಿನವಾಗುತ್ತದೆ.

ಉತ್ತರಂ ದಿವಸಂ ಪ್ರಾಹೂ ರಾತ್ರಿರ್ವೈ ದಕ್ಷಿಣಾಯನಂ ।
ಮಾನುಷೇಣೈವ ಮಾಸೇನ ಪಿತೄಣಾಂ ದಿನಮುಚ್ಯತೇ ॥ ೨೪ ॥

ತಸ್ಮಾತ್ಸೂರ್ಯೇಂದುಸಂಯೋಗೋ ಜ್ಞಾತವ್ಯಂ ಕಲ್ಪಮುತ್ತಮಂ ।
ದಿವ್ಯೈರ್ವರ್ಷಸಹಸ್ರೈರ್ದ್ವಾದಶಭಿರ್ದೈವತಂ ಯುಗಂ ॥ ೨೫ ॥

ದೈವೇ ಯುಗಸಹಸ್ರೇ ದ್ವೇ ಬ್ರಾಹ್ಮಃ ಕಲ್ಪೌ ತು ತೌ ನೃಣಾಂ ।
ಏಕಸಪ್ತತಿಸಂಖ್ಯಾತೈರ್ದಿವ್ಯೈರ್ಮನ್ವಂತರಂ ಯುಗೈಃ ॥ ೨೬ ॥

ಚತುರ್ದಶಭಿರೇತೈಶ್ಚ ಬ್ರಹ್ಮಣೋ ದಿವಸಂ ಮುನೇ ।
ಯಾವತ್ಪ್ರಮಾಣಂ ದಿವಸಂ ತಾವದ್ರಾತ್ರಿಃ ಪ್ರಕೀರ್ತಿತಾ ॥ ೨೭ ॥

---

೨೪. ದೇವತೆಗಳ ದಿನದಲ್ಲಿ ಹಗಲನ್ನು ಉತ್ತರಾಯಣವೆಂದೂ, ರಾತ್ರಿಯನ್ನು ದಕ್ಷಿಣಾಯನವೆಂದೂ, ಹೇಳುತ್ತಾರೆ. ಮನುಷ್ಯರ ಒಂದು ತಿಂಗಳು ಪಿತೃಗಳಿಗೆ ಒಂದು ದಿನವಾಗುತ್ತದೆ.

೨೫. ಆದಕಾರಣ ಅಮಾವಾಸ್ಯೆಯು ಪ್ರಶಸ್ತಕಲ್ಪವೆಂದು ತಿಳಿಯಬೇಕು. ದೇವಮಾನದ ಹನ್ನೆರಡು ಸಹಸ್ರ ವರ್ಷಗಳಿಗೆ ಒಂದು ದೇವಯುಗವೆಂದು ಹೆಸರು.

೨೬. ದೇವತೆಗಳ ಎರಡು ಸಹಸ್ರಯುಗಗಳು ಚತುರ್ಮುಖಬ್ರಹ್ಮನಿಗೆ ಅಹೋರಾತ್ರಿಪರಿಮಿತಕಾಲ. (ಒಂದು ದಿನವು.) ಆ ಚತುರ್ಮುಖನ ಅಹೋರಾತ್ರಿಗಳು ಮನುಷ್ಯರಿಗೆ ಸ್ಥಿತಿಪ್ರಳಯಕಾಲವು. ಎಂದರೆ ಬ್ರಹ್ಮನಹಗಲಿನಲ್ಲಿ ಜಗತ್ತಿಗೆ ಸ್ಥಿತಿಯೂ ರಾತ್ರಿಯಲ್ಲಿ ಪ್ರಳಯವೂ ಉಂಟಾಗುತ್ತದೆಂದು ತಾತ್ಪರ್ಯ. ದೇವತೆಗಳ ಎಪ್ಪತ್ತೊಂದು ಯುಗಗಳು ಒಂದು ಮನ್ವಂತರವೆನಿಸುತ್ತದೆ.

೨೭. ಋಷಿಯೇ! ಇಂತಹ ಹದಿನಾಲ್ಕು ಮನ್ವಂತರಗಳು ಬ್ರಹ್ಮನಿಗೆ ಒಂದು ದಿವಸವು. ದಿವಸವು (ಹಗಲು) ಎಷ್ಟು ಪರಿಮಿತಿಯುಳ್ಳದ್ದೋ ರಾತ್ರಿಯೂ ಸಹ ಅಷ್ಟೇ ಪರಿಮಿತಿಯುಳ್ಳದ್ದೆಂದು ಹೇಳಲ್ಪಟ್ಟಿದೆ.

ನಾಶಮಾಯಾತಿ ವಿಪ್ರೇಂದ್ರ ತಸ್ಮಿನ್ಕಾಲೇ ಜಗತ್ತ್ರಯಂ ।
ಮಾನುಷೇಣ ಸಹಸ್ರೇಣ ಯತ್ಪ್ರಮಾಣಂ ಭವೇಚ್ಛೃಣು　　॥ ೨೮ ॥

ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿವಸಂ ಮುನೇ ।
ತದ್ವನ್ಮಾಸೋ ವತ್ಸರಶ್ಚ ಜ್ಞೇಯಸ್ತಸ್ಯಾಪಿ ವೇಧಸಃ　　॥ ೨೯ ॥

ಪರಾರ್ಧದ್ವಯಕಾಲಸ್ತು ತನ್ಮತೇನ ಭವೇದ್ದ್ವಿಜಾಃ ।
ವಿಷ್ಣೋರಹಸ್ತು ವಿಜ್ಞೇಯಂ ತಾವದ್ರಾತ್ರಿಃ ಪ್ರಕೀರ್ತಿತಾ　　॥ ೩೦ ॥

ಮೃಕಂಡುತನಯಸ್ತಾವತ್ ಸ್ಥಿತಃ ಸಂಜೀರ್ಣಪತ್ರವತ್ ।
ತಸ್ಮಿನ್ ಘೋರೇ ಜಲಮಯೇ ವಿಷ್ಣುಶಕ್ತ್ಯುಪಬೃಂಹಿತಃ　　॥ ೩೧ ॥

ಆತ್ಮಾನಂ ಪರಮಂ ಧ್ಯಾಯನ್ ಸ್ಥಿತವಾನ್ ಹರಿಸನ್ನಿಧೌ ।
ಅಥ ಕಾಲೇ ಸಮಾಯಾತೇ ಯೋಗನಿದ್ರಾವಿಮೋಚಿತಃ　　॥ ೩೨ ॥

---

೨೮. ಎಲೈ ಬ್ರಾಹ್ಮಣಶ್ರೇಷ್ಠನೇ, ಆ ಚತುರ್ಮುಖನ ರಾತ್ರಿಕಾಲದಲ್ಲಿ ಮೂರು ಜಗತ್ತೂ ನಷ್ಟವಾಗುತ್ತದೆ. ಬ್ರಹ್ಮನ ಅಹೋರಾತ್ರಿಗಳು ಮನುಷ್ಯಮಾನದಿಂದ ಎಷ್ಟು ಸಹಸ್ರ ಪರಿಮಿತಿಯುಳ್ಳವೆಂಬುದನ್ನು ಹೇಳುತ್ತೇನೆ ಕೇಳು.

೨೯. ಸಾವಿರ ಆವೃತ್ತಿ ಕೃತಾದಿ ನಾಲ್ಕುಯುಗಗಳು ತಿರುಗಿದರೆ ಬ್ರಹ್ಮನಿಗೆ ಒಂದು ದಿವಸವಾಗುತ್ತದೆ. ಅಂತಹ ದಿನಗಳು ಮೂವತ್ತು ಕಳೆದರೆ ಒಂದು ಮಾಸ, ಹನ್ನೆರಡು ಮಾಸಗಳು ಒಂದು ವರ್ಷವೆಂದು ತಿಳಿಯಬೇಕು.

೩೦. ದ್ವಿಜರೇ! ಬ್ರಹ್ಮನ ಎರಡು ಪರಾರ್ಧಕಾಲವು ವಿಷ್ಣುವಿಗೆ ಹಗಲು, ಅಷ್ಟೇಪರಿಮಿತವಾದ ಕಾಲವು ರಾತ್ರಿ ಎಂಬುದಾಗಿ ತಿಳಿಯಬೇಕು.

೩೧. ಮಾರ್ಕಂಡೇಯನು ಆ ಭಯಂಕರವಾದ ಪ್ರಳಯೋದಕದಲ್ಲಿ ವಿಷ್ಣುಶಕ್ತಿಯ ಸಹಾಯದಿಂದ ಹರಿಸನ್ನಿಧಾನದಲ್ಲಿ ಪರಮಾತ್ಮನನ್ನು ಧ್ಯಾನ ಮಾಡುತ್ತಾ ಶಿಥಿಲವಾದ ಎಲೆಯಂತೆ ರಾತ್ರಿಯು ಕಳೆಯುವವರೆಗೂ ಇದ್ದನು.

೩೨-೩೫. ತರುವಾಯ ಸರಿಯಾದ ಸಮಯವು ಪ್ರಾಪ್ತವಾಗಲು ಆ ಭಗವಂತನು ಯೋಗನಿದ್ರೆಯಿಂದೆದ್ದು ಬ್ರಹ್ಮಾಂತರ್ಗತರೂಪದಿಂದ ಈ ಸಮಸ್ತ

ಸೃಷ್ಟವಾನ್ ಬ್ರಹ್ಮರೂಪೇಣ ಜಗದೇತಚ್ಚರಾಚರಂ ।
ಸಂಹೃತಂ ತು ಜಲಂ ವೀಕ್ಷ್ಯ ಸೃಷ್ಟಂ ವಿಶ್ವಂ ಮೃಕಂಡುಜಃ ॥ ೩೩ ॥

ವಿಸ್ಮಿತಃ ಪರಮಪ್ರೀತೋ ವವಂದೇ ಚರಣೌ ಹರೇಃ ।
ಶಿರಸ್ಯಂಜಲಿಮಾಧಾಯ ಮಾರ್ಕಂಡೇಯೋ ಮಹಾಮುನಿಃ ॥ ೩೪ ॥

ತುಷ್ಟಾವ ವಾಗ್ಭಿರಿಷ್ಟಾಭಿಃ ಸದಾನಂದೈಕವಿಗ್ರಹಂ ।
ಮಾರ್ಕಂಡೇಯ ಉವಾಚ
ಸಹಸ್ರಶಿರಸಂ ದೇವಂ ನಾರಾಯಣಮನಾಮಯಂ ॥ ೩೫ ॥

ವಾಸುದೇವಮನಾಧಾರಂ ಪ್ರಣತೋಽಸ್ಮಿ ಜನಾರ್ದನಂ ।
ಅಮೇಯಮಜರಂ ನಿತ್ಯಂ ಸದಾನಂದೈಕವಿಗ್ರಹಂ ॥ ೩೬ ॥

ಅಪ್ರತರ್ಕ್ಯಮನಿರ್ದೇಶ್ಯಂ ಪ್ರಣತೋಽಸ್ಮಿ ಜನಾರ್ದನಂ ।
ಅಕ್ಷರಂ ಪರಮಂ ನಿತ್ಯಂ ವಿಶ್ವಾಕ್ಷಂ ವಿಶ್ವಸಂಭವಂ ॥ ೩೭ ॥

---

ಚರಾಚರಾತ್ಮಕವಾದ ಪ್ರಪಂಚವನ್ನು ಸೃಷ್ಟಿಮಾಡಿದನು. ಮಾರ್ಕಂಡೇಯನು ಉದಕವನ್ನು ಹೋಗಲಾಡಿಸಿ, ಪ್ರಪಂಚವನ್ನು ಪುನಃ ಸೃಷ್ಟಿಮಾಡಿದುದನ್ನು ನೋಡಿ, ಆಶ್ಚರ್ಯಪಟ್ಟವನಾಗಿ ಬಹಳ ಸಂತೋಷದಿಂದ ಹರಿಯ ಚರಣಗಳಿಗೆ ನಮಸ್ಕರಿಸಿದನು. ಬಳಿಕ ಮಾರ್ಕಂಡೇಯಮುನಿವರನು ತಲೆಯಮೇಲೆ ಕೈ ಜೋಡಿಸಿ ಉತ್ಕೃಷ್ಟವಾದ ಕೇವಲ ಆನಂದಾತ್ಮಕಶರೀರವುಳ್ಳ ಭಗವಂತನನ್ನು ಇಷ್ಟವಾದ ವಾಕ್ಕುಗಳಿಂದ ಸ್ತುತಿಸಿದನು.

೩೫-೩೬. ಮಾರ್ಕಂಡೇಯನು ಹೇಳುತ್ತಾನೆ—ಸಾವಿರಶಿರಸ್ಸುಗಳುಳ್ಳವನು, ಕ್ರೀಡಾದಿಗುಣವಿಶಿಷ್ಟನು, ದೋಷರಹಿತನು, ವಸುದೇವಪುತ್ರನು, ಪರಾಶ್ರಯ ಮಾಡದಿರುವವನು, ಸಂಪೂರ್ಣವಾಗಿ ತಿಳಿಯಲಶಕ್ಯವಾದ ಸ್ವರೂಪವುಳ್ಳವನು, ವಾರ್ಧಕಾದಿ ದೋಷರಹಿತನು, ನಾಶವಿಲ್ಲದವನು, ಕೇವಲ ಸದಾನಂದಾತ್ಮಕ ಶರೀರವುಳ್ಳವನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

೩೭. ತರ್ಕ ಮತ್ತು ಶಬ್ದಗಳಿಂದ ಸಂಪೂರ್ಣವಾಗಿ ತಿಳಿಯಲಶಕ್ಯನು ಜಗತ್ಸೃಷ್ಟಿಕರ್ತನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ. ಪರಮಾಕ್ಷರ

ಸರ್ವತತ್ತ್ವಮಯಂ ಶಾಂತಂ ಪ್ರಣತೋಽಸ್ಮಿ ಜನಾರ್ದನಂ ।
ಪುರಾಣಂ ಪುರುಷಂ ಸಿದ್ಧಂ ಸರ್ವಜ್ಞಾನೈಕಭಾಜನಂ　　॥ ೩೮ ॥

ಪರಾತ್ಪರತರಂರೂಪಂ ಪ್ರಣತೋಽಸ್ಮಿ ಜನಾರ್ದನಂ ।
ಪರಂಜ್ಯೋತಿಃ ಪರಂಧಾಮ ಪವಿತ್ರಂ ಪರಮಂ ಪದಂ　　॥ ೩೯ ॥

ಸದೈಕರೂಪಂ ಪರಮಂ ಪ್ರಣತೋಽಸ್ಮಿ ಜನಾರ್ದನಂ ।
ತಂ ಸದಾನಂದಚಿನ್ಮಾತ್ರಂ ಪರ್ವಾಣಾಂ ಪರಮಂ ಪದಂ　　॥ ೪೦ ॥

ಸರ್ವಂ ಸನಾತನಂ ಶ್ರೇಷ್ಠಂ ಪ್ರಣತೋಽಸ್ಮಿ ಜನಾರ್ದನಂ ।
ಸಗುಣಂ ನಿರ್ಗುಣಂ ಶಾಂತಂ ಮಾಯಾತೀತಂ ಸುಮಾಯಿನಂ　　॥ ೪೧ ॥

---

ನಾಮುಕನು, ನಿತ್ಯನು ಜಗಚ್ಚಕ್ಷುವು, ಸಕಲ ಪದಾರ್ಥಗಳಲ್ಲಿಯೂ ಅಂತರ್ಯಾಮಿಯಾಗಿರುವವನು, ಶಾಂತಸ್ವರೂಪನು, ಪುರಾತನನು, ಪುರಷರೂಪಿಯು ಸಿದ್ಧನು, ಸಕಲವನ್ನೂ ಸಂಪೂರ್ಣವಾಗಿ ತಿಳಿದಿರುವವನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

೩೯. ಉತ್ತಮೋತ್ತಮನು, ಅದ್ಭುತರೂಪವುಳ್ಳವನು, ಉತ್ಕೃಷ್ಟಪ್ರಕಾಶ ಸ್ವರೂಪನು, ಉತ್ತಮವಾದ ವೈಕುಂಠಾದಿ ಸ್ಥಾನದಲ್ಲಿರುವವನು, ಪರಿಶುದ್ಧನು, ಶ್ರೇಷ್ಠನು, ಜ್ಞಾನಿಗಳಿಗೆ ಪ್ರಾಪ್ಯನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

೪೦. ಯಾವಾಗಲೂ ಒಂದೇವಿಧವಾಗಿರುವವನು, ಸವಿಾಚೀನಾನಂದ ಜ್ಞಾನವಮಾತ್ರಸ್ವರೂಪನು, ಉತ್ತಮರಾದ ದೇವತೆಗಳಿಗೆ ಮುಖ್ಯಪ್ರಾಪ್ಯನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

೪೧. ಸರ್ವಾಂತರ್ಗತನು, ಅನಾದಿಯೂ, ಶ್ರೇಷ್ಠನು, ಅಪ್ರಾಕೃತ ಗುಣವುಳ್ಳವನು, ಪ್ರಾಕೃತಗುಣಗಳಿಲ್ಲದವನು, ಸೌಮ್ಯನು, ಮಾಯೆಯನ್ನತಿ ಕ್ರಮಿಸಿರುವವನು, ಮಾಯೆಯನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

ಅರೂಪಂ ಬಹುರೂಪಂ ತಂ ಪ್ರಣತೋಽಸ್ಮಿ ಜನಾರ್ದನಂ ।
ಯತ್ರ ತದ್ಭಗವಾನ್ವಿಶ್ವಂ ಸೃಜತ್ಯವತಿ ಹಂತಿ ಚ ॥ ೪೨ ॥

ತಮಾದಿದೇವಮೀಶಾನಂ ಪ್ರಣತೋಽಸ್ಮಿ ಜನಾರ್ದನಂ ।
ಪರೇಶ ಪರಮಾನಂದ ಶರಣಾಗತವತ್ಸಲ ॥ ೪೩ ॥

ತ್ರಾಹಿ ಮಾಂ ಕರುಣಾಸಿಂಧೋ ಮನೋಽತೀತ ನಮೋಽಸ್ತು ತೇ ।
ಏವಂ ಸ್ತುವಂತಂ ವಿಪ್ರೇಂದ್ರಂ ಮಾರ್ಕಂಡೇಯಂ ಜಗದ್ಗುರುಂ ॥ ೪೪ ॥

ಉವಾಚ ಪರಯಾ ಪ್ರೀತ್ಯಾ ಶಂಖಚಕ್ರಗದಾಧರಃ ।

ಶ್ರೀಭಗವಾನುವಾಚ

ಲೋಕೇ ಭಾಗವತಾ ಯೇಚ ಭಗವದ್ಭಕ್ತಮಾನಸಾಃ ॥ ೪೫ ॥

ತೇಷಾಂ ತುಷ್ಟೋ ನ ಸಂದೇಹೋ ರಕ್ಷಾಮ್ಯೇತಾಂಶ್ಚ ಸರ್ವದಾ ।
ಅಹಮೇವ ದ್ವಿಜಶ್ರೇಷ್ಠ ನಿತ್ಯಂ ಪ್ರಚ್ಛನ್ನವಿಗ್ರಹಃ ॥ ೪೬ ॥

---

೪೧-೪೪. ಪ್ರಾಕೃತರೂಪವಿಲ್ಲದವನು, ಅಪ್ರಾಕೃತವಾದ ನಾನಾ ರೂಪಗಳುಳ್ಳವನೂ ಆದ ಆ ಜನಾರ್ದನಸ್ವಾಮಿಗೆ ನಮಸ್ಕಾರ, ಯಾವ ಭಗವಂತನು ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣನೋ ಅಂತಹ ಮೂಲ ದೇವತೆಯಾದ ಜನಾರ್ದನಸ್ವಾಮಿಯನ್ನು ನಮಸ್ಕರಿಸುತ್ತೇನೆ. ಉತ್ತಮರಾದ ದೇವತೆಗಳಿಗೊಡೆಯನು, ಉತ್ಕೃಷ್ಟಾನಂದಸ್ವರೂಪನೂ, ಶರಣುಹೊಂದಿದವರಲ್ಲಿ ಪ್ರೀತಿಮಾಡುವವನೂ, ದಯಾಸಮುದ್ರನೂ, ಮನಸ್ಸಿಗೂ ಗೋಚರನಾಗದಿರುವವನೂ ಆಗಿರುವ ನಿನಗೆ ನಮಸ್ಕಾರ ಮಾಡುವೆನು, ನನ್ನನ್ನು ಕಾಪಾಡು.

೪೪-೪೫. ಈರೀತಿಯಾಗಿ ಸ್ತೋತ್ರಮಾಡುತ್ತಿರುವ ಜಗತ್ತಿಗೆ ಉಪದೇಶಮಾಡುವ ವಿಪ್ರಶ್ರೇಷ್ಠನಾದ ಮಾರ್ಕಂಡೇಯನನ್ನು ಕುರಿತು ಶಂಖಚಕ್ರಗದಾಪಾಣಿಯಾದ ಭಗವಂತನು, ಪರಮಪ್ರೀತಿಯಿಂದ ಮುಂದೆ ಹೇಳುವ ಪ್ರಕಾರ ಹೇಳಿದನು.

೪೫-೪೭. ಭಗವಂತನು ಹೇಳಿದನು—ಲೋಕದಲ್ಲಿ ಯಾರು ಮನಃಪೂರ್ವಕವಾಗಿ ಭಗವಂತನಲ್ಲಿ ಭಕ್ತಿಯುಳ್ಳ ಭಾಗವತರೋ ಅಂತಹವನಿಗೆ

ಭಗವದ್ಭಕ್ತರೂಪೇಣ ಲೋಕಾನ್ರಕ್ಷಾಮಿ ಸರ್ವದಾ ।

ಮಾರ್ಕಂಡೇಯ ಉವಾಚ

ಕಿಂ ಲಕ್ಷಣಾ ಭಾಗವತಾ ಜಾಯಂತೇ ಕೇನ ಕರ್ಮಣಾ ।
ಏತದಿಚ್ಛಾಮ್ಯಹಂ ಶ್ರೋತುಂ ಕೌತೂಹಲಪರೋ ಯತಃ ॥ ೪೭ ॥

ಶ್ರೀಭಗವಾನುವಾಚ

ಲಕ್ಷಣಂ ಭಾಗವತಾನಾಂ ಶೃಣುಷ್ವ ಮುನಿಸತ್ತಮ ।
ವಕ್ತುಂ ತೇಷಾಂ ಪ್ರಭಾವಂ ಹಿ ಶಕ್ಯತೇ ನಾಬ್ದಕೋಟಿಭಿಃ ॥ ೪೮ ॥

ಯೇ ಹಿತಾಸ್ಸರ್ವಜಂತೂನಾಂ ಗತಾಸೂಯಾ ಅಮತ್ಸರಾಃ ।
ವಶಿನೋ ನಿಃಸ್ಪೃಹಾಃ ಶಾಂತಾಸ್ತೇವೈ ಭಾಗವತೋತ್ತಮಾಃ ॥ ೪೯ ॥

---

ನಾನು ಪ್ರಸನ್ನನಾಗಿ, ಯಾವಾಗಲೂ ಅವರನ್ನು ರಕ್ಷಿಸುತ್ತೇನೆ. ಸಂಶಯವಿಲ್ಲ. ದ್ವಿಜಶ್ರೇಷ್ಠನೇ! ಯಾವಾಗಲೂ ನಾನೇ ಭಗವದ್ಭಕ್ತರ ವೇಷದಿಂದ ಆಚ್ಛಾದಿತವಾದ ಶರೀರವುಳ್ಳವನಾಗಿ ಲೋಕಗಳನ್ನು ಸರ್ವಕಾಲದಲ್ಲಿಯೂ ಕಾಪಾಡುತ್ತೇನೆ.

೪೭. ಮಾರ್ಕಂಡೇಯನು ಹೇಳಿದನು—ಭಾಗವತರಿಗೆ ಲಕ್ಷಣವೇನು ? ಯಾವಕರ್ಮಪರಿಪಾಕದಿಂದ ಭಾಗವತರಾಗುತ್ತಾರೆ ? ಇದನ್ನು ನಾನು ಕುತೂಹಲದಿಂದ ತಿಳಿಯಲಪೇಕ್ಷಿಸುತ್ತೇನೆ.

೪೮. ಭಗವಂತನು ಹೇಳುತ್ತಾನೆ—ಸಾಧುತಮನಾದ ಮಾರ್ಕಂಡೇಯನೇ ! ಭಾಗವತರ ಲಕ್ಷಣವನ್ನು ಹೇಳುತ್ತೇನೆ ಕೇಳು. ಅವರ ಮಹಿಮೆಯನ್ನು ಬಹುಕೋಟಿವರ್ಷಗಳಾದಾಗ್ಯೂ ಸಂಪೂರ್ಣವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಭಗವದ್ಭಕ್ತರ ಮಹಿಮೆಯು ಅತಿಶಯವಾದುದೆಂದು ತಾತ್ಪರ್ಯ.

೪೯. ಯಾರು ಸಕಲಪ್ರಾಣಿಗಳಿಗೂ ಒಳ್ಳೆಯದನ್ನೇ ಮಾಡುತ್ತಾರೆಯೋ ಹೊಟ್ಟೇಕಿಚ್ಚು ಮತ್ತು ಮಾತ್ಸರ್ಯಗಳಿಲ್ಲದವರೋ, ಇಂದ್ರಿಯಗಳನ್ನು ಸ್ವಾಧೀನವಾಗಿಟ್ಟುಕೊಂಡಿರುವವರೋ ಆಶೆಯನ್ನು ಬಿಟ್ಟು ಶಾಂತಿಸಂಪನ್ನರಾಗಿರುತ್ತಾರೆಯೋ ಅಂತಹವರೇ ಭಾಗವತಶ್ರೇಷ್ಠರು.

ಕರ್ಮಣಾ ಮನಸಾ ವಾಚಾ ಪರಪೀಡಾಂ ನ ಕುರ್ವತೇ ।
ಅಪರಿಗ್ರಹಶೀಲಾಶ್ಚ ತೇ ವೈ ಭಾಗವತೋತ್ತಮಾಃ ॥ ೫೦ ॥

ಸತ್ಕಥಾಶ್ರವಣೇ ಯೇಷಾಂ ವರ್ತತೇ ಸಾತ್ವಿಕೀ ಮತಿಃ ।
ತದ್ಭಕ್ತವಿಶ್ವಭಕ್ತಾಶ್ಚ ತೇ ವೈ ಭಾಗವತೋತ್ತಮಾಃ ॥ ೫೧ ॥

ಮಾತಾಪಿತ್ರೋಶ್ಚ ಶುಶ್ರೂಷಾಂ ಕುರ್ವಂತಿ ಯೇ ನರೋತ್ತಮಾಃ ।
ಗಂಗಾವಿಶ್ವೇಶ್ವರಧಿಯಾ ತೇ ವೈ ಭಾಗವತೋತ್ತಮಾಃ ॥ ೫೨ ॥

ಯೇ ತು ದೇವಾರ್ಚನರತಾ ಯೇ ತು ತತ್ಸಾಧಕಾಃ ಸ್ಮೃತಾಃ ।
ಪೂಜಾಂ ದೃಷ್ಟ್ವಾನುಮೋದಂತೇ ತೇ ವೈ ಭಾಗವತೋತ್ತಮಾಃ ॥ ೫೩ ॥

ವ್ರತಿನಾಂ ಚ ಯತೀನಾಂ ಚ ಪರಿಚರ್ಯಾಪರಾಶ್ಚ ಯೇ ।
ವಿಯುಕ್ತಪರನಿಂದಾಶ್ಚ ತೇ ವೈ ಭಾಗವತೋತ್ತಮಾಃ ॥ ೫೪ ॥

---

೫೦. ತಾವು ಮಾಡುವ ಕೆಲಸದಿಂದ, ಆಡುವಮಾತಿನಿಂದ, ಮನಸ್ಸಿನ ಸಂಕಲ್ಪದಿಂದಲಾದರೂ ಇತರರಿಗೆ ಬಾಧಕವನ್ನು ಮಾಡದಿರುವವರು ಮತ್ತು ಅಯೋಗ್ಯರಿಂದ ದಾನವನ್ನು ತೆಗೆದುಕೊಳ್ಳದಿರುವವರು ಭಾಗವತಶ್ರೇಷ್ಠರು.

೫೧. ಯಾರಿಗೆ ಸಜ್ಜನರ ಕಥೆಯನ್ನು ಶ್ರವಣಮಾಡುವುದರಲ್ಲಿ ಸಾತ್ವಿಕವಾದ ಬುದ್ಧಿಯಿರುತ್ತದೆಯೋ, ಯಾರು ವಿಷ್ಣುಭಕ್ತಜನಗಳ ಭಕ್ತರೋ ಅಂತಹವರು ಭಾಗವತಶ್ರೇಷ್ಠರು.

೫೨. ಯಾವ ಉತ್ತಮಪುರುಷರು ತಾಯಿಯನ್ನು ಗಂಗೆಗೆ ಸಮಾನಳೆಂದೂ, ತಂದೆಯನ್ನು ವಿಶ್ವೇಶ್ವರನಿಗೆ ಸಮನೆಂದೂ, ತಿಳಿದು, ಅವರ ಸೇವೆಯನ್ನು ಮಾಡುತ್ತಾರೆಯೋ ಅವರು ಭಾಗವತಶ್ರೇಷ್ಠರು.

೫೩. ಯಾರು ದೇವರಪೂಜೆಯಲ್ಲಿನಿರತರೋ, ಯಾರುದೇವರಪೂಜೆಗೆ ಅನುಕೂಲವನ್ನು ಮಾಡುತ್ತಾರೆಯೋ, ಮತ್ತು ಪೂಜೆಯನ್ನು ನೋಡಿ ಸಂತೋಷಿಸುತ್ತಾರೆಯೋ ಅವರು ಭಾಗವತಶ್ರೇಷ್ಠರು.

೫೪. ಯಾರು ಇತರರನ್ನು ದೂಷಿಸದೇ ವ್ರತಾನುಷ್ಠಾನಪರರು ಮತ್ತು ಸಂನ್ಯಾಸಿಗಳು ಇವರುಗಳ ಸೇವೆಯಲ್ಲಿ ನಿರತರಾಗಿರುತ್ತಾರೆಯೋ ಅವರು ಭಾಗವತಶ್ರೇಷ್ಠರು.

ಸರ್ವೇಷಾಂ ಹಿತವಾಕ್ಯಾನಿ ಯೇ ವದಂತಿ ನರೋತ್ತಮಾಃ ।
ಯೇ ಗುಣಗ್ರಾಹಿಣೋ ಲೋಕೇ ತೇ ವೈ ಭಾಗವತೋತ್ತಮಾಃ ॥ ೫೫ ॥

ಆತ್ಮವತ್ಸರ್ವಭೂತಾನಿ ಯೇ ಪಶ್ಯಂತಿ ನರೋತ್ತಮಾಃ ।
ತುಲ್ಯಾಃ ಶತ್ರುಷು ಮಿತ್ರೇಷು ತೇ ವೈ ಭಾಗವತೋತ್ತಮಾಃ ॥ ೫೬ ॥

ಧರ್ಮಶಾಸ್ತ್ರಪ್ರವಕ್ತಾರಃ ಸತ್ಯವಾಕ್ಯರತಾಶ್ಚ ಯೇ ।
ಸತಾಂ ಶುಶ್ರೂಷವೋ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೭ ॥

ವ್ಯಾಕುರ್ವತೇ ಪುರಾಣಾನಿ ತಾನಿ ಶೃಣ್ವಂತಿ ಯೇ ತಥಾ ।
ತದ್ವಕ್ತರಿ ಚ ಭಕ್ತಾ ಯೇ ತೇ ವೈ ಭಾಗವತೋತ್ತಮಾಃ ॥ ೫೮ ॥

ಯೇ ಗೋಬ್ರಾಹ್ಮಣಶುಶ್ರೂಷಾಂ ಕುರ್ವತೇ ಸತತಂ ನರಾಃ ।
ತೀರ್ಥಯಾತ್ರಾಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೫೯ ॥

---

೫೫. ಯಾವ ಉತ್ತಮಪುರುಷರು ಎಲ್ಲರಿಗೂ ಹಿತವಚನವನ್ನೇ ನುಡಿಯುತ್ತಾರೆಯೋ, ಯಾರು ಪರಕೀಯರಲ್ಲಿ ಗುಣಾಂಶವನ್ನೇ ಗ್ರಹಿಸುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

೫೬. ಯಾವ ಉತ್ತಮಪುರುಷರು ಸಕಲಪ್ರಾಣಿಗಳನ್ನೂ ತನ್ನಂತೆಯೇ ನೋಡುತ್ತಾರೆಯೋ, ಶತ್ರುಮಿತ್ರರೆಂಬ ಭೇದವಿಲ್ಲದೆ ಎಲ್ಲರನ್ನೂ ಸಮವಾಗಿ ಭಾವಿಸುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

೫೭. ಯಾರು ಧರ್ಮಶಾಸ್ತ್ರವನ್ನು ಪಾಠಹೇಳುವವರೋ ನಿಜವನ್ನು ಹೇಳುವುದರಲ್ಲಿ ಆಸಕ್ತರೋ, ಮತ್ತು ಸಾಧುಗಳ ಸೇವೆಯನ್ನು ಮಾಡುವರೋ ಅಂತಹವರು ಭಾಗವತಶ್ರೇಷ್ಠರು.

೫೮. ಪುರಾಣಗಳನ್ನು ಹೇಳುವವರು, ಕೇಳುವವರು ಮತ್ತು ಪುರಾಣ ಹೇಳುವವರಲ್ಲಿ ಭಕ್ತರೂ ಸಹ ಭಾಗವತಶ್ರೇಷ್ಠರು.

೫೯. ಯಾವ ಮನುಷ್ಯರು ಗೋವು ಮತ್ತು ಬ್ರಾಹ್ಮಣರ ಸೇವೆಯನ್ನು ಮಾಡುತ್ತಾರೆಯೋ, ಯಾವಾಗಲೂ ತೀರ್ಥಯಾತ್ರೆಗಳಲ್ಲಿ ಆಸಕ್ತಿಯನ್ನು ಹೊಂದಿರುತ್ತಾರೆಯೋ ಅಂತಹವರು ಭಾಗವತಶ್ರೇಷ್ಠರು.

ಅನ್ಯೇಷಾಮುದಯಂ ದೃಷ್ಟ್ವಾ ಯೇಽಭಿನಂದಂತಿ ಮಾನವಾಃ ।
ಹರಿನಾಮಪರಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೬೦ ॥

ಆರಾಮಾರೋಪಣರತಾಸ್ತಟಾಕಪರಿರಕ್ಷಕಾಃ ।
ಕಾಸಾರಕೂಪಕರ್ತಾರಸ್ತೇ ವೈ ಭಾಗವತೋತ್ತಮಾಃ ॥ ೬೧ ॥

ಯೇ ವೈ ತಟಾಕಕರ್ತಾರೋ ದೇವಸದ್ಮಾನಿ ಕುರ್ವತೇ ।
ಗಾಯತ್ರೀನಿರತಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೬೨ ॥

ಯೇಽಭಿನಂದಂತಿ ನಾಮಾನಿ ಹರೇಃ ಶ್ರುತ್ವಾತಿಹರ್ಷಿತಾಃ ।
ರೋಮಾಂಚಿತಶರೀರಾಶ್ಚ ತೇ ವೈ ಭಾಗವತೋತ್ತಮಾಃ ॥ ೬೩ ॥

ತುಲಸೀಕಾನನಂ ದೃಷ್ಟ್ವಾ ಯೇ ನಮಸ್ಕುರ್ವತೇ ನರಾಃ ।
ತತ್ಕಾಷ್ಠಾಂಕಿತ ಕರ್ಣಾ ಯೇ ತೇ ವೈ ಭಾಗವತೋತ್ತಮಾಃ ॥ ೬೪ ॥

---

೬೦. ಯಾವ ಮನುಷ್ಯರು ಪರರ ಶ್ರೇಯಸ್ಸನ್ನು ನೋಡಿ ಸಂತೋಷ ಪಡುತ್ತಾರೆಯೋ, ಯಾರು ಭಗವನ್ನಾಮಸ್ಮರಣೆಯಲ್ಲಿ ನಿರತರೋ ಅವರು ಭಾಗವತಶ್ರೇಷ್ಠರು.

೬೧. ಗಿಡಗಳನ್ನು ಹಾಕಿಸಿ ತೋಟಗಳನ್ನು ನಿರ್ಮಾಣಮಾಡುವುದರಲ್ಲಿ ಆಸಕ್ತರು, ಕೆರೆಗಳನ್ನು ಕಾಪಾಡುವವರು ಮತ್ತು ಸರೋವರ, ಬಾವಿಗಳನ್ನು ನಿರ್ಮಿಸುವವರೂ ಸಹ ಭಾಗವತಶ್ರೇಷ್ಠರು.

೬೨. ಯಾರು ಕೆರೆಗಳನ್ನು ಕಟ್ಟಿಸುತ್ತಾರೆಯೋ, ದೇವಾಲಯಗಳನ್ನು ನಿರ್ಮಾಣಮಾಡುತ್ತಾರೆಯೋ, ಗಾಯತ್ರೀಮಂತ್ರಜಪಾದಿಗಳಲ್ಲಿ ನಿರತರೋ ಅವರು ಭಾಗವತಶ್ರೇಷ್ಠರು.

೬೩. ಯಾರು ಹರಿನಾಮಗಳನ್ನು ಕೇಳಿ ಅತ್ಯಂತವಾಗಿ ಸಂತೋಷವುಳ್ಳವರಾಗಿ ಅಭಿನಂದನೆ ಮಾಡುತ್ತಾರೆಯೋ ಮತ್ತು ಶರೀರದಲ್ಲಿ ರೋಮಾಂಚವನ್ನು ಹೊಂದುತ್ತಾರೆಯೋ ಅವರು ಭಾಗವತಶ್ರೇಷ್ಠರು.

೬೪. ತುಲಸಿಯ ತೋಟವನ್ನು ನೋಡಿ ಯಾವ ಮನುಜರು ನಮಸ್ಕಾರಮಾಡುತ್ತಾರೆಯೋ, ಮತ್ತು ಅದರ ಕಾಷ್ಠವನ್ನು ಕಿವಿಯಲ್ಲಿ ಧರಿಸುತ್ತಾರೆಯೋ ಅವರು ಭಾಗವತಶ್ರೇಷ್ಠರು.

ತುಲಸೀಗಂಧಮಾಘ್ರಾಯ ಸಂತೋಷಂ ಕುರ್ವತೇತು ಯೇ ।
ತನ್ಮೂಲಮೃತ್ತಿಕಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೬೫ ॥

ಆಶ್ರಮಾಚಾರನಿರತಾಸ್ತಥೈವಾತಿಥಿಪೂಜಕಾಃ ।
ಯೇ ಚ ವೇದಾರ್ಥವಕ್ತಾರಸ್ತೇ ವೈ ಭಾಗವತೋತ್ತಮಾಃ ॥ ೬೬ ॥

ಶಿವಪ್ರಿಯಾಃ ಶಿವಾಸಕ್ತಾಃ ಶಿವಪಾದಾರ್ಚನೇ ರತಾಃ ।
ತ್ರಿಪುಂಡ್ರಧಾರಿಣೋ ಯೇ ಚ ತೇ ವೈ ಭಾಗವತೋತ್ತಮಾಃ ॥ ೬೭ ॥

ವ್ಯಾಹರಂತಿ ಚ ನಾಮಾನಿ ಯೇ ಶಂಭೋಶ್ಚ ಮಹಾತ್ಮನಃ ।
ರುದ್ರಾಕ್ಷಾಲಂಕೃತಾ ಯೇ ಚ ತೇ ವೈ ಭಾಗವತೋತ್ತಮಾಃ ॥ ೬೮ ॥

ಯೇ ಯಜಂತಿ ಮಹಾದೇವಂ ಕ್ರತುಭಿರ್ಬಹುದಕ್ಷಿಣೈಃ ।
ಹರಿಂ ಚ ಪರಯಾ ಭಕ್ತ್ಯಾ ತೇ ವೈ ಭಾಗವತೋತ್ತಮಾಃ ॥ ೬೯ ॥

---

೬೫. ತುಲಸಿಯ ವಾಸನೆಯನ್ನು ನೋಡಿ ಯಾರು ಸಂತೋಷಪಡುತ್ತಾರೆಯೋ, ಅದರ ಮೂಲಮೃತ್ತಿಕೆಯನ್ನು ಯಾರು ಧರಿಸುತ್ತಾರೆಯೋ ಅವರು ಭಾಗವತಶ್ರೇಷ್ಠರು.

೬೬. ಯಾರು ಆಶ್ರಮವಿಹಿತವಾದ ಧರ್ಮಾನುಷ್ಠಾನದಲ್ಲಿ ಆಸಕ್ತರಾಗಿ ಅತಿಥಿಸತ್ಕಾರವನ್ನು ಮಾಡುವರೋ ಮತ್ತು ವೇದಾರ್ಥಗಳನ್ನು ಹೇಳುತ್ತಾರೆಯೋ ಅವರು ಭಾಗವತೋತ್ತಮರು.

೬೭. ಯಾರು ಈಶ್ವರಾನುಗ್ರಹಕ್ಕೆ ಪಾತ್ರರೋ ಈಶ್ವರಭಕ್ತರೋ ಈಶ್ವರಪೂಜೆಯಲ್ಲಿ ಆಸಕ್ತರೋ, ಮೂರುನಾಮುಗಳನ್ನು ಧರಿಸಿರುವರೋ ಅಂತಹವರು ಭಾಗತಶ್ರೇಷ್ಠರು.

೬೮. ಮಹಾತ್ಮನಾದ ಈಶ್ವರನ ನಾಮಗಳನ್ನು ಯಾರು ವ್ಯವಹರಿಸುತ್ತಾರೆಯೋ, ಯಾರು ರುದ್ರಾಕ್ಷವನ್ನು ಧರಿಸುತ್ತಾರೆಯೋ, ಅಂತಹವರು ಭಾಗವತಶ್ರೇಷ್ಠರು.

೬೯. ಹೇರಳವಾಗಿ ದಕ್ಷಿಣೆಗಳನ್ನು ಕೊಟ್ಟು ಯಜ್ಞಗಳನ್ನು ಮಾಡಿ ಯಾರು ಮಹಾದೇವರನ್ನು ಪೂಜಿಸುತ್ತಾರೆಯೋ, ಯಾರು ಉತ್ಕೃಷ್ಟಭಕ್ತಿಯಿಂದ ಶ್ರೀಹರಿಯನ್ನು ಪೂಜಿಸುತ್ತಾರೆಯೋ ಅವರು ಭಾಗವತಶ್ರೇಷ್ಠರು.

ವಿದಿತಾನಿ ಚ ಶಾಸ್ತ್ರಾಣಿ ಪರಾರ್ಥಂ ಪ್ರವದಂತಿ ಯೇ ।
ಸರ್ವತ್ರ ಗುಣಭಾಜೋ ಯೇ ತೇ ವೈ ಭಾಗವತಾಃ ಸ್ಮೃತಾಃ ॥ ೭೦ ॥

ಶಿವೇ ಚ ಪರಮೇಶಾನೇ ವಿಷ್ಣೌ ಚ ಪರಮಾತ್ಮನಿ ।
ಯೇ ಚ ಭಕ್ತ್ಯಾನುವರ್ತಂತೇ ತೇ ವೈ ಭಾಗವತಾಃ ಸ್ಮೃತಾಃ ॥ ೭೧ ॥

ಸಂಧ್ಯಾಗ್ನಿಕಾರ್ಯನಿರತಾಃ ಪಂಚಾಕ್ಷರ ಜಪೇ ರತಾಃ ।
ಶಿವಧ್ಯಾನರತಾ ಯೇ ಚ ತೇ ವೈ ಭಾಗವತಾಃ ಸ್ಮೃತಾಃ ॥ ೭೨ ॥

ಪಾನೀಯದಾನನಿರತಾ ಯೇಽನ್ನದಾನರತಾಸ್ತಥಾ ।
ಏಕಾದಶೀವ್ರತರತಾಸ್ತೇ ವೈ ಭಾಗವತೋತ್ತಮಾಃ ॥ ೭೩ ॥

ಗೋದಾನನಿರತಾ ಯೇ ಚ ಕನ್ಯಾದಾನರತಾಶ್ಚ ಯೇ ।
ಮದರ್ಥಂ ಕರ್ಮಕರ್ತಾರಸ್ತೇ ವೈ ಭಾಗವತೋತ್ತಮಾಃ ॥ ೭೪ ॥

---

೭೦. ಯಾರು ತಮಗೆ ತಿಳಿದ ಶಾಸ್ತ್ರಗಳನ್ನು ಇತರರಿಗೆ ಉಪದೇಶಿಸುತ್ತಾರೆಯೋ, ಯಾರು ಎಲ್ಲರಲ್ಲಿಯೂ ಗುಣಾಂಶಮಾತ್ರವನ್ನೇ ಸ್ವೀಕರಿಸುತ್ತಾರೆಯೋ ಅಂತಹವರು ಭಾಗವತರೆಂದು ಹೇಳಲ್ಪಟ್ಟಿದೆ.

೭೧. ಮುಖ್ಯಸ್ವಾಮಿಯಾದ ರುದ್ರನಲ್ಲಿಯೂ, ಪರಮಾತ್ಮನಾದ ವಿಷ್ಣುವಿನಲ್ಲಿಯೂ ಯಾರು ಅನುಗುಣವಾದ ಭಕ್ತಿಯಿಂದ ನಡೆದುಕೊಳ್ಳುತ್ತಾರೆಯೋ ಅವರು ಭಾಗವತರೆಂದು ಸ್ಮೃತಿಯಲ್ಲಿ ಹೇಳಿದೆ.

೭೨. ಆದರದಿಂದ ಸಂಧ್ಯಾವಂದನೆ ಮತ್ತು ಅಗ್ನಿಕಾರ್ಯಗಳನ್ನು ಅನುಷ್ಠಾನಮಾಡುವವರು, ಶಿವಪಂಚಾಕ್ಷರೀಮಂತ್ರವನ್ನು ಜಪಿಸುವುದರಲ್ಲಿ ಆಸಕ್ತರು ಮತ್ತು ಶಿವಧ್ಯಾನಪರರು ಭಾಗವತರೆಂದು ಸ್ಮೃತ್ಯುಕ್ತವಾಗಿದೆ.

೭೩. ಯಾರು ವಿಶ್ವಾಸದಿಂದ ಅನ್ನೋದಕಗಳನ್ನು ದಾನಮಾಡುತ್ತಾರೆಯೋ ಮತ್ತು ಏಕಾದಶೀವ್ರತಾನುಷ್ಠಾನದಲ್ಲಿ ಆಸಕ್ತರೋ ಅಂತಹವರು ಭಾಗವತಶ್ರೇಷ್ಠರು.

೭೪- ಯಾರು ಗೋದಾನ ಮತ್ತು ಕನ್ಯಾದಾನಗಳನ್ನು ಆಸಕ್ತಿಯಿಂದ ಮಾಡುವರೋ, ಯಾರು ಕಾಮ್ಯಫಲವನ್ನಾಶಿಸದೆ ನನ್ನ ಪ್ರೀತ್ಯರ್ಥವಾಗಿಯೇ ಕರ್ಮಾನುಷ್ಠಾನವನ್ನು ಮಾಡುವರೋ ಅಂತಹವರು ಭಾಗವತಶ್ರೇಷ್ಠರು.

ಏತೇ ಭಾಗವತಾ ವಿಪ್ರ ಕೇಚಿದತ್ರ ಪ್ರಕೀರ್ತಿತಾಃ ।
ಮಯಾಪಿ ಗದಿತುಂ ಶಕ್ಯಾ ನಾಬ್ದಕೋಟಿಶತೈರಪಿ ॥ ೭೫ ॥

ತಸ್ಮಾತ್ತ್ವಮಪಿ ವಿಪ್ರೇಂದ್ರ ಸುಶೀಲೋ ಭವ ಸರ್ವದಾ ।
ಸರ್ವಭೂತಾಶ್ರಯೋ ದಾಂತೋ ಮೈತ್ರೋ ಧರ್ಮಪರಾಯಣಃ ॥ ೭೬ ॥

ಪುನರ್ಯುಗಾಂತಪರ್ಯಂತಂ ಧರ್ಮಂ ಸರ್ವಂ ಸಮಾಚರನ್ ।
ಮನ್ಮೂರ್ತಿಧ್ಯಾನನಿರತಃ ಪರಂ ನಿರ್ವಾಣಮಾಪ್ಸ್ಯಸಿ ॥ ೭೭ ॥

ಏವಂ ಮೃಕಂಡುಪುತ್ರಸ್ಯ ಸ್ವಭಕ್ತಸ್ಯ ಕೃಪಾನಿಧಿಃ ।
ದತ್ವಾ ವರಂ ಸ ದೇವೇಶಸ್ತತ್ರೈವಾಂತರಧೀಯತ ॥ ೭೮ ॥

ಮಾರ್ಕಂಡೇಯೋ ಮಹಾಭಾಗೋ ಹರಿಭಕ್ತಿರತಃ ಸದಾ ।
ಚಚಾರ ಪರಮಂ ಧರ್ಮಮೀಜೇ ಚ ವಿಧಿವನ್ಮಖೈಃ ॥ ೭೯ ॥

---

೭೫. ಬ್ರಾಹ್ಮಣನೇ! ಇದುವರೆಗೆ ನಿರೂಪಿಸಿದವರೆಲ್ಲರೂ ಭಾಗವತರು. ಭಾಗವತರಲ್ಲಿ ಕೆಲವರನ್ನು ಮಾತ್ರ ಇಲ್ಲಿ ವಿವರಿಸಿದ್ದೇನೆ. ಸಂಪೂರ್ಣವಾಗಿ ಭಾಗವತರ ಲಕ್ಷಣ ಮುಂತಾದವುಗಳನ್ನು ನಿರೂಪಿಸಲು ನೂರುಕೋಟಿ ವರ್ಷಗಳಾದರೂ ಸಾಲದು.

೭೬. ಆದಕಾರಣ ಬ್ರಾಹ್ಮಣನೇ! ನೀನು ಯಾವಾಗಲೂ ಸದಾಚಾರಿಯು, ಸಕಲ ಪ್ರಾಣಿಗಳಿಗೂ ಆಶ್ರಯನು, ಇಂದ್ರಿಯನಿಗ್ರಹವುಳ್ಳವನು, ಸೂರ್ಯದೇವತಾಕವಾದ ಸಂಧ್ಯಾವಂದನೆಯನ್ನು ಮಾಡುವವನು, ಧರ್ಮದಲ್ಲಿ ಆಸಕ್ತಿಯುಳ್ಳವನೂ ಆಗಿರು.

೭೭. ಪುನಃ ಪ್ರಳಯವಾಗುವವರೆಗೆ ಸಕಲಧರ್ಮಗಳನ್ನೂ ಮಾಡುತ್ತಿದ್ದು ನನ್ನ ರೂಪಗಳ ಧ್ಯಾನದಲ್ಲಿ ಆಸಕ್ತನಾಗಿರು, ಉತ್ತಮವಾದ ಮೋಕ್ಷವನ್ನು ಹೊಂದುತ್ತಿ.

೭೮. ಎಂಬುದಾಗಿ ತನ್ನ ಭಕ್ತನಾದ ಮಾರ್ಕಂಡೇಯನಿಗೆ ದಯಾಳುವಾದ ಭಗವಂತನು ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೭೯. ಮಹಾತ್ಮನಾದ ಮಾರ್ಕಂಡೇಯನು ಯಾವಾಗಲೂ ಹರಿಯಲ್ಲಿ ನೈಜವಾದ ಭಕ್ತಿಯುಳ್ಳವನಾಗಿ ಉತ್ತಮವಾದ ಧರ್ಮವನ್ನು ಆಚರಿಸಿದನು ಮತ್ತು ಶಾಸ್ತ್ರೋಕ್ತಪ್ರಕಾರವಾಗಿ ಬಹು ಯಜ್ಞಗಳನ್ನು ಮಾಡಿದನು.

ಶಾಲಗ್ರಾಮೇ ಮಹಾಕ್ಷೇತ್ರೇ ತತಾಪ ಪರಮಂ ತಪಃ ।
ಧ್ಯಾನಕ್ಷಪಿತಕರ್ಮಾ ತು ಪರಂ ನಿರ್ವಾಣಮಾಪ್ತವಾನ್ ॥ ೮೦ ॥

ತಸ್ಮಾಜ್ಜಂತುಷು ಸರ್ವೇಷು ಹಿತಕೃದ್ಧರಿಪೂಜಕಃ ।
ಈಪ್ಸಿತಂ ಮನಸಾ ಯದ್ಯತ್ತತ್ತದಾಪ್ನೋತ್ಯಸಂಶಯಂ ॥ ೮೧ ॥

ಸನಕ ಉವಾಚ

ಏತತ್ಸರ್ವಂ ನಿಗದಿತಂ ತ್ವಯಾ ಪೃಷ್ಟಂ ದ್ವಿಜೋತ್ತಮ ।
ಭಗವದ್ಭಕ್ತಿಮಾಹಾತ್ಮ್ಯಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೮೨ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ
ಪ್ರಥಮಪಾದೇ ಮಾರ್ಕಂಡೇಯವರ್ಣನಂ ನಾಮ
ಪಂಚಮೋಽಧ್ಯಾಯಃ

---

೮೦. ಶಾಲಗ್ರಾಮವೆಂಬ ದೊಡ್ಡ ಕ್ಷೇತ್ರದಲ್ಲಿ ಆತನು ಉತ್ತಮ ತಪಸ್ಸನ್ನು ಮಾಡಿ ಭಗವಧ್ಯಾನದಿಂದ ತನ್ನ ಕರ್ಮಗಳನ್ನು ಹೋಗಲಾಡಿಸಿಕೊಂಡು ಮೋಕ್ಷವನ್ನು ಹೊಂದಿದನು.

೮೧. ಆದಕಾರಣ ಸಕಲಪ್ರಾಣಿಗಳಿಗೂ ಒಳ್ಳೆಯದನ್ನು ಮಾಡುತ್ತಾ ಹರಿಪೂಜೆಯನ್ನು ಮಾಡುವವನು ಸಂಶಯವಿಲ್ಲದೆ ತನ್ನ ಮನೋಭೀಷ್ಟವೆಲ್ಲವನ್ನೂ ಪಡೆಯುತ್ತಾನೆ.

೮೨. ಸನಕರು ಹೇಳುತ್ತಾರೆ—ಎಲೈ ದ್ವಿಜಶ್ರೇಷ್ಠನೇ ! ನೀನು ಕೇಳಿದ ಭಗವದ್ಭಕ್ತಿಮಹಿಮೆಯನ್ನೆಲ್ಲಾ ಹೇಳಿದ್ದಾಯಿತು. ನೀನು ಇನ್ನಾವುದನ್ನು ಕೇಳಬೇಕೆಂದು ಅಪೇಕ್ಷಿಸುತ್ತೀ ?

ಇಂತು ಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ ಮಾರ್ಕಂಡೇಯವರ್ಣನಪರವಾದ ಐದನೆಯ ಅಧ್ಯಾಯವು ಮುಗಿದುದು.

---

## ಕಥಾಸಾರಾಂಶ

ಈ ಅಧ್ಯಾಯದ ಆದಿಯಲ್ಲಿ ಮಾರ್ಕಂಡೇಯಚರಿತ್ರೆಯು ಉಕ್ತವಾಗಿದೆ. ತತ್ವಜ್ಞಾನಿಯು, ಮಹಾತೇಜಸ್ವಿಯೂ ಆದ ಮಾರ್ಕಂಡೇಯನು ನಾರಾಯಣನನ್ನು ಕುರಿತು ತಪಸ್ಸುಮಾಡಿದನು. ಅದರಿಂದ ಸಂತುಷ್ಟನಾದ ಹರಿಯು ಅವನಿಗೆ ಪುರಾಣಸಂಹಿತೆಯನ್ನು ರಚಿಸುವ ಸಾಮರ್ಥ್ಯವನ್ನು ದಯೆಪಾಲಿಸಿದನು. ಅವನು ಹರಿಯಲ್ಲಿ ನಿರತಿಶಯವಾದ ಭಕ್ತಿಯುಳ್ಳವನಾಗಿ ಚಿರಂಜೀವಿಯಾಗಿದ್ದನು. ಪ್ರಳಯಕಾಲದಲ್ಲಿಯೂ ಸಹ ಹರಿಯು ತನ್ನ ಸಾಮರ್ಥ್ಯಾತಿಶಯವನ್ನು ಆತನಿಗೆ ತೋರಿಸುವ ಸಲುವಾಗಿ ಜಗತ್ತನ್ನೆಲ್ಲಾ ಸಂಹರಿಸಿ, ಅವನನ್ನುಮಾತ್ರ ಉಳಿಸಿದನು. ಪ್ರಪಂಚವೆಲ್ಲಾ ಜಲಮಯವಾಗಿರುವ ಆ ಸಂದರ್ಭದಲ್ಲಿ ಮಾರ್ಕಂಡೇಯನು ಹರಕು ಎಲೆಯಂತೆ ಹರಿಸನ್ನಿಧಿಯಲ್ಲಿ ತೇಲಾಡುತ್ತಿದ್ದನು. ಈ ಪ್ರಸಂಗದಲ್ಲಿ ಕಾಲವಿಭಾಗವನ್ನು ನಿರೂಪಿಸಿ, ಮಾರ್ಕಂಡೇಯನು ಪ್ರಳಯೋದಕದಲ್ಲಿದ್ದ ಕಾಲದ ಪರಿಮಿತಿಯನ್ನು ಹೇಳಿದೆ. ಮನುಷ್ಯಮಾನ, ಪಿತೃಮಾನ, ದೇವಮಾನ, ಬ್ರಹ್ಮಮಾನ ಇವುಗಳನ್ನು ವಿವರಿಸಿ ವಿಷ್ಣುವಿನ ಅಹೋರಾತ್ರಿಗಳ ಪರಿಮಾಣವನ್ನು ವಿಶದಪಡಿಸಿ ವಿಷ್ಣುವಿನ ರಾತ್ರಿಪರಿಮಿತಕಾಲದಲ್ಲಿ ಜೀರ್ಣಪತ್ರದಂತೆ ಮಾರ್ಕಂಡೇಯನು ಹರಿಸನ್ನಿಧಿಯಲ್ಲಿ ವಾಸವಾಗಿದ್ದನೆಂದು ಹೇಳಿದೆ. ಬೆಳಗಾದಮೇಲೆ ಹರಿಯು ನೀರನ್ನು ಹೋಗಲಾಡಿಸಿ ತನ್ನ ನಾಭಿಕಮಲದಿಂದ ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿ ಅವನ ಮೂಲಕವಾಗಿ ಪುನಃ ಈ ಪ್ರಪಂಚವನ್ನು ಸೃಷ್ಟಿಮಾಡಿದನು. ಅದನ್ನೆಲ್ಲಾ ನೋಡಿ ಮಾರ್ಕಂಡೇಯನು ಅಚ್ಚರಿಗೊಂಡು ಹರಿಯನ್ನು ಸ್ತೋತ್ರಮಾಡಿದನು. ಅದರಿಂದ ಆತನು ಪ್ರಸನ್ನನಾಗಿ "ನಾನು ಯಾವಾಗಲೂ ಭಾಗವತರಿಗೆ ರಕ್ಷಕನಾಗಿರುತ್ತೇನೆ. ಭಗವದ್ಭಕ್ತರಲ್ಲಿ ನಿಂತು ಅವರಿಂದ ಲೋಕಗಳನ್ನು ರಕ್ಷಿಸುತ್ತೇನೆ" ಎಂದು ಹೇಳಲು ಮಾರ್ಕಂಡೇಯನು ಭಾಗವತರಾಗಿ ಹುಟ್ಟಲು ಕಾರಣ ಮತ್ತು ಅವರ ಲಕ್ಷಣ ಇವುಗಳನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿದನು. ಕೋಟ್ಯಂತರ ವರ್ಷಗಳಾದರೂ ನಿಶ್ಶೇಷವಾಗಿ ಭಾಗವತರ ಸ್ವರೂಪವನ್ನು ಹೇಳಲು ಸಾಧ್ಯವಾಗುವುದಿಲ್ಲ. ಆದಾಗ್ಯೂ ಯಥೋಚಿತವಾಗಿ ತಿಳಿಸುತ್ತೇನೆಂದು ಹೇಳಿ ಬಹು ಶ್ಲೋಕಗಳಿಂದ ಭಾಗವತರ ಸ್ವರೂಪಾದಿಗಳನ್ನು ವಿವರಿಸಿ, ನೀನು ವಿಹಿತ ಧರ್ಮಗಳನ್ನು ಆಚರಿಸುತ್ತಾ ಕಲ್ಪಾವಸಾನಪರ್ಯಂತವಾಗಿ ಸುಖವಾಗಿದ್ದು ಅನಂತರ ಮುಕ್ತನಾಗು ಎಂಬುದಾಗಿ ಹರಿಯು ವರವನ್ನು ಕೊಟ್ಟು ಅಂತರ್ಹಿತನಾದನೆಂದು ನಿರೂಪಿಸಿದೆ. ಕೊನೆಯಲ್ಲಿ ಸನಕನು ನೀನು ಕೇಳಿದ ಭಗವದ್ಭಕ್ತಿಮಾಹಾತ್ಮ್ಯೆಯನ್ನು ಹೇಳಿದ್ದಾಯಿತು. ಬೇರೆ ಇನ್ನಾವುದನ್ನು ಕೇಳಲು ಅಪೇಕ್ಷಿಸುತ್ತೀ ? ಎಂಬುದಾಗಿ ನಾರದನನ್ನು ಕುರಿತು ಹೇಳಿರುತ್ತಾನೆ ಎಂಬಲ್ಲಿಗೆ ಅಧ್ಯಾಯವು ಕೊನೆಗೊಂಡಿದೆ.

# ಷಷ್ಠೋಽಧ್ಯಾಯಃ

---

**ಸೂತ ಉವಾಚ**

**ಭಗವದ್ಭಕ್ತಿಮಾಹಾತ್ಮ್ಯಂ ಶ್ರುತ್ವಾ ಪ್ರೀತಸ್ತು ನಾರದಃ ।**
**ಪುನಃ ಪಪ್ರಚ್ಛ ಸನಕಂ ಜ್ಞಾನವಿಜ್ಞಾನಪಾರಗಂ ॥ ೧ ॥**

**ನಾರದ ಉವಾಚ**

**ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ತೀರ್ಥಾನಾಂ ಚ ತಥೋತ್ತಮಂ ।**
**ಪರಯಾ ದಯಯಾ ತಥ್ಯಂ ಬ್ರೂಹಿ ಶಾಸ್ತ್ರಾರ್ಥಪಾರಗ ॥ ೨ ॥**

**ಸನಕ ಉವಾಚ**

**ಶೃಣು ಬ್ರಹ್ಮನ್ ಪರಂ ಗುಹ್ಯಂ ಸರ್ವಸಂಪತ್ಕರಂ ಪರಂ ।**
**ದುಸ್ಸ್ವಪ್ನನಾಶನಂ ಪುಣ್ಯಂ ಧರ್ಮ್ಯಂ ಪಾಪಹರಂ ಶುಭಂ ॥ ೩ ॥**

---

## ಆರನೆಯ ಅಧ್ಯಾಯವು.

೧. ಸೂತರು ಹೇಳುತ್ತಾರೆ.—ಭಗವದ್ಭಕ್ತಿಮಾಹಾತ್ಮ್ಯೆಯನ್ನು ಕೇಳಿ ಸಂತುಷ್ಟನಾದ ನಾರದನು ಜ್ಞಾನವಿಜ್ಞಾನಗಳಲ್ಲಿ ಪಾರಂಗತನಾದ ಸನಕನನ್ನು ತಿರುಗಿ ಪ್ರಶ್ನೆಮಾಡಿದನು.

೨. ನಾರದನು ಮಾತನಾಡುತ್ತಾನೆ.—ಕ್ಷೇತ್ರಗಳಲ್ಲೆಲ್ಲಾ ಉತ್ತಮವಾದ ಕ್ಷೇತ್ರವೂ ಹಾಗೆಯೇ ತೀರ್ಥಗಳಲ್ಲೆಲ್ಲಾ ಉತ್ತಮವಾದ ತೀರ್ಥವೂ ಯಾವುದು ? ಶಾಸ್ತ್ರಾರ್ಥಪಾರಂಗತನೇ ! ಅತ್ಯಂತ ಕರುಣೆಯಿಂದ ನಿಜಾಂಶವನ್ನು ಹೇಳು.

೩-೪. ಸನಕನುಹೇಳುತ್ತಾನೆ.—ಬ್ರಾಹ್ಮಣನೇ ! ಸಕಲ ಐಶ್ವರ್ಯಗಳಿಗೂ ಸಾಧಕವು, ಉತ್ತಮವು, ಕೆಟ್ಟಸ್ವಪ್ನಗಳಾಗದಂತೆ ತಡೆಯುವುದು, ಪುಣ್ಯಕರವು, ಪಾಪವನ್ನು ಪರಿಹರಿಸುವುದು, ಮಂಗಳಕರವು, ಯಾವಾಗಲೂ ಮುನಿಗಳಿಂದ

ಶ್ರೋತವ್ಯಂ ಮುನಿಭಿರ್ನಿತ್ಯಂ ದುಷ್ಟಗ್ರಹನಿವಾರಣಂ ।
ಸರ್ವರೋಗಪ್ರಶಮನಮಾಯುರ್ವರ್ಧನಕಾರಣಂ ॥ ೪ ॥

ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ತೀರ್ಥಾನಾಂ ಚ ತಥೋತ್ತಮಂ ।
ಗಂಗಾಯಮುನಯೋರ್ಯೋಗಂ ವದಂತಿ ಪರಮರ್ಷಯಃ ॥ ೫ ॥

ಸಿತಾಸಿತೋದಕಂ ತೀರ್ಥಂ ಬ್ರಹ್ಮಾದ್ಯಾಃ ಸರ್ವದೇವತಾಃ ।
ಮುನಯೋಮನವಶ್ಚೈವ ಸೇವಂತೇ ಪುಣ್ಯಕಾಂಕ್ಷಿಣಃ ॥ ೬ ॥

ಗಂಗಾ ಪುಣ್ಯನದೀ ಜ್ಞೇಯಾ ಯತೋ ವಿಷ್ಣುಪದೋದ್ಭವಾ ।
ರವಿಜಾ ಯಮುನಾ ಬ್ರಹ್ಮಂಸ್ತಯೋರ್ಯೋಗಃ ಶುಭಾವಹಃ ॥ ೭ ॥

---

ಶ್ರವಣಮಾಡಲು ಅರ್ಹವು, ದುಷ್ಟಗ್ರಹಗಳ ಪೀಡೆಯನ್ನು ಪರಿಹರಿಸುವುದು, ಎಲ್ಲಾ ರೋಗಗಳನ್ನೂ ನಿವೃತ್ತಿಮಾಡುವುದು, ಆಯುಸ್ಸು ವೃದ್ಧಿಯಾಗಲು ಕಾರಣವೂ ಆಗಿರುವ, ನೀನು ಕೇಳಿದ ಅತ್ಯಂತ ರಹಸ್ಯವಾದ ವಿಷಯವನ್ನು ಹೇಳುತ್ತೇನೆ. ಸಾವಧಾನವಾಗಿ, ಕೇಳು.

೫. ಶ್ರೇಷ್ಠರಾದ ಋಷಿಗಳು ಗಂಗಾ ಯಮುನಾ ನದಿಗಳ ಸಂಗಮವಾಗುವ ಪ್ರಯಾಗಕ್ಷೇತ್ರವನ್ನು ಕ್ಷೇತ್ರಗಳಲ್ಲೆಲ್ಲಾ ಉತ್ತಮಕ್ಷೇತ್ರವೆಂದೂ ಮತ್ತು ಸರ್ವತೀರ್ಥಗಳಿಗಿಂತಲೂ ಉತ್ತಮ ತೀರ್ಥವೆಂದೂ ಹೇಳುತ್ತಾರೆ.

೬. ಪುಣ್ಯವನ್ನು ಅಪೇಕ್ಷಿಸುವ ಸಕಲ ದೇವತೆಗಳು, ಋಷಿಗಳು, ಮನುಗಳೂ ಸಹ ಬಿಳಿ ಮತ್ತು ಕಪ್ಪು ಬಣ್ಣದ ನೀರುಗಳಿಂದ ಕೂಡಿದ ಸಂಗಮ ತೀರ್ಥವನ್ನು ಸೇವಿಸುತ್ತಾರೆ.

೭. ಪವಿತ್ರವಾದ ವಿಷ್ಣುಪಾದದಲ್ಲಿ ಉದ್ಭವಿಸಿರುವುದರಿಂದ ಗಂಗೆಯೂ, ಸೂರ್ಯನಲ್ಲಿ ಜನಿಸಿರುವುದರಿಂದ ಯಮುನೆಯೂ ಸಹ ಪುಣ್ಯನದಿಗಳು. ಅಂತಹ ಉಭಯ ಪುಣ್ಯನದಿಗಳ ಸಮಾಗಮವು ಮಂಗಳಕರವು.

ಸ್ಮೃತಾರ್ತಿನಾಶಿನೀ ಗಂಗಾ ನದೀನಾಂ ಪ್ರವರಾ ಮುನೇ ।
ಸರ್ವಪಾಪಕ್ಷಯಕರೀ ಸರ್ವೋಪದ್ರವನಾಶಿನೀ ॥ ೮ ॥

ಯಾನಿ ಕ್ಷೇತ್ರಾಣಿ ಪುಣ್ಯಾನಿ ಸಮುದ್ರಾಂತೇ ಮಹೀತಲೇ ।
ತೇಷಾಂ ಪುಣ್ಯತಮಂ ಜ್ಞೇಯಂ ಪ್ರಯಾಗಾಖ್ಯಂ ಮಹಾಮುನೇ ॥ ೯ ॥

ಇಯಾಜ ವೇಧಾ ಯಜ್ಞೇನ ಯತ್ರ ದೇವಂ ರಮಾಪತಿಂ ।
ತಥೈವ ಮುನಯಃ ಸರ್ವೇ ಚಕ್ರುಶ್ಚ ವಿವಿಧಾನ್ಮಖಾನ್ ॥ ೧೦ ॥

ಸರ್ವತೀರ್ಥಾಭಿಷೇಕಾನಿ ಯಾನಿ ಪುಣ್ಯಾನಿ ತಾನಿ ವೈ ।
ಗಂಗಾಬಿಂದ್ವಭಿಷೇಕಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೧೧ ॥

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೇ ಸ್ಥಿತಃ ।
ಸೋऽಪಿ ಮುಚ್ಯೇತ ಪಾಪೇಭ್ಯಃ ಕಿಮು ಗಂಗಾಭಿಷೇಕವಾನ್ ॥ ೧೨ ॥

---

೮. ಋಷಿಯೇ! ಸ್ಮರಣಮಾತ್ರದಿಂದ ದುಃಖವನ್ನೂ ಸ್ನಾನಾದಿಗಳಿಂದ ಸಕಲ ಪಾಪಗಳನ್ನೂ ಮತ್ತು ಸರ್ವಬಾಧೆಗಳನ್ನೂ ನಾಶಪಡಿಸುವ ಗಂಗಾ ನದಿಯು ನದಿಗಳಲ್ಲೆಲ್ಲಾ ಶ್ರೇಷ್ಠವಾದುದು.

೯-೧೦. ಎಲೈ ಮಹರ್ಷಿಯೇ! ಯಾವ ಕ್ಷೇತ್ರದಲ್ಲಿ ಚತುರ್ಮುಖ ಬ್ರಹ್ಮನು ಲಕ್ಷ್ಮೀಪತಿಯಾದ ನಾರಾಯಣನನ್ನು ಯಜ್ಞದಿಂದ ಪೂಜಿಸಿದನೋ, ಮತ್ತು ಸಕಲ ಋಷಿಗಳು ನಾನಾವಿಧವಾದ ಯಜ್ಞಗಳನ್ನು ಮಾಡಿದರೋ ಅಂತಹ ಪ್ರಯಾಗವೆಂಬ ಕ್ಷೇತ್ರವು ಭೂಲೋಕದಲ್ಲಿ ಸಮುದ್ರಪರ್ಯಂತವಾಗಿರುವ ಕ್ಷೇತ್ರಗಳಲ್ಲೆಲ್ಲಾ ಅತ್ಯಂತ ಪುಣ್ಯಕರವೆಂದು ತಿಳಿಯಬೇಕು.

೧೧. ಪುಣ್ಯಕರವಾದ ಸಕಲ ತೀರ್ಥಗಳಿಂದ ಮಾಡುವ ಅಭಿಷೇಕಗಳೂ ಒಂದು ಹನಿಯಷ್ಟು ಗಂಗೋದಕದಿಂದ ಮಾಡುವ ಅಭಿಷೇಕದ ಹದಿನಾರನೆಯ ಒಂದು ಭಾಗಕ್ಕೂ ಸಮಪಾಗಲಾರದು.

೧೨. ನೂರು ಯೋಜನ ದೂರದಲ್ಲಿದ್ದಾಗ್ಯೂ ಯಾರು "ಗಂಗಾ ಗಂಗಾ" ಎಂಬ ನಾಮವನ್ನು ಕೀರ್ತನೆಮಾಡುತ್ತಾರೆಯೋ ಅಂತಹವನೂ ಸಹ ಪಾಪಗಳಿಂದ ಮುಕ್ತನಾಗುತ್ತಾನೆ. ಹೀಗಿರುವಾಗ ಗಂಗೆಯಲ್ಲಿ ಸ್ನಾನವನ್ನೇ ಮಾಡಿದವನು ಪಾಪಗಳನ್ನು ಕಳೆದುಕೊಳ್ಳುತ್ತಾನೆಂದು ಹೇಳುವುದೇನು?

ವಿಷ್ಣುಪಾದೋದ್ಭವಾ ದೇವೀ ವಿಶ್ವೇಶ್ವರಶಿರಃಸ್ಥಿತಾ ।
ಸಂಸೇವ್ಯಾ ಮುನಿಭಿರ್ದೇವೈಃ ಕಿಂ ಪುನಃ ಪಾಮರೈರ್ಜನೈಃ ॥ ೧೩ ॥

ಯತ್ಸೈಕತಂ ಲಲಾಟೇ ತು ಧ್ರಿಯತೇ ಮನುಜೋತ್ತಮೈಃ ।
ತತ್ರೈವ ನೇತ್ರಂ ವಿಜ್ಞೇಯಂ ವಿಧೋರರ್ಧಮಿವೋಜ್ವಲತ್ ॥ ೧೪ ॥

ಯನ್ಮಜ್ಜನಂ ಮಹಾಪುಣ್ಯಂ ದುರ್ಲಭಂ ತ್ರಿದಿವೌಕಸಾಂ ।
ಸಾರೂಪ್ಯದಾಯಕಂ ವಿಷ್ಣೋಃ ಕಿಮಸ್ಮಾತ್ಕಥ್ಯತೇ ಪರಂ ॥ ೧೫ ॥

ಯತ್ರ ಸ್ನಾತಾಃ ಪಾಪಿನೋಽಪಿ ಸರ್ವಪಾಪವಿವರ್ಜಿತಾಃ ।
ಮಹದ್ವಿಮಾನಮಾರೂಢಾಃ ಪ್ರಯಾಂತಿ ಪರಮಂ ಪದಂ ॥ ೧೬ ॥

ಯತ್ರ ಸ್ನಾತಾ ಮಹಾತ್ಮಾನಃ ಪಿತೃಮಾತೃಕುಲಾನಿ ವೈ ।
ಸಹಸ್ರಾಣಿ ಸಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ॥ ೧೭ ॥

---

೧೩. ವಿಷ್ಣುಪಾದದಲ್ಲಿ ಉದ್ಭವಿಸಿ ವಿಶ್ವೇಶ್ವರನ ಶಿರಸ್ಸಿನಲ್ಲಿ ನೆಲಸಿರುವ ಗಂಗಾದೇವಿಯು ಋಷಿಗಳು ಮತ್ತು ದೇವತೆಗಳಿಂದಲೇ ಸೇವಿಸಲ್ಪಡುತ್ತಿರುವಾಗ ಅಜ್ಞಜನಗಳಿಂದ ಸೇವಿಸಲ್ಪಡಬೇಕೆಂಬುದು ಸ್ವತಃ ಸಿದ್ಧ.

೧೪. ನರಶ್ರೇಷ್ಠರು ಯಾವ ಗಂಗೆಯ ಮರಳನ್ನು ಹಣೆಯಲ್ಲಿ ಧರಿಸುತ್ತಾರೆಯೋ ಅದೇ ಅತ್ಯಂತ ಪ್ರಕಾಶಮಾನವಾದ ಅರ್ಧಚಂದ್ರದಂತಿರುವ ನೇತ್ರವೆಂದು ತಿಳಿಯಬೇಕು. ಎಂದರೆ ಗಂಗೆಯ ಮೃತ್ತಿಕೆಯನ್ನು ಹಣೆಯಲ್ಲಿ ಧರಿಸುವುದರಿಂದ ಜ್ಞಾನವಿಕಾಸವುಂಟಾಗುತ್ತದೆಂದು ತಾತ್ಪರ್ಯ.

೧೫. ಯಾವ ಗಂಗಾಸ್ನಾನವು ಅತಿಶಯಿತವಾದ ಪುಣ್ಯವನ್ನುಂಟುಮಾಡುತ್ತದೆಯೋ ಅದು ದೇವತೆಗಳಿಗೂ ಸಹ ದುರ್ಲಭವು, ಹೆಚ್ಚೇನು ? ಅದು ವಿಷ್ಣುಸಾರೂಪ್ಯವೆಂಬ ಮುಕ್ತಿಯನ್ನೇ ಕೊಡುತ್ತದೆ. ಇದಕ್ಕಿಂತ ಹೆಚ್ಚಾಗಿ ಹೇಳತಕ್ಕದ್ದೇನಿದೆ.

೧೬-೧೭. ಯಾವ ಗಂಗಾನದಿಯಲ್ಲಿ ಸ್ನಾನಮಾಡಿದ ಪಾಪಿಗಳೂ ಸಹ ತಮ್ಮ ಪಾಪವನ್ನು ಹೋಗಲಾಡಿಸಿಕೊಂಡು, ವಿಮಾನದಲ್ಲಿ ಕುಳಿತು ವಿಷ್ಣು

ಸ ಸ್ನಾತಃ ಸರ್ವತೀರ್ಥೇಷು ಗಂಗಾಂ ಸ್ಮರತಿ ಯಃ ಸದಾ ।
ಪುಣ್ಯಕ್ಷೇತ್ರೇಷು ಸರ್ವೇಷು ಸ್ಥಿತವಾನ್ನಾತ್ರ ಸಂಶಯಃ ॥ ೧೮ ॥

ಯತ್ರ ಸ್ನಾತಂ ನರಂ ದೃಷ್ಟ್ವಾ ಪಾಪೋಽಪಿ ಸ್ವರ್ಗಭೂಮಿಭಾಕ್ ।
ಯದಂಗಸ್ಪರ್ಶಮಾತ್ರೇಣ ದೇವಾನಾಮಧಿಪೋ ಭವೇತ್ ॥ ೧೯ ॥

ತುಲಸೀಮೂಲಸಂಭೂತಾ ದ್ವಿಜಪಾದೋದ್ಭವಾ ತಥಾ ।
ಗಂಗೋದ್ಭವಾ ತು ಮೃಲ್ಲೋಕಾನ್ನಯತ್ಯಚ್ಯುತರೂಪತಾಂ ॥ ೨೦ ॥

ಗಂಗಾ ಚ ತುಲಸೀ ಚೈವ ಹರಿಭಕ್ತಿರಚಂಚಲಾ ।
ಅತ್ಯಂತದುರ್ಲಭಾ ನೄಣಾಂ ಭಕ್ತಿರ್ಧರ್ಮಪ್ರವಕ್ತರಿ ॥ ೨೧ ॥

---

ಲೋಕಕ್ಕೆ ಪ್ರಯಾಣಮಾಡುತ್ತಾರೆಯೋ, ಎಲ್ಲಿ ಸ್ನಾನಮಾಡಿದ ಮಹಾತ್ಮರು ಪಿತೃ ಮಾತೃ ಕುಲಸಹಸ್ರಗಳನ್ನು ಉದ್ಧರಿಸಿ, ವಿಷ್ಣುಲೋಕದಲ್ಲಿ ಪೂಜ್ಯರಾಗುತ್ತಾರೆಯೋ ಅಂತಹ ಗಂಗೆಯು ಸರ್ವರಿಂದಲೂ ಸೇವಿಸಲ್ಪಡಬೇಕೆಂಬುದು ಸಿದ್ಧವು.

೧೮. ಯಾವಾತನು ಯಾವಾಗಲೂ ಗಂಗೆಯನ್ನು ಸ್ಮರಿಸುತ್ತಾನೆಯೋ ಅವನು ಸಕಲತೀರ್ಥಸ್ನಾನ ಮತ್ತು ಸರ್ವಪುಣ್ಯಕ್ಷೇತ್ರವಾಸ ಇವುಗಳ ಫಲವನ್ನು ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲ.

೧೯. ಎಲ್ಲಿ ಸ್ನಾನಮಾಡಿದ ಮನುಷ್ಯನನ್ನು ನೋಡುವ ಮಾತ್ರದಿಂದ ಪಾಪಿಯಾದವನೂ ಸಹ ಸ್ವರ್ಗವನ್ನು ಹೊಂದುತ್ತಾನೆಯೋ ಎಲ್ಲಿ ಸ್ನಾನಮಾಡಿದ ಮನುಷ್ಯನ ಅವಯವಸ್ಪರ್ಶಮಾತ್ರದಿಂದ ಮನುಜನು ದೇವೇಂದ್ರನಂತಾಗುತ್ತಾನೆಯೋ ಅಂತಹುದೇ ಗಂಗೆಯು.

೨೦. ತುಲಸಿಯ ಮೂಲಮೃತ್ತಿಕೆ ದ್ವಿಜರ ಪಾದಧೂಳಿ, ಮತ್ತು ಗಂಗಾನದಿಯ ಮಣ್ಣು ಇವುಗಳು ತಮ್ಮನ್ನು ಧರಿಸಿದ ಜನರಿಗೆ ವಿಷ್ಣುಸಾರೂಪ್ಯವನ್ನು ಕೊಡುತ್ತವೆ.

೨೧. ಗಂಗೆ, ತುಲಸಿ, ದೃಢವಾದ ಹರಿಭಕ್ತಿ ಮತ್ತು ಧರ್ಮೋಪದೇಶಕರಲ್ಲಿ ಭಕ್ತಿಯು ಮನುಷ್ಯರಿಗೆ ಅತ್ಯಂತ ದುರ್ಲಭವು.

ಸದ್ಧರ್ಮವಕ್ತುಃ ಪದಸಂಭವಾಂ ಮೃದಂ
ಗಂಗೋದ್ಭವಾಂ ಚೈವ ತಥಾ ತುಲಸ್ಯಾಃ ।
ಮೂಲೋದ್ಭವಾಂ ಭಕ್ತಿಯುತೋ ಮನುಷ್ಯೋ
ಧೃತ್ವಾ ಶಿರಸ್ಯೇತಿ ಪದಂ ಚ ವಿಷ್ಣೋಃ ॥ ೨೨ ॥

ಕದಾ ಯಾಸ್ಯಾಮ್ಯಹಂ ಗಂಗಾಂ ಕದಾ ಪಶ್ಯಾಮಿ ತಾಮಹಂ ।
ವಾಂಛಂತ್ಯಪಿ ಚ ಯೋಽಹ್ಯೇವಂ ಸೋಽಪಿ ವಿಷ್ಣುಪದಂ ವ್ರಜೇತ್ ॥ ೨೩ ॥

ಗಂಗಾಯಾ ಮಹಿಮಾ ಬ್ರಹ್ಮನ್ವಕ್ತುಂ ವರ್ಷಶತೈರಪಿ ।
ನ ಶಕ್ಯತೇ ವಿಷ್ಣುನಾಪಿ ಕಿಮನ್ಯೈರ್ಬಹುಭಾಷಿತೈಃ ॥ ೨೪ ॥

ಅಹೋ ಮಾಯಾ ಜಗತ್ಸರ್ವಂ ಮೋಹಯತ್ಯೇತದದ್ಭುತಂ ।
ಯತೋ ವೈ ನರಕಂ ಯಾಂತಿ ಗಂಗಾನಾಮ್ನಿ ಸ್ಥಿತೇಽಪಿ ಹಿ ॥ ೨೫ ॥

---

೨೨. ಮನುಜನು ಸಮೀಚೀನ ಧರ್ಮಗಳನ್ನುಪದೇಶಿಸುವ ಗುರುಗಳ ಪಾದಧೂಳಿ, ಗಂಗಾನದಿ ಮತ್ತು ತುಲಸಿಯ ಮೂಲಗಳಲ್ಲಿನ ಮೃತ್ತಿಕೆ ಇವುಗಳನ್ನು ಭಕ್ತಿಯಿಂದ ತಲೆಯಮೇಲೆ ಧರಿಸಿದರೆ ವಿಷ್ಣುಲೋಕವನ್ನು ಹೊಂದುತ್ತಾನೆ.

೨೩. ಯಾವಾತನು ಗಂಗೆಗೆ ಯಾವಾಗ ಹೋದೇನು; ಅದನ್ನು ಯಾವಾಗ ನೋಡುವೆನು ಎಂಬುದಾಗಿ ಹಂಬಲಿಸುತ್ತಾನೆಯೋ ಅವನೂ ಸಹ ವೈಕುಂಠಕ್ಕೆ ಹೋಗುತ್ತಾನೆ.

೨೪. ಬ್ರಾಹ್ಮಣನೇ! ಗಂಗೆಯ ಮಹಿಮೆಯನ್ನು ನೂರು ವರ್ಷಗಳಾದಾಗ್ಯೂ ವಿಷ್ಣುವಿನಿಂದಲೂ ಸಹ ಹೇಳಲು ಸಾಧ್ಯವಾಗಲಾರದು. ಹೆಚ್ಚು ಮಾತುಗಳಿಂದೇನು ಫಲ? ಗಂಗೆಯು ಮಹಾಮಹಾತ್ಮ್ಯೆಯುಳ್ಳುದೆಂದು ತಾತ್ಪರ್ಯ.

೨೫. ಆಶ್ಚರ್ಯ! ಗಂಗೆಯೆಂಬ ತಾರಕನಾಮಧೇಯವಿದ್ದಾಗ್ಯೂ ಅದನ್ನು ಸ್ಮರಿಸದೆ ಮನುಜರು ನರಕಕ್ಕೆ ಹೋಗುತ್ತಿದ್ದಾರೆ. ಭಗವಂತನ ಮಾಯೆಯು (ಅಜ್ಞಾನ) ಜಗತ್ತನ್ನೆಲ್ಲಾ ಈ ರೀತಿಯಾಗಿ ಮೋಹಪಡಿಸಿರುವುದೇ ಅದಕ್ಕೆ ಕಾರಣ. ಇದು ಅದ್ಭುತವು!

**ಸಂಸಾರದುಃಖವಿಚ್ಛೇದಿ ಗಂಗಾನಾಮ ಪ್ರಕೀರ್ತಿತಂ ।**
**ತಥಾ ತುಲಸ್ಯಾ ಭಕ್ತಿಶ್ಚ ಹರಿಕೀರ್ತಿಪ್ರವಕ್ತರಿ ॥ ೨೬ ॥**

**ಸಕೃದಪ್ಯುಚ್ಚರೇದ್ಯಸ್ತು ಗಂಗೇತ್ಯೇವಾಕ್ಷರದ್ವಯಂ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೨೭ ॥**

**ಯೋಜನತ್ರಿತಯಂ ಯಸ್ತು ಗಂಗಾಂ ಯಾಮೀತಿ ಗಚ್ಛತಿ ।**
**ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕಂ ಸಮೇತಿ ಹಿ ॥ ೨೮ ॥**

**ಸೇಯಂ ಗಂಗಾ ಮಹಾಪುಣ್ಯಾನದೀ ಭಕ್ತ್ಯಾ ನಿಷೇವಿತಾ ।**
**ಮೇಷತುಲಾಮೃಗಾರ್ಕೇಷು ಪಾವಯತ್ಯಖಿಲಂ ಜಗತ್ ॥ ೨೯ ॥**

**ಗೋದಾವರೀ ಭೀಮರಥೀ ಕೃಷ್ಣಾ ರೇವಾ ಸರಸ್ವತೀ ।**
**ತುಂಗಭದ್ರಾ ಚ ಕಾವೇರೀ ಕಾಳಿಂದೀ ಬಾಹುದಾ ತಥಾ ॥ ೩೦ ॥**

---

೨೬. ಗಂಗಾ, ತುಲಸೀ ಎಂಬ ನಾಮಧೇಯಗಳು, ಹರಿಮಹಿಮೆಯನ್ನುಪದೇಶಮಾಡುವವರಲ್ಲಿ ಭಕ್ತಿಯೂ ಸಹ ಸಂಸಾರ ದುಃಖವನ್ನು ಪರಿಹರಿಸುತ್ತವೆಯೆಂಬುದಾಗಿ ಜ್ಞಾನಿಗಳಿಂದ ಹೇಳಲ್ಪಟ್ಟಿದೆ.

೨೭. ಯಾವಾತನು ಗಂಗಾ ಎಂಬ ಎರಡು ಅಕ್ಷರಗಳನ್ನು ಒಂದಾವರ್ತಿಯಾದರೂ ಉಚ್ಚಾರಣೆ ಮಾಡುತ್ತಾನೆಯೋ ಅಂತಹವನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ವಿಷ್ಣುಲೋಕಕ್ಕೆ ಹೋಗುತ್ತಾನೆ.

೨೮. ಗಂಗಾಯಾತ್ರೆಗೆ ಹೋಗುತ್ತೇನೆಂದು ಸಂಕಲ್ಪಿಸಿ ಯಾವಾತನು ಮೂರು ಗಾವುದವಾದರೂ ಹೋಗುತ್ತಾನೆಯೋ ಅವನೂ ಸಹ ಸಕಲ ಪಾಪಗಳನ್ನು ಹೋಗಲಾಡಿಸಿಕೊಂಡು ಸೂರ್ಯಲೋಕವನ್ನು ಹೊಂದುತ್ತಾನೆ.

೨೯. ಪುಣ್ಯಾತಿಶಯಪ್ರದವಾದ ಈ ಗಂಗಾನದಿಯನ್ನು ಮೇಷ ತುಲಾ ಮುಂತಾದ ಸಂಕ್ರಮಣ ಕಾಲಗಳಲ್ಲಿ ಭಕ್ತಿಯಿಂದ ಸೇವಿಸುವ ಸಕಲಜಗತ್ತೂ ಪವಿತ್ರವಾಗುತ್ತದೆ.

೩೦-೩೧. ದ್ವಿಜಶ್ರೇಷ್ಠನೇ! ಗೋದಾವರಿ, ಭೀಮರಥೀ, ಕೃಷ್ಣಾ, ರೇವಾ, ಸರಸ್ವತೀ, ತುಂಗಭದ್ರಾ, ಕಾವೇರಿ, ಯಮುನಾ, ಬಾಹುದಾ, ವೇತ್ರವತೀ,

ವೇತ್ರವತೀ ತಾಮ್ರಪರ್ಣೀ ಸರಯೂಶ್ಚ ದ್ವಿಜೋತ್ತಮ ।
ಏವಮಾದಿಷು ತೀರ್ಥೇಷು ಗಂಗಾ-ಮುಖ್ಯತಮಾ ಸ್ಮೃತಾ ॥ ೩೧ ॥

ಯಥಾ ಸರ್ವಗತೋ ವಿಷ್ಣುಃ ಜಗದ್ವ್ಯಾಪ್ಯ ಪ್ರತಿಷ್ಠಿತಃ ।
ತಥೇಯಂ ವ್ಯಾಪಿನೀ ಗಂಗಾ ಸರ್ವಪಾಪಪ್ರಣಾಶಿನೀ ॥ ೩೨ ॥

ಅಹೋ ಗಂಗಾ ಜಗದ್ಧಾತ್ರೀ ಸ್ನಾನಪಾನಾದಿಭಿರ್ಜಗತ್ ।
ಪುನಾತಿ ಪಾವಯತ್ಯೇಷಾ ನ ಕಥಂ ಸೇವ್ಯತೇ ನೃಭಿಃ ॥ ೩೩ ॥

ತೀರ್ಥಾನಾಮುತ್ತಮಂ ತೀರ್ಥಂ ಕ್ಷೇತ್ರಾಣಾಂ ಕ್ಷೇತ್ರಮುತ್ತಮಂ ।
ವಾರಣಾಸೀತಿ ವಿಖ್ಯಾತಂ ಸರ್ವದೇವನಿಷೇವಿತಂ ॥ ೩೪ ॥

ತೇ ಏವ ಶ್ರವಣೇ ಧನ್ಯೇ ಸಂವಿದಾತೇ ಬಹುಶ್ರುತೇ ।
ಇಹ ಶ್ರುತಿಮತಾಂ ಪುಂಸಾಂ ಕಾಶೀ ಯಾಭ್ಯಾಂ ಶ್ರುತಾऽಸಕೃತ್ ॥ ೩೫ ॥

---

ತಾಮ್ರಪರ್ಣೀ ಮತ್ತು ಸರಯು ಮುಂತಾದ ತೀರ್ಥಗಳಿಗಿಂತಲೂ ಗಂಗೆಯು ಅತ್ಯಂತ ಮುಖ್ಯವಾದುದೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ.

೩೨. ಸರ್ವಗತನಾದ ವಿಷ್ಣುವು ಪ್ರಪಂಚವನ್ನೆಲ್ಲಾ ವ್ಯಾಪಿಸಿರುವಂತೆ ಸಕಲ ಪಾಪಪರಿಹಾರಕವಾದ ಈ ಗಂಗೆಯೂ ಸಹ ಜಗತ್ತಿನಲ್ಲೆಲ್ಲಾ ವ್ಯಾಪಿಸಿದೆ.

೩೩. ಲೋಕಹಿತಕಾರಿಯಾದ ಗಂಗೆಯು ಸ್ನಾನಪಾನಾದಿಗಳಿಂದ ಜಗತ್ತನ್ನು ಪವಿತ್ರವನ್ನಾಗಿ ಮಾಡುತ್ತದೆ. ಹೀಗೆ ಜಗತ್ತಿಗೆ ಪಾವಿತ್ರ್ಯವನ್ನುಂಟು ಮಾಡುವ ಈ ಗಂಗೆಯು ಮನುಷ್ಯರಿಂದ ಹೇಗೆ ಸೇವಿಸಲ್ಪಡುವುದಿಲ್ಲವೋ? ಆಶ್ಚರ್ಯವಾಗಿದೆ.

೩೪. ಸಕಲ ದೇವತೆಗಳಿಂದಲೂ ಸೇವಿಸಲ್ಪಟ್ಟಿರುವ ಕಾಶಿ ಎಂಬ ಕ್ಷೇತ್ರವು ತೀರ್ಥಕ್ಷೇತ್ರಗಳಲ್ಲೆಲ್ಲಾ ಉತ್ತಮವಾದುದೆಂದು ಪ್ರಸಿದ್ಧವಾಗಿದೆ.

೩೫- ಈ ಲೋಕದಲ್ಲಿ ಶ್ರವಣೇಂದ್ರಿಯವುಳ್ಳ ಪುರುಷರ ಯಾವ ಕಿವಿಗಳು ಅನೇಕಾವರ್ತಿ ಕಾಶೀ ಎಂಬುದನ್ನು ಕೇಳಿರುತ್ತವೆಯೋ ಅಂತಹ ಕಿವಿಗಳೇ ಸಾರ್ಥಕವಾದ ಶ್ರವಣ ಮಾಡಿರುವುದರಿಂದ ಧನ್ಯಗಳು. ಎಂದರೆ ಭಗವಂತನು

ಯೇ ಚ ಸ್ಮರಂತಿ ಸಂಸ್ಥಾನಮವಿಮುಕ್ತಂ ದ್ವಿಜೋತ್ತಮ ।
ನಿರ್ಧೂತಸರ್ವಪಾಪಾಸ್ತೇ ಶಿವಲೋಕಂ ವ್ರಜಂತಿ ವೈ ॥ ೩೬ ॥

ಯೋಜನಾನಾಂ ಶತಸ್ಥೋಽಪಿ ಅವಿಮುಕ್ತಂ ಸ್ಮರೇದ್ಯದಿ ।
ಬಹುಪಾತಕಪೂರ್ಣೋಽಪಿ ಪದಂ ಗಚ್ಛತ್ಯನಾಮಯಂ ॥ ೩೭ ॥

ಪ್ರಾಣಪ್ರಯಾಣಸಮಯೇ ಯೋಽವಿಮುಕ್ತಂ ಸ್ಮರೇದ್ದ್ವಿಜ ।
ಸೋಽಪಿ ಪಾಪವಿನಿರ್ಮುಕ್ತಃ ಶೈವಂ ಪದಮವಾಪ್ನುಯಾತ್ ॥ ೩೮ ॥

ಕಾಶೀಸ್ಮರಣಜಂ ಪುಣ್ಯಂ ಭುಕ್ತ್ವಾ ಸ್ವರ್ಗೇ ತದಂತತಃ ।
ಪೃಥಿವ್ಯಾಮೇಕರಾಡ್ಭೂತ್ವಾ ಕಾಶೀಂ ಪ್ರಾಪ್ಯ ಚ ಮುಕ್ತಿಭಾಕ್ ॥ ೩೯ ॥

---

ಕಿವಿಯನ್ನು ಕೊಟ್ಟಿರುವುದು ಕಾಶೀ ಮುಂತಾದ ಪವಿತ್ರನಾಮಗಳನ್ನು ಶ್ರವಣ ಮಾಡುವುದಕ್ಕಾಗಿಯೇ ಹೊರತು ದುರ್ವಾರ್ತೆಗಳನ್ನು ಶ್ರವಣಮಾಡುವುದಕ್ಕಲ್ಲ. ಆದುದರಿಂದ ಸಾಧ್ಯವಾದಮಟ್ಟಿಗೂ ದುರ್ವಾರ್ತೆಗಳ ಶ್ರವಣಕ್ಕವಕಾಶಕೊಡದೆ ಪವಿತ್ರನಾಮಶ್ರವಣವನ್ನೇ ಮಾಡುವವರ ಕಿವಿಯು ಪವಿತ್ರವಾಗಿ ಅಂತಹವರು ಶ್ರೇಯೋಭಾಗಿಗಳಾಗುತ್ತಾರೆಂದು ತಾತ್ಪರ್ಯ.

೩೬. ಎಲೈ ದ್ವಿಜಶ್ರೇಷ್ಠನೇ! ಅವಿಮುಕ್ತನಾಮಕವಾದ ಈ ಕಾಶೀಕ್ಷೇತ್ರ ವನ್ನು ಸ್ಮರಿಸುವವರು ತಮ್ಮ ಪಾಪಗಳನ್ನು ಕಳೆದುಕೊಂಡು ಈಶ್ವರಲೋಕಕ್ಕೆ ಹೋಗುತ್ತಾರೆ.

೩೭. ಬಹು ಪಾಪಗಳನ್ನು ಮಾಡಿರುವ ಪುರುಷನೂ ಸಹ ನೂರಾರು ಗಾವುದ ದೂರದಲ್ಲಿದ್ದಾಗ್ಯೂ ಕಾಶೀ ಕ್ಷೇತ್ರವನ್ನು ಸ್ಮರಿಸಿದರೆ ದುಃಖರಹಿತವಾದ ಸ್ಥಾನ ಎಂದರೆ ವೈಕುಂಠಾದಿ ಲೋಕಕ್ಕೆ ಹೋಗುತ್ತಾನೆ.

೩೮. ಯಾವನು ಪ್ರಾಣಹೋಗುವ ಕಾಲದಲ್ಲಿ ಕಾಶಿಯನ್ನು ಸ್ಮರಿಸು ತ್ತಾನೆಯೋ ಅಂತಹವನೂ ಕೂಡ ಪಾಪಗಳನ್ನು ಪರಿಹರಿಸಿಕೊಂಡು ಶಿವಪಾದ ವನ್ನು ಹೊಂದುತ್ತಾನೆ

೩೯. ಕಾಶೀಸ್ಮರಣದಿಂದುಂಟಾದ ಪುಣ್ಯಫಲವನ್ನು ಸ್ವರ್ಗಲೋಕದಲ್ಲಿ ಅನುಭವಿಸಿ ನಂತರ ಭೂಲೋಕದಲ್ಲಿ ಚಕ್ರವರ್ತಿಯಾಗಿ ಹುಟ್ಟಿ ಕಾಶೀಯಾತ್ರೆ

ಬಹುನಾತ್ರ ಕಿಮುಕ್ತೇನ ವಾರಾಣಸ್ಯಾ ಗುಣಾನ್ಪ್ರತಿ ।
ನಾಮಾಪಿ ಗೃಹ್ಣತಾಂ ಕಾಶ್ಯಾಶ್ಚತುರ್ವರ್ಗೋ ನ ದೂರತಃ ॥ ೪೦ ॥

ಗಂಗಾಯಮುನಯೋರ್ಯೋಗೋಽಧಿಕಃ ಕಾಶ್ಯಾ ಅಪಿ ದ್ವಿಜ ।
ಯಸ್ಯ ದರ್ಶನಮಾತ್ರೇಣ ನರಾ ಯಾಂತಿ ಪರಾಂ ಗತಿಂ ॥ ೪೧ ॥

ಮಕರಸ್ಥೇ ರವೌ ಗಂಗಾ ಜಲಮಾತ್ರವ್ಯವಸ್ಥಿತಾ ।
ಪುನಾತಿ ಸ್ನಾನಪಾನಾದ್ಯೈರ್ನಯತೀಂದ್ರಪುರಂ ಜಗತ್ ॥ ೪೨ ॥

ಯಾಂ ಗಂಗಾಂ ಭಜತೇ ನಿತ್ಯಂ ಶಂಕರೋ ಲೋಕಶಂಕರಃ ।
ಲಿಂಗರೂಪೀ ಕಥಂ ತಸ್ಯಾ ಮಹಿಮಾ ಪರಿಕೀರ್ತ್ಯತೇ ॥ ೪೩ ॥

---

ಯನ್ನೇ ಮಾಡಿ ಮುಕ್ತಿಯನ್ನು ಹೊಂದುತ್ತಾನೆ. ಎಂದರೆ ಕಾಶೀಸ್ಮರಣವು ಮಹಾಪುಣ್ಯಪ್ರದವಾದುದರಿಂದ ಅವಶ್ಯಕರ್ತವ್ಯವೆಂದು ಅಭಿಪ್ರಾಯ.

೪೦. ಕಾಶೀಕ್ಷೇತ್ರದ ಗುಣಗಳನ್ನು ಹೆಚ್ಚು ವರ್ಣಿಸುವುದೇನು? ಕಾಶಿಯ ನಾಮಧೇಯವನ್ನು ಸ್ಮರಿಸುವವರಿಗೂ ಕೂಡ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವರ್ಗವು ದೂರವಾಗುವುದಿಲ್ಲ. ಲಭಿಸುತ್ತದೆಂದು ಆಶಯ.

೪೧. ದ್ವಿಜನೇ! ಗಂಗೆ ಮತ್ತು ಯಮುನಾ ನದಿ ಇವುಗಳ ಸಂಗಮ ಸ್ಥಾನವಾದ ಪ್ರಯಾಗಕ್ಷೇತ್ರವು ಕಾಶಿಗಿಂತಲೂ ಅಧಿಕವಾದುದು. ಅದರ ದರ್ಶನ ಮಾತ್ರದಿಂದ ಮನುಜರು ಉತ್ತಮಗತಿಯನ್ನು ಹೊಂದುತ್ತಾರೆ.

೪೨. ಮಕರಸಂಕ್ರಮಣಕಾಲದಲ್ಲಿ ಗಂಗೆಯು ಎಲ್ಲಾ ಉದಕಗಳಲ್ಲಿಯೂ ಸನ್ನಿಹಿತವಾಗಿದ್ದು ಆ ಸಮಯದಲ್ಲಿ ಸ್ನಾನಪಾನಾದಿಗಳನ್ನು ಮಾಡುವ ಮನುಜರನ್ನು ಪವಿತ್ರವನ್ನಾಗಿ ಮಾಡಿ ಸ್ವರ್ಗಲೋಕಕ್ಕೆ ಒಯ್ಯುತ್ತದೆ.

೪೩. ಲಿಂಗರೂಪಿಯು ಮತ್ತು ಲೋಕಕ್ಕೆ ಸುಖಕರನೂ ಆದ ರುದ್ರನು ಯಾವಾಗಲೂ ಯಾವ ಗಂಗೆಯನ್ನು ಸೇವಿಸುತ್ತಾನೆಯೋ ಅಂತಹ ಗಂಗೆಯ ಮಹಿಮೆಯನ್ನು ಹೇಳುವ ಬಗೆ ಹೇಗೆ? ಇತರರಿಂದ ಹೇಳಲಸಾಧ್ಯವಾದ ಮಹಾತ್ಮ್ಯೆಯುಳ್ಳುದು ಗಂಗೆಯೆಂದು ತಾತ್ಪರ್ಯ.

ಹರಿರೂಪಧರಂ ಲಿಂಗಂ ಲಿಂಗರೂಪಧರೋ ಹರಿಃ ।
ಈಷದಪ್ಯಂತರಂ ನಾಸ್ತಿ ಭೇದಕೃಚ್ಚಾನಯೋಃ ಕುಧೀಃ ॥ ೪೪ ॥

ಅನಾದಿನಿಧನೇ ದೇವೇ ಹರಿಶಂಕರಸಂಜ್ಞಿತೇ ।
ಅಜ್ಞಾನಸಾಗರೇ ಮಗ್ನಾ ಭೇದಂ ಕುರ್ವಂತಿ ಪಾಪಿನಃ ॥ ೪೫ ॥

ಯೋ ದೇವೋ ಜಗತಾಮೀಶಃ ಕಾರಣಾನಾಂ ಚ ಕಾರಣಂ ।
ಯುಗಾಂತೇ ಜಗದತ್ತ್ಯೇತದ್ರುದ್ರರೂಪಧರೋಽಚ್ಯುತಃ ॥ ೪೬ ॥

ರುದ್ರೋ ವೈ ವಿಷ್ಣುರೂಪೇಣ ಪಾಲಯತ್ಯಖಿಲಂ ಜಗತ್ ।
ಬ್ರಹ್ಮರೂಪೇಣ ಸೃಜತಿ ತದತ್ತ್ಯೇವ ಸ್ವಯಂ ಹರಿಃ ॥ ೪೭ ॥

---

೪೪. ಹರಿರೂಪವನ್ನು ತಾಳಿದ ಲಿಂಗ, ಲಿಂಗರೂಪವನ್ನು ಧರಿಸಿದ ಹರಿ ಇವರುಗಳಿಗೆ ಸ್ವಲ್ಪವೂ ವ್ಯತ್ಯಾಸವಿಲ್ಲ. ಎಂದರೆ ಜಗತ್ಕಾರಣನಾದ ದೇವನು ಸಮಯೋಚಿತವಾಗಿ ಅನೇಕ ರೂಪಗಳನ್ನು ತೆಗೆದುಕೊಳ್ಳುತ್ತಾನೆ. ವಿಭಿನ್ನ ರೂಪಗಳನ್ನು ಸ್ವೀಕರಿಸಿರುವ ಮಾತ್ರದಿಂದ ಆ ದೇವತೆಯನ್ನು ಭಿನ್ನವೆಂದು ತಿಳಿಯಬಾರದು. ಜಗತ್ಕಾರಣನಾದ ಪರಬ್ರಹ್ಮನು ಒಬ್ಬನೇ ಎಂದು ತಿಳಿಯ ಬೇಕು. ಆ ರೂಪಗಳಲ್ಲಿರುವ ದೇವತೆಯು ಭಿನ್ನವೆಂದು ತಿಳಿಯುವವನು ದುರ್ಬುದ್ಧಿಯುಳ್ಳವನು ಎಂದು ತಾತ್ಪರ್ಯ.

೪೫. ಹರಿ, ಶಂಕರ ಮುಂತಾದ ಪದಗಳಿಗೆ ಮುಖ್ಯವಾಚ್ಯನಾದ ದೇವತೆಯು ಅನಾದ್ಯನಂತ ಕಾಲಗಳಲ್ಲಿಯೂ ಒಬ್ಬನೇ ಆಗಿರುವಾಗ ಅಜ್ಞಾನ ವೆಂಬ ಸಮುದ್ರದಲ್ಲಿ ಮುಳುಗಿರುವ ಪಾಪಿಗಳು ಭಿನ್ನನೆಂದು ತಿಳಿಯುತ್ತಾರೆ.

೪೬. ಯಾವ ದೇವತೆಯು ಜಗತ್ತಿಗೊಡೆಯನೋ, ಕಾರಣಗಳಿಗೆಲ್ಲಾ ಕಾರಣನು ಎಂದರೆ ಮುಖ್ಯವಾದ ಕಾರಣನೋ (ಸ್ವತಂತ್ರಕಾರಣನೋ) ಅಂತಹ ಹರಿಯು ರುದ್ರರೂಪಾಂತರ್ಗತನಾಗಿ ಪ್ರಳಯಕಾಲದಲ್ಲಿ ಈ ಜಗತ್ತನ್ನು ಸಂಹರಿಸುತ್ತಾನೆ.

೪೭. ಹರಿಯು ಸಾಕ್ಷಾತ್ತಾಗಿ ವಿಷ್ಣುರೂಪದಿಂದ ಸಮಸ್ತ ಪ್ರಪಂಚ ವನ್ನೂ ರಕ್ಷಿಸುತ್ತಾನೆ, ಬ್ರಹ್ಮಾಂತರ್ಗತರೂಪದಿಂದ ಸೃಷ್ಟಿಸುತ್ತಾನೆ. ಪ್ರಳಯ ಕಾಲದಲ್ಲಿ ರುದ್ರಾಂತರ್ಗತರೂಪದಿಂದ ಸಂಹರಿಸುತ್ತಾನೆ.

ಹರಿಶಂಕರಯೋರ್ಮಧ್ಯೇ ಬ್ರಹ್ಮಣಶ್ಚಾಪಿ ಯೋ ನರಃ ।
ಭೇದಂ ಕರೋತಿ ಸೋಽಭ್ಯೇತಿ ನರಕಂ ಭೃಶದಾರುಣಂ ॥ ೪೮ ॥

ಹರಂ ಹರಿಂ ವಿಧಾತಾರಂ ಯಃ ಪಶ್ಯೇದ್ಯೇಕರೂಪಿಣಂ ।
ಸ ಯಾತಿ ಪರಮಾನಂದಂ ಶಾಸ್ತ್ರಾಣಾಮೇಷನಿರ್ಣಯಃ ॥ ೪೯ ॥

ಯೋಽಸಾವನಾದಿಃ ಸರ್ವಜ್ಞೋ ಜಗತಾಮಾದಿಕೃದ್ವಿಭುಃ ।
ನಿತ್ಯಂ ಸನ್ನಿಹಿತಸ್ತತ್ರ ಲಿಂಗರೂಪೇ ಜನಾರ್ದನಃ ॥ ೫೦ ॥

ಕಾಶೀವಿಶ್ವೇಶ್ವರಂ ಲಿಂಗಂ ಜ್ಯೋತಿರ್ಲಿಂಗಂ ತದುಚ್ಯತೇ ।
ತಂ ದೃಷ್ಟ್ವಾ ಪರಮಂ ಜ್ಯೋತಿರಾಪ್ನೋತಿ ಮನುಜೋತ್ತಮಃ ॥ ೫೧ ॥

---

೪೮. ಹರಿ, ಶಂಕರ, ಬ್ರಹ್ಮ ಈ ಪದಗಳಿಗೆ ಮುಖ್ಯವಾಚ್ಯವಾದ ದೇವತೆಯು ಭಿನ್ನವೆಂದು ಯಾವ ಮನುಷ್ಯನು ತಿಳಿಯುತ್ತಾನೆಯೋ ಅವನು ಅತ್ಯಂತ ದುಃಖಕರವಾದ ನರಕವನ್ನು ಹೊಂದುತ್ತಾನೆ.

೪೯. ಹರ, ಹರಿ, ವಿಧಾತಾ ಎಂಬ ಶಬ್ದಗಳ ಮುಖ್ಯ ವಾಚ್ಯವಾದ ದೇವತೆಯನ್ನು ಏಕವೆಂದು ಯಾವನು ತಿಳಿಯುತ್ತಾನೆಯೋ ಅವನು ಉತ್ಕೃಷ್ಟವಾದ ಸುಖಕ್ಕೆ ಭಾಗಿಯಾಗುತ್ತಾನೆ, ಇದೇ ಶಾಸ್ತ್ರಗಳ ನಿರ್ಣೀತಾರ್ಥವು. ಎಂದರೆ ಸಕಲ ಶಬ್ದಗಳೂ ಮುಖ್ಯವಾಗಿ ಒಬ್ಬ ಪರದೇವತೆಯನ್ನೇ ಬೋಧಿಸುತ್ತವೆ ಎಂದು ಅಭಿಪ್ರಾಯ.

೫೦. ಯಾವಾತನು ಉತ್ಪತ್ತಿರಹಿತನು, ಸರ್ವಜ್ಞನು ಜಗತ್ಸೃಷ್ಟಿಕರ್ತನು, ಸರ್ವಶಕ್ತನೂ ಆಗಿರುವನೋ ಅಂತಹ ಜನಾರ್ದನನು ಲೋಕಸಿದ್ಧವಾದ ಕಾರಣಗಳಲ್ಲಿ ಯಾವಾಗಲೂ ಸನ್ನಿಹಿತನಾಗಿರುವನು.

೫೧. ಕಾಶೀಕ್ಷೇತ್ರದಲ್ಲಿರುವ ವಿಶ್ವೇಶ್ವರವೆಂಬ ಲಿಂಗವು ಜ್ಯೋತಿರ್ಲಿಂಗವೆಂದು ಉಕ್ತವಾಗಿದೆ. ಮನುಷ್ಯಶ್ರೇಷ್ಠನು ಆ ವಿಶ್ವೇಶ್ವರಸ್ವಾಮಿಯನ್ನು ದರ್ಶನಮಾಡಿದರೆ ಉತ್ತಮತೇಜಸ್ಸನ್ನು ಹೊಂದುತ್ತಾನೆ.

**ಕಾಶೀಪ್ರದಕ್ಷಿಣಾ ಯೇನ ಕೃತಾ ತ್ರೈಲೋಕ್ಯಪಾವನೀ ।**
**ಸಪ್ತದ್ವೀಪಾ ಸಾಬ್ಧಿಶೈಲಾ ಭೂಃ ಪರಿಕ್ರಮಿತಾಮುನಾ ॥ ೫೨ ॥**

**ಧಾತುಮೃದ್ದಾರುಪಾಷಾಣಲೇಖ್ಯಾದ್ಯಾ ಮೂರ್ತಯೋಽಮಲಾಃ ।**
**ಶಿವಸ್ಯ ವಾಽಚ್ಯುತಸ್ಯಾಪಿ ತಾಸು ಸನ್ನಿಹಿತೋ ಹರಿಃ ॥ ೫೩ ॥**

**ತುಲಸೀಕಾನನಂ ಯತ್ರ ಯತ್ರ ಪದ್ಮವನಾನಿ ಚ ।**
**ಪುರಾಣಪಠನಂ ಯತ್ರ ತತ್ರ ಸನ್ನಿಹಿತೋ ಹರಿಃ ॥ ೫೪ ॥**

**ಪುರಾಣಸಂಹಿತಾವಕ್ತಾ ಹರಿರಿತ್ಯಭಿಧೀಯತೇ ।**
**ತದ್ಭಕ್ತಿಂ ಕುರ್ವತಾಂ ನೄಣಾಂ ಗಂಗಾಸ್ನಾನಂ ದಿನೇ ದಿನೇ ॥ ೫೫ ॥**

---

೫೨. ಯಾವಾತನು ಮೂರು ಲೋಕಗಳನ್ನೂ ಪವಿತ್ರವನ್ನಾಗಿ ಮಾಡುವ ಕಾಶೀಕ್ಷೇತ್ರವನ್ನು ಪ್ರದಕ್ಷಿಣೆಮಾಡುನ್ತಾನೆಯೋ ಅವನು ಸಪ್ತದ್ವೀಪ ಮತ್ತು ಸಮುದ್ರಗಳಿಂದ ಕೂಡಿದ ಭೂಮಿಯನ್ನೇ ಪ್ರದಕ್ಷಣೆಮಾಡಿದ ಮಹಾ ಫಲವನ್ನು ಹೊಂದುತ್ತಾನೆ.

೫೩. ಕಾವಿ ಮುಂತಾದ ಶಿಲಾವಿಕಾರ, ಮಣ್ಣು, ಕಟ್ಟಿಗೆ, ಕಲ್ಲು ಇವು ಗಳಲ್ಲಿ ಚಿತ್ರಿತವಾದ ಈಶ್ವರ ಅಥವಾ ವಿಷ್ಣುವಿನ ನಿರ್ಮಲವಿಗ್ರಹಗಳಲ್ಲಿ ಹರಿಯು ಸನ್ನಿಹಿತನಾಗಿರುತ್ತಾನೆ.

೫೪. ಎಲ್ಲಿ ತುಲಸೀಗಿಡಗಳು ಅಥವ ತಾವರೆಗಿಡಗಳು ಗುಂಪುಗುಂಪಾಗಿ ಬೆಳೆದಿರುತ್ತವೆಯೋ ಎಲ್ಲಿ ಪುರಾಣಗಳನ್ನು ಪಠನಮಾಡುತ್ತಾರೆಯೋ ಅಂತಹ ಸ್ಥಳಗಳಲ್ಲಿ ಶ್ರೀಹರಿಯ ಸನ್ನಿಧಾನವಿಶೇಷವಿರುತ್ತದೆ.

೫೫. ಪುರಾಣ ಹೇಳುವವನಲ್ಲಿ ವಿಶೇಷವಾಗಿ ಹರಿಸನ್ನಿಧಾನವಿರುವುದ ರಿಂದ ಅವನು ಹರಿಯೆನಿಸುವನು. ಆದುದರಿಂದ ಅವನಲ್ಲಿ ಭಕ್ತಿಮಾಡುವ ಮನುಜರಿಗೆ ಪ್ರತಿದಿನದಲ್ಲಿಯೂ ಗಂಗಾಸ್ನಾನಮಾಡಿದ ಫಲವು ಲಭಿಸುತ್ತದೆ.

ಪುರಾಣಶ್ರವಣೇ ಭಕ್ತಿರ್ಗಂಗಾಸ್ನಾನಸಮಾ ದ್ವಿಜ ।
ತದ್ವಕ್ತರಿ ಚ ಯಾ ಭಕ್ತಿಃ ಸಾ ಪ್ರಯಾಗೋಪಮಾ ಸ್ಮೃತಾ ॥ ೫೬ ॥

ಪುರಾಣಧರ್ಮಕಥನೈರ್ಯಃ ಸಮುದ್ಧರತೇ ಜಗತ್ ।
ಸಂಸಾರಸಾಗರೇ ಮಗ್ನಂ ಸ ಹರಿಃ ಪರಿಕೀರ್ತಿತಃ ॥ ೫೭ ॥

ನಾಸ್ತಿ ಗಂಗಾಸಮಂ ತೀರ್ಥಂ ನಾಸ್ತಿ ಮಾತೃಸಮೋ ಗುರುಃ ।
ನಾಸ್ತಿ ವಿಷ್ಣುಸಮಂ ದೈವಂ ನಾಸ್ತಿ ತತ್ವಂ ಗುರೋಃ ಪರಂ ॥ ೫೮ ॥

ವರ್ಣಾನಾಂ ಬ್ರಾಹ್ಮಣಃ ಶ್ರೇಷ್ಠಸ್ತಾರಕಾಣಾಂ ಯಥಾ ಶಶೀ ।
ಯಥಾ ಪಯೋಧಿಃ ಸಿಂಧೂನಾಂ ತಥಾ ಗಂಗಾ ಪರಾ ಸ್ಮೃತಾ ॥ ೫೯ ॥

---

೫೬. ದ್ವಿಜನೇ ! ಪುರಾಣವನ್ನು ಕೇಳುವುದರಲ್ಲಿ ಭಕ್ತಿಯು ಗಂಗಾಸ್ನಾನಕ್ಕೆ ಸಮಾನವು. ಪುರಾಣಹೇಳುವವನಲ್ಲಿ ಭಕ್ತಿಯು ಪ್ರಯಾಗಯಾತ್ರೆಗೆ ಸದೃಶವು.

೫೭. ಯಾವಾತನು ಪುರಾಣ ಮತ್ತು ಧರ್ಮಗಳನ್ನು ಹೇಳುವುದರಿಂದ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿದ ಜನರನ್ನು ಉದ್ಧರಿಸುತ್ತಾನೆಯೋ ಅಂತಹವನು ವಿಶೇಷವಾಗಿ ಶ್ರೀಹರಿಯ ಸನ್ನಿಧಾನಕ್ಕೆ ಪಾತ್ರನಾಗಿರುವುದರಿಂದ ಪೂಜ್ಯನು.

೫೮. ತೀರ್ಥಗಳಲ್ಲಿ ಗಂಗೆಗೆ ಸದೃಶವಾದ ಪುಣ್ಯತೀರ್ಥವಿಲ್ಲ. ಗುರುಗಳ ಪೈಕಿ ತಾಯಿಗೆ ಸಮಾನಳಾದ ಗುರುವಿಲ್ಲ. ದೇವತೆಗಳಲ್ಲಿ ವಿಷ್ಣುವಿಗೆ ಸಮಾನರಾರೂ ಇಲ್ಲ. ಗುರೂಪದಿಷ್ಟವಾದುದಕ್ಕಿಂತಲೂ ಬೇರೆ ತತ್ವವಿಲ್ಲ.

೫೯. ಜಾತಿಗಳ ಪೈಕಿ ಬ್ರಾಹ್ಮಣಜಾತಿಯು ಹೇಗೆ ಶ್ರೇಷ್ಠವಾಗಿದೆಯೋ ಹೇಗೆ ನಕ್ಷತ್ರಗಳಲ್ಲಿ ಚಂದ್ರನು ಉತ್ತಮನೋ, ಹೇಗೆ ಸಮುದ್ರಗಳಲ್ಲಿ ಕ್ಷೀರಸಮುದ್ರವು ಶ್ರೇಷ್ಠವೋ ಅದರಂತೆ ಗಂಗೆಯು ತೀರ್ಥಗಳಲ್ಲೆಲ್ಲಾ ಉತ್ತಮವಾದುದು.

**ನಾಸ್ತಿ ಶಾಂತಿಸಮೋ ಬಂಧುರ್ನಾಸ್ತಿ ಸತ್ಯಾತ್ಪರಂ ತಪಃ ।**
**ನಾಸ್ತಿ ಮೋಕ್ಷಾತ್ಪರೋ ಲಾಭೋ ನಾಸ್ತಿ ಗಂಗಾಸಮಾ ನದೀ ॥ ೬೦ ॥**

**ಗಂಗಾಯಾಃ ಪರಮಂ ನಾಮ ಪಾಪಾರಣ್ಯದವಾನಲಃ ।**
**ಭವವ್ಯಾಧಿಹರಾ ಗಂಗಾ ತಸ್ಮಾತ್ಸೇವ್ಯಾ ಪ್ರಯತ್ನತಃ ॥ ೬೧ ॥**

**ಗಾಯತ್ರೀ ಜಾಹ್ನವೀ ಚೋಭೇ ಸರ್ವಪಾಪಹರೇ ಸ್ಮೃತೇ ।**
**ಏತಯೋರ್ಭಕ್ತಿಹೀನೋ ಯಸ್ತಂ ವಿದ್ಯಾತ್ಪತಿತಂ ದ್ವಿಜ ॥ ೬೨ ॥**

**ಗಾಯತ್ರೀ ಛಂದಸಾಂ ಮಾತಾ ಮಾತಾ ಲೋಕಸ್ಯ ಜಾಹ್ನವೀ ।**
**ಉಭೇ ತೇ ಸರ್ವಪಾಪಾನಾಂ ನಾಶಕಾರಣತಾಂ ಗತೇ ॥ ೬೩ ॥**

---

೬೦. ಶಾಂತಿಗುಣಕ್ಕೆ ಸಮಾನವಾದ ಬಂಧುವಿಲ್ಲ. ಸತ್ಯವಚನಕ್ಕಿಂತಲೂ ದೊಡ್ಡ ತಪಸ್ಸಿಲ್ಲ. ಮೋಕ್ಷಕ್ಕಿಂತಲೂ ಉತ್ತಮವಾದ ಲಾಭವಿಲ್ಲ. ಗಂಗೆಗೆ ಸಮಾನವಾದ ನದಿಯಿಲ್ಲ.

೬೧. ಗಂಗೆಯ ಪವಿತ್ರನಾಮಧೇಯವು ಪಾಪವೆಂಬ ಕಾಡಿಗೆ ಕಾಡು ಕಿಚ್ಚಿನಂತಿದೆ. ಗಂಗೆಯು ಸಂಸಾರವೆಂಬ ಮಹಾವ್ಯಾದಿಯನ್ನು ಪರಿಹರಿಸುವುದು ಆದುದರಿಂದ ಸರ್ವರೂ ಅದನ್ನು ಪ್ರಯತ್ನಪೂರ್ವಕವಾಗಿ ಸೇವಿಸಬೇಕು.

೬೨. ಗಾಯತ್ರೀಮಂತ್ರ ಮತ್ತು ಗಂಗೆ ಇವೆರಡೂ ಸಕಲ ಪಾಪಗಳನ್ನೂ ಪರಿಹಾರಮಾಡುತ್ತವೆಂದು ಸ್ಮೃತ್ಯಾದಿಗಳಲ್ಲಿ ಉಕ್ತವಾಗಿದೆ. ದ್ವಿಜನೇ! ಗಾಯತ್ರೀ ಗಂಗೆಗಳಲ್ಲಿ ಭಕ್ತಿಯಿಲ್ಲದವನನ್ನು ಪತಿತನೆಂಬುದಾಗಿ ತಿಳಿಯತಕ್ಕದ್ದು.

೬೩. ಛಂದಸ್ಸುಗಳಲ್ಲಿ ಗಾಯತ್ರಿಯು ಮಾತೃಸ್ಥಾನೀಯವು ಎಂದರೆ ಅತ್ಯುತ್ತಮವೆಂದು ಭಾವ. ಗಂಗೆಯು ಲೋಕಕ್ಕೆ ಮಾತೃಸ್ಥಾನೀಯವು. ಅವೆರಡೂ ಸಕಲ ಪಾಪಗಳ ನಾಶಕ್ಕೆ ಕಾರಣವಾಗುತ್ತವೆ.

ಯಸ್ಯ ಪ್ರಸನ್ನಾ ಗಾಯತ್ರೀ ತಸ್ಯ ಗಂಗಾ ಪ್ರಸೀದತಿ ।
ವಿಷ್ಣುಶಕ್ತಿಯುತೇ ತೇ ದ್ವೇ ಸರ್ವಕಾಮಾರ್ಥಸಿದ್ಧಿದೇ ॥ ೬೪ ॥

ಧರ್ಮಾರ್ಥಕಾಮಮೋಕ್ಷಾಣಾಂ ಫಲರೂಪೇ ನಿರಂಜನೇ ।
ಸರ್ವಲೋಕಾನುಗ್ರಹಾರ್ಥಂ ಪ್ರವರ್ತೇತೇ ಮಹೋತ್ತಮೇ ॥ ೬೫ ॥

ಅತೀವ ದುರ್ಲಭಾ ನೃಣಾಂ ಗಾಯತ್ರೀ ಜಾಹ್ನವೀ ತಥಾ ।
ತಥೈವ ತುಲಸೀಭಕ್ತಿಃ ಹರಿಭಕ್ತಿಶ್ಚ ಶಾಶ್ವತೀ ॥ ೬೬ ॥

ಅಹೋ ಗಂಗಾ ಮಹಾಭಾಗಾ ಸ್ಮೃತಾ ಪಾಪಪ್ರಣಾಶಿನೀ ।
ಹರಿಲೋಕಪ್ರದಾ ದೃಷ್ಟಾ ಪೀತಾ ಸಾರೂಪ್ಯದಾಯಿನೀ ॥ ೬೭ ॥

---

೬೪. ಯಾವಾತನಿಗೆ ಗಾಯತ್ರಿಯು ಪ್ರಸನ್ನವಾಗುತ್ತದೆಯೋ ಅಂತಹವನಿಗೆ ಗಂಗೆಯು ಅನುಗ್ರಹಿಸುತ್ತಾಳೆ. ಗಾಯತ್ರೀಗಂಗೆಗಳೆರಡೂ ವಿಷ್ಣುಶಕ್ತಿಯಿಂದ ಕೂಡಿ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತವೆ.

೬೫. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯಕ್ಕೂ ಫಲರೂಪವಾದ, ನಿರ್ದೋಷವಾದ ಗಾಯತ್ರೀ ಜಾಹ್ನವಿಯೆಂಬ ಎರಡು ಅತ್ಯುತ್ತಮ ವಸ್ತುಗಳು ಈ ಲೋಕದಲ್ಲಿನ ಸಕಲ ಪ್ರಜೆಗಳ ಅನುಗ್ರಹಕ್ಕೋಸ್ಕರವಾಗಿಯೇ ಇಲ್ಲಿಗೆ ಬಂದಿವೆ.

೬೬. ಗಾಯತ್ರೀ ಗಂಗೆಗಳು ಮನುಜರಿಗೆ ಅತ್ಯಂತ ದುರ್ಲಭಗಳು. ಎಂದರೆ, ಪೂರ್ವಾರ್ಜಿತ ಪುಣ್ಯವಿಶೇಷದಿಂದಲೇ ಲಭಿಸುತ್ತವೆ. ಸಾಮಾನ್ಯವಾಗಿ ದೊರೆಯುತಕ್ಕವುಗಳಲ್ಲವೆಂದು ಭಾವ. ಹಾಗೆಯೇ ತುಲಸೀಭಕ್ತಿ, ಶಾಶ್ವತವಾದ ಹರಿಭಕ್ತಿಯೂ ಸಹ ದುರ್ಲಭವು.

೬೭. ಆಶ್ಚರ್ಯ! ಪೂಜ್ಯಗಂಗೆಯು ಸ್ಮರಿಸಲ್ಪಟ್ಟರೆ ಪಾಪವನ್ನು ಪರಿಹರಿಸುತ್ತದೆ. ಅದನ್ನು ದರ್ಶನಮಾಡಿದರೆ ವೈಕುಂಠಲೋಕವೂ, ಪಾನಮಾಡಿದರೆ ವಿಷ್ಣುಸಾರೂಪ್ಯವೂ (ಮುಕ್ತಿ) ಲಭಿಸುತ್ತದೆ.

ಯತ್ರ ಸ್ನಾತಾ ನರಾ ಯಾಂತಿ ವಿಷ್ಣೋಃ ಪದಮನುತ್ತಮಂ ।
ನಾರಾಯಣೋ ಜಗದ್ಧಾತಾ ವಾಸುದೇವಃ ಸನಾತನಃ ।
ಗಂಗಾಸ್ನಾನಪರಾಣಾಂ ತು ವಾಂಛಿತಾರ್ಥಫಲಪ್ರದಃ ॥ ೬೮ ॥

ಗಂಗಾಜಲಕಣೇನಾಪಿ ಯಃ ಸಿಕ್ತೋ ಮನುಜೋತ್ತಮಃ ।
ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಪರಮಂ ಪದಂ ॥ ೬೯ ॥

ಯದ್ಬಿಂದುಸೇವನಾದೇವ ಸಗರಾನ್ವಯಸಂಭವಃ ।
ವಿಸೃಜ್ಯ ರಾಕ್ಷಸಂ ಭಾವಂ ಸಂಪ್ರಾಪ್ತಃ ಪರಮಂ ಪದಂ ॥ ೭೦ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ
ಪ್ರಥಮಪಾದೇ ಗಂಗಾಮಾಹಾತ್ಮ್ಯಂ ನಾಮ
ಷಷ್ಠೋಽಧ್ಯಾಯಃ

---

೬೮. ಗಂಗೆಯಲ್ಲಿ ಸ್ನಾನಮಾಡಿದವರು ಸರ್ವೋತ್ತಮವಾದ ವಿಷ್ಣು ಲೋಕವನ್ನು ಹೊಂದುತ್ತಾರೆ. ಜಗತ್ಸೃಷ್ಟಿಕರ್ತನು, ವಸುದೇವಪುತ್ರನು, ಅನಾದಿಯೂ ಆದ ನಾರಾಯಣನು ಗಂಗಾಸ್ನಾನದಲ್ಲಿ ಆಸಕ್ತರಾದ ಮನುಜರಿಗೆ ಇಷ್ಟಾರ್ಥಗಳನ್ನು ಪೂರ್ಣಮಾಡುತ್ತಾನೆ.

೬೯. ಗಂಗೋದಕದ ಒಂದು ತೊಟ್ಟಿನಿಂದಲಾದರೂ ಪ್ರೋಕ್ಷಿಸಿಕೊಂಡ ನರಶ್ರೇಷ್ಠನು ಸಕಲ ಪಾಪಗಳಿಂದಲೂ ಮುಕ್ತನಾಗಿ ವೈಕುಂಠಾದಿ ಲೋಕಕ್ಕೆ ಹೋಗುತ್ತಾನೆ.

೭೦. ಸಗರವಂಶದಲ್ಲಿ ಹುಟ್ಟಿದ ರಾಜನು ಗಂಗೋದಕದ ಒಂದು ತೊಟ್ಟನ್ನು ಸೇವಿಸಿದುದರಿಂದ ಅವನಿಗೆ ರಾಕ್ಷಸಭಾವವು ಹೋಗಿ ಮುಕ್ತಿಪದವಿಯು ದೊರಕಿತು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ
ಗಂಗಾಮಾಹಾತ್ಮ್ಯವರ್ಣನೆಯೆಂಬ ಆರನೆಯ ಅಧ್ಯಾಯವು
ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯದ ಆದಿಯಲ್ಲಿ ನಾರದರು ಅತ್ಯುತ್ತಮವಾದ ತೀರ್ಥ ಮತ್ತು ಕ್ಷೇತ್ರವಾವುದೆಂದು ಸನಕರನ್ನು ಕುರಿತು ಪ್ರಶ್ನೆಮಾಡಿದ್ದಾರೆ. ಅದಕ್ಕೆ ಉತ್ತರವಾಗಿ ಸನಕರು ಗಂಗಾಯಮುನಾನದಿಗಳ ಸಂಗಮಸ್ಥಾನವಾದ ಪ್ರಯಾಗ ಕ್ಷೇತ್ರವೇ ಅತ್ಯುತ್ತಮವಾದ ತೀರ್ಥಕ್ಷೇತ್ರವೆಂದು ಹೇಳಿ, ಪ್ರಯಾಗಕ್ಷೇತ್ರದ ಮತ್ತು ಗಂಗೆಯ ಮಾಹಾತ್ಮ್ಯೆಯನ್ನು ವಿಸ್ತಾರವಾಗಿ ನಿರೂಪಿಸಿ, ಕೊನೆಯಲ್ಲಿ ಗಂಗೋದಕಪ್ರೋಕ್ಷಣೆಯಿಂದ ಸಗರಕುಲೋತ್ಪನ್ನನಾದ ರಾಜನಿಗೆ ರಾಕ್ಷಸ ಭಾವವು ಹೋಗಿ ಮುಕ್ತಿಪದವಿಯು ದೊರಕಿತೆಂದು ಹೇಳಿದೆ.



# ಸಪ್ತಮೋಽಧ್ಯಾಯಃ

---

ನಾರದ ಉವಾಚ

**ಕೋಽಸೌ ರಾಕ್ಷಸಭಾವಾದ್ಧಿ ಮೋಚಿತಃ ಸಗರಾನ್ವಯೇ ।**
**ಸಗರಃ ಕೋ ಮುನಿಶ್ರೇಷ್ಠ ತನ್ಮಮಾಖ್ಯಾತುಮರ್ಹಸಿ ॥ ೧ ॥**

**ಶೃಣುಷ್ವ ಮುನಿಶಾರ್ದೂಲ ಗಂಗಾಮಾಹಾತ್ಮ್ಯಮುತ್ತಮಂ ।**
**ಯಜ್ಜಲಸ್ಪರ್ಶಮಾತ್ರೇಣ ಪಾವಿತಂ ಸಾಗರಂ ಕುಲಂ ॥ ೨ ॥**

**ಗತಂ ವಿಷ್ಣುಪದಂ ವಿಪ್ರ ಸರ್ವಲೋಕೋತ್ತಮೋತ್ತಮಂ ।**
**ಆಸೀದ್ರವಿಕುಲೇ ಜಾತೋ ಬಾಹುರ್ನಾಮ ವೃಕಾತ್ಮಜಃ ॥ ೩ ॥**

**ಬುಭುಜೇ ಪೃಥಿವೀಂ ಸರ್ವಾಂ ಧರ್ಮತೋ ಧರ್ಮತತ್ಪರಃ ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನ್ಯೇ ಚ ಜಂತವಃ ॥ ೪ ॥**

---

## ಏಳನೆಯ ಅಧ್ಯಾಯವು

೧. ನಾರದಮುನಿಯು ಹೇಳುತ್ತಾನೆ—ಮುನಿಶ್ರೇಷ್ಠನೇ ಸಗರನು ಯಾರು? ಅವನ ಕುಲದಲ್ಲಿ ರಾಕ್ಷಸಜನ್ಮದಿಂದ ಮುಕ್ತರಾದವರು ಯಾರು? ಇವುಗಳನ್ನು ನನಗೋಸ್ಕರವಾಗಿ ಉಪದೇಶಿಸಬೇಕು.

೨-೪. ಸನಕನು ಹೇಳುತ್ತಾನೆ—ಯಾವ ಜಲಸ್ಪರ್ಶಮಾತ್ರದಿಂದ ಸಗರ ಚಕ್ರವರ್ತಿಯ ಕುಲವು ಪವಿತ್ರವಾಗಿ ಉತ್ತಮೋತ್ತಮವಾದ ವಿಷ್ಣುಲೋಕವನ್ನು ಹೊಂದಿತೋ, ಅಂತಹ ಶ್ರೇಷ್ಠವಾದ ಗಂಗೆಯ ಮಾಹಾತ್ಮ್ಯೆಯನ್ನು ಹೇಳುತ್ತೇನೆ. ಮುನಿಶ್ರೇಷ್ಠನೇ ಕೇಳು—ಸೂರ್ಯವಂಶದಲ್ಲಿ ಬಾಹುವೆಂಬ ದೊರೆಯು ವೃಕಪುತ್ರನಾಗಿ ಹುಟ್ಟಿದನು. ಪರಮ ಧಾರ್ಮಿಕನಾದ ಆ ಬಾಹುವು ಧರ್ಮದಿಂದ ಸಕಲ ರಾಜ್ಯವನ್ನೂ ಅನುಭವಿಸುತ್ತಿದ್ದನು. ಅವನು ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಮತ್ತು ಇತರ ಪ್ರಾಣಿಗಳು ಇವರುಗಳನ್ನು ಅವರವರ ಧರ್ಮ

ಸ್ಥಾಪಿತಾಃ ಸ್ವಸ್ವಧರ್ಮೇಷು ತೇನ ಪ್ರಾಹುರ್ವಿಶಾಂ ಪತಿಂ ।
ಅಶ್ವಮೇಧೈರಿಯಾಜಾಸೌ ಸಪ್ತದ್ವೀಪೇಷು ಸಪ್ತಭಿಃ ॥ ೫ ॥

ಅತರ್ಪಯದ್ಭೂಮಿದೇವಾನ್ ಗೋಭೂಸ್ವರ್ಣಾಂಶುಕಾದಿಭಿಃ ।
ಅಶಾಸನ್ನೀತಿಶಾಸ್ತ್ರೇಣ ಯಥೇಷ್ಟಂ ಪರಿಪಂಥಿನಃ ॥ ೬ ॥

ನೋನೇ ಕೃತಾರ್ಥಮಾತ್ಮಾನಮನ್ಯಾತಪನಿವಾರಣಂ ।
ಚಂದನಾನಿ ಮನೋಜ್ಞಾನಿ ಅನುಲಿಪ್ಯ ನರಾಃ ಸದಾ ॥ ೭ ॥

ಭೂಷಿತಾ ಭೂಷಣೈರ್ದಿವ್ಯೈಸ್ತದ್ರಾಷ್ಟ್ರೇ ಸುಖಿನೋ ಮುನೇ ।
ಅಕೃಷ್ಟಪಚ್ಯಾ ಪೃಥಿವೀ ಫಲಪುಷ್ಪಸಮನ್ವಿತಾ ॥ ೮ ॥

ವವರ್ಷ ಭೂಮೌ ದೇವೇಂದ್ರಃ ಕಾಲೇ ಕಾಲೇ ಮುನೀಶ್ವರ ।
ಮನೋ ದಧುರ್ನಾಪರಾಧೇ ಪ್ರಜಾ ಧರ್ಮೇಣ ಪಾಲಿತಾಃ ॥ ೯ ॥

---

ದಲ್ಲಿಯೇ ನಿರತರಾಗಿರುವಂತೆ ಶಾಸನಮಾಡುತ್ತಿದ್ದುದರಿಂದ ಮನುಜಶ್ರೇಷ್ಠನೆಂದು ಪ್ರಸಿದ್ಧನಾದನು. ಈ ಬಾಹುರಾಜನು ಸಪ್ತದ್ವೀಪಗಳಲ್ಲಿಯೂ ಒಂದೊಂದು ದ್ವೀಪದಲ್ಲಿ ಒಂದೊಂದರಂತೆ ಏಳು ಅಶ್ವಮೇಧಯಾಗಗಳನ್ನು ಮಾಡಿದನು.

೬. ಅವನು ಗೋವು, ಭೂಮಿ, ಭಂಗಾರ, ವಸ್ತ್ರ ಮುಂತಾದವುಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿದನು. ನೀತಿಶಾಸ್ತ್ರೋಕ್ತಪ್ರಕಾರವಾಗಿ ಶತ್ರುಗಳನ್ನು ಚನ್ನಾಗಿ ಶಿಕ್ಷಿಸುತ್ತಿದ್ದನು.

೭-೯. ಇತರರ ದುಃಖನಿವಾರಣೆಮಾಡುವುದರಿಂದಲೇ ನಾನು ಕೃತಾರ್ಥನಾಗುತ್ತೇನೆಂದು ಆ ರಾಜನು ತಿಳಿದಿದ್ದನು. ಆ ದೊರೆಯ ರಾಜ್ಯಭಾರಕಾಲದಲ್ಲಿ ದೇಶದ ಪ್ರಜೆಗಳು ಯಾವಾಗಲೂ ಮನೋಹರವಾದ ಗಂಧಗಳನ್ನು ಲೇಪನ ಮಾಡಿಕೊಂಡು ಉತ್ತಮವಾದ ಆಭರಣಗಳನ್ನು ಧರಿಸಿ ಸುಖವಾಗಿರುತ್ತಿದ್ದರು. ಭೂಮಿಯು ಫಲಪುಷ್ಪಸಹಿತವಾದ ಸಸ್ಯಗಳಿಂದ ಪೂರ್ಣವಾಗಿತ್ತು ದೇವೇಂದ್ರನು ಕಾಲಕಾಲಕ್ಕೆ ಸರಿಯಾಗಿ ಮಳೆಯನ್ನು ಕರೆಯುತ್ತಿದ್ದನು. ಧರ್ಮದಿಂದ ಪಾಲಿಸಲ್ಪಡುತ್ತಿದ್ದ ಪ್ರಜೆಗಳೂ ಸಹ ಅಧರ್ಮಕಾರ್ಯಗಳಲ್ಲಿ ಮನಗೊಡುತ್ತಿರಲಿಲ್ಲ.

**ಏಕದಾ ತಸ್ಯ ಭೂಪಸ್ಯ ಸರ್ವಸಂಪದ್ವಿನಾಶಕೃತ್ ।**
**ಅಹಂಕಾರೋ ಮಹಾನ್ ಜಜ್ಞೇ ಸಾಸೂಯೋ ಲೋಭಹೇತುಕಃ ॥ ೧೦ ॥**

**ಅಹಂ ರಾಜಾ ಸಮಸ್ತಾನಾಂ ಲೋಕಾನಾಂ ಪಾಲಕೋ ಬಲೀ ।**
**ಕರ್ತಾ ಮಹಾಕ್ರತೂನಾಂ ಚ ಮತ್ತಃ ಪೂಜ್ಯೋಽಸ್ತಿ ಕೋಽಪರಃ ॥ ೧೧ ॥**

**ಅಹಂ ವಿಚಕ್ಷಣಃ ಶ್ರೀಮಾನ್ ಜಿತಾಃ ಸರ್ವೇ ಮಹಾರಯಃ ।**
**ವೇದವೇದಾಂಗತತ್ವಜ್ಞೋ ನೀತಿಶಾಸ್ತ್ರವಿಶಾರದಃ ॥ ೧೨ ॥**

**ಅಜೇಯೋಽವ್ಯಾಹತೈಶ್ವರ್ಯೋ ಮತ್ತಃ ಕೋಽನ್ಯೋಽಧಿಕೋ ಭುವಿ ।**
**ಅಹಂಕಾರಪರಸ್ಯೈವಂ ಜಾತಾಽಸೂಯಾ ಪರೇಷ್ವಪಿ ॥ ೧೩ ॥**

**ಅಸೂಯಾತೋಽಭವತ್ಕಾಮಸ್ತಸ್ಯ ರಾಜ್ಞೋ ಮುನೀಶ್ವರ ।**
**ಏಷು ಸ್ಥಿತೇಷು ತು ನರೋ ವಿನಾಶಂ ಯಾತ್ಯಸಂಶಯಂ ॥ ೧೪ ॥**

---

೧೦. ಒಂದಾನೊಂದು ಕಾಲದಲ್ಲಿ ಆ ಬಾಹುರಾಜನಿಗೆ ಸಕಲ ಸಂಪತ್ತುಗಳನ್ನೂ ನಾಶಮಾಡುವಂತಹ ಮಹತ್ತರವಾದ ಅಹಂಕಾರವು ಮತ್ತು ಲೋಭದಿಂದುಂಟಾಗುವ ಹೊಟ್ಟೇಕಿಚ್ಚು ಸಹ ಉತ್ಪನ್ನವಾಯಿತು.

೧೧–೧೪. ನಾನೇ ಸಕಲಲೋಕಗಳಿಗೂ ರಕ್ಷಕನಾದ ರಾಜನು, ಬಲಿಷ್ಠನು, ಮಹಾಕ್ರತುಗಳನ್ನು ಮಾಡಿರುವವನು, ನನಗಿಂತ ಬೇರೆ ಪೂಜ್ಯರಾರಿದ್ದಾರೆ? ನಾನೇ ವಿವೇಚನಶೀಲನು, ಐಶ್ವರ್ಯವಂತನು, ದೊಡ್ಡ ಶತ್ರುಗಳನ್ನೆಲ್ಲಾ ಗೆದ್ದಿರುವವನು, ವೇದ ಮತ್ತು ಶಿಕ್ಷಾ ವ್ಯಾಕರಣಾದಿ ಅಂಗಶಾಸ್ತ್ರಗಳಲ್ಲಿ ಪಾರಂಗತನು, ನೀತಿಶಾಸ್ತ್ರದಲ್ಲಿ ಪಂಡಿತನು ಯಾರೂ ನನ್ನನ್ನು ಜಯಿಸಲಾರರು, ಲೋಪಬಾರದಂತಹ ಐಶ್ವರ್ಯಸಂಪನ್ನನು, ಈ ಭೂಲೋಕದಲ್ಲಿ ನನಗಿಂತ ದೊಡ್ಡವನಾರು? ಈರೀತಿಯಾಗಿ ತಿಳಿದು ಅಹಂಕಾರದಿಂದ ಮತ್ತನಾದನು. ಅದರಿಂದ ಇತರರಲ್ಲಿ ಹೊಟ್ಟೇಕಿಚ್ಚು (ಅಸೂಯೆ) ಅದರಿಂದ ಕಾಮ ಮುಂತಾಗಿ ಅನರ್ಥ ಪರಂಪರೆಯುಂಟಾಯಿತು. ಮುನೀಶ್ವರನೇ ಇಂತಹ ಅಹಂಕಾರಾದಿಗಳುಂಟಾದರೆ ಮನುಷ್ಯನು ಖಂಡಿತ ನಾಶವಾಗುತ್ತಾನೆ.

ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ॥ ೧೫ ॥

ತಸ್ಯಾಸೂಯಾ ತು ಮಹತೀ ಜಾತಾ ಲೋಕವಿರೋಧಿನೀ ।
ಸ್ವದೇಹನಾಶಿನೀ ವಿಪ್ರ ಸರ್ವಸಂಪದ್ವಿನಾಶಿನೀ ॥ ೧೬ ॥

ಅಸೂಯಾವಿಷ್ಟಮನಸಿ ಯದಿ ಸಂಪತ್ಪ್ರವರ್ತತೇ ।
ತುಷಾಗ್ನಿವಾಯುಸಂಯೋಗಮಿವ ಜಾನೀಹಿ ಸುವ್ರತ ॥ ೧೭ ॥

ಅಸೂಯೋಪೇತಮನಸಾಂ ದಂಭಾಚಾರವತಾಂ ತಥಾ ।
ಪರುಷೋಕ್ತಿರತಾನಾಂ ಚ ಸುಖಂ ನೇಹ ಪರತ್ರ ಚ ॥ ೧೮ ॥

---

೧೫. ಯೌವನ, ಐಶ್ವರ್ಯ, ದೊರೆತನ, ಅವಿವೇಕ ಈ ನಾಲ್ಕರಲ್ಲಿ ಒಂದೊಂದೂ ಸಹ ಮಹಾ ಅನರ್ಥವನ್ನುಂಟುಮಾಡುತ್ತದೆ, ಅಂದಬಳಿಕ ಯಾರಲ್ಲಿ ಮೇಲ್ಕಂಡ ನಾಲ್ಕೂ ಸೇರಿರುತ್ತವೆಯೋ ಅವರಿಗೆ ಅನರ್ಥಪರಂಪರೆ ಯುಂಟಾಗುವುದೆಂದು ಹೇಳತಕ್ಕದ್ದೇನು ?

೧೬. ಆ ಬಾಹುರಾಜನಿಗೆ ಪ್ರಪಂಚಕ್ಕೇ ದ್ವೇಷಿಯಾದ, ತನ್ನ ಶರೀರ ಮತ್ತು ಸಕಲ ಸಂಪತ್ತುಗಳಿಗೆ ವಿನಾಶಕವಾದ ಅಸೂಯೆಯು ಅತ್ಯಧಿಕವಾಗಿ ಉತ್ಪನ್ನವಾಯಿತು.

೧೭. ಸಮೀಚೀನವ್ರತವನ್ನಾಚರಿಸುವ ನಾರದನೇ ! ಅಸೂಯಮನಸ್ಕ ರಾದವರಿಗೆ ಲಭಿಸಿದ ಐಶ್ವರ್ಯವು ಹೊಟ್ಟಿನ ಬೆಂಕಿಯು ಗಾಳಿ ಬೀಸುವುದರಿಂದ ಶಾಂತವಾಗುವಂತೆ ನಾಶವಾಗುತ್ತದೆಂದು ತಿಳಿ.

೧೮. ಮನಸ್ಸಿನಲ್ಲಿ ಹೊಟ್ಟೇಕಿಚ್ಚುಪಡುವವರು, ಮನಃಪೂರ್ವಕವಾಗಿ ಲ್ಲದೆ ಬಾಹ್ಯದಲ್ಲಿ ಮಾತ್ರ ಸದಾಚಾರವನ್ನು ತೋರಿಸುವವರು ಮತ್ತು ಕಠಿಣ ವಾಗಿ ಇತರರನ್ನು ನೋಯಿಸುವ ಮಾತುಗಳನ್ನೇ ಆಡುವವರು ಇವರುಗಳಿಗೆ ಈಲೋಕ ಮತ್ತು ಪರಲೋಕಗಳಲ್ಲಿ ಸುಖವುಂಟಾಗುವುದಿಲ್ಲ.

ಅಸೂಯಾವಿಷ್ಟಚಿತ್ತಾನಾಂ ಸದಾ ನಿಷ್ಠುರಭಾಷಿಣಾಂ ।
ಪ್ರಿಯಾ ವಾ ತನಯಾ ವಾಽಪಿ ಬಾಂಧವಾ ಅಪ್ಯರಾತಯಃ ॥ ೧೯ ॥

ಮನೋಭಿಲಾಷಂ ಕುರುತೇ ಯಃ ಸಮೀಕ್ಷ್ಯ ಪರಸ್ತ್ರಿಯಂ ।
ಸ ಸ್ವಸಂಪದ್ವಿನಾಶಾಯ ಕುಠಾರೋ ನಾತ್ರ ಸಂಶಯಃ ॥ ೨೦ ॥

ಯಃ ಸ್ವಶ್ರೇಯೋವಿನಾಶಾಯ ಕುರ್ಯಾದ್ಯತ್ನಂ ನರೋ ಮುನೇ ।
ಸರ್ವೇಷಾಂ ಶ್ರೇಯಸಂ ದೃಷ್ಟ್ವಾ ಸ ಕುರ್ಯಾನ್ಮತ್ಸರಂ ಕುಧೀಃ ॥ ೨೧ ॥

ಮಿತ್ರಾಪತ್ಯಗೃಹಕ್ಷೇತ್ರಧನಧಾನ್ಯಪಶುಷ್ವಪಿ ।
ಹಾನಿಮಿಚ್ಛನ್ನರಃ ಕುರ್ಯಾದಸೂಯಾಂ ಸತತಂ ದ್ವಿಜ ॥ ೨೨ ॥

---

೧೯. ಅಸೂಯಹೃದಯರಾಗಿ ಯಾವಾಗಲೂ ಕಠಿಣವಾಗಿ ಮಾತನಾಡುವವರಿಗೆ ಹೆಂಡತಿ, ಮಕ್ಕಳು ಮತ್ತು ನಂಟರೂ ಸಹ ಶತ್ರುಗಳಾಗುತ್ತಾರೆ.

೨೦. ಯಾವನು ಇತರ ಹೆಂಗಸರನ್ನು ನೋಡಿ ಮನಸ್ಸಿನಲ್ಲಿಯಾದರೂ ಭೋಗಿಸಲಿಚ್ಛಿಸುತ್ತಾನೆಯೋ ಅಂತಹವನು ತನ್ನ ಐಶ್ವರ್ಯವನ್ನು ನಾಶಪಡಿಸುವ ಕೊಡಲಿಯಾಗುತ್ತಾನೆಂಬುದರಲ್ಲಿ ಸಂಶಯವಿಲ್ಲ.

೨೧. ಋಷಿಯೇ ! ಯಾವನು ತನ್ನ ಶ್ರೇಯಸ್ಸನ್ನು ಹಾಳುಮಾಡಿಕೊಳ್ಳುವ ವ್ಯಾಪಾರವನ್ನು ಮಾಡುತ್ತಾನೆಯೋ ಅಂತಹ ದುಷ್ಟಬುದ್ಧಿಯುಳ್ಳ ಮನುಷ್ಯನು ಸಕಲರ ಶ್ರೇಯಸ್ಸನ್ನು ನೋಡಿ ಮಾತ್ಸರ್ಯಗ್ರಸ್ತನಾಗುತ್ತಾನೆ.

೨೨. ದ್ವಿಜನೇ ! ಸ್ನೇಹಿತರು, ಮಕ್ಕಳು, ಮನೆ, ಜಮೀನು, ಹಣ, ಧಾನ್ಯ, ದನಕರುಗಳು ಇವುಗಳನ್ನೆಲ್ಲಾ ನಾಶಮಾಡಿಕೊಳ್ಳಬೇಕೆಂದು ಅಪೇಕ್ಷಿಸುವ ಮನುಷ್ಯನು ಯಾವಾಗಲೂ ಅಸೂಯೆಯಿಂದ ವರ್ತಿಸಬೇಕು. ಸಕಲ ಶ್ರೇಯೋವಿಘಾತಕವಾದ ಅಸೂಯೆಯನ್ನು ಸರ್ವಥಾ ಪರಿತ್ಯಾಗಮಾಡಬೇಕೆಂದು ತಾತ್ಪರ್ಯ.

**ಅಥ ತಸ್ಯಾವಿನೀತಸ್ಯ ಹ್ಯಸೂಯಾವಿಷ್ಟಚೇತಸಃ ।**
**ಹೈಹಯಾಸ್ತಾಲಜಂಘಾಶ್ಚ ಬಲಿನೋಽರಾತಯೋಽಭವನ್ ॥ ೨೩ ॥**

**ಯಸ್ಯಾನುಕೂಲೋ ಲಕ್ಷ್ಮೀಶಃ ಸೌಭಾಗ್ಯಂ ತಸ್ಯ ವರ್ಧತೇ ।**
**ಸ ಏವ ವಿಮುಖೋ ಯಸ್ಯ ಸೌಭಾಗ್ಯಂ ತಸ್ಯ ಹೀಯತೇ ॥ ೨೪ ॥**

**ತಾವತ್ಪುತ್ರಾಶ್ಚ ಪೌತ್ರಾಶ್ಚ ಧನಧಾನ್ಯಗೃಹಾದಯಃ ।**
**ಯಾವದೀಕ್ಷೇತ ಲಕ್ಷ್ಮೀಶಃ ಕೃಪಾಪಾಂಗೇನ ನಾರದ ॥ ೨೫ ॥**

**ಅಪಿ ಮೂರ್ಖಾಂಧಬಧಿರಜಡಾಶೂರಾವಿವೇಕಿನಃ ।**
**ಶ್ಲಾಘ್ಯಾ ಭವಂತಿ ವಿಪ್ರೇಂದ್ರ ಪ್ರೇಕ್ಷಿತಾ ಮಾಧವೇನ ಯೇ ॥ ೨೬ ॥**

**ಸೌಭಾಗ್ಯಂ ತಸ್ಯ ಹೀಯೇತ ಯಸ್ಯಾಸೂಯಾದಿ ಲಾಂಛನಂ ।**
**ಜಾಯತೇ ನಾತ್ರ ಸಂದೇಹೋ ಜಂತುದ್ವೇಷೋ ವಿಶೇಷತಃ ॥ ೨೭ ॥**

---

೨೩. ತರುವಾಯ ಅವಿನೀತನೂ, ಅಸೂಯಾಹೃದಯನೂ ಆದ ಆ ಬಾಹುರಾಜನಿಗೆ ಸಮರ್ಥರಾದ ಹೈಹಯರೂ ಮತ್ತು ತಾಲಜಂಘರೂ ಸಹ ಶತ್ರುಗಳಾದರು.

೨೪. ಲಕ್ಷ್ಮೀಪತಿಯಾದ ನಾರಾಯಣನು ಯಾವನ ವಿಷಯದಲ್ಲಿ ಪ್ರಸನ್ನನಾಗುತ್ತಾನೆಯೋ ಅಂತಹವನಿಗೆ ಐಶ್ವರ್ಯವು ಅಭಿವೃದ್ಧಿಯಾಗುತ್ತದೆ. ಅದೇ ಲಕ್ಷ್ಮೀಪತಿಯು ಉದಾಸೀನನಾದರೆ ಅವನಐಶ್ವರ್ಯವು ನಾಶವಾಗುತ್ತದೆ.

೨೫. ನಾರದನೇ ! ಲಕ್ಷ್ಮೀಪತಿಯು ಕೃಪಾಕಟಾಕ್ಷವನ್ನು ಬೀರಿರುವವರೆಗೆ ಮಕ್ಕಳು, ಮೊಮ್ಮಕ್ಕಳು, ಧನ, ಧಾನ್ಯ, ಮನೆ ಮುಂತಾದುವುಗಳೆಲ್ಲವೂ ಅನು ಕೂಲವಾಗಿರುತ್ತವೆ.

೨೬. ಬ್ರಾಹ್ಮಣಶ್ರೇಷ್ಠನೇ ! ಮೂರ್ಖ, ಕುರುಡ, ಕಿವುಡ, ಅಜ್ಞಾನಿ ಪರಾಕ್ರಮವಿಲ್ಲದವನು ಮತ್ತು ವಿವೇಕರಹಿತನು, ಇಂತಹವರೂ ಸಹ ಲಕ್ಷ್ಮೀ ಪತಿಯ ಕೃಪಾಕಟಾಕ್ಷಕ್ಕೆ ಪಾತ್ರರಾದರೆ ಸ್ತೋತ್ರಾರ್ಹರಾಗುತ್ತಾರೆ.

೨೭. ಅಸೂಯಾದಿ ಚಿಹ್ನೆಗಳಿರುವವರಿಗೆ ಸೌಭಾಗ್ಯವು ನಾಶವಾಗುತ್ತದೆ. ವಿಶೇಷವಾಗಿ ಇತರರಲ್ಲಿ ದ್ವೇಷವುಂಟಾಗುತ್ತದೆ ಈ ವಿಷಯದಲ್ಲಿ ಸಂಶಯವಿಲ್ಲ.

ಸತತಂ ಯಸ್ಯ ಕಸ್ಯಾಪಿ ಯೋ ದ್ವೇಷಂ ಕುರುತೇ ನರಃ ।
ತಸ್ಯ ಸರ್ವಾಣಿ ನಶ್ಯಂತಿ ಶ್ರೇಯಾಂಸಿ ಮುನಿಸತ್ತಮ ॥ ೨೮ ॥

ಅಸೂಯಾ ವರ್ತತೇ ಯಸ್ಯ ತಸ್ಯ ವಿಷ್ಣುಃ ಪರಾಙ್ಮುಖಃ ।
ಧನಂ ಧಾನ್ಯಂ ಮಹೀ ಸಂಪದ್ವಿನಶ್ಯತಿ ತತೋ ಧ್ರುವಂ ॥ ೨೯ ॥

ವಿವೇಕಂ ಹಂತ್ಯಹಂಕಾರಸ್ತ್ವವಿವೇಕಾತ್ತು ಜೀವಿನಾಂ ।
ಆಪದಃ ಸಂಭವಂತ್ಯೇವೇತ್ಯಹಂಕಾರಂ ತ್ಯಜೇತ್ತತಃ ॥ ೩೦ ॥

ಅಹಂಕಾರೋ ಭವೇದ್ಯಸ್ಯ ತಸ್ಯ ನಾಶೋತಿವೇಗತಃ ।
ಅಸೂಯಾವಿಷ್ಟಮನಸಸ್ತಸ್ಯ ರಾಜ್ಞಃ ಪರೈಃ ಸಹ ॥ ೩೧ ॥

ಆಯೋಧನಮಭೂದ್ಘೋರಂ ಮಾಸಮೇಕಂ ನಿರಂತರಂ ।
ಹೈಹಯೈಸ್ತಾಲಜಂಘೈಶ್ಚ ರಿಪುಭಿಃ ಸ ಪರಾಜಿತಃ ॥ ೩೨ ॥

---

೨೮. ಮುನಿವರ್ಯನೇ! ಯಾವಾಗಲೂ ಒಬ್ಬನನ್ನು ದ್ವೇಷಿಸುತ್ತಿರುವವನಿಗೆ ಸಕಲಶ್ರೇಯಸ್ಸುಗಳೂ ನಾಶವಾಗುತ್ತವೆ.

೨೯ ಅಸೂಯೆಯುಳ್ಳ ಮನುಷ್ಯನಿಗೆ ವಿಷ್ಣುವು ಪ್ರಸನ್ನನಾಗುವುದಿಲ್ಲ, ಆದರಿಂದ ಹಣ, ಧಾನ್ಯ, ಭೂಮಿ, ಮುಂತಾದ ಸಂಪತ್ತುಗಳು ಖಂಡಿತವಾಗಿಯೂ ನಾಶವಾಗುತ್ತವೆ.

೩೦. ಅಹಂಕಾರವು ವಿವೇಕವನ್ನು ನಾಶಪಡಿಸುತ್ತದೆ. ಅವಿವೇಕದಿಂದ ಕಷ್ಟಗಳುಂಟಾಗುತ್ತವೆ. ಆದುದರಿಂದ ಜನರು ಅಹಂಕಾರವನ್ನು ಬಿಡಬೇಕು.

೩೧-೩೨. ಗರ್ವಪಡುವವನು ಬಹುಬೇಗ ನಾಶವಾಗುವನು. ಅಸೂಯಮನಸ್ಕನಾದ ಆ ರಾಜನಿಗೆ ಶತ್ರುಗಳೊಡನೆ ಒಂದು ತಿಂಗಳುಕಾಲ ಭಯಂಕರವಾದ ಯುದ್ಧವು ಒದಗಿತು. ಅದರಲ್ಲಿ ಆ ಬಾಹುರಾಜನು ಹೈಹಯ ಮತ್ತು ಕಾಲಜಂಘರೆಂಬ ಶತ್ರುಗಳಿಂದ ಪರಾಜಿತನಾದನು.

**ಸ ತು ಬಾಹುಸ್ತತೋ ದುಃಖೀ ಅಂತರ್ವತ್ನ್ಯಾ ಸ್ವಭಾರ್ಯಯಾ ।**
**ಅವಾಪ ಪರಮಾಂ ತುಷ್ಟಿಂ ತತ್ರ ದೃಷ್ಟ್ವಾ ಮಹತ್ಸರಃ ॥ ೩ ॥**

**ಅಸೂಯೋಪೇತಮನಸಸ್ತಸ್ಯ ಭಾವಂ ನಿರೀಕ್ಷ್ಯ ಚ ।**
**ಸರೋಗತಾ ವಿಹಂಗಾಸ್ತೇ ಲೀನಾಶ್ಚಿತ್ರಮಿದಂ ಮಹತ್ ॥ ೩೪ ॥**

**ಅಹೋ ಕಷ್ಟಮಸೌ ನೂನಂ ಪಾಪಕರ್ಮಾ ಸಮಾಗತಃ ।**
**ವಿಶಂತಸ್ತ್ವರಯಾ ವಾಸಮಿತ್ಯೂಚುಸ್ತೇ ವಿಹಂಗಮಾಃ ॥ ೩೫ ॥**

**ಸೋಽವಗಾಹ್ಯ ಸರೋ ಭೂಪಃ ಪತ್ನೀಭ್ಯಾಂ ಸಹಿತೋ ಮುದಾ ।**
**ಪೀತ್ವಾ ಜಲಂ ಚ ಸುಖದಂ ವೃಕ್ಷಮೂಲಮುಪಾಶ್ರಿತಃ ॥ ೩೬ ॥**

**ತಸ್ಮಿನ್ ಬಾಹೌ ವನಂ ಯಾತೇ ತೇನೈವ ಪರಿರಕ್ಷಿತಾಃ ।**
**ದುರ್ಗುಣಾನ್ಪಿಗಣಯ್ಯಾಸ್ಯ ಧಿಗ್ಧಿಗಿತ್ಯಬ್ರುವನ್ ಪ್ರಜಾಃ ॥ ೩೭ ॥**

---

೩೩. ಅನಂತರ ಆ ಬಾಹುರಾಜನು ದುಃಖಿತನಾಗಿ ಗರ್ಭಿಣಿಯಾದ ತನ್ನ ಹೆಂಡತಿಯ ಸಂಗಡ ವನಕ್ಕೆ ಹೊರಟು, ಅಲ್ಲಿ ದೊಡ್ಡ ಸರೋವರವನ್ನು ನೋಡಿ ಬಹಳ ಸಂತೋಷಪಟ್ಟನು.

೩೪. ಅಸೂಯೆಯಿಂದ ಕೂಡಿದ ಮನಸ್ಸುಳ್ಳ ಆ ರಾಜನ ಭಾವವನ್ನು ನೋಡಿ ಸರೋವರದಲ್ಲಿದ್ದ ಪಕ್ಷಿಗಳೆಲ್ಲವೂ ಮರೆಯಾದವು. ಇದು ಆಶ್ಚರ್ಯಕರ.

೩೫. ಆ ಪಕ್ಷಿಗಳು ವೇಗವಾಗಿ ತಮ್ಮ ವಾಸಸ್ಥಾನಗಳಿಗೆ ಹೋಗುತ್ತಾ ಅಯ್ಯೋ ಕಷ್ಟ. ಈ ಪಾಪಿಷ್ಠನು ಇಲ್ಲಿಗೆ ಬಂದನು ಎಂಬುದಾಗಿ ಹೇಳಿದವು.

೩೬. ಆ ರಾಜನು ಹೆಂಡತಿಯರಿಂದ ಕೂಡಿ ಸಂತೋಷವಾಗಿ ಸರೋವರದಲ್ಲಿಳಿದು ನೀರನ್ನು ಕುಡಿದು ಸುಖಪ್ರದವಾದ ವೃಕ್ಷದ ನೆರಳಿನಲ್ಲಿ ವಿಶ್ರಮಿಸಿಕೊಂಡನು.

೩೭. ಆ ಬಾಹುವು ಕಾಡಿಗೆ ಹೋದಕೂಡಲೇ ಅವನಿಂದ ರಕ್ಷಿತರಾದ ಪ್ರಜೆಗಳೇ ಅವನ ದುರ್ಗುಣಗಳನ್ನು ಪರಿಗಣಿಸುತ್ತಾ ಛೀ, ಛೀ, ಎಂಬುದಾಗಿ ಹೇಳುತ್ತಿದ್ದರು.

ಯೋ ವಾ ಕೋ ವಾ ಗುಣೀ ಮರ್ತ್ಯಃ ಸರ್ವಶ್ಲಾಘ್ಯತರೋ ದ್ವಿಜ ।
ಸರ್ವಸಂಪತ್ಸಮಾಯುಕ್ತೋಽಪ್ಯಗುಣೀ ನಿಂದಿತೋ ಜನೈಃ ॥ ೩೮ ॥

ಅಪಕೀರ್ತಿಸಮೋ ಮೃತ್ಯುರ್ಲೋಕೇಷ್ವನ್ಯೋ ನ ವಿದ್ಯತೇ ।
ಯದಾ ಬಾಹುರ್ವನಂ ಯಾತಸ್ತದಾ ತದ್ರಾಗಗಾ ಜನಾಃ ॥ ೩೯ ॥

ಸಂತುಷ್ಟಿಂ ಪರಮಾಂ ಯಾತಾಃ ಸ್ವರಿಪೌ ವಿಗತೇ ಯಥಾ ।
ನಿಂದಿತೋ ಬಹುಶೋ ಬಾಹುರ್ನ್ಯವಸತ್ಕಾನನೇ ಸ್ಥಿತಃ ॥ ೪೦ ॥

ನ ಹಂತಿ ಕಮಪಯಶೋ ಲೋಕೇ ವಿಬುಧಸತ್ತಮ ।
ನಾಸ್ತ್ಯಕೀರ್ತಿಸಮೋ ಮೃತ್ಯುರ್ನಾಸ್ತಿ ಕ್ರೋಧಸಮೋ ರಿಪುಃ ॥ ೪೧ ॥

ನಾಸ್ತಿ ನಿಂದಾಸಮಂ ಪಾಪಂ ನಾಸ್ತಿ ಮೋಹಸಮಂ ಭಯಂ ।
ನಾಸ್ತ್ಯಸೂಯಾಸಮಾಽಕೀರ್ತಿರ್ನಾಸ್ತಿ ಕಾಮಸಮೋಽನಲಃ ॥ ೪೨ ॥

---

೩೮. ದ್ವಿಜನೇ! ಯಾವನಾದರೂ ಆಗಲಿ ಸುಗುಣಶಾಲಿಯಾದರೆ ಎಲ್ಲರೂ ಅವನನ್ನು ಹೊಗಳುತ್ತಾರೆ. ಅಷ್ಟೈಶ್ವರ್ಯಸಂಪನ್ನನಾದರೂ ಗುಣವಿಲ್ಲದವನು ಜನಗಳಿಂದ ದೂಷಿಸಲ್ಪಡುತ್ತಾನೆ.

೩೯–೪೦. ಲೋಕದಲ್ಲಿ ಅಪಕೀರ್ತಿಯೇ ಮೃತ್ಯುವು ಅದಕ್ಕೆ ಸಮಾನವಾದ ಮೃತ್ಯುವು ಮತ್ತೊಂದಿಲ್ಲ. ಬಾಹುರಾಜನು ಅರಣ್ಯಕ್ಕೆ ಹೋದಕೂಡಲೇ ಹಿಂದೆ ಅವನಿಗೆ ಪ್ರೀತಿಪಾತ್ರರಾಗಿದ್ದ ಜನರೂ ಸಹ ತಮ್ಮ ಶತ್ರುಗಳು ಹೋದರೆ ಹೇಗೆ ಸಂತೋಷಪಡುತ್ತಾರೆಯೋ ಅದರಂತೆ ಅತ್ಯಂತವಾಗಿ ಸಂತೋಷಪಟ್ಟರು. ಬಹಳವಾಗಿ ಪೌರಜನಗಳಿಂದ ದೂಷಿಸಲ್ಪಟ್ಟ ಬಾಹುವು ಸತ್ತಂತೆ ಅರಣ್ಯದಲ್ಲಿದ್ದನು.

೪೧. ಪಂಡಿತೋತ್ತಮನೇ ! ಲೋಕದಲ್ಲಿ ಅಪಕೀರ್ತಿಯು ಯಾರನ್ನು ತಾನೆ ಸಂಹಾರಮಾಡಲಾರದು, ಅಪಯಶಸ್ಸಿಗೆ ಸಮಾನವಾದ ಮೃತ್ಯುವಿಲ್ಲ. ಕ್ರೋಧಕ್ಕೆ ಸದೃಶವಾದ ಶತ್ರುವಿಲ್ಲ.

೪೨. ಪರದೂಷಣೆಗೆ ಸಮಾನವಾದ ಪಾಪವಿಲ್ಲ. ಮೋಹಕ್ಕೆ ಸಮನಾದ ಭಯಂಕರ ವಸ್ತುವಿಲ್ಲ. ಹೊಟ್ಟೇಕಿಚ್ಚಿಗೆ ಸಮಾನವಾದ ಅಪಕೀರ್ತಿಕರ ವಸ್ತುವಿಲ್ಲ, ಕಾಮಕ್ಕೆ ಸರಿತೂಗುವ ಬೆಂಕಿಯಿಲ್ಲ.

ನಾಸ್ತಿ ರಾಗಸಮಃ ಪಾಶೋ ನಾಸ್ತಿ ಸಂಗಸಮಂ ವಿಷಂ ।
ಏವಂ ವಿಲಪ್ಯ ಬಹುಧಾ ಬಾಹುರತ್ಯಂತದುಃಖಿತಃ ॥ ೪೩ ॥

ಜೀರ್ಣಾಂಗೋ ಮನಸಸ್ತಾಪಾದ್ವೃದ್ಧಭಾವಮುಪಾಗತಃ ।
ಗತೇ ಬಹುತಿಥೇ ಕಾಲೇ ಔರ್ವಾಶ್ರಮಸಮೀಪತಃ ॥ ೪೪ ॥

ಸ ಬಾಹುರ್ವ್ಯಾಧಿನಾ ಗ್ರಸ್ತೋ ಮಮಾರ ಮುನಿಸತ್ತಮ ।
ತಸ್ಯ ಭಾರ್ಯಾತಿದುಃಖಾರ್ತಾ ಕನಿಷ್ಠಾ ಗರ್ಭಿಣೀ ತದಾ ॥ ೪೫ ॥

ಚಿರಂ ವಿಲಪ್ಯ ಬಹುಧಾ ಸಹಗಂತುಂ ಮನೋ ದಧೇ ।
ಆನೀಯ ಸಾ ತತಸ್ತ್ವಿಂಧಾನ್ ಚಿತಾಂ ಕೃತ್ವಾತಿದುಃಖಿತಾ ॥ ೪೬ ॥

ಆರೋಪ್ಯ ಪತಿಮಾರೋಢುಂ ಸ್ವಯಂ ಸಮುಪಚಕ್ರಮೇ ।
ಏತಸ್ಮಿನ್ನಂತರೇ ಧೀಮಾನೌರ್ವಸ್ತೇಜೋನಿಧಿರ್ಮುನಿಃ ॥ ೪೭ ॥

ಏತದ್ವಿಜ್ಞಾತವಾನ್ ಸರ್ವಂ ಪರಮೇಣ ಸಮಾಧಿನಾ ।
ಭೂತಂ ಭವ್ಯಂ ವರ್ತಮಾನಂ ತ್ರಿಕಾಲಜ್ಞಾ ಮುನೀಶ್ವರಾಃ ॥ ೪೮ ॥

---

೪೩. ವಿಷಯಾಭಿಲಾಷೆಗೆ ಸದೃಶವಾದ ಬಂಧನವಿಲ್ಲ; ದುರ್ಜನಸಂಗಕ್ಕೆ ಸಮಾನವಾದ ವಿಷವಿಲ್ಲ ಎಂದು ಬಹಳವಾಗಿ ಹಂಬಲಿಸುತ್ತಾ ಬಾಹುವು ಅತ್ಯಂತ ದುಃಖಪಡುತ್ತಿದ್ದನು.

೪೪–೪೫. ಋಷಿವರ್ಯನೇ! ಮನಸ್ಸಿನ ದುಃಖದಿಂದ ಅವಯವಗಳೆಲ್ಲಾ ಶಿಥಿಲವಾಗಿ ಬಾಹುವಿಗೆ ಮುದಿತನವು ಬಂದಿತು. ಹಾಗೆಯೇ ಔರ್ವಮುನಿಗಳ ಆಶ್ರಮಸಮೀಪದಲ್ಲಿ ಬಹುಕಾಲ ಕಳೆಯುತ್ತಿರಲು ರೋಗವು ಬಂದು ಬಾಹುವು ಮೃತನಾದನು. ಆಗ ಗರ್ಭಿಣಿಯಾಗಿದ್ದ ಬಾಹುವಿನ ಚಿಕ್ಕ ಹೆಂಡತಿಯು ಅತ್ಯಂತ ದುಃಖಪೀಡಿತಳಾದಳು.

೪೬-೫೦. ಅವಳು ಬಹುಹೊತ್ತು ಅನೇಕವಿಧವಾಗಿ ರೋದನಮಾಡಿ ಸಹಗಮನಮಾಡಬೇಕೆಂದು ಮನಸ್ಸುಮಾಡಿದಳು. ತರುವಾಯ ದುಃಖಪಡುತ್ತಲೇ ಕಟ್ಟಿಗೆಯನ್ನು ತಂದು ಚಿತೆಯನ್ನು ಮಾಡಿ, ಅದರಲ್ಲಿ ತನ್ನ ಗಂಡನನ್ನು

**ಗತಾಸೂಯಾ ಮಹಾತ್ಮಾನಃ ಪಶ್ಯಂತಿ ಜ್ಞಾನಚಕ್ಷುಷಾ ।**
**ತಪೋಭಿಸ್ತೇಜಸಾಂ ರಾಶಿರೌರ್ವಃ ಪುಣ್ಯತಮೋ ಮುನಿಃ ॥ ೪೯ ॥**

**ಸಂಪ್ರಾಪ್ತಸ್ತತ್ರ ಸಾಧ್ವೀ ಚ ಯತ್ರ ಬಾಹುಪ್ರಿಯಾ ಸ್ಥಿತಾ ।**
**ಚಿತಾಮಾರೋಢುಮುದ್ಯುಕ್ತಾಂ ತಾಂ ದೃಷ್ಟ್ವಾ ಮುನಿಸತ್ತಮಃ ॥ ೫೦ ॥**

**ಪ್ರೋವಾಚ ಧರ್ಮಮೂಲಾನಿ ವಾಕ್ಯಾನಿ ವಿಬುಧರ್ಷಭಃ ।**

**ಔರ್ವ ಉವಾಚ**

**ರಾಜವರ್ಯಪ್ರಿಯೇ ಸಾಧ್ವೀ ಮಾ ಕುರುಷ್ವಾತಿಸಾಹಸಂ ॥ ೫೧ ॥**

**ತವೋದರೇ ಚಕ್ರವರ್ತೀ ಶತ್ರುಹಂತಾ ಹಿ ತಿಷ್ಠತಿ ।**
**ಬಾಲಾಪತ್ಯಾಶ್ಚ ಗರ್ಭಿಣ್ಯೋ ಹ್ಯದೃಷ್ಟಋತವಸ್ತಥಾ ॥ ೫೨ ॥**

---

ಮಲಗಿಸಿ, ತಾನೂ ಸಹ ಚಿತೆಯನ್ನು ಹತ್ತಲುದ್ಯುಕ್ತಳಾದಳು. ಆಸಮಯಕ್ಕೆ ಸರಿಯಾಗಿ ಜ್ಞಾನಿಯು, ಮಹಾ ತೇಜಸ್ವಿಯೂ ಆದ ಔರ್ವಮುನಿಯು ಉತ್ತಮವಾದ ಸಮಾಧಿಯೋಗದಿಂದ ಈ ಸಕಲ ವೃತ್ತಾಂತವನ್ನೂ ತಿಳಿದನು. ತ್ರಿಕಾಲಜ್ಞಾನಿಗಳು, ಅಸೂಯಾರಹಿತರು, ಮಹಾತ್ಮರೂ ಆದ ಮುನಿಶ್ರೇಷ್ಠರು ಜ್ಞಾನವೆಂಬ ಕಣ್ಣಿನಿಂದ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ನಡೆಯುತಕ್ಕ ಸಕಲ ವ್ಯಾಪಾರಗಳನ್ನೂ ಸಾಕ್ಷಾತ್ತಾಗಿ ನೋಡುತ್ತಾರೆ. ತಪಸ್ಸುಗಳಿಂದ ಪ್ರಕಾಶಸಮೂಹರೂಪನಾದ, ಅತ್ಯಂತ ಪುಣ್ಯಶಾಲಿಯಾದ ಔರ್ವಮುನಿಯು ಬಾಹುಪತ್ನಿಯಿದ್ದೆಡೆಗೆ ಬಂದು ಚಿತೆಯನ್ನು ಹತ್ತಲುದ್ಯುಕ್ತಳಾದ ಅವಳನ್ನು ನೋಡಿದನು.

೫೧-೫೨. ಜ್ಞಾನಿಶ್ರೇಷ್ಠನಾದ ಔರ್ವನು ಧರ್ಮವಚನಗಳನ್ನು ನುಡಿದನು. ರಾಜೋತ್ತಮನ ಹೆಂಡತಿಯಾದ ಸಾಧ್ವೀಮಣಿಯೇ ! ನಿನ್ನ ಗರ್ಭದಲ್ಲಿ ಶತ್ರುಸಂಹಾರಕನಾದ ಚಕ್ರವರ್ತಿಯಾಗುವ ಶಿಶುವಿದೆ. ಆದುದರಿಂದ ನೀನು ಈ ಸಾಹಸಕಾರ್ಯವನ್ನು ಮಾಡಬೇಡ. ಮಂಗಳಕರಳಾದ ರಾಜಪುತ್ರಿಯೇ! ಚಿಕ್ಕಮಕ್ಕಳಿರುವವರು, ಗರ್ಭಿಣಿಯರು, ಪುಷ್ಪವತಿಯಾಗದಿರುವವರು, ಮುಟ್ಟಾ

ರಜಸ್ವಲಾ ರಾಜಸುತೇ ನಾರೋಹತಿ ಚಿತಾಂ ಶುಭೇ ।
ಬ್ರಹ್ಮಹತ್ಯಾದಿಪಾಪಾನಾಂ ಪ್ರೋಕ್ತಾ ನಿಷ್ಕೃತಿರುತ್ತಮೈಃ ॥ ೫೩ ॥

ದಂಭಿನೋ ನಿಂದಕಸ್ಯಾಪಿ ಭ್ರೂಣಘ್ನಸ್ಯ ನ ನಿಷ್ಕೃತಿಃ ।
ನಾಸ್ತಿಕಸ್ಯ ಕೃತಘ್ನಸ್ಯ ಧರ್ಮೋಪೇಕ್ಷಾಕರಸ್ಯ ಚ ॥ ೫೪ ॥

ವಿಶ್ವಾಸಘಾತಕಸ್ಯಾಪಿ ನಿಷ್ಕೃತಿರ್ನಾಸ್ತಿ ಸುವ್ರತೇ ।
ತಸ್ಮಾದೇತನ್ಮಹತ್ಪಾಪಂ ಕರ್ತುಂ ನಾರ್ಹಸಿ ಶೋಭನೇ ॥ ೫೫ ॥

ಯದೇತದ್ದುಃಖಮುತ್ಪನ್ನಂ ತತ್ಸರ್ವಂ ಶಾಂತಿಮೇಷ್ಯತಿ ।
ಇತ್ಯುಕ್ತಾ ಮುನಿನಾ ಸಾಧ್ವೀ ವಿಶ್ವಸ್ಯ ತದನುಗ್ರಹಂ ॥ ೫೬ ॥

ವಿಲಲಾಪಾತಿದುಃಖಾರ್ತಾ ನಿಗೃಹ್ಯ ಚರಣೌ ಮುನೇಃ ।
ಔರ್ವೋಽಪಿ ತಾಂ ಪುನಃ ಪ್ರಾಹ ಸರ್ವಶಾಸ್ತ್ರಾರ್ಥಕೋವಿದಃ ॥ ೫೭ ॥

---

ದವರೂ ಸಹ ಸಹಗಮನ ಮಾಡಬಾರದು. ದೊಡ್ಡವರು ಬ್ರಹ್ಮಹತ್ಯಾದಿ ಪಾಪ ಕೃತ್ಯಗಳಿಗೆ ಪರಿಹಾರೋಪಾಯವನ್ನು ಹೇಳಿರುತ್ತಾರೆ.

೫೪-೫೫. ಡಂಭವುಳ್ಳವನು, ಇತರರನ್ನು ದೂಷಿಸುವವನು, ಗರ್ಭದಲ್ಲಿ ರುವ ಶಿಶುವನ್ನು ಸಂಹರಿಸುವವನು, ನಾಸ್ತಿಕ, ಕೃತಘ್ನ, ಧರ್ಮವನ್ನು ಉದಾ ಸೀನಮಾಡುವವನು, ನಂಬಿದವರಿಗೆ ಮೋಸಮಾಡುವವನು ಇಂತಹವರುಗಳಿಗೆ ಪಾಪಪರಿಹಾರಕವಾದ ಉಪಾಯವೇ ಇಲ್ಲ. ಇವರು ಮಹಾಪಾಪಿಗಳು ಎಂದು ತಾತ್ಪರ್ಯ. ಮಂಗಳರೂಪಿಯಾದ ಸಾಧ್ವಿಯೇ ! ನೀನು ಇಂತಹ ಪಾಪ ಕೃತ್ಯವನ್ನು (ಭ್ರೂಣಹತ್ಯೆ) ಮಾಡುವುದು ಉಚಿತವಲ್ಲ

೫೬-೫೭ ಈಗ ನಿನಗೆ ಪ್ರಾಪ್ತವಾಗಿರುವ ದುಃಖವೆಲ್ಲವೂ ಪರಿಹಾರ ವಾಗುತ್ತದೆ. ಈ ರೀತಿಯಾಗಿ ಮುನಿಯು ಹೇಳಿದುದನ್ನು ಕೇಳಿ ಪತಿವ್ರತೆಯಾದ ಬಾಹುಪತ್ನಿಯು ಮುನಿಯ ಅನುಗ್ರಹವಚನವನ್ನು ಆದರಿಸಿ ಆತನ ಕಾಲು ಗಳನ್ನು ಹಿಡಿದುಕೊಂಡು ದುಃಖಪೀಡಿತಳಾಗಿ ಅತ್ತಳು. ಸಕಲ ಶಾಸ್ತ್ರಪಂಡಿತ

ಮಾ ರೋದೀರಾಜತನಯೇ ಶ್ರಿಯಮಗ್ರೇ ಗಮಿಷ್ಯಸಿ ।
ಮಾ ಮುಂಚಾಶ್ರು ಮಹಾಭಾಗೇ ಪ್ರೇತೋ ದಾಹ್ಯೋಽದ್ಯ ತತ್ವತಃ ॥ ೫೮ ॥

ತಸ್ಮಾಚ್ಛೋಕಂ ಪರಿತ್ಯಜ್ಯ ಕುರು ಕಾಲೋಚಿತಾಂ ಕ್ರಿಯಾಂ ।
ಪಂಡಿತೇ ವಾಽಪಿ ಮೂರ್ಖೇ ವಾ ದರಿದ್ರೇ ವಾ ಶ್ರಿಯಾನ್ವಿತೇ ॥ ೫೯ ॥

ದುರ್ವೃತ್ತೇ ವಾ ಸುವೃತ್ತೇ ವಾ ಮೃತ್ಯೋಸ್ಸರ್ವತ್ರ ತುಲ್ಯತಾ ।
ನಗರೇ ವಾ ವನೇ ವಾಽಪಿ ಸಮುದ್ರೇ ಪರ್ವತೇಽಪಿ ಚ ॥ ೬೦ ॥

ಯದ್ಯತ್ಪುರಾತನಂ ಕರ್ಮ ತತ್ತದೇವೇಹ ಭುಜ್ಯತೇ ।
ಕಾರಣಂ ದೈವಮೇವಾತ್ರ ಮನ್ಯೇ ಸೋಪಾಧಿಕಾ ಜನಾಃ ॥ ೬೧ ॥

ಗರ್ಭೇ ವಾ ಬಾಲ್ಯಭಾವೇ ವಾ ಯೌವನೇ ವಾಽಪಿ ವಾರ್ಧಕೇ ।
ಮೃತ್ಯೋರ್ವಶಂ ಪ್ರಯಾತವ್ಯಂ ಜಂತುಭಿಃ ಕಮಲಾನನೇ ॥ ೬೨ ॥

---

ನಾದ ಔರ್ವಮುನಿಯು ಎಲೈ ರಾಜತನಯೇ! ಅಳಬೇಡ ನಿನಗೆ ಮುಂದೆ ಐಶ್ವರ್ಯವು ಬರುವುದು, ಕಣ್ಣೀರನ್ನು ಸುರಿಸಬೇಡ, ಈಗ ಶವದಹನವು ಕರ್ತವ್ಯವು.

೫೯-೬೧ ಆದಕಾರಣ ದುಃಖವನ್ನು ಬಿಟ್ಟು ಸಮಯೋಚಿತವಾದ ಕ್ರಿಯೆಗಳನ್ನು ಮಾಡು, ಜ್ಞಾನಿಯಾಗಲೀ, ಮೂರ್ಖನಾಗಲೀ, ದರಿದ್ರ ಅಥವಾ ಐಶ್ವರ್ಯವಂತನಾಗಲೀ, ದುರಾಚಾರಿ ಇಲ್ಲವೇ ಸದಾಚಾರಿಯಾಗಲೀ, ಎಲ್ಲರಿಗೂ ಮರಣವು ಸಮಾನವು ; ಎಂದರೆ ಎಲ್ಲರೂ ಸಾಯುತ್ತಾರೆ. ಪಟ್ಟಣ, ಕಾಡು, ಸಮುದ್ರ, ಬೆಟ್ಟ ಮುಂತಾದ ಯಾವ ಸ್ಥಳದಲ್ಲಿದ್ದರೂ ಪೂರ್ವಾರ್ಜಿತ ಕರ್ಮಫಲವನ್ನು ಅನುಭವಿಸಲೇಬೇಕು. ಇದಕ್ಕೆ ದೈವವೇ ಮುಖ್ಯಕಾರಣವು. ಜನಗಳು ನಿಮಿತ್ತಮಾತ್ರವೆಂದು ತಿಳಿದಿದ್ದೇನೆ.

೬೨-೬೩. ಕಮಲಾಕ್ಷಿಯೇ ! ಗರ್ಭದಲ್ಲಿರಲಿ ಅಥವ ಬಾಲ್ಯ, ಯೌವನ, ವಾರ್ಧಿಕ್ಯ ಈ ಅವಸ್ಥೆಗಳನ್ನು ಹೊಂದಿದ್ದರೂ ಸರಿ ಪ್ರಾಣಿಗಳು ಮೃತ್ಯುವಶ

ಹಂತಿ ಪಾತಿ ಚ ಗೋವಿಂದೋ ಜಂತೂನ್ ಕರ್ಮವಶೇ ಸ್ಥಿತಾನ್ ।
ಪ್ರವಾದಂ ರೋಪಯಂತ್ಯಜ್ಞಾ ಹೇತುಮಾತ್ರೇಷು ಜಂತುಷು ॥ ೬೩ ॥

ತಸ್ಮಾದ್ದುಃಖಂ ಪರಿತ್ಯಜ್ಯ ಸುಖಿನೀ ಭವ ಸುವ್ರತೇ ।
ಕುರು ಪತ್ಯುಶ್ಚ ಕರ್ಮಾಣಿ ವಿವೇಕೇನ ಸ್ಥಿರಾ ಭವ ॥ ೬೪ ॥

ಏತಚ್ಛರೀರಂ ದುಃಖಾನಾಂ ವ್ಯಾಧೀನಾಮಯುತೈರ್ಯುತಂ ।
ಸುಖಾಭಾಸಂ ಬಹುಕ್ಲೇಶಂ ಕರ್ಮಪಾಶೇನ ಯಂತ್ರಿತಂ ॥ ೬೫ ॥

ಇತ್ಯಾಶ್ವಾಸ್ಯ ಮಹಾಬುದ್ಧಿಸ್ತಯಾ ಕರ್ಮಾಣ್ಯಕಾರಯತ್ ।
ತ್ಯಕ್ತಶೋಕಾ ಚ ಸಾ ತನ್ವೀ ನತಾ ಪ್ರಾಹ ಮುನೀಶ್ವರಂ ॥ ೬೬ ॥

---

ರಾಗಲೇ (ಸಾಯಲೇ) ಬೇಕು. ಕರ್ಮಬದ್ಧರಾಗಿರುವ ಜನಗಳನ್ನು ನಾರಾಯಣನೇ ಸಂಹರಿಸುತ್ತಾನೆ. ಅವನೇ ಸಂರಕ್ಷಿಸುತ್ತಾನೆ. ಅಜ್ಞರು ಕೇವಲ ನಿಮಿತ್ತ ಮಾತ್ರರಾದ ಜನರನ್ನೇ ಕಾರಣರೆಂದು ಆರೋಪಣೆಮಾಡುತ್ತಾರೆ.

೬೪. ಆದುದರಿಂದ ನೀನು ದುಃಖವನ್ನು ತ್ಯಜಿಸಿ ಸುಖವಾಗಿರು. ನಿನ್ನ ಗಂಡನಿಗೆ ಅಂತ್ಯಕ್ರಿಯೆಗಳನ್ನು ಮಾಡಿ ವಿವೇಕದಿಂದ ಸ್ಥಿರಚಿತ್ತಳಾಗಿರು.

೬೫. ಈ ಶರೀರವು ದುಃಖಗಳಿಗೂ ಸಾವಿರಾರು ರೋಗಗಳಿಗೂ ನೆಲೆಯಾಗಿ, ಕರ್ಮವೆಂಬ ಬಂಧನದಿಂದ ಕಟ್ಟಲ್ಪಟ್ಟು ಬಹಳ ಕಷ್ಟಗಳುಳ್ಳದು; ಇದರಲ್ಲಿ ಕಂಡುಬರುವ ಸುಖವು ಆಭಾಸವೇ ಹೊರತು ದುಃಖಮಿಶ್ರವಲ್ಲದ ನೈಜಸುಖವಲ್ಲ.

೬೬. ಈರೀತಿ ಹಿತೋಪದೇಶದಿಂದ ಮಹಾ ಬುದ್ಧಿವಂತನಾದ ಮುನಿಯು ಆಕೆಯನ್ನು ಸಮಾಧಾನಪಡಿಸಿ, ಆ ಸಾಧ್ವಿಯಿಂದ ಕರ್ಮಗಳನ್ನು ಮಾಡಿಸಿದನು. ಆ ಸಾಧ್ವಿಯು ದುಃಖವನ್ನು ಬಿಟ್ಟು ಔರ್ವಮುನೀಶ್ವರನನ್ನು ನಮಸ್ಕರಿಸಿ ಹೇಳಿದಳು.

**ಕಿಮತ್ರ ಚಿತ್ರಂ ಯತ್ಸಂತಃ ಪರಾರ್ಥಫಲಕಾಂಕ್ಷಿಣಃ ।**
**ನ ಹಿ ದ್ರುಮಾಶ್ಚ ಭೋಗಾರ್ಥಂ ಫಲಂತಿ ಜಗತೀತಲೇ ॥ ೬೭ ॥**

**ಯೋಽನ್ಯದುಃಖಾನಿ ವಿಜ್ಞಾಯ ಸಾಧುವಾಕ್ಯೈಃ ಪ್ರಬೋಧಯೇತ್ ।**
**ಸ ಏವ ವಿಷ್ಣುಸತ್ವಸ್ಥೋ ಯತಃ ಪರಹಿತೇ ಸ್ಥಿತಃ ॥ ೬೮ ॥**

**ಅನ್ಯದುಃಖೇನ ಯೋ ದುಃಖೀ ಯೋಽನ್ಯಹರ್ಷೇಣ ಹರ್ಷಿತಃ ।**
**ಸ ಏವ ಜಗತಾಮೀಶೋ ನರರೂಪಧರೋ ಹರಿಃ ॥ ೬೯ ॥**

**ಸದ್ಭಿಃ ಶ್ರುತಾನಿ ಶಾಸ್ತ್ರಾಣಿ ಪರದುಃಖವಿಮುಕ್ತಯೇ ।**
**ಸರ್ವೇಷಾಂ ದುಃಖನಾಶಾಯ ಇತಿ ಸಂತೋ ವದಂತಿ ಹಿ ॥ ೭೦ ॥**

---

೬೭. ಸಜ್ಜನರು ಪರಕೀಯರಿಗೆ ಹಿತವನ್ನೇ ಬಯಸುವರೆಂಬುದರಲ್ಲಿ ಆಶ್ಚರ್ಯವೇನು ? ಭೂಮಿಯಲ್ಲಿ ವೃಕ್ಷಗಳು ತಮ್ಮ ಭೋಗಕ್ಕಾಗಿ ಹಣ್ಣುಗಳನ್ನು ಬಿಡುವುದಿಲ್ಲವೆಂಬುದು ಪ್ರಸಿದ್ಧ.

೬೮. ಯಾವನು ಪರರ ದುಃಖಗಳನ್ನು ತಿಳಿದು ಸವಿನುಡಿಗಳಿಂದ ಅವರನ್ನು ಸಂತೈಸುತ್ತಾನೆಯೋ ಅಂತಹವನು ಪರಹಿತದಲ್ಲಿ ಆಸಕ್ತನಾಗಿರುವುದರಿಂದ ವಿಷ್ಣುಸನ್ನಿಧಾನಕ್ಕೆ ಪಾತ್ರನು.

೬೯. ಇತರರ ದುಃಖವನ್ನು ನೋಡಿ ಯಾವನು ದುಃಖಿಸುತ್ತಾನೆಯೋ ಯಾವನು ಇತರರ ಸಂತೋಷವನ್ನು ನೋಡಿ ಸ್ವಯಂ ಸಂತೋಷಿಸುತ್ತಾನೆಯೋ ಅಂತಹವನೇ ಮನುಷ್ಯವೇಷಧಾರಿಯಾದ ವಿಷ್ಣುವು. ಅವನೇ ಜಗದೊಡಯನು.

೭೦. ಎಲ್ಲರಿಗೂ ಸದುಪದೇಶದಿಂದ ತತ್ವಜ್ಞಾನವನ್ನು ಹುಟ್ಟಿಸಿ ಇತರರ ದುಃಖವನ್ನು ಪರಿಹರಿಸುವ ಸಲುವಾಗಿ ಸಜ್ಜನರು ಶಾಸ್ತ್ರಗಳನ್ನು ಶ್ರವಣ ಮಾಡಿ ಎಲ್ಲರಿಗೂ ಪ್ರಾಪ್ತವಾಗಿರುವ ದುಃಖವನ್ನು ಪರಿಹರಿಸುತ್ತಾರೆಂದು ಜ್ಞಾನಿಗಳು ಹೇಳಿದ್ದಾರೆ.

ಯತ್ರ ಸಂತಃ ಪ್ರವರ್ತಂತೇ ತತ್ರ ದುಃಖಂ ನ ಬಾಧತೇ ।
ವರ್ತತೇ ಯತ್ರ ಮಾರ್ತಾಂಡಃ ಕಥಂ ತತ್ರ ತಮೋ ಭವೇತ್ ॥ ೭೧ ॥

ಇತ್ಯೇವಂ ವಾದಿನೀ ಸಾ ತು ಸ್ವಪತ್ಯುಶ್ಚಾಪರಾಃ ಕ್ರಿಯಾಃ ।
ಚಕಾರ ತತ್ಸರಸ್ತೀರೇ ಮುನಿಪ್ರೋಕ್ತವಿಧಾನತಃ ॥ ೭೨ ॥

ಸ್ಥಿತೇ ತತ್ರ ಮುನೌ ರಾಜಾ ದೇವರಾಡಿವ ಸಂಜ್ವಲನ್ ।
ಚಿತಾಮಧ್ಯಾದ್ವಿನಿಷ್ಕ್ರಮ್ಯ ವಿಮಾನವರಮಾಸ್ಥಿತಃ ॥ ೭೩ ॥

ಪ್ರಪೇದೇ ಪರಮಂ ಧಾಮ ನತ್ವಾ ಚೌರ್ವಂ ಮುನೀಶ್ವರಂ ।
ಮಹಾಪಾತಕಯುಕ್ತಾ ವಾ ಯುಕ್ತಾ ವಾ ಚೋಪಪಾತಕೈಃ ॥ ೭೪ ॥

ಪರಂ ಪದಂ ಪ್ರಯಾಂತ್ಯೇವ ಮಹದ್ಭಿರವಲೋಕಿತಾಃ ।
ಕಲೇಬರಂ ವಾ ತದ್ಭಸ್ಮ ತದ್ಧೂಮಂ ವಾಪಿ ಸತ್ತಮ ॥ ೭೫ ॥

---

೭೧. ಸಜ್ಜನರಿದ್ದೆಡೆಯಲ್ಲಿ ದುಃಖಬಾಧೆಯಿಲ್ಲ; ಸೂರ್ಯಪ್ರಕಾಶವಿದ್ದೆಡೆಯಲ್ಲಿ ಕತ್ತಲೆಯು ಹೇಗಿದ್ದೀತು? ಎಂದರೆ ಸೂರ್ಯನು ಕತ್ತಲೆಯನ್ನು ಪರಿಹರಿಸುವಂತೆ ಸಜ್ಜನರು ಅಜ್ಞಾನವನ್ನು ನೀಗಿ ದುಃಖವನ್ನು ಪರಿಹರಿಸುತ್ತಾರೆಂದು ತಾತ್ಪರ್ಯ.

೭೨. ಈರೀತಿಯಾಗಿ ಹೇಳಿ ಆ ಬಾಹುಪತ್ನಿಯು ಔರ್ವಮುನಿಯು ಹೇಳಿದ ವಿಧಾನಪ್ರಕಾರವಾಗಿ ಆ ಸರೋವರದ ತೀರದಲ್ಲಿ ತನ್ನ ಪತಿಯ ಉತ್ತರ ಕ್ರಿಯೆಗಳನ್ನು ಮಾಡಿದಳು.

೭೩–೭೬. ಔರ್ವಮುನಿಯು ಅಲ್ಲಿದ್ದಾಗಲೇ ಬಾಹುರಾಜನು ಚಿತೆಯ ಮಧ್ಯದಿಂದ ಎದ್ದು ಔರ್ವಮುನೀಶ್ವರನಿಗೆ ನಮಸ್ಕಾರಮಾಡಿ, ಉತ್ತಮವಾದ ವಿಮಾನವನ್ನು ಹತ್ತಿ ವೈಕುಂಠಕ್ಕೆ ತೆರಳಿದನು. ಮಹಾಪಾತಕಗಳನ್ನು ಮಾಡಿದವರಾಗಲಿ ಅಥವಾ ಸಣ್ಣ ಪಾಪಕೃತ್ಯಗಳನ್ನು ಮಾಡಿರುವವರಾಗಲಿ ದೊಡ್ಡವರಿಂದ ಅನುಗ್ರಹಿಸಲ್ಪಟ್ಟರೆ ಅಂತಹವರೂ ಸಹ ಪರಮಪದವಿಯನ್ನು ಹೊಂದು

**ಯದಿ ಪಶ್ಯತಿ ಪುಣ್ಯಾತ್ಮಾ ಸ ಪ್ರಯಾತಿ ಪರಾಂ ಗತಿಂ । ೭೬ ॥**

**ಪತ್ಯುಃ ಕೃತಕ್ರಿಯಾ ಸಾ ತು ಗತ್ವಾಶ್ರಮುಪದಂ ಮುನೇಃ ।**
**ಚಕಾರ ತಸ್ಯ ಶುಶ್ರೂಷಾಂ ಸಪತ್ನ್ಯಾ ಸಹ ನಾರದ ॥ ೭೭ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ**
**ಪ್ರಥಮಪಾದೇ ಗಂಗಾಮಾಹಾತ್ಮ್ಯಂ ನಾಮ**
**ಸಪ್ತಮೋಽಧ್ಯಾಯಃ**

---

ತ್ತಾರೆ. ಯಾವನ ಶರೀರ ಅಥವಾ ಅದರ ಬೂದಿ ಇಲ್ಲವೆ ಅದರ ಹೊಗೆಯನ್ನಾದರೂ ಪುಣ್ಯಾತ್ಮರು ನೋಡುತ್ತಾರೆಯೋ, ಅಂತಹವನು ಉತ್ತಮಗತಿಯನ್ನು ಹೊಂದುತ್ತಾನೆ.

೭೭. ನಾರದನೇ! ಆ ಸಾಧ್ವೀಮಣಿಯು ಗಂಡನ ಉತ್ತರಕ್ರಿಯೆಗಳನ್ನು ಮುಗಿಸಿಕೊಂಡು ಔರ್ವಮುನಿಯ ಆಶ್ರಮಕ್ಕೆ ಹೋಗಿ ತನ್ನ ಸವತಿಯೊಂದಿಗೆ ಆ ಋಷಿಸೇವೆಯನ್ನು ಮಾಡುತ್ತಿದ್ದಳು.

ಇಂತು ಶ್ರೀ ಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಮೊದಲನೆಯ ಪಾದದಲ್ಲಿ ಗಂಗಾಮಾಹಾತ್ಮ್ಯವರ್ಣನೆಯೆಂಬ ಏಳನೆಯ ಅಧ್ಯಾಯವು ಮುಗಿದುದು.

---

### ಕಥಾಸಾರಾಂಶ

ಈ ಅಧ್ಯಾಯದ ಪ್ರಾರಂಭದಲ್ಲಿ ಸಗರನು ಯಾರು? ಅವನ ಕಾಲದಲ್ಲಿ ರಾಕ್ಷಸ ಜನ್ಮದಿಂದ ಮುಕ್ತನಾದವನು ಯಾರು? ಅದಕ್ಕೇನು ಕಾರಣ? ಮುಂತಾಗಿ ನಾರದನು ಸನಕನನ್ನು ಕುರಿತು ಪ್ರಶ್ನೆಮಾಡಿರುತ್ತಾನೆ. ಅದಕ್ಕೆ ಉತ್ತರವಾಗಿ ಸನಕನು ಸೂರ್ಯವಂಶದ ಚರಿತ್ರೆಯನ್ನು ಹೇಳಿದ್ದಾನೆ. ಸೂರ್ಯವಂಶದಲ್ಲಿ ಬಾಹುವೆಂಬ ಒಬ್ಬ ರಾಜನಿದ್ದನು. ಅವನು ಮಹಾ ಜ್ಞಾನಿಯಾಗಿ

ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದನು. ಒಂದಾನೊಂದು ಕಾಲದಲ್ಲಿ ಅವನಿಗೆ ಅಹಂಕಾರವು ಪ್ರಾಪ್ತವಾಗಿ ಅದರಿಂದ ಹೈಹಯ ಮತ್ತು ಕಾಲಜಂಘರೆಂಬ ಪ್ರಬಲ ಶತ್ರುಗಳೇರ್ಪಟ್ಟರು. ಅವರೊಡನೆ ಭಯಂಕರವಾದ ಯುದ್ಧಮಾಡಿ ಪರಾಜಿತನಾಗಿ ರಾಜ್ಯವನ್ನು ಕಳೆದುಕೊಂಡು ತನ್ನ ಇಬ್ಬರು ಹೆಂಡತಿಯರನ್ನು ಕರೆದುಕೊಂಡು ಕಾಡಿಗೆ ಹೋದನು. ಅಲ್ಲಿ ಬಹಳ ಬಳಲಿ ಅಲೆಯುತ್ತಾ ಒಂದು ಸರೋವರವನ್ನು ನೋಡಿ ಸಂತೋಷಪಟ್ಟು ಅದರಲ್ಲಿಯೇ ಯಥೇಷ್ಟವಾಗಿ ನೀರು ಕುಡಿದು ಮರದ ನೆರಳಿನಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದನು. ಹಾಗೆ ಬಹುಕಾಲ ಕಳೆಯಿತು. ಅನಂತರ ಔರ್ವಮುನಿಯ ಆಶ್ರಮದ ಸಮೀಪದಲ್ಲಿ ನೆಲೆಸಿರುವಾಗ ಅವನಿಗೆ ರೋಗವು ಬಂದು ಮೃತನಾದನು. ಅವನ ಚಿಕ್ಕ ಹೆಂಡತಿಯು ಗರ್ಭಿಣಿಯಾಗಿದ್ದಳು. ಅವಳು ಸಹಮುಗನಮಾಡಲು ಸಿದ್ಧಳಾದಳು. ಔರ್ವಮುನಿಯು ಇವುಗಳನ್ನೆಲ್ಲಾ ತನ್ನ ತಪಃಶಕ್ತಿಯಿಂದ ತಿಳಿದು ಅಲ್ಲಿಗೆ ಬಂದು ಆಕೆಗೆ ಧರ್ಮೋಪದೇಶಮಾಡಿ ಸಹಗಮನವನ್ನು ನಿಲ್ಲಿಸಿದನು. ಆಕೆಯು ಮುನಿಯ ಉಪದೇಶದಂತೆ ಗಂಡನ ಉತ್ತರಕ್ರಿಯೆಗಳನ್ನು ಮುಗಿಸಿಕೊಂಡು ಅವರ ಆಶ್ರಮಕ್ಕೆ ಹೋಗಿ ಆ ಮುನೀಶ್ವರರ ಶುಶ್ರೂಷೆಮಾಡಿಕೊಂಡಿದ್ದಳು ಎಂಬಲ್ಲಿಗೆ ಅಧ್ಯಾಯವು ಕೊನೆಗಂಡಿದೆ.

---

# ಅಷ್ಟಮೋಽಧ್ಯಾಯಃ

ಸನಕ ಉವಾಚ

ಏವಮೌರ್ವಾಶ್ರಮೇ ತೇ ದ್ವೇ ಬಾಹುಭಾರ್ಯೇ ಮುನೇ ।
ಚಕ್ರಾತೇ ಭಕ್ತಿಭಾವೇನ ಶುಶ್ರೂಷಾಂ ಪ್ರತಿವಾಸರಂ ॥ ೧ ॥

ಗತೇ ವರ್ಷಾರ್ಧಕೇ ಕಾಲೇ ಜ್ಯೇಷ್ಠಾ ರಾಜ್ಞೀ ತು ಯಾ ದ್ವಿಜ ।
ತಸ್ಯಾಃ ಪಾಪಮತಿರ್ಜಾತಾ ಸಪತ್ನ್ಯಾಃ ಸಂಪದಂ ಪ್ರತಿ ॥ ೨ ॥

ತತಸ್ತಯಾ ಗರೋ ದತ್ತಃ ಕನಿಷ್ಠಾಯೈ ತು ಪಾಪಯಾ ।
ನ ಸ್ವಪ್ರಭಾವಂ ಚಕ್ರೇ ವೈ ಗರೋ ಮುನಿನಿಷೇವಯಾ ॥ ೩ ॥

ಭೂಲೇಪನಾದಿಭಿಃ ಸಮ್ಯಕ್ಸಾಧ್ವೀ ಸದ್ಭಾವಸಂಯುತಾ ।
ಸಾ ತಸ್ಯಾನುದಿನಂ ಚಕ್ರೇ ಶುಶ್ರೂಷಾಂ ಭಕ್ತಿಸಂಯುತಾಂ ॥ ೪ ॥

---

## ಎಂಟನೆಯ ಅಧ್ಯಾಯವು

೧. ಸನಕನು ಮಾತನಾಡುತ್ತಾನೆ—ಋಷಿಶ್ರೇಷ್ಠನೇ ! ಇಂತು ಔರ್ವಾಶ್ರಮದಲ್ಲಿ ಬಾಹುವಿನ ಹೆಂಡತಿಯರಿಬ್ಬರು ಪ್ರತಿದಿನವೂ ಮುನಿಶುಶ್ರೂಷೆಯನ್ನು ಭಕ್ತಿಯಿಂದ ಮಾಡುತ್ತಿದ್ದರು.

೨. ದ್ವಿಜನೇ! ಆರು ತಿಂಗಳಾದನಂತರ ಬಾಹುವಿನ ದೊಡ್ಡ ಹೆಂಡತಿಗೆ ತನ್ನ ಸವತಿಯು ಗರ್ಭವತಿಯಾಗಿರುವುದನ್ನು ನೋಡಿ ಅಸೂಯೆಯಿಂದ ದುರ್ಬುದ್ಧಿಯುಂಟಾಯಿತು.

೩. ಪಾಪಿಯಾದ ಆ ಜ್ಯೇಷ್ಠಪತ್ನಿಯು ಚಿಕ್ಕ ಹೆಂಡತಿಗೆ ವಿಷವನ್ನು ಕೊಟ್ಟಳು. ಆದರೆ ಆಕೆಯು ಮುನಿಸೇವೆಯಿಂದ ಪವಿತ್ರಳಾಗಿದ್ದುದರಿಂದ ವಿಷವು ಪರಿಣಾಮಕಾರಿಯಾಗಲಿಲ್ಲ.

೪. ಸಾಧ್ವಿಯಾದ ಆಕೆಯು ಒಳ್ಳೆಯ ಭಾವನೆಯಿಂದ ಪ್ರತಿದಿನವೂ ನೆಲ ಸಾರಿಸುವುದೇ ಮುಂತಾದ ಪರಿಚರ್ಯೆಗಳನ್ನು ಮಾಡುತ್ತಾ ಭಕ್ತಿಸಹಿತವಾಗಿ ಆ ಮುನಿಯ ಶುಶ್ರೂಷೆಯನ್ನು ಮಾಡುತ್ತಿದ್ದಳು.

ತತೋ ಮಾಸತ್ರಯೇಽತೀತೇ ಗರೇಣ ಸಹಿತಂ ಸುತಂ ।
ಸುಷಾವ ಸುಶುಭೇ ಕಾಲೇ ಶುಶ್ರೂಷಾನಷ್ಟಕಿಲ್ಬಿಷಾ ॥ ೫ ॥

ಅಹೋ ಸತ್ಸಂಗತಿರ್ಲೋಕೇ ಕಿಂ ಪಾಪಂ ನ ವಿನಾಶಯೇತ್ ।
ನ ದದಾತಿ ಸುಖಂ ಕಿಂ ವಾ ನರಾಣಾಂ ಪುಣ್ಯಕರ್ಮಣಾಂ ॥ ೬ ॥

ಜ್ಞಾನಾಜ್ಞಾನಕೃತಂ ಪಾಪಂ ಯಚ್ಚಾನ್ಯತ್ಕಾರಿತಂ ಪರೈಃ ।
ತತ್ಸರ್ವಂ ನಾಶಯತ್ಯಾಶು ಪರಿಚರ್ಯಾ ಮಹಾತ್ಮನಾಂ ॥ ೭ ॥

ಜಡೋಽಪಿ ಯಾತಿ ಪೂಜ್ಯತ್ವಂ ಸತ್ಸಂಗಾಜ್ಜಗತೀತಲೇ ।
ಕಲಾಮಾತ್ರೋಽಪಿ ಶೀತಾಂಶುಃ ಶಂಭುನಾ ಸ್ವೀಕೃತೋ ಯಥಾ ॥ ೮ ॥

---

೫. ಮುನಿಸೇವೆಯಿಂದ ಪಾಪವನ್ನು ಪರಿಹರಿಸಿಕೊಂಡು ಆ ಸಾಧ್ವೀಮಣಿಯು ಮೂರು ತಿಂಗಳು ಕಳೆದ ತರುವಾಯ ಶುಭಸಮಯದಲ್ಲಿ ವಿಷಸಹಿತವಾಗಿ ಮಗನನ್ನು ಪ್ರಸವಿಸಿದಳು.

೬. ಸಜ್ಜನರ ಸಹವಾಸವು ಲೋಕದಲ್ಲಿ ಯಾವ ಪಾಪವನ್ನು ತಾನೇ ನಾಶಮಾಡಲಾರದು ? ಪುಣ್ಯಕರ್ಮವನ್ನು ಮಾಡಿದ ಜನರಿಗೆ ಯಾವ ಸುಖವು ತಾನೇ ಲಭಿಸಲಾರದು ? ಸಜ್ಜನಸಂಗತಿಯು ಸಕಲ ಪಾಪವನ್ನು ಪರಿಹರಿಸುತ್ತದೆ. ಪುಣ್ಯಕರ್ಮವು ಸಕಲ ಸುಖಗಳನ್ನೂ ಕೊಡುತ್ತದೆಂದು ತಾತ್ಪರ್ಯ.

೭. ದೊಡ್ಡವರ ಸೇವೆಯು ತಿಳಿದು ಅಥವಾ ತಿಳಿಯದೆ ಮಾಡಿದ ಪಾಪ, ಇತರರಿಂದ ಮಾಡಿಸಿದ ಪಾಪ ಇವುಗಳೆಲ್ಲವನ್ನೂ ಶೀಘ್ರವಾಗಿ ನಾಶಮಾಡುತ್ತದೆ.

೮. ಸಣ್ಣದಾಗಿದ್ದಾಗ್ಯೂ ಚಂದ್ರನನ್ನು ಹೇಗೆ ಈಶ್ವರನು ಸ್ವೀಕರಿಸಿರುತ್ತಾನೆಯೋ, ಅದರಂತೆ ಅಜ್ಞಾನಿಯಾದಾಗ್ಯೂ ಸಜ್ಜನಸಂಗದಿಂದ ಲೋಕದಲ್ಲಿ ಮನುಜನು ಪೂಜ್ಯನಾಗುತ್ತಾನೆ.

ಸತ್ಸಂಗತಿಃ ಪರಾವೃದ್ಧಿಂ ದದಾತಿ ಹಿ ನೃಣಾಂ ಸದಾ ।
ಇಹಾಮುತ್ರ ಚ ವಿಪ್ರೇಂದ್ರ ಸಂತಃ ಪೂಜ್ಯತಮಾಸ್ತತಃ ॥ ೯ ॥

ಅಹೋ ಮಹದ್ಗುಣಾನ್ವಕ್ತುಂ ಕಃ ಸಮರ್ಥೋ ಮುನೀಶ್ವರ ।
ಗರ್ಭಂ ಪ್ರಾಪ್ತೋ ಗರೋ ಜೀರ್ಣೋ ಮಾಸತ್ರಯಮಹೋದ್ಭುತಂ ॥೧೦॥

ಗರೇಣ ಸಹಿತಂ ಪುತ್ರಂ ದೃಷ್ಟ್ವಾ ತೇಜೋನಿಧಿರ್ಮುನಿಃ ।
ಜಾತಕರ್ಮ ಚಕಾರಾಸೌ ತನ್ನಾಮ ಸಗರೇತಿ ಚ ॥ ೧೧ ॥

ಪುಪೋಷ ಸಗರಂ ಬಾಲಂ ತನ್ಮಾತಾ ಪ್ರೀತಿಪೂರ್ವಕಂ ।
ಚೌಲೋಪವೀತಕರ್ಮಾಣಿ ತಥಾ ಚಕ್ರೇ ಮುನೀಶ್ವರಃ ॥ ೧೨ ॥

ಶಾಸ್ತ್ರಾಣ್ಯಧ್ಯಾಪಯಾಮಾಸ ರಾಜಯೋಗ್ಯಾನಿ ಮಂತ್ರವಿತ್ ।
ಸಮರ್ಥಂ ಸಗರಂ ದೃಷ್ಟ್ವಾ ಕಿಂಚಿದುದ್ಭಿನ್ನಶೈಶವಂ ॥ ೧೩ ॥

---

೯. ವಿಪ್ರಶ್ರೇಷ್ಠನೇ! ಸಜ್ಜನಸಹವಾಸವು ಮನುಷ್ಯರಿಗೆ ಈ ಲೋಕದಲ್ಲಿ ಮತ್ತು ಪರಲೋಕಗಳಲ್ಲಿ ಯಾವಾಗಲೂ ಉತ್ತಮವಾದ ಐಶ್ವರ್ಯವನ್ನು ಕೊಡುತ್ತದೆ. ಆದುದರಿಂದ ಸಜ್ಜನರು ಪೂಜ್ಯಶ್ರೇಷ್ಠರು.

೧೦. ದೊಡ್ಡವರ ಗುಣಗಳನ್ನು ವರ್ಣಿಸಲು ಸಮರ್ಥರಾರು? ಋಷಿಶ್ರೇಷ್ಠನೇ! ಮೂರು ತಿಂಗಳಕಾಲ ಗರ್ಭದಲ್ಲಿದ್ದಾಗ್ಯೂ ವಿಷವು ಪರಿಣಾಮಕಾರಿಯಾಗದೆ ಜೀರ್ಣಿಸಿದ್ದು ಅತ್ಯದ್ಭುತ ಮತ್ತು ಆಶ್ಚರ್ಯಕರ!

೧೧. ಮಹಾತೇಜಸ್ವಿಯಾದ ಔರ್ವಮುನಿಯು ವಿಷಸಹಿತವಾದ ಪುತ್ರನನ್ನು ನೋಡಿ ಆ ಶಿಶುವಿಗೆ ಜಾತಕರ್ಮಸಂಸ್ಕಾರವನ್ನು, ಸಗರ ಎಂಬುದಾಗಿ ನಾಮಕರಣವನ್ನೂ ಸಹ ಮಾಡಿದನು.

೧೨. ಆ ಶಿಶುವಿನ ತಾಯಿಯು ವಿಶ್ವಾಸದಿಂದ ಬಾಲಕನಾದ ಸಗರನನ್ನು ಬೆಳೆಸಿದಳು, ಮುನೀಶ್ವರನೂ ಸಹ ಆ ಶಿಶುವಿಗೆ ಚೌಲ ಮತ್ತು ಉಪನಯನ ಸಂಸ್ಕಾರವನ್ನು ಮಾಡಿದನು.

೧೩. ಮಂತ್ರಜ್ಞನಾದ ಮುನಿಯು ಸ್ವಲ್ಪಮಟ್ಟಿಗೆ ಬಾಲ್ಯಾವಸ್ಥೆಯು ಹೋಗಿ ಸಗರನು ಸಮರ್ಥನಾಗಿರುವುದನ್ನು ತಿಳಿದು ರಾಜರಿಗೆ ಯೋಗ್ಯವಾದ ಶಾಸ್ತ್ರಗಳನ್ನು ಅವನಿಗೆ ಕಲಿಸಿದನು.

ಮಂತ್ರವತ್ಸರ್ವಶಸ್ತ್ರಾಸ್ತ್ರಂ ದತ್ತವಾನ್ ಸ ಮುನೀಶ್ವರಃ ।
ಸಗರಃ ಶಿಕ್ಷಿತಸ್ತೇನ ಸಮ್ಯಗೌರ್ವರ್ಷಿಣಾ ಮುನೇ ॥ ೧೪ ॥

ಬಭೂವ ಬಲವಾನ್ ಧರ್ಮಿಷ್ಠಃ ಕೃತಜ್ಞೋ ಗುಣವಾನ್ ಸುಧೀಃ ।
ಧರ್ಮಜ್ಞಃ ಸೋಽಪಿ ಸಗರೋ ಮುನೇರಮಿತತೇಜಸಃ ॥ ೧೫ ॥

ಸಮಿತ್ಕುಶಾಂಬುಪುಷ್ಪಾದಿ ಪ್ರತ್ಯಹಂ ಸಮುಪಾನಯತ್ ।
ಸ ಕದಾಚಿದ್ಗುಣನಿಧಿಃ ಪ್ರಣಿಪತ್ಯ ಸ್ವಮಾತರಂ ॥ ೧೬ ॥

ಉವಾಚ ಪ್ರಾಂಜಲಿರ್ಭೂತ್ವಾ ಸಗರೋ ವಿನಯಾನ್ವಿತಃ ।
ಮಾತರ್ಗತಃ ಪಿತಾ ಕುತ್ರ ಕಿಂ ನಾಮಾ ಕಸ್ಯ ವಂಶಜಃ ॥ ೧೭ ॥

ತತ್ಸರ್ವಂ ಮೇ ಸಮಾಚಕ್ಷ್ವ ಶ್ರೋತುಂ ಕೌತೂಹಲಂ ಮಮ ।
ಪಿತ್ರಾ ವಿಹೀನಾ ಯೇ ಲೋಕೇ ಜೀವಂತೋಽಪಿ ಮೃತೋಪಮಾಃ ॥೧೮॥

---

೧೪. ಆ ಮುನೀಶ್ವರನು ಮಂತ್ರವನ್ನು ಉಪದೇಶಮಾಡಿದಂತೆ ಸಕಲ ಶಸ್ತ್ರಾಸ್ತ್ರಗಳನ್ನೂ ಸಹ ಸಗರನಿಗೆ ಕೊಟ್ಟನು. ನಾರದಮುನಿಯೇ! ಸಗರನು ಔರ್ವಋಷಿಯಿಂದ ಸುಶಿಕ್ಷಿತನಾದನು.

೧೫. ಆ ಸಗರನು ಮುನಿಯ ಶಿಕ್ಷಣದಿಂದ ಬಲಿಷ್ಠನು, ಧಾರ್ಮಿಕನು, ಕೃತಜ್ಞನು, ಸುಗುಣಶಾಲಿಯು, ಜ್ಞಾನಿಯೂ ಆದನು. ಅವನು ಧರ್ಮಸೂಕ್ಷ್ಮ ವನ್ನರಿತು ಅಸದೃಶವಾದ.ತೇಜಸ್ಸುಳ್ಳ ಔರ್ವಮುನಿಗೆ ಪ್ರತಿದಿನವೂ ಸಮಿತ್ತು, ದರ್ಭೆ, ನೀರು, ಹೂವು ಮುಂತಾದ ನಿತ್ಯಾಹ್ನಿಕ ಸಾಧನಗಳನ್ನು ತಂದುಕೊಡು ತ್ತಿದ್ದನು. ಗುಣಗಳಿಗೆ ಆಶ್ರಯನಾದ ಆ ಸಗರನು ಒಂದಾನೊಂದು ಕಾಲದಲ್ಲಿ ತನ್ನ ತಾಯಿಯನ್ನು ವಂದಿಸಿ ವಿನಯದಿಂದ ಕೈಜೋಡಿಸಿಕೊಂಡು ಮುಂದೆ ಹೇಳುವರೀತಿ ಮಾತನಾಡಿದನು.

೧೬-೧೮. ಸಗರನು ಹೇಳುತ್ತಾನೆ—ತಾಯಿಯೇ! ನನ್ನ ತಂದೆಯು ಎಲ್ಲಿಗೆ ಹೋದನು? ಅವನ ಹೆಸರೇನು? ಯಾವ ವಂಶದಲ್ಲಿ ಜನ್ಮತಾಳಿದನು? ಇವುಗಳನ್ನೆಲ್ಲಾ ತಿಳಿದುಕೊಳ್ಳಬೇಕೆಂಬ ಕುತೂಹಲವುಂಟಾಗಿದೆ. ಆದುದರಿಂದ ಇವುಗಳೆಲ್ಲವನ್ನೂ ನನಗಾಗಿ ತಿಳಿಸು. ಲೋಕದಲ್ಲಿ ತಂದೆಯಿಲ್ಲದವರು ಬದುಕಿ ದ್ದರೂ ಸತ್ತಂತೆಯೇ ಸರಿ.

**ದರಿದ್ರೋऽಪಿ ಪಿತಾ ಯಸ್ಯ ಹ್ಯಾಸ್ತೇ ಸ ಧನದೋಪಮಃ ।**
**ಯಸ್ಯ ಮಾತಾ ಪಿತಾ ನಾಸ್ತಿ ಸುಖಂ ತಸ್ಯ ನ ವಿದ್ಯತೇ ॥ ೧೯ ॥**

**ಧರ್ಮಹೀನೋ ಯಥಾ ಮೂರ್ಖಃ ಪರತ್ರೇಹ ಚ ನಿಂದಿತಃ ।**
**ಮಾತಾಪಿತೃವಿಹೀನಸ್ಯ ಅಜ್ಞಸ್ಯಾಪ್ಯವಿವೇಕಿನಃ ॥ ೨೦ ॥**

**ಅಪುತ್ರಸ್ಯ ವೃಥಾ ಜನ್ಮ ಋಣಗ್ರಸ್ತಸ್ಯ ಚೈವ ಹಿ ।**
**ಚಂದ್ರಹೀನಾ ಯಥಾ ರಾತ್ರಿಃ ಪದ್ಮಹೀನಂ ಯಥಾ ಸರಃ ॥ ೨೧ ॥**

**ಪತಿಹೀನಾ ಯಥಾ ನಾರೀ ಪಿತೃಹೀನಸ್ತಥಾ ಶಿಶುಃ ।**
**ಧರ್ಮಹೀನೋ ಯಥಾ ಜಂತುಃ ಕರ್ಮಹೀನೋ ಯಥಾ ಗೃಹೀ ॥ ೨೨ ॥**

**ಪಶುಹೀನೋ ಯಥಾ ವೈಶ್ಯಸ್ತಥಾ ಪಿತ್ರಾ ವಿನಾऽರ್ಭಕಃ ।**
**ಸತ್ಯಹೀನಂ ಯಥಾ ವಾಕ್ಯಂ ಸಾಧುಹೀನಾ ಯಥಾ ಸಭಾ ॥ ೨೩ ॥**

---

೧೯. ಬಡವನಾಗಿದ್ದರೂ ಸರಿ ತಂದೆಯಿದ್ದರೆ ಅವನು ಕುಬೇರನಿಗೆ ಸಮಾನನಾಗುತ್ತಾನೆ. ಯಾರಿಗೆ ತಾಯಿತಂದೆಗಳು ಇರುವುದಿಲ್ಲವೋ ಅವನಿಗೆ ಸುಖವಿಲ್ಲ.

೨೦-೨೨. ಧರ್ಮಾನುಷ್ಠಾನವಿಲ್ಲದ ಮೂರ್ಖನು ಈಲೋಕ ಪರಲೋಕಗಳಲ್ಲಿ ಹೇಗೆ ನಿಂದಿಸಲ್ಪಡುತ್ತಾನೆಯೋ ಅದರಂತೆ ತಾಯಿತಂದೆಗಳಿಲ್ಲದವನು, ಅಜ್ಞಾನಿಯು, ಅವಿವೇಕಿಯು, ಮಕ್ಕಳಿಲ್ಲದಿರುವವನೂ ಆಗಿರುವವನ ಜನ್ಮ, ಹಾಗೆಯೇ ಸಾಲಗಾರನ ಜನ್ಮವೂ ಸಹ ನಿರರ್ಥಕವೆಂದು ನಿಂದಿತವಾಗಿದೆ. ಚಂದ್ರನಿಲ್ಲದ ರಾತ್ರಿ, ಕಮಲವಿಲ್ಲದ ಸರೋವರ, ಗಂಡನಿಲ್ಲದ ಹೆಂಗಸು, ಧರ್ಮವಿಲ್ಲದ ಪ್ರಾಣಿಯು, ಸತ್ಕರ್ಮಾನುಷ್ಠಾನವಿಲ್ಲದ ಗೃಹಸ್ಥನು ಇವರುಗಳಂತೆ ತಂದೆಯಿಲ್ಲದ ಮಗುವು ಶೋಭಿಸುವುದಿಲ್ಲ.

೨೩-೨೪. ದನಕರುಗಳಿಲ್ಲದ ವೈಶ್ಯನು, ಸತ್ಯವಿಲ್ಲದ ನುಡಿ, ಸಜ್ಜನರಿಲ್ಲದ ಸಭೆ, ದಯೆಯಿಲ್ಲದ ತಪಸ್ಸು ಇವುಗಳಂತೆ ತಂದೆಯಿಲ್ಲದ ಬಾಲನು

ತಪೋ ಯಥಾ ದಯಾಹೀನಂ ತಥಾ ಪಿತ್ರಾ ವಿನಾಽರ್ಭಕಃ ।
ವೃಕ್ಷಹೀನಂ ಯಥಾರಣ್ಯಂ ಜಲಹೀನಾ ಯಥಾ ನದೀ ।
ವೇಗಹೀನೋ ಯಥಾ ವಾಜೀ ತಥಾ ಪಿತ್ರಾ ವಿನಾಽರ್ಭಕಃ ॥ ೨೪ ॥

ಯಥಾ: ಲಘುತರೋ ಲೋಕೇ ಮಾತರ್ಯಾಂಚಾಪರೋ ನರಃ ।
ತಥಾ ಪಿತ್ರಾ ವಿಹೀನಸ್ತು ಬಹುದುಃಖಾನ್ವಿತಃ ಸುತಃ ॥ ೨೫ ॥

ಇತೀರಿತಂ ಸುತೇನೈಷಾ ಶ್ರುತ್ವಾ ನಿಃಶ್ವಸ್ಯ ದುಃಖಿತಾ ।
ಸಂಪೃಷ್ಟಂ ತದ್ಯಥಾ ವೃತ್ತಂ ಸರ್ವಂ ತಸ್ಮೈ ನ್ಯವೇದಯತ್ ॥ ೨೬ ॥

ತಚ್ಛ್ರುತ್ವಾ ಸಗರಃ ಕ್ರುದ್ಧಃ ಕೋಪಸಂರಕ್ತಲೋಚನಃ ।
ಹನಿಷ್ಯಾಮಿತ್ಯರಾತೀನ್ಸ ಪ್ರತಿಜ್ಞಾಮಕರೋತ್ತದಾ ॥ ೨೭ ॥

---

ನಿಷ್ಫಲ. ಗಿಡಗಳಿಲ್ಲದ ಕಾಡು, ನೀರಿಲ್ಲದ ನದಿ, ಓಡದಿರುವ ಕುದುರೆ ಇವುಗಳಂತೆ ತಂದೆಯಿಲ್ಲದ ಬಾಲಕನು ಅನಾದರಣೀಯನು.

೨೫. ತಾಯಿಯೇ! ಲೋಕದಲ್ಲಿ ಭಿಕ್ಷೆಬೇಡುವ ಮನುಷ್ಯನು ಹೇಗೆ ಲಾಘವ (ಸಣ್ಣತನ) ವನ್ನು ಹೊಂದುತ್ತಾನೆಯೋ ಅದರಂತೆ ತಂದೆಯಿಲ್ಲದ ಮಗನು ನಾನಾವಿಧವಾದ ದುಃಖಗಳಿಗೀಡಾಗುತ್ತಾನೆ.

೨೬. ಈರೀತಿಯಾಗಿ ಮಗನು ಹೇಳಿದುದನ್ನು ಕೇಳಿ ತಾಯಿಯು ದುಃಖದಿಂದ ನಿಟ್ಟುಸಿರುಬಿಟ್ಟು ನಡೆದ ವೃತ್ತಾಂತವನ್ನೆಲ್ಲಾ ಯಥಾವತ್ತಾಗಿ ಮಗನಿಗೆ ಹೇಳಿದಳು.

೨೭. ಆ ವೃತ್ತಾಂತವನ್ನು ಕೇಳಿ ಸಗರನು ಕೋಪಗೊಂಡು, ಅದರಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಆಗಲೇ ಶತ್ರುಗಳನ್ನು ಸಂಹರಿಸುತ್ತೇನೆಂದು ಪ್ರತಿಜ್ಞೆಮಾಡಿದನು.

ಪ್ರದಕ್ಷಿಣೀಕೃತ್ಯ ಮುನಿಂ ಜನನೀಂ ಚ ಪ್ರಣಮ್ಯ ಸಃ ।
ಪ್ರಸ್ಥಾಪಿತಃ ಪ್ರತಸ್ಥೇ ಚ ತೇನೈವ ಮುನಿನಾ ತದಾ ॥ ೨೮ ॥

ಔರ್ವಾಶ್ರಮಾದ್ವಿನಿಷ್ಕ್ರಾಂತಃ ಸಗರಸ್ಸತ್ಯವಾಕ್ಛುಚಿಃ ।
ವಸಿಷ್ಠಂ ಸ್ವಕುಲಾಚಾರ್ಯಂ ಪ್ರಾಪ್ತಃ ಪ್ರೀತಿಸಮನ್ವಿತಃ ॥ ೨೯ ॥

ಪ್ರಣಮ್ಯ ಗುರವೇ ತಸ್ಮೈ ವಸಿಷ್ಠಾಯ ಮಹಾತ್ಮನೇ ।
ಸರ್ವಂ ವಿಜ್ಞಾಪಯಾಮಾಸ ಜ್ಞಾನದೃಷ್ಟ್ಯಾ ವಿಜಾನತೇ ॥ ೩೦ ॥

ಐಂದ್ರಾಸ್ತ್ರಂ ವಾರುಣಂ ಬ್ರಾಹ್ಮಮಾಗ್ನೇಯಂ ಸಗರೋ ನೃಪಃ ।
ತೇನೈವ ಮುನಿನಾವಾಪ ಖಡ್ಗಂ ವಜ್ರೋಪಮಂ ಧನುಃ ॥ ೩೧ ॥

ತತಸ್ತೇನಾಭ್ಯನುಜ್ಞಾತಃ ಸಗರಃ ಸೌಮನಸ್ಯವಾನ್ ।
ಆಶೀರ್ಭಿರರ್ಚಿತಃ ಸದ್ಯಃ ಪ್ರತಸ್ಥೇ ಪ್ರಣಿಪತ್ಯ ತಂ ॥ ೩೨ ॥

---

೨೮. ಕೂಡಲೇ ಸಗರನು ಔರ್ವಮುನಿ ಮತ್ತು ತನ್ನ ತಾಯಿ ಇವರಿಬ್ಬರಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಆ ಮುನಿಯಿಂದ ಆಜ್ಞೆಯನ್ನು ಪಡೆದು ಹೊರಟನು.

೨೯. ಸತ್ಯಸಂಧ ಮತ್ತು ಪರಿಶುದ್ಧನಾದ ಸಗರನು ಔರ್ವಮುನಿಗಳ ಆಶ್ರಮದಿಂದ ಹೊರಟು ಭಕ್ತಿಯಿಂದ ತಮ್ಮ ಕುಲಾಚಾರ್ಯರಾದ ವಸಿಷ್ಠರ ಹತ್ತಿರಕ್ಕೆ ಬಂದನು.

೩೦. ಸಗರನು ಗುರುಗಳಾದ ಆ ವಸಿಷ್ಠರಿಗೆ ನಮಸ್ಕಾರಮಾಡಿ, ಜ್ಞಾನದೃಷ್ಟಿಯಿಂದ ಸಕಲವನ್ನೂ ತಿಳಿದಿರುವ ಆ ಮಹಾತ್ಮರ ಸನ್ನಿಧಿಯಲ್ಲಿ ತನ್ನ ವೃತ್ತಾಂತವನ್ನೆಲ್ಲಾ ವಿಜ್ಞಾಪಿಸಿದನು.

೩೧. ಸಗರರಾಜನು ಐಂದ್ರಾಸ್ತ್ರ, ವಾರುಣಾಸ್ತ್ರ, ಬ್ರಹ್ಮಾಸ್ತ್ರ ಮತ್ತು ಆಗ್ನೇಯಾಸ್ತ್ರಗಳನ್ನೂ, ವಜ್ರಾಯುಧಕ್ಕೆ ಸಮಾನವಾದ ಖಡ್ಗವನ್ನು, ಧನುಸ್ಸನ್ನೂ ಸಹ ಆ ವಸಿಷ್ಠಮಹರ್ಷಿಯಿಂದ ತೆಗೆದುಕೊಂಡನು.

೩೨. ಸಮಾಚೀನಮನಸ್ಕನಾದ ಸಗರನು ವಸಿಷ್ಠರಿಗೆ ನಮಸ್ಕಾರ ಮಾಡಿ ಅವರಿಂದ ಆಶೀರ್ವಾದವನ್ನೂ, ಅಪ್ಪಣೆಯನ್ನೂ ಸಹ ಪಡೆದು ತಕ್ಷಣ ಅಲ್ಲಿಂದ ಹೊರಟನು.

ಏಕೇನೈವ ತು ಚಾಪೇನ ಸ ಶೂರಃ ಪರಿಪಂಥಿನಃ ।
ಸಪುತ್ರಪೌತ್ರಾನ್ಸಗಣಾನಕರೋತ್ಸ ಸ್ವರ್ಗಗಾಮಿನಃ ॥ ೩೩ ॥

ತಚ್ಚಾಪಮುಕ್ತಬಾಣಾಗ್ನಿಸಂತಪ್ತಾಸ್ತದರಾತಯಃ ।
ಕೇಚಿದ್ವಿನಷ್ಟಾಸ್ಸಂತ್ರಸ್ತಾಸ್ತಥಾ ಚಾನ್ಯೇ ಪ್ರದುದ್ರುವುಃ ॥ ೩೪ ॥

ಕೇಚಿದ್ವಿಕೀರ್ಣಕೇಶಾಶ್ಚ ವಲ್ಮೀಕೋಪರಿ ಸಂಸ್ಥಿತಾಃ ।
ತೃಣಾನ್ಯಭಕ್ಷಯನ್ಕೇಚಿನ್ನಗ್ನಾಶ್ಚ ವಿವಿಶುರ್ಜಲಂ ॥ ೩೫ ॥

ಶಕಾಶ್ಚ ಯವನಾಶ್ಚೈವ ತಥಾ ಚಾನ್ಯೇ ಮಹೀಭೃತಃ ।
ಸತ್ವರಂ ಶರಣಂ ಜಗ್ಮುರ್ವಸಿಷ್ಠಂ ಪ್ರಾಣಲೋಲುಪಾಃ ॥ ೩೬ ॥

ಜಿತಕ್ಷಿತಿರ್ಬಾಹುಪುತ್ರೋ ರಿಪೂನ್ ಗುರುಸಮೀಪಗಾನ್ ।
ಚಾರೈರ್ವಿಜ್ಞಾತವಾನ್ ಸದ್ಯಃ ಪ್ರಾಪ್ತಶ್ಚಾಚಾರ್ಯಸನ್ನಿಧಿಂ ॥ ೩೭ ॥

---

೩೩. ಆ ಪರಾಕ್ರಮಿಯಾದ ಸಗರನು ಒಂದೇ ಬಾಣದಿಂದ ಪುತ್ರ ಪೌತ್ರ ಪರಿವಾರಗಳಿಂದ ಸಹಿತರಾದ ಶತ್ರುಗಳನ್ನು ಸ್ವರ್ಗಕ್ಕೆ ಕಳುಹಿಸಿದನು.

೩೪. ಆ ಸಗರನು ಪ್ರಯೋಗಿಸಿದ ಬಾಣಾಗ್ನಿಯಿಂದ ತಪಿಸಲ್ಪಟ್ಟ ಅವನ ಶತ್ರುಗಳಲ್ಲಿ ಕೆಲವರು ಸತ್ತರು, ಕೆಲವರು ಗಾಯಗೊಂಡರು. ಕೆಲವರು ತಲೆತಪ್ಪಿಸಿಕೊಂಡು ಓಡಿಹೋದರು.

೩೫. ಕೆಲವರು ಕೂದಲುಗಳನ್ನು ಕೆದರಿಕೊಂಡು ಹುತ್ತಗಳಮೇಲೆ ವಾಸಮಾಡುತ್ತಾ ಹುಲ್ಲುಗಳನ್ನು ತಿನ್ನುತ್ತಿದ್ದರು. ಇನ್ನು ಕೆಲವರು ಬರಿಯ ಮೈಯಿಂದ ನೀರಿನೊಳಕ್ಕೆ ಪ್ರವೇಶಿಸಿದರು.

೩೬. ಶಕ, ಯವನ ಮುಂತಾದ ಇತರ ರಾಜರು ಪ್ರಾಣದ ಆಶೆಯಿಂದ ತಕ್ಷಣ ಹೋಗಿ ವಸಿಷ್ಠರನ್ನು ಶರಣುಹೊಂದಿದರು.

೩೭. ಬಾಹುಕುಮಾರನಾದ ಸಗರನು ರಾಜ್ಯವನ್ನು ಜಯಿಸಿ ಶತ್ರುಗಳು ಗುರುಗಳ ಹತ್ತಿರಕ್ಕೆ ಹೋಗಿರುವುದನ್ನು ಚಾರರಿಂದ ತಿಳಿದು ಕೂಡಲೇ ತಾನೂ ಆಚಾರ್ಯರಾದ ವಸಿಷ್ಠರ ಸನ್ನಿಧಾನಕ್ಕೆ ಬಂದನು.

ತಮಾಗತಂ ಬಾಹುಸುತಂ ನಿಶಮ್ಯ
ಮುನಿರ್ವಸಿಷ್ಠಃ ಶರಣಾಗತಾಂಸ್ತಾನ್ ।
ತ್ರಾತುಂ ಚ ಶಿಷ್ಯಾಭಿಮತಂ ಚ ಕರ್ತುಂ
ವಿಚಾರಯಾಮಾಸ ತದಾ ಕ್ಷಣೇನ ॥ ೩೮ ॥

ಚಕಾರ ಮುಂಡಾನ್ ಶವರಾನ್
ಯವನಾನ್ಲಂಬಮೂರ್ಧಜಾನ್ ।
ಅನ್ಯಾಂಶ್ಚ ಶ್ಮಶ್ರುಲಾನ್ ಸರ್ವಾನ್
ಮುಂಡಾನ್ವೇದಬಹಿಷ್ಕೃತಾನ್ ॥ ೩೯ ॥

ವಸಿಷ್ಠಮುನಿನಾ ತೇನ ಹತಪ್ರಾಯಾನ್ನಿರೀಕ್ಷ್ಯ ಸಃ ।
ಪ್ರಹಸನ್ ಪ್ರಾಹ ಸಗರಃ ಸ್ವಗುರುಂ ತಪಸೋ ನಿಧಿಂ ॥ ೪೦ ॥

ಸಗರ ಉವಾಚ

ಭೋ ಭೋ ಗುರೋ ದುರಾಚಾರಾನೇತಾನ್ರಕ್ಷಸಿ ಕಿಂ ವೃಥಾ ।
ಸರ್ವಥಾsಹಂ ಹನಿಷ್ಯಾಮಿ ಮತ್ಪಿತುರ್ದೇಶಹಾರಕಾನ್ ॥ ೪೧ ॥

---

೩೮. ವಸಿಷ್ಠಮುನಿಯು ಬಾಹುಪುತ್ರನು ಬರುತ್ತಿರುವುದನ್ನು ಕೇಳಿ ಶರಣಾಗತರಾದ ಆ ರಾಜರನ್ನು ಕಾಪಾಡುವುದಕ್ಕೂ ಶಿಷ್ಯನಿಗೆ ಇಷ್ಟವಾದುದನ್ನು ನಡೆಯಿಸುವುದಕ್ಕೂ ತಕ್ಕ ಉಪಾಯವನ್ನು ಕ್ಷಣಮಾತ್ರದಲ್ಲಿ ಆಲೋಚಿಸಿದನು.

೩೯. ಕೂಡಲೇ ವಸಿಷ್ಠನು ಶಬರರಿಗೆ ತಲೆಯನ್ನು ಬೋಳಿಸಿದನು, ಯವನರಿಗೆ ತಲೆಯಮೇಲೆ ಉದ್ದವಾಗಿ ಕೂದಲನ್ನಿಡಿಸಿದನು, ಇತರರಿಗೆ ಗಡ್ಡ ಮೀಸೆಗಳನ್ನು ಬೋಳಿಸಿದನು, ಹೀಗೆ ಸರ್ವರಿಗೂ ವೇದಬಾಹ್ಯರೀತಿಯಲ್ಲಿ ಕ್ಷೌರ ಮಾಡಿಸಿದನು.

೪೦. ಆ ಸಗರನು ವಸಿಷ್ಠಋಷಿಯಿಂದ ಸಂಹೃತಪ್ರಾಯರಾದ ಆ ರಾಜರನ್ನು ನೋಡಿ ನಕ್ಕು ತಪೋನಿಧಿಯಾದ ಗುರುಗಳನ್ನು ಕುರಿತು ಈರೀತಿಯಾಗಿ ಹೇಳಿದನು.

೪೧. ಸಗರನು ಹೇಳುತ್ತಾನೆ—ಗುರುವೇ ! ಈ ದುರಾಚಾರಿಗಳನ್ನು ಕಾಪಾಡುವೆಯಾ ಏನು ? ಅದು ವ್ಯರ್ಥಪ್ರಯಾಸ. ನನ್ನ ತಂದೆಯ ದೇಶವನ್ನು ಅಪಹರಿಸಿದ ಈ ದುರಾತ್ಮರನ್ನು ಸಕಲ ವಿಧವಾಗಿಯೂ ನಾನು ಸಂಹರಿಸುತ್ತೇನೆ.

ಉಪೇಕ್ಷೇತ ಸಮರ್ಥಃ ಸನ್ಧರ್ಮಸ್ಯ ಪರಿಪಂಥಿನಃ ।
ಸ ಏವ ಸರ್ವನಾಶಾಯ ಹೇತುಭೂತೋ ನ ಸಂಶಯಃ ॥ ೪೨ ॥

ಬಾಧಂತೇ ಪ್ರಥಮಂ ಮತ್ತಾ ದುರ್ಜನಾಃ ಸಕಲಂ ಜಗತ್ ।
ತ ಏವ ಬಲಹೀನಾಶ್ಚೇದ್ಭಜಂತೇऽತ್ಯಂತಸಾಧುತಾಂ ॥ ೪೩ ॥

ಅಹೋ ಮಾಯಾಕೃತಂ ಕರ್ಮ ಖಲಾಃ ಕಲ್ಮಲಚೇತಸಃ ।
ತಾವತ್ಕುರ್ವಂತಿ ಕಾರ್ಪಣ್ಯಂ ಯಾವತ್ಸ್ಯಾತ್ಪ್ರಬಲಂ ಬಲಂ ॥ ೪೪ ॥

ದಾಸಭಾವಂ ಚ ಶತ್ರೂಣಾಂ ವಾರಸ್ತ್ರೀಣಾಂ ಚ ಸೌಹೃದಂ ।
ಸಾಧುಭಾವಂ ಚ ಸರ್ಪಾಣಾಂ ಶ್ರೇಯಸ್ಕಾಮೋ ನ ವಿಶ್ವಸೇತ್ ॥ ೪೫ ॥

---

೪೨. ಸಮರ್ಥನಾಗಿದ್ದಾಗ್ಯೂ ಧರ್ಮವಿರೋಧಿಗಳನ್ನು ನಿರಾಕರಿಸದೆ ಉದಾಸೀನಮಾಡಿದರೆ ಅಂತಹವನೇ ಖಂಡಿತವಾಗಿಯೂ ಸರ್ವನಾಶಕ್ಕೆ ಕಾರಣನಾಗುತ್ತಾನೆ.

೪೩. ಕೆಟ್ಟಜನರು ಉನ್ಮತ್ತರಾಗಿ ಮೊದಲು ಸಕಲ ಜಗತ್ತನ್ನೂ ಹಿಂಸಿಸುತ್ತಾರೆ. ಅವರೇ ಅಶಕ್ತರಾದರೆ ಅತ್ಯಂತ ಸಾಧುಗಳಂತೆ ವೇಷವನ್ನು ಧರಿಸುತ್ತಾರೆ.

೪೪. ಆಶ್ಚರ್ಯ! ಮಾಯೆಯು ವಿಚಿತ್ರವಾದ ವ್ಯಾಪಾರವನ್ನು ಮಾಡಿಸುತ್ತದೆ, ಮನಃಕಾಲುಷ್ಯವುಳ್ಳ ದುಷ್ಟಜನರು ಶಕ್ತಿಯು ಹೆಚ್ಚಾಗಿರುವವರೆಗೂ ಲೋಭದೋಷದಿಂದ ಇತರರಿಗೆ ಹಿಂಸೆಯುಂಟಾಗುವ ಕೆಲಸಗಳನ್ನು ಮಾಡುತ್ತಿರುತ್ತಾರೆ.

೪೫. ಶ್ರೇಯಸ್ಸನ್ನು ಬಯಸುವವನು, ಶತ್ರುಗಳು ದಾಸರಾಗಿ ನಟಿಸುವುದನ್ನೂ, ಸೂಳೆಯರು ತೋರಿಸುವ ಸೌಮನಸ್ಯವನ್ನೂ, ಸರ್ಪಗಳ ಒಳ್ಳೆಯತನವನ್ನೂ ಸಹ ನಂಬಬಾರದು.

ಪ್ರಹಾಸಂ ಕುರ್ವತೇ ಪೂರ್ವಂ ಯಾನ್ದಂತಾನ್ದರ್ಶಯನ್ ಖಲಾಃ ।
ತಾನ್ನೈವ ದರ್ಶಯಂತ್ಯಾಶು ಸ್ವಸಾಮರ್ಥ್ಯವಿಪರ್ಯಯೇ ॥ ೪೬ ॥

ಪಿಶುನಾ ಜಿಹ್ವಯಾ ಪೂರ್ವಂ ಪುರುಷಂ ಪ್ರವದಂತಿ ಚ ।
ಅತೀವ ಕರುಣಂ ವಾಕ್ಯಂ ವದಂತ್ಯೇವ ತಥ್ಯಾಬಲಾಃ ॥ ೪೭ ॥

ಶ್ರೇಯಸ್ಕಾಮೋ ಗುರೋಯಸ್ತು ನೀತಿಶಾಸ್ತ್ರಾರ್ಥಕೋವಿದಃ ।
ಸಾಧುತ್ವಂ ದಾಸಭಾವಂ ಚ ಖಲಾನಾಂ ನೈವ ವಿಶ್ವಸೇತ್ ॥ ೪೮ ॥

ದುರ್ಜನಂ ಪ್ರಣತಿಂ ಯಾಂತಂ ಮಿತ್ರಂ ಕೈತವಶೀಲಿನಂ ।
ದುಷ್ಟಾಂ ಭಾರ್ಯಾಂ ಚ ವಿಶ್ವಸ್ತೋ ಮೃತ ಏವ ನ ಸಂಶಯಃ ॥ ೪೯ ॥

---

೪೬. ದುಷ್ಟರು ಯಾವ ಹಲ್ಲುಗಳನ್ನು ತೋರಿಸುತ್ತಾ ಹಿಂದೆ ಸಾಧುಗಳನ್ನು ಹಾಸ್ಯಮಾಡುತ್ತಿದ್ದರೋ ಅವರೇ ತಮ್ಮ ಶಕ್ತಿಯು ಹೋದರೆ ಕೂಡಲೇ ಅದೇ ಹಲ್ಲುಗಳನ್ನು ತೋರಿಸುವುದಿಲ್ಲ. ಎಂದರೆ ತಾವು ಅಶಕ್ತರಾದಾಗ ಬಾಯಿ ಮುಚ್ಚಿಕೊಂಡಿರುತ್ತಾರೆಂದು ತಾತ್ಪರ್ಯ.

೪೭. ಪೂರ್ವದಲ್ಲಿ ಕೆಟ್ಟ ನಾಲಿಗೆಯಿಂದ ಕಠಿಣಮಾತುಗಳನ್ನಾಡುತ್ತಿದ್ದ ದುಷ್ಟರು ತಾವು ಬಲಹೀನರಾದಾಗ ಅತ್ಯಂತ ದಯಾಪೂರಿತವಾದ ಮಾತುಗಳನ್ನಾಡುತ್ತಾರೆ.

೪೮. ಗುರುವೇ ! ಆತ್ಮಹಿತವನ್ನು ಕೋರುವ ನೀತಿಶಾಸ್ತ್ರಾರ್ಥತತ್ವಜ್ಞಾನಿಯು ದುಷ್ಟರ ಒಳ್ಳೆಯತನ ಮತ್ತು ದಾಸತ್ವ ಇವುಗಳನ್ನು ನಂಬಬಾರದು.

೪೯. ನಮಸ್ಕರಿಸಿ ಬಂದ ದುರ್ಜನನನ್ನು, ಮೋಸಗಾರನಾದ ಸ್ನೇಹಿತನನ್ನು, ಕೆಟ್ಟ ನಡತೆಯುಳ್ಳ ಹೆಂಡತಿಯನ್ನೂ ಸಹ ನಂಬಿದವನು ಸತ್ತಂತೆಯೇ ಸರಿ. ಖಂಡಿತ ಸಂದೇಹವಿಲ್ಲ.

ಮಾ ರಕ್ಷ ತಸ್ಮಾದೇತಾನ್ವೈ ಗೋರೂಪಾನ್ವ್ಯಾಘ್ರಕರ್ಮಣಃ ।
ಹತ್ವೈತಾನಖಿಲಾನ್ದುಷ್ಟಾಂಸ್ತ್ವತ್ಪ್ರಸಾದಾನ್ಮಹೀಂ ಭುಜೇ ॥ ೫೦ ॥

ವಸಿಷ್ಠಸ್ತದ್ವಚಃ ಶ್ರುತ್ವಾ ಸುಪ್ರೀತೋ ಮುನಿಸತ್ತಮಃ ।
ಕರಾಭ್ಯಾಂ ಸಗರಸ್ಯಾಂಗಂ ಸ್ಪೃಶನ್ನಿದಮುವಾಚ ಹ ॥ ೫೧ ॥

ವಸಿಷ್ಠ ಉವಾಚ

ಸಾಧು ಸಾಧು ಮಹಾಭಾಗ ಸತ್ಯಂ ವದಸಿ ಸುವ್ರತ ।
ತಥಾಪಿ ಮದ್ವಚಃ ಶ್ರುತ್ವಾ ಪರಾಂ ಶಾಂತಿಂ ಲಭಿಷ್ಯಸಿ ॥ ೫೨ ॥

ಮಯ್ಯೈತೇ ನಿಹತಾಃ ಪೂರ್ವಂ ತ್ವತ್ಪ್ರತಿಜ್ಞಾವಿರೋಧಿನಃ ।
ಹತಾನಾಂ ಹನನೇ ಕೀರ್ತಿಃ ಕಾ ಸಮುತ್ಪದ್ಯತೇ ವದ ॥ ೫೩ ॥

---

೫೦. ಆದಕಾರಣ ಗುರುವೇ! ಹುಲಿಯಂತೆ ಆಚರಿಸುತ್ತಿರುವ ಗೋವಿನ ವೇಷವನ್ನು ತೋರಿಸುತ್ತಿರುವ ಈ ದುಷ್ಟರನ್ನು ಕಾಪಾಡಬೇಡ, ನಿನ್ನ ಅನುಗ್ರಹದಿಂದ ಈ ಸಕಲ ದುಷ್ಟರನ್ನೂ ಸಂಹರಿಸಿ ಭೂಮಿಯನ್ನು ಅನುಭವಿಸುತ್ತೇನೆ.

೫೧. ಮುನಿಶ್ರೇಷ್ಠನಾದ ವಸಿಷ್ಠನು ಆ ಸಗರನ ಮಾತುಗಳನ್ನು ಕೇಳಿ ಸಂತುಷ್ಟನಾಗಿ ಕೈಗಳಿಂದ ಸಗರನ ಅವಯವಗಳನ್ನು ಸವರುತ್ತಾ ಮುಂದೆ ಹೇಳುವ ಮಾತುಗಳನ್ನು ಆಡಿದನು.

೫೨. ವಸಿಷ್ಠನು ಮಾತನಾಡುತ್ತಾನೆ—ಸದ್ವ್ರತಾನುಷ್ಠಾತೃವಾದ ಮಹಾಶಯನೇ! ಒಳ್ಳೆಯದು, ಒಳ್ಳೆಯದು, ನಿಜವನ್ನು ಹೇಳುತ್ತೀ, ಆದರೆ ನನ್ನ ಮಾತನ್ನು ಕೇಳು. ಉತ್ತಮವಾದ ಸಮಾಧಾನವನ್ನು ಹೊಂದುತ್ತಿ.

೫೩. ನಿನ್ನ ಶತ್ರುಸಂಹಾರಪ್ರತಿಜ್ಞೆಗೆ ವಿರೋಧಿಗಳಾದ ಈ ರಾಜರುಗಳನ್ನು ನಾನು ಮುಂಚಿತವಾಗಿಯೇ ವಿರೂಪಗೊಳಿಸಿ ಅವಮಾನಪಡಿಸಿರುವುದರಿಂದ ಇವರು ನನ್ನಿಂದಲೇ ಸಂಹೃತಪ್ರಾಯರಾಗಿದ್ದಾರೆ, ಈಪ್ರಕಾರ ಹತರಾಗಿರುವವರನ್ನು ಪುನಃ ಕೊಲ್ಲುವುದು ಕೀರ್ತಿಕರವೇ ? ಇಂತಹ ಸಂಹಾರದಿಂದ ಯಾವ ಯಶಸ್ಸುಂಟಾಗುತ್ತದೆ ಹೇಳು.

**ಭೂಮೀಶ ಜಂತವಃ ಸರ್ವೇ ಕರ್ಮಪಾಶೇನ ಯಂತ್ರಿತಾಃ ।**
**ತಥಾಪಿ ಪಾಪೈರ್ನಿಹತಾಃ ಕಿಮರ್ಥಂ ಹಂಸಿ ತಾನ್ ಪುನಃ ॥ ೫೪ ॥**

**ದೇಹಸ್ತು ಪಾಪಜನಿತಃ ಪೂರ್ವಮೇವೈನಸಾ ಹತಃ ।**
**ಆತ್ಮಾ ಹ್ಯಭೇದ್ಯಃ ಪೂರ್ಣತ್ವಾಚ್ಛಾಸ್ತ್ರಾಣಾಮೇಷ ನಿರ್ಣಯಃ ॥ ೫೫ ॥**

**ಸ್ವಕರ್ಮಫಲಭೋಗಾನಾಂ ಹೇತುಮಾತ್ರಾ ಹಿ ಜಂತವಃ ।**
**ಕರ್ಮಾಣಿ ದೈವಮೂಲಾನಿ ದೇವಾಧೀನಮಿದಂ ಜಗತ್ ॥ ೫೬ ॥**

**ಯಸ್ಮಾದ್ದೈವಂ ಹಿ ಸಾಧೂನಾಂ ರಕ್ಷಿತಾ ದುಷ್ಟಶಿಕ್ಷಿತಾ ।**
**ತತೋ ನರೈರಸ್ವತಂತ್ರೈಃ ಕಿಂ ಕಾರ್ಯಂ ಸಾಧ್ಯತೇ ವದ ॥ ೫೭ ॥**

---

೫೪. ದೊರೆಯೇ! ಸಕಲಪ್ರಾಣಿಗಳೂ ಕರ್ಮವೆಂಬ ಬಂಧನದಿಂದ ಕಟ್ಟಲ್ಪಟ್ಟಿರುತ್ತಾರೆ. ಆದುದರಿಂದ ಪಾಪಕೃತ್ಯಗಳನ್ನು ಮಾಡಿದ ಇವರು ತಮ್ಮ ಕರ್ಮದಿಂದಲೇ ಹತರಾಗುತ್ತಾರೆ. ಹತರಾದ ಇವರನ್ನು ತಿರುಗಿ ಏತಕ್ಕೆ ಕೊಲ್ಲುತ್ತೀ?

೫೫. ಈ ದೇಹವು ಪಾಪದಿಂದ ಹುಟ್ಟಿದ್ದು, ಪೂರ್ವದಲ್ಲಿಯೇ ಪಾಪ ದಿಂದ ಸಂಹೃತವೂ ಆಗಿದೆ, ದೇಹದಲ್ಲಿರುವ ಆತ್ಮನಾದರೋ ನಾಶಮಾಡಲನ ರ್ಹನು. ಅವನು ಅನಾದಿ ನಿತ್ಯನಾಗಿರುತ್ತಾನೆಂಬುದೇ ಶಾಸ್ತ್ರಾರ್ಥ ನಿರ್ಣಯವು.

೫೬. ಪ್ರಾಣಿಗಳು ತಮ್ಮ ಕರ್ಮಫಲವನ್ನು ಅನುಭವಿಸುವುದಕ್ಕೆ ನಿಮಿತ್ತಮಾತ್ರ. ಕರ್ಮಗಳು ದೈವಮೂಲಕವು. ಈ ಜಗತ್ತೆಲ್ಲವೂ ದೇವರ ಅಧೀನ, ಸ್ವತಂತ್ರವಲ್ಲ.

೫೭. ಸಜ್ಜನರನ್ನು ರಕ್ಷಿಸುವವನು, ದುಷ್ಟರನ್ನು ಶಿಕ್ಷಿಸುವವನೂ ಸಹ ಸ್ವತಂತ್ರನಾದ ದೇವರೇ ಆಗಿರುವುದರಿಂದ ಪರಾಧೀನರಾದ ಮನುಷ್ಯಮಾತ್ರದ ವರು ಏನು ಮಾಡಲು ಸಾಧ್ಯ? ಹೇಳು.

ಶರೀರಂ ಪಾಪಸಂಭೂತಂ ಪಾಪೇನೈವ ಪ್ರವರ್ಧತೇ ।
ಪಾಪಮೂಲಮಿದಂ ಜ್ಞಾತ್ವಾ ಕಥಂ ಹಂತುಂ ಸಮುದ್ಯತಃ ॥ ೫೮ ॥

ಆತ್ಮಾ ಶುದ್ಧೋಽಪಿ ದೇಹಸ್ಥೋ ದೇಹೀತಿ ಪ್ರೋಚ್ಯತೇ ಬುಧೈಃ ।
ತಸ್ಮಾದಿದಂ ವಪುರ್ಭೂಪ ಪಾಪಮೂಲಂ ನ ಸಂಶಯಃ ॥ ೫೯ ॥

ಪಾಪಮೂಲಂ ವಪುರ್ಹಂತುಃ ಕಾ ಕೀರ್ತಿಸ್ತವ ಬಾಹುಜ ।
ಭವಿಷ್ಯತೀತಿ ನಿಶ್ಚಿತ್ಯ ತಾನ್ನ ಹಿಂಸ ತತಃ ಪರಂ ॥ ೬೦ ॥

ಇತಿ ಶ್ರುತ್ವಾ ಗುರೋರ್ವಾಕ್ಯಂ ವಿರರಾಮ ಸ ಕೋಪತಃ ।
ಸ್ಪೃಶನ್ ಕರೇಣ ಸಗರಂ ನನಂದ ಚ ಮುನಿಸ್ತದಾ ॥ ೬೧ ॥

---

೫೮. ಶರೀರವು ಪಾಪನಿರ್ಮಿತವು, ಪಾಪದಿಂದಲೇ ಬೆಳೆಯುತ್ತದೆ, ಈ ಶರೀರವು ಪಾಪಮೂಲಕವಾಗಿ ಪ್ರಾಪ್ತವಾಗಿದೆಯೆಂದು ತಿಳಿದೂ ಸಹ ಅದನ್ನು ಸಂಹರಿಸಲು ಹೇಗೆ ಉದ್ಯುಕ್ತನಾಗುತ್ತೀ ?

೫೯. ಜ್ಞಾನಾನಂದಾದಿ ರೂಪನಾಗಿ ಪರಿಶುದ್ಧನಾದ ಆತ್ಮನೂ ಸಹ ಈ ಸ್ಥೂಲದೇಹದಲ್ಲಿರುವುದರಿಂದ ದೇಹೀ (ಕರ್ಮನಿರ್ಮಿತದೇಹವುಳ್ಳವನು) ಎಂಬುದಾಗಿ ಜ್ಞಾನಿಗಳಿಂದ ಉಕ್ತನಾಗಿದ್ದಾನೆ. ಎಲೈ ದೊರೆಯೇ ಈ ಶರೀರವು ಖಂಡಿತವಾಗಿಯೂ ಪಾಪಮೂಲಕವು.

೬೦. ಬಾಹುಪುತ್ರನೇ! ಪಾಪಮೂಲಕವಾದ ಈ ಶರೀರವನ್ನು ಸಂಹರಿಸಿದರೆ ನಿನಗೆ ಯಾವ ಕೀರ್ತಿಯು ಬರುತ್ತದೆ ? ವಿಚಾರಮಾಡಿ ನಿಶ್ಚಯಮಾಡು. ಎಂದರೆ ಇದರಿಂದ ನಿನಗೆ ಕೀರ್ತಿಯು ಬರುವುದಿಲ್ಲವೆಂದು ತಾತ್ಪರ್ಯ. ಆದುದರಿಂದ ಇವರನ್ನು ಇನ್ನು ಹಿಂಸಿಸಬೇಡ.

೬೧. ಈ ರೀತಿಯಾದ ಗುರುಗಳ ವಾಕ್ಯವನ್ನು ಕೇಳಿ ಆ ಸಗರನು ಕೋಪವನ್ನು ಬಿಟ್ಟನು. ಆಗ ವಸಿಷ್ಠಮುನಿಯು ಸಗರನ ಮೇಲೆ ಕೈ ಇಟ್ಟು ಸಂತೋಷಪಟ್ಟನು.

ಅಥಾಥರ್ವನಿಧಿಸ್ತಸ್ಯ ಸಗರಸ್ಯ ಮಹಾತ್ಮನಃ ।
ರಾಜ್ಯಾಭಿಷೇಕಂ ಕೃತವಾನ್ಮುನಿಭಿಃ ಸಹ ಸುವ್ರತೈಃ ॥ ೬೨ ॥

ಭಾರ್ಯಾದ್ವಯಾ ಚ ತಸ್ಯಾಸೀತ್ಕೇಶಿನೀ ಸುಮತಿಸ್ತಥಾ ।
ಕಾಶ್ಯಪಸ್ಯ ವಿದರ್ಭಸ್ಯ ತನಯೇ ಮುನಿಸತ್ತಮ ॥ ೬೩ ॥

ರಾಜ್ಯೇ ಪ್ರತಿಷ್ಠಿತೇ ದೃಷ್ಟ್ವಾ ಮುನಿರೌರ್ವಸ್ತಪೋನಿಧಿಃ ।
ವನಾದಾಗತ್ಯ ರಾಜಾನಂ ಸಂಭಾಷ್ಯ ಸ್ವಾಶ್ರಮಂ ಯಯೌ ॥ ೬೪ ॥

ಕದಾಚಿತ್ತಸ್ಯ ಭೂಪಸ್ಯ ಭಾರ್ಯಾಭ್ಯಾಂ ಪ್ರಾರ್ಥಿತೋ ಮುನಿಃ ।
ವರಂ ದದಾವಪತ್ಯಾರ್ಥಮೌರ್ವೋ ಭಾರ್ಗವಮಂತ್ರವಿತ್ ॥ ೬೫ ॥

ಕ್ಷಣಂ ಧ್ಯಾನಸ್ಥಿತೋ ಭೂತ್ವಾ ತ್ರಿಕಾಲಜ್ಞೋ ಮುನೀಶ್ವರಃ ।
ಕೇಶಿನೀಂ ಸುಮತೀಂ ಚೈವ ಇದಮಾಹ ಪ್ರಹರ್ಷಯನ್ ॥ ೬೬ ॥

---

೬೨. ತರುವಾಯ ಅಥರ್ವವೇದಪ್ರವೀಣನಾದ ವಸಿಷ್ಠಋಷಿಯು ಮಹಾತ್ಮನಾದ ಆ ಸಗರನಿಗೆ ಸಮೀಚೀನವ್ರತಾನುಷ್ಠಾತೃಗಳಾದ ಮುನಿಗಳಿಂದ ಕೂಡಿ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು.

೬೩. ಮುನಿಶ್ರೇಷ್ಠನೇ! ಆ ಸಗರನಿಗೆ ಕಾಶ್ಯಪನ ಮಗಳಾದ ಕೇಶಿನಿ, ವಿದರ್ಭರಾಜನ ಪುತ್ರಿಯಾದ ಸುಮತಿ, ಎಂಬುದಾಗಿ ಇಬ್ಬರು ಹೆಂಡತಿಯರಿದ್ದರು.

೬೪. ತಪಸ್ವಿಯಾದ ಔರ್ವಮುನಿಯು ಸಗರನು ರಾಜ್ಯಸ್ಥಾಪನೆಮಾಡಿದ ವಿಷಯವನ್ನು ತಿಳಿದು ಅರಣ್ಯದಿಂದ ಅಲ್ಲಿಗೆ ಬಂದು ರಾಜನೊಡನೆ ಸಂಭಾಷಣೆ ಮಾಡಿ ತನ್ನ ಆಶ್ರಮಕ್ಕೆ ಹಿಂದಿರುಗಿದನು.

೬೫. ಒಂದಾನೊಂದು ಕಾಲದಲ್ಲಿ ಆ ಸಗರರಾಜನ ಹೆಂಡತಿಯರಿಬ್ಬರು ಔರ್ವಮುನಿಯನ್ನು ಪ್ರಾರ್ಥಿಸಲಾಗಿ, ಭಾರ್ಗವಮಂತ್ರ ವೇತ್ತೃವಾದ ಆ ಔರ್ವ ಮುನಿಯು ಮಕ್ಕಳಾಗಬೇಕೆಂಬ ವರವನ್ನು ಕೊಟ್ಟನು.

೬೬. ತ್ರಿಕಾಲಜ್ಞಾನಿಯಾದ ಮುನೀಶ್ವರನು ಸ್ವಲ್ಪ ಹೊತ್ತು ಸಮಾಧಿಸ್ಥನಾಗಿ ಧ್ಯಾನಮಾಡಿ, ಕೇಶಿನಿ, ಸುಮತಿ ಇವರುಗಳನ್ನು ಸಂತೋಷಪಡಿಸುವವನಾಗಿ ಮುಂದೆ ಹೇಳುವಪ್ರಕಾರ ಮಾತನಾಡಿದನು.

**ಔರ್ವ ಉವಾಚ**

**ಏಕಾ ವಂಶಧರಂ ತ್ವೇಕಮನ್ಯಾ ಷಷ್ಟಿಸಹಸ್ರಕಂ ।**
**ಅಪತ್ಯಾರ್ಥಂ ಮಹಾಭಾಗೇ ವೃಣುತಾಂ ಚ ಯಥೇಪ್ಸಿತಂ ॥ ೬೭ ॥**

**ಕೇಶಿನ್ಯೇಕಸುತಂ ವವ್ರೇ ವಂಶಸಂತಾನಕಾರಣಂ ।**
**ಅನ್ಯಾ ಹಿ ಮೂಢಾ ಪುತ್ರಾಣಾಂ ವವ್ರೇ ಷಷ್ಟಿಸಹಸ್ರಕಂ ॥ ೬೮ ॥**

**ತಥಾ ಷಷ್ಟಿಸಹಸ್ರಾಣಿ ಸುಮತ್ಯಾಹ್ಯಭವನ್ ಸುತಾಃ ।**
**ನಾಮ್ನಾಽಸಮಂಜಾಃ ಕೇಶಿನ್ಯಾಸ್ತನಯೋ ಮುನಿಸತ್ತಮ ॥ ೬೯ ॥**

**ಅಸಮಂಜಸನಾಮಾ ತು ಬಾಲತ್ವೇನಾಪಿ ಸತ್ತಮ ।**
**ಅಸಮಂಜಸಕರ್ಮಾಣಿ ಚಕಾರೋನ್ಮತ್ತಪಂಡಿತಃ ।**
**ತಂ ದೃಷ್ಟ್ವಾ ಸಾಗರಾಃ ಸರ್ವೇ ಹ್ಯಾಸನ್ ದುರ್ವೃತ್ತಚೇತಸಃ ॥ ೭೦ ॥**

---

೬೭. ಔರ್ವಮುನಿಯು ಹೇಳುತ್ತಾನೆ—ಒಬ್ಬಳಿಗೆ ವಂಶಾಭಿವೃದ್ಧಿಪಡಿಸುವ ಒಬ್ಬ ಮಗನನ್ನೂ, ಮತ್ತೊಬ್ಬಳಿಗೆ ಅರವತ್ತು ಸಾವಿರ ಮಕ್ಕಳನ್ನೂ ಕೊಡುತ್ತೇನೆ. ಎಲೈ ಕೇಶಿನೀ ಸುಮತಿಗಳಿರಾ ! ನಿಮ್ಮ ಇಷ್ಟಾನುಸಾರ ಮೇಲ್ಕಂಡ ಎರಡು ವರಗಳಲ್ಲಿ ಯಾರು ಯಾರಿಗೆ ಯಾವಯಾವುದು ಬೇಕೆಂಬುದನ್ನು ಕೇಳಿರಿ.

೬೮. ಕೇಶಿನಿಯು ಸಂತಾನಹೇತುವಾದ ಒಬ್ಬ ಮಗನನ್ನು ಪ್ರಾರ್ಥಿಸಿದಳು. ಮೂಢಳಾದ ಸುಮತಿಯು ಅರವತ್ತು ಸಾವಿರ ಪುತ್ರರನ್ನು ಕೇಳಿದಳು.

೬೯. ಅವರವರು ಕೇಳಿಕೊಂಡ ವರದಂತೆಯೇ ಸುಮತಿಗೆ ಅರವತ್ತು ಸಾವಿರ ಮಕ್ಕಳೂ, ಕೇಶಿನಿಗೆ ಅಸಮಂಜಸನೆಂಬ ಒಬ್ಬ ಮಗನೂ ಆದರು.

೭೦. ಸಾಧೂತ್ತಮನೇ ! ಉನ್ಮತ್ತ ಮತ್ತು ಪಂಡಿತನೂ ಆದ ಅಸಮಂಜಸನೆಂಬುವನು ಬಾಲ್ಯದಿಂದಲೂ ಅಯೋಗ್ಯ ಕರ್ಮಗಳನ್ನೇ ಮಾಡುತ್ತಿದ್ದನು. ಅವನ ಸಹವಾಸದಿಂದ ಇತರ ಸಗರಪುತ್ರರೆಲ್ಲರೂ ದುರ್ನಡತೆಪರರಾದರು.

ತದ್ಬಾಲಭಾವಂ ಸಂದುಷ್ಟಂ ಜ್ಞಾತ್ವಾ ಬಾಹುಸುತೋ ನೃಪಃ ।
ಚಿಂತಯಾಮಾಸ ವಿವಿಧಂ ಪುತ್ರಕರ್ಮ ವಿಗರ್ಹಿತಂ ॥ ೭೧ ॥

ಅಹೋ ಕಷ್ಟತರಾ ಲೋಕೇ ದುರ್ಜನಾನಾಂ ಹಿ ಸಂಗತಿಃ ।
ಕಾರುಕೈಸ್ತಾಡ್ಯತೇ ವಹ್ನಿರಯಸ್ಸಂಯೋಗಮಾತ್ರತಃ ॥ ೭೨ ॥

ಅಂಶುಮಾನ್ನಾಮ ತನಯೋ ಬಭೂವ ಹ್ಯಸಮಂಜಸಃ ।
ಶಾಸ್ತ್ರಜ್ಞೋ ಗುಣವಾನ್ ಧರ್ಮೀ ಪಿತಾಮಹಹಿತೇ ರತಃ ॥ ೭೩ ॥

ದುರ್ವೃತ್ತಾಃ ಸಾಗರಾಃ ಸರ್ವೇ ಲೋಕೋಪದ್ರವಕಾರಿಣಃ ।
ಅನುಷ್ಠಾನವತಾಂ ನಿತ್ಯಮಂತರಾಯಾ ಭವಂತಿ ತೇ ॥ ೭೪ ॥

---

೭೧. ಬಾಹುಕುಮಾರನಾದ ರಾಜನು ಅಸಮಂಜಸನ ಬಾಲ್ಯದ ನಡವಳಿಕೆಯು ದುರ್ನಡತೆಯಾಗಿರುವುದನ್ನು ತಿಳಿದು ನಿಂದಿತವಾದ ಮಗನ ನಡತೆಯ ವಿಷಯದಲ್ಲಿ ನಾನಾವಿಧವಾಗಿ ಯೋಚಿಸಿದನು.

೭೨. ಲೋಕದಲ್ಲಿ ದುರ್ಜನರ ಸಹವಾಸವು ಅತ್ಯಂತ ಅಪಾಯಕರವು. ಹೇಗೆಂದರೆ :— ಪವಿತ್ರವಾದ ಅಗ್ನಿಯು ಕಬ್ಬಿಣದೊಡನೆ ಸೇರಿದ ಮಾತ್ರದಿಂದಲೇ ಸುತ್ತಿಗೆಯಿಂದ ಹೊಡೆಯಲ್ಪಡುತ್ತದೆ.

೭೩. ಅಸಮಂಜಸನಿಗೆ ಶಾಸ್ತ್ರಜ್ಞನೂ, ಸುಗುಣಶಾಲಿಯೂ, ಧಾರ್ಮಿಕನೂ, ತಾತನಿಗೆ ಅನುಕೂಲನೂ ಆದ ಅಂಶುಮಾನ್ ಎಂಬ ಮಗನು ಹುಟ್ಟಿದನು.

೭೪. ಸಗರಪುತ್ರರೆಲ್ಲರೂ ದುರಾಚಾರಪರರಾಗಿ, ಲೋಕಕ್ಕೆ ಹಿಂಸೆಯನ್ನು ಮಾಡುತ್ತಾ ಸದಾಚಾರಪರರಾದ ಸಜ್ಜನರಿಗೆ ಯಾವಾಗಲೂ ವಿಘ್ನಕಾರಿಗಳಾದರು.

ಹುತಾನಿ ಯಾನಿ ಯಜ್ಞೇಷು ಹವೀಂಷಿ ವಿಧಿವದ್ದ್ವಿಜೈಃ ।
ಬುಭುಜೇ ತಾನಿ ಸರ್ವಾಣಿ ನಿರಾಕೃತ್ಯ ದಿವೌಕಸಃ ॥ ೭೫ ॥

ಸ್ವರ್ಗಾದಾಹೃತ್ಯ ಸತತಂ ರಂಭಾದ್ಯಾ ದೇವಯೋಷಿತಃ ।
ಭಜಂತಿ ಸಾಗರಾಸ್ತೇ ವೈ ಕಚಗ್ರಹಬಲಾತ್ಕೃತಾಃ ॥ ೭೬ ॥

ಪಾರಿಜಾತಾದಿ ವೃಕ್ಷಾಣಾಂ ಪುಷ್ಪಾಣ್ಯಾಹೃತ್ಯ ತೇ ಖಲಾಃ ।
ಭೂಷಯಂತಿ ಶರೀರಾಣಿ ಮದ್ಯಪಾನಪರಾಯಣಾಃ ॥ ೭೭ ॥

ಸಾಧುವೃತ್ತೀಃ ಸಮಾಜಹ್ರುಃ ಸರ್ವಧರ್ಮಾನನಾಶಯನ್ ।
ಪಿತ್ರೈವ ಯೋದ್ಧುಮಾರಬ್ಧಾ ಬಲಿನೋಽತ್ಯಂತಪಾಪಿನಃ ॥ ೭೮ ॥

ಏತದ್ದೃಷ್ಟ್ವಾತಿದುಃಖಾರ್ತಾ ದೇವಾ ಇಂದ್ರಪುರೋಗಮಾಃ ।
ವಿಚಾರಂ ಪರಮಂ ಚಕ್ರುರೇತೇಷಾಂ ನಾಶಹೇತವೇ ॥ ೭೯ ॥

---

೭೫. ಆ ಸಗರಪುತ್ರರು ಯಜ್ಞಗಳಲ್ಲಿ ದ್ವಿಜರು ದೇವತೆಗಳ ತೃಪ್ತ್ಯರ್ಥ ವಾಗಿ ಅರ್ಪಿಸಿದ ಹೋಮದ್ರವ್ಯವನ್ನು ದೇವತೆಗಳಿಗೆ ಅವಕಾಶಕೊಡದೆ ತಾವೇ ತೆಗೆದುಕೊಂಡು ಅನುಭವಿಸುತ್ತಿದ್ದರು.

೭೬. ಆ ಸಗರಪುತ್ರರು ಯಾವಾಗಲೂ ರಂಭೆ, ಉರ್ವಶೀ ಮುಂತಾದ ಅಪ್ಸರಸ್ತ್ರೀಯರನ್ನು ಸ್ವರ್ಗಲೋಕದಿಂದ ಅಪಹರಿಸಿ ತಂದು ಕೂದಲುಗಳನ್ನು ಸೆಳೆದು ಬಲಾತ್ಕಾರಮಾಡಿ ಭೋಗಿಸುತ್ತಿದ್ದರು.

೭೭. ಆ ದುಷ್ಟರು ಪಾರಿಜಾತ ಮುಂತಾದ ವೃಕ್ಷಗಳಲ್ಲಿ ಬೆಳೆದ ಪುಷ್ಪ ಗಳನ್ನು ತಂದು ಮದ್ಯಪಾನಮಾಡುತ್ತಾ ತಮ್ಮ ಶರೀರವನ್ನು ಅಲಂಕರಿಸು ತ್ತಿದ್ದರು.

೭೮. ಬಲಿಷ್ಠರಾದ ಆ ಪಾಪಿಷ್ಠರು ಸದಾಚಾರ ಮತ್ತು ಸಕಲ ಧರ್ಮ ಗಳನ್ನೂ ನಾಶಮಾಡಿದರು. ತಮ್ಮ ತಂದೆಯ ಸಂಗಡಲೇ ಯುದ್ಧಮಾಡಲಾ ರಂಭಿಸಿದರು.

೭೯. ಇಂದ್ರಾದಿ ದೇವತೆಗಳು ಆ ಸಗರಪುತ್ರರ ಅತ್ಯಾಚಾರಗಳನ್ನು ನೋಡಿ ಅತ್ಯಂತ ದುಃಖಿತರಾಗಿ ಅವರನ್ನು ನಾಶಪಡಿಸುವುದಕ್ಕೆ ತಕ್ಕ ಉಪಾಯ ವನ್ನು ಯೋಚಿಸಿದರು.

ನಿಶ್ಚಿತ್ಯ ವಿಬುಧಾಸ್ಸರ್ವೇ ಪಾತಾಲಾಂತರಗೋಚರಂ ।
ಕಪಿಲಂ ದೇವದೇವೇಶಂ ಯಯುಃ ಪ್ರಚ್ಛನ್ನರೂಪಿಣಂ ॥ ೮೦ ॥

ಧ್ಯಾಯಂತಮಾತ್ಮನಾತ್ಮಾನಂ ಪರಾನಂದೈಕವಿಗ್ರಹಂ ।
ಪ್ರಣಮ್ಯ ದಂಡವದ್ಭೂಮೌ ತುಷ್ಟುವುಸ್ತ್ರಿದಶಾಸ್ತತಃ ॥ ೮೧ ॥

ದೇವಾ ಊಚುಃ

ನಮಸ್ತೇ ಯೋಗಿನೇ ತುಭ್ಯಂ ಸಾಂಖ್ಯಯೋಗರತಾಯ ಚ ।
ನರರೂಪಪರಿಚ್ಛನ್ನವಿಷ್ಣವೇ ಜಿಷ್ಣವೇ ನಮಃ ॥ ೮೨ ॥

ನಮಃ ಪರೇಶಭಕ್ತಾಯ ಲೋಕಾನುಗ್ರಹಹೇತವೇ ।
ಸಂಸಾರಾರಣ್ಯದಾವಾಗ್ನಿಜ್ಞಾನಸಂಪನ್ನ ತೇ ನಮಃ ॥ ೮೩ ॥

ಮಹತೇ ವೀತರಾಗಾಯ ತುಭ್ಯಂ ಭೂಯೋ ನಮೋ ನಮಃ
ಸಾಗರೈಃ ಪೀಡಿತಾನಸ್ಮಾಂಸ್ತ್ರಾಯಸ್ವ ಶರಣಾಗತಾನ್ ॥ ೮೪ ॥

---

೮೦. ಸಕಲ ದೇವತೆಗಳು ಯೋಚನೆಯಿಂದ ನಿಶ್ಚಯಿಸಿ ಪಾತಾಲದ ಒಳಭಾಗದಲ್ಲಿರುವ, ತನ್ನ ಸ್ವರೂಪವನ್ನು ಮರೆಮಾಚಿಕೊಂಡಿರುವ, ದೇವ ದೇವೋತ್ತಮನಾದ ಕಪಿಲನ ಬಳಿಗೆ ಹೋದರು.

೮೧. ತರುವಾಯ ದೇವತೆಗಳು ಉತ್ಕೃಷ್ಟಾನಂದಮಾತ್ರಸ್ವರೂಪನಾದ ತನ್ನನ್ನು ತಾನೇ ಧ್ಯಾನಿಸುತ್ತಿರುವ ಕಪಿಲನನ್ನು ಸಾಷ್ಟಾಂಗವಾಗಿ ನಮಸ್ಕರಿಸಿ, ಸ್ತೋತ್ರಮಾಡಿದರು.

೮೨. ದೇವತೆಗಳು ಮಾತನಾಡುತ್ತಾರೆ— ಸ್ವಾಮಿಯೇ ! ಸಮಾಧಿಸ್ಥನು, ಜ್ಞಾನಯೋಗನಿರತನು, ಮನುಷ್ಯರೂಪಧಾರಿಯಾದ ವಿಷ್ಣುವು, ಜಯಶೀಲನೂ ಆದ ನಿನಗೆ ನಮಸ್ಕಾರ.

೮೩. ಸರ್ವೋತ್ತಮನ ಭಕ್ತನು, ಲೋಕಕ್ಕೆ ಅನುಗ್ರಹಮಾಡುವವನು, ಸಂಸಾರವೆಂಬ ಅರಣ್ಯಕ್ಕೆ ಕಾಡುಗಿಚ್ಚಿನೋಪಾದಿಯಲ್ಲಿರುವ ಅಪರೋಕ್ಷಜ್ಞಾನವನ್ನು ಹೊಂದಿರುವವನೂ ಆದ ನಿನಗೆ ನಮಸ್ಕಾರ, ನಮಸ್ಕಾರ.

೮೪. ಪೂಜ್ಯನು ಮತ್ತು ರಾಗಾದಿದೋಷರಹಿತನೂ ಆದ ನಿನಗೆ ಪುನಃ ಪುನಃ ನಮಸ್ಕಾರ. ಸಗರಪುತ್ರರ ಬಾಧೆಯನ್ನು ತಾಳಲಾರದೆ ನಿನ್ನಲ್ಲಿ ಶರಣಾಗತರಾಗಿರುವ ನಮ್ಮನ್ನು ಕಾಪಾಡು.

ಕಪಿಲ ಉವಾಚ

ಯೇ ತು ನಾಶಮಿಹೇಚ್ಛಂತಿ ಯಶೋಬಲಧನಾಯುಷಾಂ ।
ತ ಏವ ಲೋಕಾನ್ ಬಾಧಂತೇ ನಾತ್ರಾಶ್ಚರ್ಯಂ ಸುರೋತ್ತಮಾಃ ॥ ೮೫ ॥

ಯಸ್ತು ಬಾಧಿತುಮಿಚ್ಛೇತ ಜನಾನ್ನಿರಪರಾಧಿನಃ ।
ತಂ ವಿದ್ಯಾತ್ಸರ್ವಲೋಕೇಷು ಪಾಪಭೋಗರತಂ ಸುರಾಃ ॥ ೮೬ ॥

ಕರ್ಮಣಾ ಮನಸಾ ವಾಚಾ ಯಸ್ತ್ವನ್ಯಾನ್ ಬಾಧತೇ ಸದಾ ।
ತಂ ಹಂತಿ ದೈವಮೇವಾಶು ನಾತ್ರ ಕಾರ್ಯಾ ವಿಚಾರಣಾ ॥ ೮೭ ॥

ಅಲ್ಪೈರಹೋಭಿರೇವೈತೇ ನಾಶಮೇಷ್ಯಂತಿ ಸಾಗರಾಃ ।
ಇತ್ಯುಕ್ತೇ ಮುನಿನಾ ತೇನ ಕಪಿಲೇನ ಮಹಾತ್ಮನಾಂ ॥ ೮೮ ॥

ಪ್ರಣಮ್ಯ ತಂ ಯಥಾನ್ಯಾಯಂ ಗತಾ ನಾಕಂ ದಿವೌಕಸಃ ।
ಅತ್ರಾಂತರೇ ತು ಸಗರೋ ವಸಿಷ್ಠಾದ್ಯೈರ್ಮಹರ್ಷಿಭಿಃ ॥ ೮೯ ॥

---

೮೫. ಕಪಿಲನು ಹೇಳುತ್ತಾನೆ—ದೇವಶ್ರೇಷ್ಠರೇ ! ಯಾರು ಈ ಲೋಕದಲ್ಲಿಯೇ ಕೀರ್ತಿ, ಶಕ್ತಿ, ಐಶ್ವರ್ಯ ಮತ್ತು ಆಯುಸ್ಸುಗಳ ನಾಶವನ್ನು ಅಪೇಕ್ಷಿಸುತ್ತಾರೆಯೋ ಅಂತಹವರೇ ಜನಗಳನ್ನು ಹಿಂಸಿಸುತ್ತಾರೆ. ಸಂಶಯವಿಲ್ಲ.

೮೬. ದೇವತೆಗಳಿರಾ ! ನಿರಪರಾಧಿಜನರನ್ನು ಹಿಂಸಿಸಲಪೇಕ್ಷಿಸುವವರು ಸರ್ವಲೋಕಗಳಲ್ಲಿಯೂ ಪಾಪಸಂಪಾದಕವಾದ ಭೋಗದಲ್ಲಿ ನಿರತರೆಂದು ತಿಳಿಯಿರಿ.

೮೭. ತನ್ನ ಕೆಲಸದಿಂದ, ಮನಸ್ಸಿನ ಸಂಕಲ್ಪಗಳಿಂದ ಮತ್ತು ಮಾತಿನಿಂದಲೂ ಇತರರನ್ನು ಬಾಧಿಸುತ್ತಿರುವವರನ್ನು ದೈವವೇ ಬೇಗ ನಾಶಮಾಡುತ್ತದೆ. ಇದರಲ್ಲಿ ಸಂಶಯಪಡಬಾರದು.

೮೮-೯೨. ಸ್ವಲ್ಪದಿನಗಳಲ್ಲಿಯೇ ಈ ಸಗರಪುತ್ರರು ನಾಶವಾಗುತ್ತಾರೆಂದು ಮಹಾತ್ಮನಾದ ಕಪಿಲಮುನಿಯು ಹೇಳಲು, ಅದನ್ನು ಕೇಳಿ ದೇವತೆಗಳು ವಿಧಾನೋಕ್ತಪ್ರಕಾರ ಕಪಿಲಮುನಿಗೆ ನಮಸ್ಕಾರಮಾಡಿ ಸ್ವರ್ಗಲೋಕಕ್ಕೆ ಹೊರ

ಆರೇಭೇ ಹಯಮೇಧಾಖ್ಯಂ ಯಜ್ಞಂ ಕರ್ತುಮನುತ್ತಮಂ ।
ತದ್ಯಜ್ಞೇ ಯೋಜಿತಂ ಸಪ್ತಿಮುಪಹೃತ್ಯ ಸುರೇಶ್ವರಃ ॥ ೯೦ ॥

ಪಾತಾಲೇ ಸ್ಥಾಪಯಾಮಾಸ ಕಪಿಲೋ ಯತ್ರ ತಿಷ್ಠತಿ ।
ಗೂಢವಿಗ್ರಹಶಕ್ರೇಣ ಹೃತಮಶ್ವಂ ತು ಸಾಗರಾಃ ॥ ೯೧ ॥

ಅನ್ವೇಷ್ಟುಂ ಬಭ್ರಮುರ್ಲೋಕಾನ್ ಭೂರಾದೀಂಶ್ಚ ಸುವಿಸ್ಮಿತಾಃ ।
ಅದೃಷ್ಟಸಪ್ತಯಸ್ತೇ ಚ ಪಾತಾಲಂ ಗಂತುಮುದ್ಯತಾಃ ॥ ೯೨ ॥

ಚಖ್ನುರ್ಮಹೀತಲಂ ಸರ್ವಮೇಕೈಕೋ ಯೋಜನಂ ಪೃಥಕ್ ।
ಮೃತ್ತಿಕಾಂ ಖನಿತಾಂ ತೇ ಚೋದಧಿತೀರೇ ಸಮಾಕಿರನ್ ॥ ೯೩ ॥

ತದ್ದ್ವಾರೇಣ ಗತಾಸ್ಸರ್ವೇ ಪಾತಾಲಂ ಸಗರಾತ್ಮಜಾಃ ।
ವಿಚಿನ್ವಂತೋ ಹಯಂ ತತ್ರ ಮತ್ತೋನ್ಮತ್ತಾ ವಿಚೇತಸಃ ॥ ೯೪ ॥

---

ಟರು. ಅಷ್ಟರಲ್ಲಿ ಸಗರನು ವಸಿಷ್ಠ ಮುಂತಾದ ಮಹರ್ಷಿಗಳನ್ನು ಬರಮಾಡಿಕೊಂಡು ಸರ್ವೋತ್ತಮವಾದ ಅಶ್ವಮೇಧವೆಂಬ ಯಜ್ಞವನ್ನು ಮಾಡಲು ಉಪಕ್ರಮಿಸಿದನು. ಆ ಯಜ್ಞದಲ್ಲಿ ನಿಯಮಿಸಲ್ಪಟ್ಟ ಕುದುರೆಯನ್ನು ದೇವೇಂದ್ರನು ಅಪಹರಿಸಿ ಪಾತಾಲಲೋಕದಲ್ಲಿ ಕಪಿಲನಿದ್ದೆಡೆಯಲ್ಲಿ ಇಟ್ಟನು. ಗೂಢವೇಷಧಾರಿಯಾದ ಇಂದ್ರನು ಅಪಹರಿಸಿದ ಕುದುರೆಯನ್ನು ಹುಡುಕುವುದಕ್ಕೋಸ್ಕರ ಸಗರಪುತ್ರರು, ಭೂಮಿ, ಅಂತರಿಕ್ಷ ಮುಂತಾದ ಊರ್ಧ್ವಲೋಕಗಳನ್ನೆಲ್ಲಾ ಸಂಚರಿಸಿ, ಎಲ್ಲಿಯೂ ಅಶ್ವವನ್ನು ಕಾಣದೆ ಆಶ್ಚರ್ಯಪಟ್ಟವರಾಗಿ ಪಾತಾಳಲೋಕಕ್ಕೆ ಹೋಗಲು ಉದ್ಯುಕ್ತರಾದರು.

೯೩-೯೫. ಮದದಿಂದ ಕೊಬ್ಬಿರುವವರು, ಉನ್ಮತ್ತರು, ವಿಪರೀತಬುದ್ಧಿಯುಳ್ಳವರೂ ಆದ, ಸಗರಪುತ್ರರು ಒಬ್ಬೊಬ್ಬನು ಒಂದೊಂದು ಗಾವುದಪ್ರಕಾರ ಭೂಮಿಯನ್ನೆಲ್ಲಾ ಅಗೆದು, ಮಣ್ಣನ್ನು ಸಮುದ್ರತೀರದಲ್ಲಿ ಹರಡಿ, ಭೂಮಿಯಲ್ಲಿ ರಂಧ್ರಗಳನ್ನು ಮಾಡಿಕೊಂಡು ಆ ಮಾರ್ಗದಿಂದ ಎಲ್ಲರೂ ಪಾತಾಲಕ್ಕೆ ಹೊರ

ತತ್ರಾಪಶ್ಯನ್ಮಹಾತ್ಮಾನಂ ಕೋಟಿಸೂರ್ಯಸಮಪ್ರಭಂ ।
ಕಪಿಲಂ ಧ್ಯಾನನಿರತಂ ವಾಜಿನಂ ಚ ತದಂತಿಕೇ ॥ ೯೫ ॥

ಪ್ರಮತ್ತಾಃ ಪಾಪನಿರತಾಃ ಸಾಗರಾ ಅವಿವೇಕಿನಃ ।
ಸರ್ವೇ ತೇ ಸಹಸಾ ಹ್ಯೇತ್ಯ ಮುನಿಂ ಹಂತುಂ ಸಮುದ್ಯತಾಃ ॥ ೯೬ ॥

ಹನ್ಯತಾಂ ಹನ್ಯತಾಮೇಷ ಬಧ್ಯತಾಂ ಬಧ್ಯತಾಮಯಂ ।
ಗೃಹ್ಯತಾಂ ಗೃಹ್ಯತಾಮಾಶು ಇತ್ಯೂಚುಸ್ತೇ ಪರಸ್ಪರಂ ॥ ೯೭ ॥

ಹೃತಾಶ್ವಃ ಸಾಧುಭಾವೇನ ಬಕವದ್ಧ್ಯಾನತತ್ಪರಃ ।
ಆಡಂಬರಮಹೋ ಲೋಕೇ ಕುರ್ವಂತಿ ಸತತಂ ಖಲಾಃ ॥ ೯೮ ॥

ಇತ್ಯುಚ್ಚರಂತೋ ಜಹಸುಃ ಕಪಿಲಂ ತೇ ಮುನೀಶ್ವರಂ ।
ಸಮಸ್ತೇಂದ್ರಿಯಸಂದೋಹಂ ನಿಯಮ್ಯಾತ್ಮಾನಮಾತ್ಮನಿ ॥ ೯೯ ॥

---

ಟರು. ಅಲ್ಲಿ ಅಶ್ವವನ್ನು ಹುಡುಕುತ್ತಿರುವಾಗ ಅವರು ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಧ್ಯಾನದಲ್ಲಿ ಕುಳಿತಿರುವ, ಮಹಾತ್ಮನಾದ, ಕಪಿಲಮುನಿಯನ್ನೂ ಅವನ ಸಮೀಪದಲ್ಲಿದ್ದ ಅಶ್ವವನ್ನೂ ಸಹ ನೋಡಿದರು.

೯೬. ಮದದಿಂದ ಕೊಬ್ಬಿದವರು, ಪಾಪಕರ್ಮವನ್ನೇ ಮಾಡುವುದರಲ್ಲಿ ಆಸಕ್ತರು, ವಿವೇಕಹೀನರೂ ಆದ ಆ ಸಕಲ ಸಗರಪುತ್ರರೂ ಬೇಗ ಮುನಿಯ ಸಮೀಪಕ್ಕೆ ಬಂದು ಅವನನ್ನು ಸಂಹರಿಸಲುದ್ಯುಕ್ತರಾದರು.

೯೭. ಆ ಸಗರಪುತ್ರರು ಈ ಮುನಿಯನ್ನು ಕೊಲ್ಲಿರಿ, ಕೊಲ್ಲಿರಿ, ಬಂಧನ ಮಾಡಿ, ಬಂಧನಮಾಡಿ, ಹಿಡಿದುಕೊಳ್ಳಿ ಹಿಡಿದುಕೊಳ್ಳಿರಿ ಎಂಬುದಾಗಿ ಅನ್ಯೋನ್ಯವಾಗಿ ಮಾತನಾಡಿದರು.

೯೮. ಕುದುರೆಯನ್ನಪಹರಿಸಿದ ಈ ಮುನಿಯು ಬಕಪಕ್ಷಿಯಂತೆ ಧ್ಯಾನದಲ್ಲಿ ಆಸಕ್ತನಾಗಿ ಸಾಧುವಿನಂತೆ ನಟಿಸುತ್ತಿದ್ದಾನೆ. ಆಶ್ಚರ್ಯ! ಲೋಕದಲ್ಲಿ ದುಷ್ಟರು ಯಾವಾಗಲೂ ಆಡಂಬರ (ನಟನೆ) ವನ್ನು ಮಾಡುತ್ತಾರೆ.

೯೯–೧೦೧. ಈರೀತಿ ಹೇಳುತ್ತಾ ಆ ಸಗರಪುತ್ರರು ಮುನಿಶ್ರೇಷ್ಠನಾದ ಕಪಿಲನನ್ನು ಹಾಸ್ಯಮಾಡಿದರು. ಸಕಲೇಂದ್ರಿಯಗಳನ್ನು ವಿಷಯಾಂತರಗಳಲ್ಲಿ

**ಪಶ್ಯನ್ಮುನಿವರಸ್ತೇಷಾಂ ತತ್ಕರ್ಮ ಜ್ಞಾತವಾನ್ನ ಹಿ ।**
**ಆಸನ್ನಮೃತ್ಯವಸ್ತೇ ತು ವಿನಷ್ಟಮತಯೋ ಮುನಿಂ ॥ ೧೦೦ ॥**

**ಪದ್ಭಿಃ ಸಂತಾಡಯಾಮಾಸುಃ ಬಾಹೂ ಚ ಜಗೃಹುಃ ಪರೇ ।**
**ತತಸ್ತ್ಯಕ್ತಸಮಾಧಿಸ್ತು ಸ ಮುನಿರ್ವಿಸ್ಮಿತಸ್ತದಾ ।**
**ಉವಾಚ ಭಾವಗಂಭೀರಂ ಲೋಕೋಪದ್ರವಕಾರಿಣಃ ॥ ೧೦೧ ॥**

**ಐಶ್ವರ್ಯಮದಮತ್ತಾನಾಂ ಕ್ಷುಧಿತಾನಾಂ ಚ ಕಾಮಿನಾಂ ।**
**ಅಹಂಕಾರವಿಮೂಢಾನಾಂ ವಿವೇಕೋ ನೈವ ಜಾಯತೇ ॥ ೧೦೨ ॥**

**ನಿಧೇರಾಧಾರಮಾತ್ರೇಣ ಮಹೀ ಜ್ವಲತಿ ಸರ್ವದಾ ।**
**ತನ್ಮೇವ ಮಾನವಾ ಭುಕ್ತ್ವಾ ಜ್ವಲಂತೀತಿ ಕಿಮದ್ಭುತಂ ॥ ೧೦೩ ॥**

---

ಪ್ರವರ್ತಿಸದಂತೆ ತಡೆದು ತನ್ನ ಹೃದಯದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಿದ್ದ ಮುನಿವರ್ಯನು ಸಗರಪುತ್ರರ ಆ ಚೇಷ್ಟೆಯನ್ನು ತಿಳಿಯಲಿಲ್ಲ. ಅಲ್ಪಕಾಲದಲ್ಲಿಯೇ ಮರಣಹೊಂದುವ, ಬುದ್ಧಿಯನ್ನು ನಾಶಪಡಿಸಿಕೊಂಡಿರುವ ಆ ಸಗರಪುತ್ರರಲ್ಲಿ ಕೆಲವರು ಕಾಲುಗಳಿಂದ ಕಪಿಲಮುನಿಯನ್ನು ಒದ್ದರು, ಇತರರು ಎರಡು ತೋಳುಗಳನ್ನು ಹಿಡಿದುಕೊಂಡರು. ತರುವಾಯ ಕಪಿಲಮುನಿಯು ಸಮಾಧಿಯಿಂದೆಚ್ಚೆತ್ತು, ಆಶ್ಚರ್ಯಚಕಿತನಾಗಿ ಜಗತ್ತಿಗೇ ಹಿಂಸೆಯನ್ನು ಕೊಡುತ್ತಿರುವ ಸಗರಪುತ್ರರನ್ನು ಕುರಿತು ಭಾವಗರ್ಭಿತವಾಗಿ ಮಾತನಾಡಿದನು.

೧೦೨. ಐಶ್ವರ್ಯಮದದಿಂದ ಕೊಬ್ಬಿರುವವರು, ಬಹಳವಾಗಿ ಹಸಿದಿರುವವರೂ, ಕಾಮುಕರೂ ಮತ್ತು ಗರ್ವದಿಂದ ಮೂರ್ಖರೂ ಆಗಿರುವವರಿಗೆ ವಿವೇಕವು ಹುಟ್ಟುವುದೇ ಇಲ್ಲ.

೧೦೩. ಭೂಮಿಯು ಗಣಿಗಳಿಗೆ ಆಶ್ರಯವಾಗಿರುವ ಮಾತ್ರದಿಂದ ಯಾವಾಗಲೂ ಜ್ವಲಿಸುತ್ತದೆ. ಮನುಷ್ಯರು ಅಂತಹ ನಿಧಿಯನ್ನೇ ಭೋಗಿಸಿ ಪ್ರಜ್ವಲಿಸುತ್ತಾರೆಂಬುದರಲ್ಲಿ ಅದ್ಭುತವೇನು ?

ಕಿಮತ್ರ ಚಿತ್ರಂ ಸುಜನಂ ಬಾಧಂತೇ ಯದಿ ದುರ್ಜನಾಃ।
ಮಹೀರುಹಾಂಶ್ಚಾನುತಟೇ ಪಾತಯಂತಿ ನದೀರಯಾಃ ॥ ೧೦೪ ॥

ಯತ್ರ ಶ್ರೀರ್ಯೌವನಂ ವಾಽಪಿ ಪರಸ್ತ್ರೀ ವಾಽಪಿ ತಿಷ್ಠತಿ ।
ತತ್ರಾಶ್ರೀರ್ವರ್ಧತಾ ನಿತ್ಯಂ ಮೂರ್ಖತ್ವಂ ಚಾಪಿ ಜಾಯತೇ ॥ ೧೦೫ ॥

ಅಹೋ ಕನಕಮಾಹಾತ್ಮ್ಯಮಾಖ್ಯಾತುಂ ಕೇನ ಶಕ್ಯತೇ ।
ನಾಮಸಾಮ್ಯಾದಹೋ ಚಿತ್ರಂ ಧತ್ತೂರೋಽಪಿ ಮದಪ್ರದಃ ॥ ೧೦೬ ॥

ಭವೇದ್ಯದಿ ಖಲಸ್ಯ ಶ್ರೀಃ ಸೈವ ಲೋಕವಿನಾಶಿನೀ ।
ಯಥಾ ಸಖಾಗ್ನೇಃ ಪವನಃ ಪನ್ನಗಸ್ಯ ಯಥಾ ವಿಷಂ ॥ ೧೦೭ ॥

---

೧೦೪. ದುರ್ಜನರು ಸಜ್ಜನರನ್ನು ಹಿಂಸಿಸುತ್ತಾರೆಂಬುದರಲ್ಲಿ ಆಶ್ಚರ್ಯವೇನು? ನದಿಯ ಅಲೆಗಳು ದಡದಲ್ಲಿರುವ ವೃಕ್ಷಗಳನ್ನು ಕೆಡುಹುವುದಿಲ್ಲವೇ?

೧೦೫. ಯಾವಾತನಿಗೆ ಐಶ್ವರ್ಯ, ಯೌವನ ಮತ್ತು ಪರಸ್ತ್ರೀಸಂಬಂಧ ಇವುಗಳಿರುತ್ತವೆಯೋ ಅಂತಹವನಿಗೆ ದಾರಿದ್ರ್ಯ, ಮುದಿತನ, ಮೂರ್ಖತ್ವ ಇವುಗಳುಂಟಾಗುತ್ತವೆ.

೧೦೬. ಅದ್ಭುತ ಭಂಗಾರದ ಮಹಿಮೆಯನ್ನು ಹೇಳಲು ಯಾರಿಗೆ ಸಾಧ್ಯ? ಕನಕವೆಂಬ ಭಂಗಾರದ ನಾಮಧೇಯವುಳ್ಳ ಉಮ್ಮತ್ತಿಯ ಕಾಯಿಯೂ ಸಹ ಮದಕಾರಿಯು. ಆಶ್ಚರ್ಯ! ಎಂದರೆ ಸಂಸ್ಕೃತಭಾಷೆಯಲ್ಲಿ "ಕನಕ" ಎಂಬ ಶಬ್ದಕ್ಕೆ ಭಂಗಾರ, ಉಮತ್ತೀಗಿಡ ಎಂದು ಎರಡು ಅರ್ಥಗಳಿವೆ. ಉಮ್ಮತ್ತೀ ಗಿಡದ ಕಾಯಿಯು ಮದಜನಕವೆಂದು ಸುಪ್ರಸಿದ್ಧ. ಭಂಗಾರದಲ್ಲಿರುವ ಗುಣವು ಉಮ್ಮತ್ತಿಯಲ್ಲಿಲ್ಲದಿದ್ದಾಗ್ಯೂ ಭಂಗಾರವನ್ನು ಬೋಧಿಸುವ ಪದದಿಂದ ಬೋಧ್ಯವಾಗಿರುವ ಮಾತ್ರದಿಂದಲೇ ಅದು ಮದಜನಕವಾದರೆ ಅನರ್ಘ್ಯವಾದ ಭಂಗಾರವು ಅತ್ಯಂತ ಮದಕಾರಿಯೆಂದು ಹೇಳಬೇಕಾದ್ದೇನು? ಎಂದು ತಾತ್ಪರ್ಯ.

೧೦೭. ಬೆಂಕಿಯು ಸುಡುವುದಕ್ಕೆ ಗಾಳಿಯು ಹೇಗೆ ಸಹಕಾರಿಯೋ, ಹೇಗೆ ಹಾವು ಇತರರನ್ನು ಕಚ್ಚಿ ಹಿಂಸಿಸಲು ವಿಷವು ಸಹಕಾರಿಯೋ ಅದರಂತೆ ದುಷ್ಟರಿಗೆ ಐಶ್ವರ್ಯವು ಬಂದರೆ ಅದು ಲೋಕವಿನಾಶಕ್ಕೆ ಕಾರಣವಾಗುತ್ತದೆ.

**ಅಹೋ ಧನಮದಾಂಧಸ್ತು ಪಶ್ಯನ್ನಪಿ ನ ಪಶ್ಯತಿ ।**
**ಯದಿ ಪಶ್ಯತ್ಯಾತ್ಮಹಿತಂ ಸ ಪಶ್ಯತಿ ನ ಸಂಶಯಃ ॥ ೧೦೮ ॥**

**ಇತ್ಯುಕ್ತ್ವಾ ಕಪಿಲಃ ಕ್ರುದ್ಧೋ ನೇತ್ರಾಭ್ಯಾಂ ಸಸೃಜೇಽನಲಂ ।**
**ಸ ವಹ್ನಿಃ ಸಾಗರಾನ್ ಸರ್ವಾನ್ ಭಸ್ಮಸಾದಕರೋತ್ಕ್ಷಣಾತ್ ॥ ೧೦೯ ॥**

**ಯನ್ನೇತ್ರಜಾನಲಂ ದೃಷ್ಟ್ವಾ ಪಾತಾಲತಲವಾಸಿನಃ ।**
**ಅಕಾಲಪ್ರಲಯಂ ಮತ್ವಾ ಚುಕ್ರುಶುಃ ಶೋಕಲಾಲಸಾಃ ॥ ೧೧೦ ॥**

**ತದಗ್ನಿತಾಪಿತಾಃ ಸರ್ವೇ ದಂದಶೂಕಾಶ್ಚ ರಾಕ್ಷಸಾಃ ।**
**ಸಾಗರಂ ವಿವಿಶುಃ ಶೀಘ್ರಂ ಸತಾಂ ಕೋಪೋ ಹಿ ದುಃಸಹಃ ॥ ೧೧೧ ॥**

---

೧೦೮. ಐಶ್ವರ್ಯಮದಮತ್ತನು ಎದುರಿಗೆ ನೋಡಬಹುದಾಗಿದ್ದರೂ ಕುರುಡನಂತೆ ನೋಡುವುದಿಲ್ಲ. ತನಗೆ ಅನುಕೂಲವಾದುದನ್ನು ನೋಡುವ ಸಂದರ್ಭದಲ್ಲಿ ಮಾತ್ರ ಕಣ್ತೆರದು ನೋಡುತ್ತಾನೆ. ಸಂಶಯವಿಲ್ಲ.

೧೦೯. ಎಂಬುದಾಗಿ ಹೇಳಿ ಕಪಿಲನು ಕೋಪಗೊಂಡು, ತನ್ನ ಕಣ್ಣುಗಳಿಂದ ಬೆಂಕಿಯನ್ನು ಸೃಷ್ಟಿಸಿದನು. ಆ ಬೆಂಕಿಯು ಕೂಡಲೇ ಸಗರಪುತ್ರರನ್ನೆಲ್ಲಾ ಸುಟ್ಟು ಬೂದಿಮಾಡಿತು.

೧೧೦. ಆ ಕಪಿಲನ ನೇತ್ರದಲ್ಲಿ ಉತ್ಪನ್ನವಾದ ಬೆಂಕಿಯನ್ನು ನೋಡಿ ಪಾತಾಳದ ಕೆಳಭಾಗದಲ್ಲಿರುವವರೆಲ್ಲರೂ ದುಃಖಾರ್ತರಾಗಿ ಅಕಾಲದಲ್ಲಿ ಉಂಟಾದ ಪ್ರಳಯವೆಂದರಿತು ಕೂಗಿಕೊಂಡರು.

೧೧೧. ಆ ಬೆಂಕಿಯಿಂದ ಸುಡಲ್ಪಟ್ಟ ಎಲ್ಲಾ ಸರ್ಪಗಳು, ರಾಕ್ಷಸರು ಮುಂತಾದವರೆಲ್ಲರೂ ಬೇಗ ಸಮುದ್ರವನ್ನು ಪ್ರವೇಶಿಸಿದರು. ಸಜ್ಜನರ ಕೋಪವು ಸಹಿಸಲು ಅಶಕ್ಯವು.

ಅಥ ತಸ್ಯ ಮಹೀಪಸ್ಯ ಸಮಾಗಮ್ಯಾಧ್ವರಂ ತದಾ ।
ದೇವದೂತ ಉವಾಚೇದಂ ಸರ್ವಂ ವೃತ್ತಂ ಹಿ ಯಕ್ಷತೇ ॥ ೧೧೨ ॥

ಏತತ್ಸಮಾಕರ್ಣ್ಯ ವಚಃ ಸಗರಃ ಸರ್ವವಿತ್ಪ್ರಭುಃ ।
ದೈವೇನ ಶಿಕ್ಷಿತಾ ದುಷ್ಟಾ ಇತ್ಯುವಾಚಾತಿಹರ್ಷಿತಃ ॥ ೧೧೩ ॥

ಮಾತಾ ವಾ ಜನಕೋ ವಾಽಪಿ ಭ್ರಾತಾ ವಾ ತನಯೋಽಪಿ ವಾ ।
ಅಧರ್ಮಂ ಕುರುತೇ ಯಸ್ತು ಸ ಏವ ರಿಪುರುಚ್ಯತೇ ॥ ೧೧೪ ॥

ಯಸ್ತ್ವಧರ್ಮೇಷು ನಿರತಃ ಸರ್ವಲೋಕವಿರೋಧಕೃತ್ ।
ತಂ ರಿಪುಂ ಪರಮಂ ವಿದ್ಯಾಚ್ಛಾಸ್ತ್ರಾಣಾಮೇಷ ನಿರ್ಣಯಃ ॥ ೧೧೫ ॥

ಸಗರಃ ಪುತ್ರನಾಶೇಽಪಿ ನ ಶುಶೋಚ ಮುನೀಶ್ವರ ।
ದುರ್ವೃತ್ತನಿಧನಂ ಯಸ್ಮಾತ್ಸತಾಮುತ್ಸಾಹಕಾರಣಂ ॥ ೧೧೬ ॥

---

೧೧೨. ಆ ಕ್ಷಣದಲ್ಲಿಯೇ ದೇವದೂತನು ಆ ದೊರೆಯ ಯಜ್ಞಶಾಲೆಗೆ ಬಂದು ಯಜ್ಞದಲ್ಲಿ ತೊಡಗಿದ್ದ ಸಗರನಿಗೆ ನಡೆದ ಸಕಲವೃತ್ತಾಂತವನ್ನು ತಿಳಿಸಿದನು.

೧೧೩. ಸಕಲ ವೃತ್ತಾಂತವನ್ನೂ ತಿಳಿದು ದೊರೆಯಾದ ಸಗರನು ಈ ದೇವದೂತನಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಅತ್ಯಂತ ಸಂತುಷ್ಟನಾಗಿ, ದುರ್ಜನರು ದೈವದಿಂದಲೇ ಶಿಕ್ಷಿಸಲ್ಪಟ್ಟರು ಎಂಬುದಾಗಿ ಹೇಳಿದನು.

೧೧೪. ತಾಯಿಯಾಗಲಿ, ತಂದೆಯಾಗಲಿ, ಸಹೋದರನಾಗಲಿ, ಮಗನಾಗಲೀ, ಯಾರೇ ಆಗಲಿ ಅಧರ್ಮವನ್ನು ಮಾಡಿದರೆ ಅವನೇ ಶತ್ರುವೆಂಬುದಾಗಿ ಉಕ್ತವಾಗಿದೆ.

೧೧೫. ಯಾವನು ಅಧರ್ಮದಲ್ಲಿ ತೊಡಗಿ ಸಕಲ ಜನರಿಗೂ ವಿರೋಧ ಮಾಡುತ್ತಾನೆಯೋ ಅಂತಹವನನ್ನು ದೊಡ್ಡ ಶತ್ರುವೆಂಬುದಾಗಿ ತಿಳಿಯಬೇಕೆಂದು ಶಾಸ್ತ್ರನಿರ್ಣೀತವಾದ ಸಿದ್ಧಾಂತವು.

೧೧೬. ಮುನೀಶ್ವರನೇ! ದುರಾಚಾರಿಗಳ ನಾಶವು ಸಜ್ಜನರಿಗೆ ಸಂತೋಷ ಕಾರಣವಾದುದರಿಂದ ಸಗರನು ಪುತ್ರರು ಸತ್ತರೂ ದುಃಖಪಡಲಿಲ್ಲ.

ಯಜ್ಞೇಷ್ವನಧಿಕಾರತ್ವಾದಪುತ್ರಾಣಾಮಿತಿ ಸ್ಮೃತೇಃ ।
ಪೌತ್ರಂ ತಮಂಶುಮಂತಂ ಹಿ ಪ್ರಭುರ್ಜಗ್ರಾಹ ಪುತ್ರವತ್ ॥ ೧೧೭ ॥

ಅಸಮಂಜಸಸುತಂ ತಂ ತು ಸುಧಿಯಂ ವಾಗ್ಮಿದಾಂ ವರಂ ।
ಯುಯೋಜ ಸಾರವಿದ್ಭೂಪೋ ಹ್ಯಶ್ವಾನಯನಕರ್ಮಣಿ ॥ ೧೧೮ ॥

ಸ ಗತಸ್ತದ್ಬಿಲದ್ವಾರೇ ದೃಷ್ಟ್ವಾ ತಂ ಮುನಿಪುಂಗವಂ ।
ಕಪಿಲಂ ತೇಜಸಾಂ ರಾಶಿಂ ಸಾಷ್ಟಾಂಗಂ ಪ್ರಣನಾಮ ಹ ॥ ೧೧೯ ॥

ಕೃತಾಂಜಲಿಪುಟೋ ಭೂತ್ವಾ ವಿನಯೇನಾಗ್ರತಃ ಸ್ಥಿತಃ ।
ಉವಾಚ ಶಾಂತಮನಸಂ ದೇವದೇವಂ ಸನಾತನಂ ॥ ೧೨೦ ॥

ಅಂಶುಮಾನುವಾಚ

ದೌಃಶೀಲ್ಯಂ ಯತ್ಕೃತಂ ಬ್ರಹ್ಮನ್ ಮತ್ತಾತೈಸ್ತತ್ಕ್ಷಮಸ್ವ ಮೇ ।
ಪರೋಪಕಾರನಿರತಾಃ ಕ್ಷಮಾಸಾರಾ ಹಿ ಸಾಧವಃ ॥ ೧೨೧ ॥

---

೧೧೭. ಮಕ್ಕಳಿಲ್ಲದಿರುವವರಿಗೆ ಯಜ್ಞಮಾಡುವ ಅಧಿಕಾರವಿಲ್ಲವೆಂದು ಶಾಸ್ತ್ರವಿಹಿತವಾಗಿರುವುದರಿಂದ, ಸಗರದೊರೆಯು ತನ್ನ ಮೊಮ್ಮಗನಾದ ಅಂಶುಮಂತನನ್ನು ಪುತ್ರನನ್ನಾಗಿ ಸ್ವೀಕರಿಸಿದನು.

೧೧೮. ಸಾರವೇತ್ತೃವಾದ ರಾಜನು ಜ್ಞಾನಿಯು, ವ್ಯವಹರ್ತೃಶ್ರೇಷ್ಠನೂ ಆಗಿರುವ ಆ ಅಸಮಂಜಸಪುತ್ರನನ್ನು ಕುದುರೆಯನ್ನು ತೆಗೆದುಕೊಂಡು ಬರುವ ಕಾರ್ಯದಲ್ಲಿ ನಿಯಮಿಸಿದನು.

೧೧೯. ಅಂಶುಮಂತನು ಪಾತಾಳಕ್ಕೆ ಹೋಗಿ ಆ ಬಿಲದ ಬಾಗಿಲಿನಲ್ಲಿಯೇ ಪ್ರಕಾಶಸಮುದಾಯದಂತಿರುವ ಮುನಿಶ್ರೇಷ್ಠನಾದ ಆ ಕಪಿಲನನ್ನು ನೋಡಿ, ಸಾಷ್ಟಾಂಗ ನಮಸ್ಕಾರಮಾಡಿದನು.

೧೨೦. ವಿನಯದಿಂದ ಕೈಮುಗಿದುಕೊಂಡು ಮುಂದೆ ನಿಂತು ಶಾಂತಚಿತ್ತನಾದ, ಅನಾದಿಯಾದ ದೇವಶ್ರೇಷ್ಠನನ್ನು ಕುರಿತು ಮಾತನಾಡಿದನು.

೧೨೧. ಅಂಶುಮಂತನು ಹೇಳುತ್ತಾನೆ :—ಬ್ರಹ್ಮಜ್ಞಾನಿಶ್ರೇಷ್ಠನೇ! ಸಾಧುಗಳು ದಯಾಳುಗಳು ಮತ್ತು ಪರೋಪಕಾರನಿರತರು. ಆದುದರಿಂದ

ದುರ್ಜನೇಷ್ವಪಿ ಸತ್ತ್ವೇಷು ದಯಾಂ ಕುರ್ವಂತಿ ಸಾಧವಃ ।
ನ ಹಿ ಸಂಹರತೇ ಜ್ಯೋತ್ಸ್ನಾಂ ಚಂದ್ರಶ್ಚಾಂಡಾಲವೇಶ್ಮನಃ ॥ ೧೨೨ ॥

ಬಾಧ್ಯಮಾನೋಽಪಿ ಸುಜನಃ ಸರ್ವೇಷಾಂ ಸುಖಕೃದ್ಭವೇತ್ ।
ದದಾತಿ ಪರಮಾಂ ತುಷ್ಟಿಂ ಭುಜ್ಯಮಾನೋಽಮರೈಃ ಶಶೀ ॥ ೧೨೩ ॥

ದಾರಿತಶ್ಛಿನ್ನ ಏವಾಪಿ ಹ್ಯಾಮೋದೇನೈವ ಚಂದನಃ ।
ಸೌರಭಂ ಕುರುತೇ ಸರ್ವಂ ತಥೈವ ಸುಜನೋ ಜನಃ ॥ ೧೨೪ ॥

ಕ್ಷಾಂತ್ಯಾ ಚ ತಪಸಾಚಾರೈಸ್ಸದ್ಗುಣಜ್ಞಾ ಮುನೀಶ್ವರಾಃ ।
ಸಂಜಾತಾಃ ಶಾಸಿತುಂ ಲೋಕಾಂಸ್ತಾನ್ವಿದುಃ ಪುರುಷೋತ್ತಮಾನ್ ॥ ೧೨೫ ॥

---

ಸಾಧುಶ್ರೇಷ್ಠನಾದ ನೀನು ನಮ್ಮ ತಂದೆ ಮತ್ತು ಚಿಕ್ಕಪ್ಪಂದಿರಿಂದ ಕೃತವಾದ ಅಪಚಾರವನ್ನು ಕ್ಷಮಿಸಿ ನನ್ನಲ್ಲಿ ದಯೆಮಾಡು.

೧೨೨. ಸಾಧುಗಳು ದುಷ್ಟರಾದ ಪ್ರಾಣಿಗಳಲ್ಲಿಯೂ ಸಹ ದಯೆಯನ್ನು ತೋರಿಸುತ್ತಾರೆ. ಚಂದ್ರನು ಚಂಡಾಲನು ದುರ್ವೃತ್ತನಾದಾಗ್ಯೂ ಅವನ ಮನೆಗೆ ಬೆಳದಿಂಗಳನ್ನು ಕೊಡದೇ ಇರುವುದಿಲ್ಲ.

೧೨೩. ಹೇಗೆ ಚಂದ್ರನು ದೇವತೆಗಳಿಂದ ಭಕ್ಷಿಸಲ್ಪಟ್ಟಾಗ್ಯೂ ಅವರಿಗೆ ಉತ್ತಮ ಸಂತೋಷವನ್ನುಂಟುಮಾಡುತ್ತಾನೆಯೋ ಅದರಂತೆ ಸಜ್ಜನರು ತಾವು ಬಾಧಿಸಲ್ಪಡುತ್ತಿದ್ದಾಗ್ಯೂ ಸರ್ವರಿಗೂ ಸುಖವನ್ನೇ ಉಂಟುಮಾಡುತ್ತಾರೆ.

೧೨೪. ಗಂಧದ ಕಟ್ಟಿಗೆಯು ಸೀಳಲ್ಪಟ್ಟು ಚೂರುಚೂರು ಆದಾಗ್ಯೂ ಸಕಲವನ್ನೂ ಸುವಾಸನೆಯುಳ್ಳದನ್ನಾಗಿ ಮಾಡುತ್ತದೆಯೋ ಅದರಂತೆ ಸಜ್ಜನರೂ ಸಹ ಅಪಕಾರಿಗಳಿಗೂ ಹಿತವನ್ನೇ ಮಾಡುತ್ತಾರೆ.

೧೨೫. ಆವ ಮುನೀಶ್ವರರು ಕ್ಷಮೆ, ತಪಸ್ಸು ಮತ್ತು ಸದಾಚಾರಗಳಿಂದ ಸದ್ಗುಣಗಳನ್ನು ತಿಳಿದು ಲೋಕಗಳನ್ನು ಶಿಕ್ಷಿಸುವುದಕ್ಕೆ ಹುಟ್ಟಿತ್ತಾರೆಯೋ ಅಂತಹವರನ್ನು ಪುರುಷಶ್ರೇಷ್ಠರೆಂದು ತಿಳಿಯುತ್ತಾರೆ.

ನಮೋ ಬ್ರಹ್ಮನ್ ಮುನೇ ತುಭ್ಯಂ ನಮಸ್ತೇ ಬ್ರಹ್ಮಮೂರ್ತಯೇ ।
ನಮೋ ಬ್ರಹ್ಮಣ್ಯಶೀಲಾಯ ಬ್ರಹ್ಮಧ್ಯಾನಪರಾಯ ಚ ॥ ೧೨೬ ॥

ಇತಿ ಸ್ತುತೋ ಮುನಿಸ್ತೇನ ಪ್ರಸನ್ನವದನಸ್ತದಾ ।
ವರಂ ವರಯ ಚೇತ್ಯಾಹ ಪ್ರಸನ್ನೋಽಸ್ಮಿ ತವಾನಘ ॥ ೧೨೭ ॥

ಏವಮುಕ್ತೇ ತು ಮುನಿನಾ ಹ್ಯಂಶುಮಾನ್ ಪ್ರಣಿಪತ್ಯ ತಂ ।
ಪ್ರಾಪಯಾಸ್ಮತ್ಪಿತೄನ್ ಬ್ರಾಹ್ಮಂ ಲೋಕಮಿತ್ಯಭ್ಯಭಾಷತ ॥ ೧೨೮ ॥

ತತಸ್ತಸ್ಯಾತಿಸಂತುಷ್ಟೋ ಮುನಿಃ ಪ್ರೋವಾಚ ಸಾದರಂ ।
ಗಂಗಾಮಾನೀಯ ಪೌತ್ರಸ್ತೇ ನಯಿಷ್ಯತಿ ಪಿತೄನ್ದಿವಂ ॥ ೧೨೯ ॥

---

೧೨೬. ಬ್ರಹ್ಮಜ್ಞಾನಿಯಾದ ಮುನಿಯೇ! ನಿನಗೆ ನಮಸ್ಕಾರ, ಬ್ರಹ್ಮಮೂರ್ತಿಯೇ! ನಿನಗೆ ನಮಸ್ಕಾರ, ಪರಬ್ರಹ್ಮನ ಧ್ಯಾನದಲ್ಲಿಯೇ ಆಸಕ್ತನಾಗಿರುವ ಬ್ರಹ್ಮಣ್ಯಶೀಲನಿಗೆ ನಮಸ್ಕಾರ.

೧೨೭. ಎಂಬುದಾಗಿ ಅಂಶುಮಂತನಿಂದ ಸ್ತುತಿಸಲ್ಪಟ್ಟ ಮುನಿಯು ಪ್ರಸನ್ನಮುಖನಾಗಿ, ಅನಘನಾದ ಅಂಶುಮಂತನೇ! ನಿನಗೆ ನಾನು ಪ್ರಸನ್ನನಾಗಿದ್ದೇನೆ. ವರವನ್ನು ಕೇಳು ಎಂದನು.

೧೨೮. ಕಪಿಲಮುನಿಯು ವರವನ್ನು ಯಾಚಿಸೆಂದು ಹೇಳಲು ಅಂಶುಮಂತನು ಮುನಿಯನ್ನು ನಮಸ್ಕರಿಸಿ, ನಮ್ಮ ಪಿತೃಗಳಿಗೆ ಬ್ರಹ್ಮಲೋಕಪ್ರಾಪ್ತಿಯಾಗುವಂತೆ ಅನುಗ್ರಹಿಸಬೇಕೆಂದು ಕೇಳಿದನು.

೧೨೯. ತರುವಾಯ ಬಹಳವಾಗಿ ಸಂತುಷ್ಟನಾದ ಕಪಿಲನು ನಿನ್ನ ಮೊಮ್ಮಗನು ಗಂಗೆಯನ್ನು ತಂದು ಅದರಿಂದ ನಿಮ್ಮ ಪಿತೃಗಳನ್ನು ಸ್ವರ್ಗಕ್ಕೆ ಕಳುಹಿಸುತ್ತಾನೆಂಬುದಾಗಿ ವಿಶ್ವಾಸಪೂರಿತವಾಗಿ ಹೇಳಿದನು.

ತತ್ಪೌತ್ರೇಣ ಸಮಾನೀತಾ ಗಂಗಾ ಪುಣ್ಯಜಲಾ ನದೀ ।
ಕೃತ್ವೈತಾನ್ ಧೂತಪಾಪಾನ್ವೈ ನಯಿಷ್ಯತಿ ಪರಂ ಪದಂ ॥ ೧೩೦ ॥

ಪ್ರಾಪಯ್ಯೈನಂ ಹಯಂ ವತ್ಸ ಯತಸ್ಸ್ಯಾತ್ಪೂರ್ಣಮಧ್ವರಂ ।
ಪಿತಾಮಹಾಂತಿಕಂ ಪ್ರಾಪ್ಯ ಸಾಶ್ವಂ ವೃತ್ತಂ ನ್ಯವೇದಯತ್ ॥ ೧೩೧ ॥

ಸಗರಸ್ತೇನ ಪಶುನಾ ತಂ ಯಜ್ಞಂ ಬ್ರಾಹ್ಮಣೈಃ ಸಹ ।
ವಿಧಾಯ ತಪಸಾ ವಿಷ್ಣುಮಾರಾಧ್ಯಾಪ ಪದಂ ಹರೇಃ ॥ ೧೩೨ ॥

ಜಜ್ಞೇ ಹ್ಯಂಶುಮತಃ ಪುತ್ರೋ ದಿಲೀಪ ಇತಿ ವಿಶ್ರುತಃ ।
ತಸ್ಮಾದ್ಭಗೀರಥೋ ಜಾತೋ ಯೋ ಗಂಗಾಮಾನಯದ್ದಿವಃ ॥ ೧೩೩ ॥

---

೧೩೦. ನಿನ್ನ ಮೊಮ್ಮಗನಿಂದ ತರಲ್ಪಟ್ಟ ಪುಣ್ಯಕರವಾದ ಉದಕದಿಂದ ಪೂರ್ಣವಾದ ಗಂಗಾನದಿಯು ಈ ನಿಮ್ಮ ಪಿತೃಗಳಿಗೆ ಪಾಪವನ್ನು ಪರಿಹರಿಸಿ ಪರಮಪದ ಲಭಿಸುವಂತೆ ಮಾಡುತ್ತದೆ.

೧೩೧. ಮಗನೇ ! ನಿಮ್ಮ ಪಿತಾಮಹನ ಯಜ್ಞವು ಸಂಪೂರ್ಣವಾಗುವುದಕ್ಕೆ ಸಾಧಕವಾದ ಈ ಕುದುರೆಯನ್ನು ತೆಗೆದುಕೊಂಡು ಹೋಗು ಎಂಬುದಾಗಿ ಮುನಿಯು ಹೇಳಿದನು. ತಕ್ಷಣವೇ ಕಪಿಲಮುನಿಯಿಂದ ಅಪ್ಪಣೆಯನು ಪಡೆದು ಅಶ್ವಸಹಿತನಾಗಿ ಹೊರಟು ತನ್ನ ತಾತನ ಹತ್ತಿರ ಬಂದು ನಡೆದ ವೃತ್ತಾಂತವನ್ನೆಲ್ಲಾ ಹೇಳಿದನು.

೧೩೨. ಸಗರನು ಬ್ರಾಹ್ಮಣರೊಡನೆ ಯಜ್ಞವನ್ನು ಆ ಪಶುವಿನಿಂದ ಪೂರ್ತಿಮಾಡಿ, ತಪಸ್ಸಿನಿಂದ ವಿಷ್ಣುವನ್ನು ಆರಾಧಿಸಿ, ಶ್ರೀಹರಿಸ್ಥಾನವಾದ ವೈಕುಂಠವನ್ನು ಹೊಂದಿದನು.

೧೩೩. ಅಂಶುಮಂತನಿಗೆ ದಿಲೀಪನೆಂಬ ಪ್ರಸಿದ್ಧನಾದ ಮಗನು ಹುಟ್ಟಿದನು. ಅವನಿಂದ ಗಂಗೆಯನ್ನು ಸ್ವರ್ಗಲೋಕದಿಂದ ಇಲ್ಲಿಗೆ ತಂದ ಭಗೀರಥ ರಾಜನು ಹುಟ್ಟಿದನು.

**ಭಗೀರಥಾನ್ವಯೇ ಜಾತಃ ಸುದಾಸೋ ನಾಮ ಭೂಪತಿಃ ।**
**ತಸ್ಯ ಪುತ್ರೋ ಮಿತ್ರಸಹಃ ಸರ್ವಲೋಕೇಷು ವಿಶ್ರುತಃ ॥ ೧೩೪ ॥**

**ವಸಿಷ್ಠಶಾಪಾತ್ಪ್ರಾಪ್ತಃ ಸ ಸೌದಾಸೋ ರಾಕ್ಷಸೀಂ ತನುಂ।**
**ಗಂಗಾಬಿಂದ್ವಭಿಷೇಕೇಣ ಪುನರ್ಮುಕ್ತೋ ನೃಪೋಽಭವತ್ ॥ ೧೩೫ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಗಂಗಾಮಾಹಾತ್ಮ್ಯಂ ನಾಮಾಷ್ಟಮೋಽಧ್ಯಾಯಃ**

---

೧೩೪. ಭಗೀರಥನ ವಂಶದಲ್ಲಿ ಸುದಾಸನೆಂಬ ರಾಜನು ಜನಿಸಿದನು. ಸರ್ವಲೋಕಗಳಲ್ಲಿಯೂ ಪ್ರಸಿದ್ಧನಾದ ಮಿತ್ರಸಹನೆಂಬುವನೇ ಅವನ ಮಗನು.

೧೩೫. ಸುದಾಸಪುತ್ರನಾದ ಮಿತ್ರಸಹನು ವಸಿಷ್ಠಮುನಿಯ ಶಾಪದಿಂದ ರಾಕ್ಷಸಶರೀರವನ್ನು ಹೊಂದಿದನು. ಗಂಗೋದಕಬಿಂದುವಿನ ಅಭಿಷೇಕದಿಂದ ಅವನು ರಾಕ್ಷಸಜನ್ಮದಿಂದ ಮುಕ್ತನಾಗಿ ಪುನಃ ರಾಜನಾದನು.

ಇಂತು 'ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ. ಗಂಗಾಮಾಹಾತ್ಮ್ಯನಿರೂಪಣೆಯೆಂಬ ಎಂಟನೆಯ ಅಧ್ಯಾಯವು ಮುಗಿದುದು.

---

## ಕಥಾಸಾರಾಂಶ

ಔರ್ವಮುನಿಯ ಹಿತೋಪದೇಶದಿಂದ ಬಾಹು ಭಾರ್ಯೆಯು ಸಹಗಮನದಿಂದ ನಿವೃತ್ತಳಾಗಿ ತನ್ನ ಸಪತ್ನಿಯೊಡನೆ ಔರ್ವಾಶ್ರಮಕ್ಕೆ ಬಂದು ಆ ಮುನಿಯ ಶುಶ್ರೂಷೆಮಾಡಿಕೊಂಡಿದ್ದಳು. ಹೀಗೆ ಆರು ತಿಂಗಳು ಕಳೆಯಲು ಬಾಹುವಿನ ಜ್ಯೇಷ್ಠಪತ್ನಿಯು ತನ್ನ ಸವತಿಯು ಗರ್ಭವತಿಯಾಗಿರುವುದನ್ನು ನೋಡಿ ಸಹಿಸಲಾರದೆ ಅವಳಿಗೆ ವಿಷವನ್ನು ಕೊಟ್ಟಳು. ಆದರೆ ಆಕೆಯು ಮುನಿಶುಶ್ರೂಷೆಯಿಂದ ಪವಿತ್ರಳಾಗಿದ್ದುದರಿಂದ ವಿಷವು ಯಾವ ದುಷ್ಪರಿಣಾಮವನ್ನೂ ಉಂಟುಮಾಡಲಿಲ್ಲ. ಆ ಸಂದರ್ಭದಲ್ಲಿ ಸತ್ಸಂಗದ ಮಹತ್ವವು ಉಕ್ತವಾಗಿದೆ. ಒಂಭತ್ತು ತಿಂಗಳಾದ ನಂತರ ಆ ಗರ್ಭಿಣಿಯು ವಿಷಸಹಿತವಾಗಿ

ಪುತ್ರನನ್ನು ಪ್ರಸವಿಸಿದಳು. ಮುನಿಯು ಆ ಶಿಶುವಿಗೆ ಜಾತಕರ್ಮವಮಾಡಿ ಅನ್ವರ್ಥಕವಾಗಿ "ಸಗರ" ಎಂಬುದಾಗಿ ನಾಮಕರಣಮಾಡಿದನು. ತಾಯಿಯು ಪ್ರೀತಿಯಿಂದ ಶಿಶುವನ್ನು ಬೆಳೆಸುತ್ತಿದ್ದಳು. ಮುನಿಯು ವಿಹಿತಕಾಲಗಳಲ್ಲಿ ಚೌಲೋಪನಯನಾದಿ ಕರ್ಮಗಳನ್ನು ಮಾಡಿ ರಾಜಯೋಗ್ಯವಾದ ಸಕಲ ವಿದ್ಯಾಭ್ಯಾಸವನ್ನೂ ಮಾಡಿಸಿದನು. ಒಂದಾನೊಂದು ದಿವಸ ಸಗರನು, ನಮ್ಮ ವಂಶ ವಾವುದು? ತಂದೆ ಎಲ್ಲಿ ಹೋದನು? ಆತನ ಹೆಸರೇನು? ಮುಂತಾಗಿ ಪೂರ್ವ ವೃತ್ತಾಂತವನ್ನು ತಿಳಿಸಬೇಕೆಂದು ತನ್ನ ತಾಯಿಯನ್ನು ಕೇಳಿದನು. ತಾಯಿಯು ಎಲ್ಲವನ್ನೂ ತಿಳಿಸಿದಳು. ಅನಂತರ ಮುನಿಯ ಅಪ್ಪಣೆಪಡೆದು, ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಸಂಪಾದಿಸಲು ಹೊರಟನು. ಮೊದಲು ಕುಲಗುರುಗಳಾದ ವಸಿಷ್ಠರನ್ನು ಸಂದರ್ಶಿಸಿ ಅವರಿಂದ ಅನೇಕ ಶಸ್ತ್ರಾಸ್ತ್ರಗಳನ್ನು ಸ್ವೀಕರಿಸಿ ಆಶೀರ್ವಾದಪಡೆದು, ಯುದ್ಧಮಾಡಿ ಸಕಲ ಶತ್ರುಗಳನ್ನೂ ಸಂಹರಿಸಿ ಜಯಶೀಲನಾದನು. ಅನಂತರ ವಸಿಷ್ಠನು ಅವನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು. ಸಗರನಿಗೆ ಇಬ್ಬರು ಹೆಂಡತಿಯರಿದ್ದರು. ಅವರಿಬ್ಬರೂ ಔರ್ವಮುನಿಯ ಅನುಗ್ರಹದಿಂದ ಪುತ್ರರನ್ನು ಪಡೆದರು. ಒಬ್ಬಳಿಗೆ ಅಸಮಂಜಸನೆಂಬ ಮಗನು ಇನ್ನೊಬ್ಬಳಿಗೆ ಅರವತ್ತುಸಾವಿರ ಮಕ್ಕಳೂ ಆದರು. ಅವರೆಲ್ಲರೂ ಬಹು ದುಷ್ಟರಾಗಿದ್ದರು. ಅವರ ಬಾಧೆಯನ್ನು ತಾಳಲಾರದೆ ದೇವತೆಗಳು ಪಾತಾಳಲೋಕದಲ್ಲಿ ತಪಸ್ಸುಮಾಡುತ್ತಿದ್ದ ಕಪಿಲ ಮುನಿಯನ್ನು ಮರೆಹೊಕ್ಕರು. ಕಪಿಲನು ಅವರಿಗೆ ಅಭಯಕೊಟ್ಟನು. ಅಷ್ಟರಲ್ಲಿಯೇ ಸಗರನು ಅಶ್ವಮೇಧಯಜ್ಞವನ್ನು ಆರಂಭಿಸಿದನು. ದೇವೇಂದ್ರನು ಯಜ್ಞಾಶ್ವವನ್ನು ರಹಸ್ಯವಾಗಿ ತೆಗೆದುಕೊಂಡು ಹೋಗಿ ಕಪಿಲನ ಹತ್ತಿರ ಕಟ್ಟಿದ್ದನು. ಅಶ್ವವನ್ನು ಹುಡುಕಲು ಹೊರಟ ಸಗರ ಪುತ್ರರು ಕಪಿಲಮುನಿಗೆ ಅಪಚಾರಮಾಡಿ ಆತನ ಕೋಪದಿಂದ ಸುಟ್ಟುಬೂದಿಯಾದರು. ಆ ವಿಷಯವನ್ನು ಕೇಳಿ ಸಗರನು ಸಂತೋಷಪಟ್ಟು ಅಂಶುಮಂತನೆಂಬ ತನ್ನ ಪೌತ್ರನನ್ನು ಮಗನಂತೆ ಭಾವಿಸಿ ಅಶ್ವವನ್ನು ತರಲು ಕಳುಹಿಸಿದನು. ಅವನು ಯೋಗ್ಯನಾಗಿದ್ದುದರಿಂದ ಕಪಿಲಮುನಿಯನ್ನು ಭಕ್ತಿಯಿಂದ ಆಶ್ರಯಿಸಿ ಪ್ರಸನ್ನೀಕರಿಸಿಕೊಂಡು ಅಶ್ವವನ್ನು ತಂದನು. ಅದರಿಂದ ಸಗರನು ಅಶ್ವಮೇಧವನ್ನು ಪೂರೈಸಿ ಸದ್ಗತಿಯನ್ನು ಹೊಂದಿದನು. ಅಂಶುಮಂತನಿಗೆ ದಿಲೀಪನೆಂಬ ಮಗನೂ, ಅವನಿಗೆ ಗಂಗೆಯನ್ನು ತಂದ ಭಗೀರಥನೂ ಹುಟ್ಟಿದರು. ಅವನ ವಂಶದಲ್ಲಿ ಸುದಾಸನೆಂಬುವನು ಹುಟ್ಟಿದನು. ಅವನ ಮಗನೇ ಮಿತ್ರಸಹನು, ಅವನಿಗೆ ವಸಿಷ್ಠರ ಶಾಪದಿಂದ ರಾಕ್ಷಸಜನ್ಮವು ಬಂದಿತು ಅದು ಗಂಗೋದಕಸೇಚನದಿಂದ ಪರಿಹಾರವಾಗಿ ಅವನು ಪುನಃ ದೊರೆಯಾದನು ಎಂಬಲ್ಲಿ ಅಧ್ಯಾಯವು ಮುಗಿದುದು.

## ನವಮೋಽಧ್ಯಾಯಃ

---

### ನಾರದ ಉವಾಚ

ಶಪ್ತಃ ಕಥಂ ವಸಿಷ್ಠೇನ ಸೌದಾಸೋ ಮುನಿಸತ್ತಮ ।
ಗಂಗಾಬಿಂದ್ವಭಿಷೇಕೇಣ ಪುನಃ ಶುದ್ಧೋಽಭವತ್ಕಥಂ ॥ ೧ ॥

ಸರ್ವಮೇತದಶೇಷೇಣ ಭ್ರಾತರ್ನೋ ವಕ್ತುಮರ್ಹಸಿ ।
ಶೃಣುತಾಂ ವದತಾಂ ಚೈವ ಗಂಗಾಖ್ಯಾನಂ ಶುಭಾವಹಂ ॥ ೨ ॥

### ಸನಕ ಉವಾಚ

ಸೌದಾಸಃ ಸರ್ವಧರ್ಮಜ್ಞಃ ಸರ್ವಜ್ಞೋ ಗುಣವಾನ್ ಶುಚಿಃ ।
ಬುಭುಜೇ ಪೃಥಿವೀಂ ಸರ್ವಾಂ ಪಿತೃವದ್ರಂಜಯನ್ ಪ್ರಜಾಃ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧-೨. ನಾರದನು ಹೇಳುತ್ತಾನೆ—ಸಾಧೂತ್ತಮನಾದ, ಸನಕಮುನಿಯೇ ! ವಸಿಷ್ಠನು ಸುದಾಸಪುತ್ರನನ್ನು ಏಕೆ ಶಪಿಸಿದನು ? ಪುನಃ ಅವನು ಗಂಗೋದಕ ಸೇಚನದಿಂದ ಹೇಗೆ ಪರಿಶುದ್ಧನಾದನು ? ಸಹೋದರನೇ ! ಆ ಕಥೆಯನ್ನು ಸಂಪೂರ್ಣವಾಗಿ ನನಗೋಸ್ಕರ ಹೇಳು. ಗಂಗೆಯ ಚರಿತ್ರೆಯನ್ನು ಶ್ರವಣ ಮತ್ತು ಪಠನಮಾಡುವವರಿಗೆ ಮಂಗಳವಾಗುತ್ತದೆ.

೩. ಸನಕನು ಹೇಳುತ್ತಾನೆ—ಸಕಲಧರ್ಮಸೂಕ್ಷ್ಮಗಳನ್ನರಿತವನು, ಸರ್ವವನ್ನು ತಿಳಿದಿರುವವನು, ಗುಣಶಾಲಿಯು, ಪರಿಶುದ್ಧನೂ ಆದ ಸುದಾಸ ಪುತ್ರನು ತನ್ನ ತಂದೆಯಂತೆ ಪ್ರಜೆಗಳನ್ನು ಸಂತೋಷಪಡಿಸುತ್ತಾ, ಸಕಲ ಪೃಥ್ವಿಯನ್ನೂ ಆಳುತ್ತಿದ್ದನು.

ಸಗರೇಣ ಯಥಾಪೂರ್ವಂ ಮಹೀಯಂ ಸಪ್ತಸಾಗರಾ ।
ರಕ್ಷಿತಾ ತದ್ವದಮುನಾ ಸರ್ವಧರ್ಮಾವಿರೋಧಿನಾ ॥ ೪ ॥

ಪುತ್ರಪೌತ್ರಸಮಾಯುಕ್ತಃ ಸರ್ವೈಶ್ವರ್ಯಸಮನ್ವಿತಃ ।
ತ್ರಿಂಶದಬ್ದಸಹಸ್ರಾಣಿ ಬುಭುಜೇ ಪೃಥಿವೀಂ ಯುವಾ ॥ ೫ ॥

ಸೌದಾಸಸ್ತ್ವೇಕದಾ ರಾಜಾ ಮೃಗಯಾಭಿರತಿರ್ವನಂ ।
ವಿವೇಶ ಸಬಲಃ ಸಮ್ಯಕ್ ಶೋಧಿತಂ ಹ್ಯಾಪ್ತಮಂತ್ರಿಭಿಃ ॥ ೬ ॥

ನಿಷಾದೈಃ ಸಹಿತಸ್ತತ್ರ ವಿನಿಘ್ನನ್ ಮೃಗಸಂಚಯಂ ।
ಆಸಸಾದ ನದೀಂ ರೇವಾಂ ಧರ್ಮಜ್ಞಃ ಸ ಪಿಪಾಸಿತಃ ॥ ೭ ॥

---

೪. ಪೂರ್ವದಲ್ಲಿ ಹೇಗೆ ಸಗರಚಕ್ರವರ್ತಿಯು ಈ ಸಪ್ತಸಾಗರೋಪೇತವಾದ ಭೂಮಿಯನ್ನು ರಕ್ಷಿಸಿದನೋ, ಆದರಂತೆಯೇ ಇವನೂ ಯಾವ ಧರ್ಮಕ್ಕೂ ವಿರೋಧವಿಲ್ಲದಂತೆ ಈ ಅಖಂಡ ಭೂಮಂಡಲವನ್ನು ರಕ್ಷಿಸುತ್ತಿದ್ದನು.

೫. ಇವನು ಯೌವನಾವಸ್ಥೆಯನ್ನು ಹೊಂದಿದವನಾಗಿಯೇ, ಮಕ್ಕಳು ಮೊಮ್ಮಕ್ಕಳುಗಳಿಂದ ಸಹಿತನಾಗಿ, ಸಕಲ ವಿಧವಾದ ಐಶ್ವರ್ಯಸಂಪನ್ನನಾಗಿ, ಮುವತ್ತುಸಾವಿರ ವರ್ಷಗಳ ಪರ್ಯಂತವಾಗಿ ರಾಜ್ಯಭಾರಮಾಡಿದನು.

೬. ಒಂದಾನೊಂದು ದಿವಸ ರಾಜನಾದ ಸುದಾಸಪುತ್ರನು ಬೇಟೆಯಲ್ಲಿ ಅಭಿರುಚಿಯುಳ್ಳವನಾಗಿ ಆಪ್ತ ಕಾರ್ಯದರ್ಶಿಗಳಿಂದ ಶೋಧಿಸಲ್ಪಟ್ಟ ವನವನ್ನು ಸಪರಿವಾರನಾಗಿ ಪ್ರವೇಶಿಸಿದನು.

೭. ಧರ್ಮಜ್ಞಾನಿಯಾದ ಆ ಸುದಾಸಪುತ್ರನು ಬೇಡರುಗಳಿಂದ ಸಹಿತನಾಗಿ ಕಾಡಿನಲ್ಲಿ ಮೃಗಸಮೂಹವನ್ನು ಸಂಹರಿಸಿದವನಾಗಿ, ಬಾಯಾರಿಕೆಯಿಂದ ರೇವಾನದಿಯ ತೀರಕ್ಕೆ ಬಂದನು.

ಸುದಾಸತನಯಸ್ತತ್ರ ಸ್ನಾತ್ವಾ ಕೃತ್ವಾಹ್ನಿಕಂ ಮುನೇ ।
ಭುಕ್ತ್ವಾ ಚ ಮಂತ್ರಿಭಿಃ ಸಾರ್ಧಂ ತಾಂ ನಿಶಾಂ ತತ್ರ ಚಾವಸತ್ ॥ ೮ ॥

ತತಃ ಪ್ರಾತಃ ಸಮುತ್ಥಾಯ ಕೃತ್ವಾ ಪೌರ್ವಾಹ್ಣಿಕೀಂ ಕ್ರಿಯಾಂ ।
ಬಭ್ರಾಮ ಮಂತ್ರಿಸಹಿತೋ ನರ್ಮದಾತೀರಜೇ ವನೇ ॥ ೯ ॥

ವನಾದ್ವನಾಂತರಂ ಗಚ್ಛನ್ನೇಕ ಏವ ಮಹೀಪತಿಃ ।
ಆಕರ್ಣಾಕೃಷ್ಟಬಾಣಃ ಸನ್ ಕೃಷ್ಣಸಾರಂ ಸಮನ್ವಗಾತ್ ॥ ೧೦ ॥

ದೂರಸ್ಸೈನ್ಯೋಽಶ್ವಮಾರೂಢಃ ಸ ರಾಜಾಽನುವ್ರಜನ್ಮೃಗಂ ।
ವ್ಯಾಘ್ರದ್ವಯಂ ಗುಹಾಸಂಸ್ಥಮಪಶ್ಯತ್ಸುರತೇ ರತಂ ॥ ೧೧ ॥

ರುರುಮಾರ್ಗಂ ಪರಿತ್ಯಜ್ಯ ವ್ಯಾಘ್ರಯೋಃ ಸಂಮುಖಂ ಯಯೌ ।
ಧನುಃಸಂಹಿತಬಾಣೇನ ತೇನಾಸೌ ಶರಶಾಸ್ತ್ರವಿತ್ ॥ ೧೨ ॥

---

೮. ಸುದಾಸಕುಮಾರನು ಆ ರೇವಾನದಿಯಲ್ಲಿ ಸ್ನಾನಮಾಡಿ, ನಿತ್ಯಾಹ್ನಿಕವನ್ನು ಮುಗಿಸಿಕೊಂಡು, ಮಂತ್ರಿಗಳೊಡನೆ ಭೋಜನಮಾಡಿ, ಆ ರಾತ್ರಿಯೆಲ್ಲಾ ಅಲ್ಲಿಯೇ ವಾಸಮಾಡಿದನು.

೯. ತರುವಾಯ ರಾಜನು ಪ್ರಾತಃಕಾಲದಲ್ಲಿ ಎದ್ದು ಸಂಧ್ಯಾದಿ ಪ್ರಾತಃಕಾಲದ ಕರ್ತವ್ಯಕರ್ಮಗಳನ್ನು ಮಾಡಿ, ಮಂತ್ರಿಗಳೊಡನೆ ನರ್ಮದಾನದಿಯ ತೀರದಲ್ಲಿನ ಕಾಡಿನಲ್ಲಿ ಸಂಚರಿಸುತ್ತಿದ್ದನು.

೧೦. ದೊರೆಯೊಬ್ಬನೇ ಕಾಡಿನಿಂದ ಕಾಡಿಗೆ ಹೋಗುತ್ತಾ ಕರ್ಣಪರ್ಯಂತವಾಗಿ ಸೆಳೆಯಲ್ಪಟ್ಟ ಬಾಣವುಳ್ಳವನಾಗಿ ಜಿಂಕೆಯನ್ನು ಹಿಂಬಾಲಿಸಿದನು.

೧೧. ಆ ದೊರೆಯು ಕುದುರೆಯಮೇಲೆ ಕುಳಿತು, ಸೈನ್ಯವನ್ನು ದೂರದಲ್ಲಿ ಬಿಟ್ಟು ಜಿಂಕೆಯನ್ನು ಹಿಂಬಾಲಿಸಿ ಹೋಗುತ್ತಾ ಗುಹೆಯೊಂದರಲ್ಲಿ ಸಂಭೋಗನಿರತವಾಗಿದ್ದ ಎರಡು ಹುಲಿಗಳನ್ನು ನೋಡಿದನು.

೧೨-೧೪. ದೊರೆಯು ಜಿಂಕೆಯದಾರಿಯನ್ನು ಬಿಟ್ಟು ಹುಲಿಗಳಿಗೆ ಅಭಿಮುಖವಾಗಿ ಹೊರಟನು. ಧನುರ್ವಿದ್ಯಾಭಿಜ್ಞನಾದ ಈ ರಾಜೋತ್ತಮನು

ತಾಂ ವ್ಯಾಘ್ರೀಂ ಪಾತಯಾಮಾಸ ಕ್ಷಣೇನ ನೃಪಸತ್ತಮಃ ।
ಪತಮಾನಾ ತು ಸಾ ವ್ಯಾಘ್ರೀ ಷಟ್ತ್ರಿಂಶದ್ಯೋಜನಾಯುತಾ ॥ ೧೩ ॥

ಯುಗಾಂತಮೇಘನಿರ್ಘೋಷಾ ರಾಕ್ಷಸೀ ವಿಕೃತ್ಯಾಭವತ್ ।
ಪತಿತಾಂ ಸ್ವಪ್ರಿಯಾಂ ವೀಕ್ಷ್ಯ ದ್ವಿಷನ್ ಸ ವ್ಯಾಘ್ರರಾಕ್ಷಸಃ ॥ ೧೪ ॥

ಪ್ರತಿಕ್ರಿಯಾಂ ಕರಿಷ್ಯಾಮೀತ್ಯುಕ್ತ್ವಾ ಚಾಂತರ್ದಧೇ ತದಾ ।
ರಾಜಾ ತು ಭಯಸಂವಿಗ್ನೋ ವನೇ ಸೈನ್ಯಂ ಸಮೇತ್ಯ ಚ ॥ ೧೫ ॥

ತದ್ವೃತ್ತಂ ಕಥಯನ್ ಸರ್ವಾನ್ಸ್ವಾಂ ಪುರೀಂ ಸ ನ್ಯವರ್ತತ ।
ಶಂಕಮಾನಸ್ತು ತದ್ರಕ್ಷಃಕೃತ್ಯಂ ರಾಜಾ ಸುದಾಸಜಃ ॥ ೧೬ ॥

ಪರಿತತ್ಯಾಜ ಮೃಗಯಾಂ ತತಃ ಪ್ರಭೃತಿ ನಾರದ ।
ಗತೇ ಬಹುತಿಥೇ ಕಾಲೇ ಹಯಮೇಧಮುಖಂ ನೃಪಃ ॥ ೧೭ ॥

---

ಕೂಡಲೇ ಧನುಸ್ಸಿನಲ್ಲಿ ಸಂಧಾನಮಾಡಲ್ಪಟ್ಟ ಅದೇ ಬಾಣದಿಂದ ಹೆಣ್ಣುಹುಲಿಯನ್ನು ಕೆಡವಿದನು. ಆ ಹುಲಿಯು ಬೀಳುವಾಗ ಮುವತ್ತಾರು ಗಾವುದ ವಿಸ್ತಾರವಾದ ದೇಹವುಳ್ಳ, ಪ್ರಳಯಕಾಲದ ಮೇಘದಂತೆ ಶಬ್ದಮಾಡುವ ರಾಕ್ಷಸ ಸ್ತ್ರೀಯಾಗಿ ವಿಕಾರವನ್ನು ಹೊಂದಿತು.

೧೪-೧೫. ಆ ಗಂಡುಹುಲಿಯು ರೂಪವನ್ನು ತಾಳಿದ್ದ ರಾಕ್ಷಸನು ತನ್ನ ಪತ್ನಿಯು ಬಿದ್ದುದನ್ನು ನೋಡಿ, ಕ್ರೋಧವನ್ನು ಹೊಂದಿ, ಪ್ರತೀಕಾರವನ್ನು ಮಾಡುತ್ತೇನೆಂದು ಹೇಳಿ ಕೂಡಲೇ ಅದೃಶ್ಯನಾದನು.

೧೫-೧೬. ಎಲೈ ನಾರದನೇ! ರಾಜನಾದರೋ ಭಯದಿಂದ ಚಿಂತಾಕ್ರಾಂತನಾಗಿ ಕಾಡಿನಲ್ಲಿ ಸೈನ್ಯವಿದ್ದೆಡೆಗೆ ಹೋಗಿ ಎಲ್ಲರಿಗೂ ನಡೆದ ವೃತ್ತಾಂತವನ್ನು ಹೇಳಿ, ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೧೬-೧೭. ದೊರೆಯಾದ ಸುದಾಸಪುತ್ರನು ಆ ರಾಕ್ಷಸವ್ಯಾಪಾರವನ್ನು ಶಂಕಿಸಿಕೊಂಡು ಆಗಿನಿಂದ ಬೇಟೆಯನ್ನೇ ಪರಿತ್ಯಾಗಮಾಡಿದನು.

ಸಮಾರೇಭೇ ಪ್ರಸನ್ನಾತ್ಮಾ ವಸಿಷ್ಠಾದ್ಯೈರ್ಮುನೀಶ್ವರೈಃ ।
ತತ್ರ ಬ್ರಹ್ಮಾದಿದೇವೇಭ್ಯೋ ಹವಿರ್ದತ್ವಾ ಯಥಾವಿಧಿ ॥ ೧೮ ॥

ಸಮಾಪ್ಯ ಯಜ್ಞಂ ನಿಷ್ಕ್ರಾಂತೋ ವಸಿಷ್ಠಃ ಸ್ನಾನಕಾರಣಾತ್ ।
ಅತ್ರಾಂತರೇ ರಾಕ್ಷಸೋಽಸೌ ನೃಪಹಿಂಸಿತಭಾರ್ಯಕಃ ।
ಕರ್ತುಂ ಪ್ರತಿಕ್ರಿಯಾಂ ರಾಜ್ಞೇ ಸಮಾಯಾತೋ ರುಷಾನ್ವಿತಃ ॥ ೧೯ ॥

ಸ ರಾಕ್ಷಸಸ್ತಸ್ಯ ಗುರೌ ಪ್ರಯಾತೇ
ವಸಿಷ್ಠವೇಷಂ ತು ತದೈವ ಧೃತ್ವಾ ।
ರಾಜಾನಮಭ್ಯೇತ್ಯ ಜಗಾದ ಭೋಕ್ತುಂ
ಮಾಂಸಂ ಸಮಿಚ್ಛಾಮ್ಯಹಮಿತ್ಯುವಾಚ ॥ ೨೦ ॥

---

೧೭-೧೮. ಬಹು ದಿನಗಳು ಕಳೆದ ತರುವಾಯ ದೊರೆಯು ಶಾಂತ ಚಿತ್ತನಾಗಿ ವಸಿಷ್ಠ ಮುಂತಾದ ಮುನಿಶ್ರೇಷ್ಠರನ್ನು ಬರಮಾಡಿಕೊಂಡು ಅಶ್ವ ಮೇಧಯಜ್ಞವನ್ನು ಮಾಡಲು ಉಪಕ್ರಮಿಸಿದನು.

೧೮-೧೯. ವಸಿಷ್ಠನು ಆ ಯಜ್ಞದಲ್ಲಿ ವಿಧಾನೋಕ್ತಪ್ರಕಾರ ಬ್ರಹ್ಮಾದಿ ದೇವತೆಗಳಿಗೆ ಹವಿಸ್ಸನ್ನು ಕೊಟ್ಟು, ಯಜ್ಞವನ್ನು ಮುಗಿಸಿ, ಸ್ನಾನಕ್ಕೋಸ್ಕರ ಹೊರಗೆ ಹೊರಟನು. ಆ ಸಮಯದಲ್ಲಿ ಈ ದೊರೆಯಿಂದ ಹಿಂಸಿಸಲ್ಪಟ್ಟ ಹುಲಿ ಯಾಗಿದ್ದ ರಾಕ್ಷಸಿಯ ಗಂಡನಾದ ರಾಕ್ಷಸನು ಕೋಪಗೊಂಡು, ರಾಜನಿಗೆ ಪ್ರತ್ಯಪಕಾರವನ್ನು ಮಾಡಬೇಕೆಂದು ಬಂದನು.

೨೦. ಗುರುಗಳಾದ ವಸಿಷ್ಠರು ಸ್ನಾನಕ್ಕಾಗಿ ಹೊರಟಕೂಡಲೇ ಆ ರಾಕ್ಷಸನು ವಸಿಷ್ಠನ ವೇಷವನ್ನು ಧರಿಸಿ ರಾಜನ ಸಮೀಪಕ್ಕೆ ಬಂದು ನನಗೆ ಮಾಂಸತಿನ್ನಬೇಕೆಂದು ಆಶೆಯುಂಟಾಗಿದೆ; ಸಿದ್ಧಮಾಡಿ ಕೊಡಬೇಕೆಂದು ಹೇಳಿ ಹೊರಟುಹೋದನು.

ಭೂಯಃ ಸಮಾಸ್ಥಾಯ ಸ ಸೂದವೇಷಂ
ಪಕ್ತ್ವಾಽಽಮಿಷಂ ಮಾನುಷಮಸ್ಯ ಚಾದಾತ್ ।
ಸ್ಥಿತಶ್ಚ ರಾಜಾಪಿ ಹಿರಣ್ಮಪಾತ್ರೇ
ಧೃತ್ವಾ ಗುರೋರಾಗಮನಂ ಪ್ರತೀಕ್ಷನ್ ॥ ೨೧ ॥

ತನ್ಮಾಂಸಂ ಹೇಮಪಾತ್ರಸ್ಥಂ ಸೌದಾಸೋ ವಿನಯಾನ್ವಿತಃ ।
ಸಮಾಗತಾಯ ಗುರವೇ ದದೌ ತಸ್ಮೈ ಸ ಸಾದರಂ ॥ ೨೨ ॥

ತಂ ದೃಷ್ಟ್ವಾ ಚಿಂತಯಾಮಾಸ ಗುರುಃ ಕಿಮಿತಿ ವಿಸ್ಮಿತಃ ॥ ೨೩ ॥

ಅಪಶ್ಯನ್ಮಾನುಷಂ ಮಾಸಂ ಪರಮೇಣ ಸಮಾಧಿನಾ ।
ಅಹೋಽಸ್ಯ ರಾಜ್ಞೋ ದೌಃಶೀಲ್ಯಮಭಕ್ಷ್ಯಂ ದತ್ತವಾನ್ಮಮ ॥ ೨೪ ॥

ಇತಿ ವಿಸ್ಮಯಮಾಪನ್ನಃ ಪ್ರಮನ್ಯುರಭವನ್ಮುನಿಃ ।
ಅಭೋಜ್ಯಂ ಮದ್ವಿಧಾನಾಂ ಚ ದತ್ತಂ ಹಿ ಪೃಥಿವೀಪತೇ ॥ ೨೫ ॥

---

೨೧. ಆ ರಾಕ್ಷಸನೇ ತಕ್ಷಣ ಅಡಿಗೆಯವನ ವೇಷವನ್ನು ತಾಳಿ ನರ ಮಾಂಸವನ್ನು ಪಕ್ವಮಾಡಿ, ರಾಜನಿಗೆ ತಂದುಕೊಟ್ಟನು. ಆ ರಾಜನು ಅದನ್ನು ಭಂಗಾರದ ಪಾತ್ರೆಯಲ್ಲಿ ಇಟ್ಟುಕೊಂಡು ಗುರುಗಳ ಆಗಮನವನ್ನೇ ನಿರೀಕ್ಷಿಸುತ್ತಿದ್ದನು.

೨೨. ವಿನೀತನಾದ ಸುದಾಸಪುತ್ರನು ಭಂಗಾರದ ಪಾತ್ರೆಯಲ್ಲಿ ಇಟ್ಟಿದ್ದ ಆ ಮಾಂಸವನ್ನು ಗುರುಗಳು ಬಂದ ನಂತರ ಅವರಿಗೆ ಭಕ್ತಿಪೂರ್ವಕವಾಗಿ ಕೊಟ್ಟನು.

೨೩. ಗುರುವಾದ ವಸಿಷ್ಠನು ಅದನ್ನು ನೋಡಿ ವಿಸ್ಮಯಗೊಂಡು ಏನೆಂದು ಯೋಚಿಸಿದನು.

೨೪-೨೫. ವಸಿಷ್ಠಮುನಿಯು ಉತ್ತಮವಾದ ಸಮಾಧಿಯೋಗದಿಂದ ಅದು ಮನುಷ್ಯಮಾಂಸವೆಂದು ತಿಳಿದನು. ಆಶ್ಚರ್ಯ! ಈ ರಾಜನದು ಎಂತಹ ದುರ್ನಡತೆ, ತಿನ್ನಬಾರದ ಈ ಮಾಂಸವನ್ನು ನನಗೆ ಕೊಟ್ಟಿರುತ್ತಾನೆ ಎಂಬುದಾಗಿ ವಿಸ್ಮಯವನ್ನು ಹೊಂದಿ ಅತ್ಯಂತ ಕೋಪಗೊಂಡನು.

ತಸ್ಮಾತ್ತ್ವಾಪಿ ಭವತು ಹ್ಯೇತದೇವ ಹಿ ಭೋಜನಂ ।
ನೃಮಾಂಸಂ ರಕ್ಷಸಾಮೇವ ಭೋಜ್ಯಂ ದತ್ತಂ ಮಮ ತ್ವಯಾ ॥ ೨೬ ॥

ತದ್ಯಾಹಿ ರಾಕ್ಷಸತ್ವಂ ತ್ವಂ ತದಾಹಾರೋಚಿತಂ ನೃಪ ।
ಇತಿ ಶಾಪಂ ದದತ್ಯಸ್ಮಿನ್ಸೌದಾಸೋ ಭಯವಿಹ್ವಲಃ ॥ ೨೭ ॥

ಆಜ್ಞಪ್ತೋ ಭವತೈವೇತಿ ಸಕಂಪೋಽಸ್ಮೈ ವ್ಯಜಿಜ್ಞಪತ್ ।
ಭೂಯಶ್ಚ ಚಿಂತಯಾಮಾಸ ವಸಿಷ್ಠಸ್ತೇನ ಚೋದಿತಃ ॥ ೨೮ ॥

ರಕ್ಷಸಾ ವಂಚಿತಂ ಭೂಪಂ ಜ್ಞಾತವಾನ್ ದಿವ್ಯಚಕ್ಷುಷಾ ।
ರಾಜಾಽಪಿ ಜಲಮಾದಾಯ ವಸಿಷ್ಠಂ ಶಪ್ತುಮುದ್ಯತಃ ॥ ೨೯ ॥

ಸಮುದ್ಯತಂ ಗುರುಂ ಶಪ್ತುಂ ದೃಷ್ಟ್ವಾ ಭೂಯೋ ರುಷಾನ್ವಿತಂ ।
ಮದಯಂತೀ ಪ್ರಿಯಾ ತಸ್ಯ ಪ್ರತ್ಯುವಾಚಾಥ ಸುವ್ರತಾ ॥ ೩೦ ॥

---

೨೬-೨೮. ರಾಜನೇ ! ನನ್ನಂತಹವರಿಗೆ ತಿನ್ನಬಾರದ ಈ ನರಮಾಂಸವನ್ನು ಕೊಟ್ಟಿರುತ್ತೀ, ಆದುದರಿಂದ ನಿನಗೂ ಇದೇ ಭೋಜನವಾಗಲಿ, ರಾಕ್ಷಸರಿಗೆ ತಿನ್ನಲರ್ಹವಾದ ನರಮಾಂಸವನ್ನು ನೀನು ನನಗೆ ಕೊಟ್ಟಿರುವುದರಿಂದ ಅದಕ್ಕೆ ಉಚಿತವಾದ ರಾಕ್ಷಸಜನ್ಮವೇ ನಿನಗೆ ಬರಲಿ ಎಂಬುದಾಗಿ ವಸಿಷ್ಠನು ರಾಜನಿಗೆ ಶಾಪವನ್ನು ಕೊಡಲು ಸುದಾಸಪುತ್ರನು ಭಯಪಟ್ಟವನಾಗಿ ನಡುಗುತ್ತಾ ಇದನ್ನು ಕೊಡಬೇಕೆಂದು ನೀವೇ ಅಪ್ಪಣೆಯನ್ನು ಮಾಡಿದಿರಿ ಎಂಬುದಾಗಿ ವಿಜ್ಞಾಪಿಸಿದನು. ರಾಜನು ಈ ಪ್ರಕಾರ ಹೇಳಲು ವಸಿಷ್ಠನು ಪುನಃ ಆಲೋಚಿಸಿದನು.

೨೯. ಆಗ ವಸಿಷ್ಠನು ದಿವ್ಯಚಕ್ಷುಸ್ಸಿನಿಂದ ರಾಕ್ಷಸನು ರಾಜನಿಗೆ ವಂಚನೆ ಮಾಡಿರುವ ಅಂಶವನ್ನು ತಿಳಿದನು. ರಾಜನೂ ಸಹ ನೀರನ್ನು ತೆಗೆದುಕೊಂಡು ವಸಿಷ್ಠನಿಗೆ ಶಾಪಕೊಡಲು ಉದ್ಯುಕ್ತನಾದನು.

೩೦. ಆಗ ಅವನ ಹೆಂಡತಿಯಾದ, ಸುಚರಿತಳಾದ, ಮದಯಂತಿಯು ಅತ್ಯಂತ ಕುಪಿತನಾದ, ಗುರುಗಳಿಗೆ ಶಾಪಕೊಡಲು ಉದ್ಯುಕ್ತನಾದ ಗಂಡನನ್ನು ನೋಡಿ ಮಾತನಾಡಿದಳು.

ಮದಯಂತ್ಯುವಾಚ

ಭೋ ಭೋ ಕ್ಷತ್ರಿಯದಾಯಾದ ಕೋಪಂ ಸಂಹರ್ತುಮರ್ಹಸಿ ।
ತ್ವಯಾ ಯತ್ಕರ್ಮ ಭೋಕ್ತವ್ಯಂ ತತ್ಪ್ರಾಪ್ತಂ ನಾತ್ರ ಸಂಶಯಃ ॥ ೩೧ ॥

ಗುರುಂ ತುಂಕೃತ್ಯ ಹುಂಕೃತ್ಯ ಯೋ ವದೇನ್ಮೂಢಧೀರ್ನರಃ ।
ಅರಣ್ಯೇ ನಿರ್ಜಲೇ ದೇಶೇ ಸ ಭವೇದ್ಬ್ರಹ್ಮರಾಕ್ಷಸಃ ॥ ೩೨ ॥

ಜಿತೇಂದ್ರಿಯಾ ಜಿತಕ್ರೋಧಾ ಗುರುಶುಶ್ರೂಷಣೇ ರತಾಃ ।
ಪ್ರಯಾಂತಿ ಬ್ರಹ್ಮಸದನಮಿತಿ ಶಾಸ್ತ್ರೇಷು ನಿರ್ಣಯಃ ॥ ೩೩ ॥

ತಯೋಕ್ತೋ ಭೂಪತಿಃ ಕೋಪಂ ತ್ಯಕ್ತ್ವಾ ಭಾರ್ಯಾಂ ನನಂದ ಚ ।
ಜಲಂ ಕುತ್ರ ಕ್ಷಿಪಾಮೀತಿ ಚಿಂತಯಾಮಾಸ ಚಾತ್ಮನಾ ॥ ೩೪ ॥

---

೩೧. ಮದಯಂತಿಯು ಹೇಳುತ್ತಾಳೆ—ಕ್ಷತ್ರಿಯಬಂಧುವೇ ! ಕೋಪವನ್ನು ಬಿಡು. ನೀನು ಅವಶ್ಯವಾಗಿ ಅನುಭವಿಸಬೇಕಾದ ಕರ್ಮಫಲವೇ ಈಗ ಸಂಭವಿಸಿದೆ. ಸಂಶಯವಿಲ್ಲ.

೩೨. ಗುರುಗಳ ವಿಷಯದಲ್ಲಿ ತುಂಕಾರ ಹುಂಕಾರಗಳನ್ನು ಮಾಡಿ ಮಾತನಾಡುವ ಮೂಢ ಮನುಷ್ಯನು ಕಾಡಿನಲ್ಲಿ ನೀರಿಲ್ಲದ ಪ್ರದೇಶದಲ್ಲಿ ಬ್ರಹ್ಮರಾಕ್ಷಸನಾಗಿ ಹುಟ್ಟುವನು.

೩೩. ಇಂದ್ರಿಯವನ್ನು ಜಯಿಸಿ ಕ್ರೋಧವನ್ನು ಬಿಟ್ಟು, ಗುರುಸೇವಾಪರರಾಗಿರುವವರು ಬ್ರಹ್ಮಲೋಕಕ್ಕೆ ಹೋಗುತ್ತಾರೆ ಎಂಬುದು ಶಾಸ್ತ್ರಾರ್ಥ ನಿರ್ಣಯ.

೩೪. ಪತ್ನಿಯು ಹೇಳಿದ ಪ್ರಕಾರ ರಾಜನು ಕೋಪವನ್ನು ಬಿಟ್ಟು ಹೆಂಡತಿಯನ್ನು ಸಂತೋಷಪಡಿಸಿದನು. ತಾನು ಕೈಯಲ್ಲಿ ಹಿಡಿದಿದ್ದ ಉದಕವನ್ನು ಎಲ್ಲಿ ಹಾಕಲಿ ಎಂದು ತಾನೇ ಯೋಚಿಸಿದನು.

ತಜ್ಜಲಂ ಯತ್ರ ಸಂಸಿಕ್ತಂ ತದ್ಭವೇದ್ಭಸ್ಮ ನಿಶ್ಚಿತಂ ।
ಇತಿ ಮತ್ವಾ ಜಲಂ ತತ್ತು ಪಾದಯೋರ್ನ್ಯಕ್ಷಿಪತ್ಸ್ವಯಂ ॥ ೩೫ ॥

ತಜ್ಜಲಸ್ಪರ್ಶಮಾತ್ರೇಣ ಪಾದೌ ಕಲ್ಮಾಷತಾಂ ಗತೌ ।
ಕಲ್ಮಾಷಪಾದ ಇತ್ಯೇವಂ ತತಃ ಪ್ರಭೃತಿ ವಿಶ್ರುತಃ ॥ ೩೬ ॥

ಕಲ್ಮಾಷಪಾದೋ ಮತಿಮಾನ್ ಪ್ರಿಯಯಾऽಶ್ವಾಸಿತಸ್ತದಾ ।
ಮನಸಾ ಸೋऽತಿಭೀತಸ್ತು ವವಂದೇ ಚರಣಂ ಗುರೋಃ ॥ ೩೭ ॥

ಉವಾಚ ಚ ಪ್ರಸನ್ನಸ್ತಂ ಪ್ರಾಂಜಲಿರ್ನಯಕೋವಿದಃ ।
ಕ್ಷಮಸ್ವ ಭಗವನ್ ಸರ್ವಂ ನಾಪರಾಧಃ ಕೃತೋ ಮಯಾ ॥ ೩೮ ॥

---

೩೫. ಆ ನೀರು ಯಾವ ವಸ್ತುವಿನಮೇಲೆ ಬೀಳುತ್ತದೆಯೋ ಅದು ಖಂಡಿತವಾಗಿ ಬೂದಿಯಾಗುತ್ತದೆಂದು ತಿಳಿದು ಅದನ್ನು ತನ್ನ ಕಾಲಗಳಮೇಲೆ ಹಾಕಿಕೊಂಡನು.

೩೬. ಆ ನೀರಿನ ಸ್ಪರ್ಶವಾದ ಕೂಡಲೇ ರಾಜನ ಪಾದಗಳು ಚಿತ್ರ ವರ್ಣವನ್ನು ಹೊಂದಿದುವು. ಆಗಿನಿಂದ ಅವನು "ಕಲ್ಮಾಷಪಾದ" ಎಂದು (ಚಿತ್ರವರ್ಣದ ಕಾಲುಗಳುಳ್ಳವನು) ಎಂದು ವಿಖ್ಯಾತನಾದನು.

೩೭. ಆಗ ಹೆಂಡತಿಯಿಂದ ಸಮಾಧಾನಪಡಿಸಲ್ಪಟ್ಟ, ಬುದ್ಧಿವಂತನಾದ ಕಲ್ಮಾಷಪಾದನು ಮನಸ್ಸಿನಲ್ಲಿ ಅತ್ಯಂತ ಭಯವುಳ್ಳವನಾಗಿ ಗುರುಗಳ ಪಾದ ಗಳಿಗೆ ನಮಸ್ಕಾರಮಾಡಿದನು.

೩೮. ಮತ್ತು ನೀತಿನಿಪುಣನಾದ ಕಲ್ಮಾಷಪಾದನು ಗುರುವನ್ನು ಶರಣು ಹೊಂದಿ ಕೈಮುಗಿದು, ಪೂಜ್ಯರೇ ! ಸಕಲವನ್ನೂ ಕ್ಷಮಿಸಬೇಕು, ನಾನು ಸ್ವತಃ ತಪ್ಪನ್ನು ಮಾಡಲಿಲ್ಲ ಎಂಬುದಾಗಿ ಹೇಳಿದನು.

ತಚ್ಛ್ರುತ್ವೋವಾಚ ಭೂಪಾಲಂ ಮುನಿರ್ನಿಶ್ಶ್ವಸ್ಯ ದುಃಖಿತಃ ।
ಆತ್ಮಾನಂ ಗರ್ಹಯಾಮಾಸ ಹ್ಯವಿವೇಕಪರಾಯಣಂ ॥ ೩೯ ॥

ಅವಿವೇಕೋ ಹಿ ಸರ್ವಾಸಾಮಾಪದಾಂ ಪರಮಂ ಪದಂ ।
ವಿವೇಕರಹಿತೋ ಲೋಕೇ ಪಶುರೇವ ನ ಸಂಶಯಃ ॥ ೪೦ ॥

ರಾಜ್ಞಾತ್ವಜಾನತಾ ನೂನಮೇತತ್ಕರ್ಮೋಚಿತಂ ಕೃತಂ ।
ವಿವೇಕರಹಿತೋಽಜ್ಞೋಽಹಂ ಯತಃ ಪಾಪಂ ಸಮಾಚರಂ ॥ ೪೧ ॥

ವಿವೇಕಸಹಿತೋ ಯಾತಿ ಯೋ ವಾ ಕೋ ವಾಽಪಿ ನಿರ್ವೃತಿಂ ।
ವಿವೇಕರಹಿತೋ ಯಾತಿ ಯೋ ವಾ ಕೋ ವಾಽಪ್ಯನಿರ್ವೃತಿಂ ॥ ೪೨ ॥

ಇತ್ಯುಕ್ತ್ವಾ ಚಾತ್ಮನಾತ್ಮಾನಂ ಪ್ರತ್ಯುವಾಚ ಮುನಿರ್ನೃಪಂ ।
ನಾತ್ಯಂತಿಕಂ ಭವೇದೇತದ್ದ್ವಾದಶಾಬ್ದಂ ಭವಿಷ್ಯತಿ ॥ ೪೩ ॥

---

೩೯. ಅದನ್ನು ಕೇಳಿ ವಸಿಷ್ಠಮುನಿಯು ದುಃಖದಿಂದ ನಿಟ್ಟುಸಿರುಬಿಟ್ಟು ದೊರೆಯನ್ನು ಕುರಿತು ಮಾತನಾಡಿದನು. ಅವಿವೇಕಕಾರ್ಯದಲ್ಲಿ ತೊಡಗಿದ ತನ್ನನ್ನು ನಿಂದಿಸಿಕೊಂಡನು.

೪೦. ವಿವೇಕವಿಲ್ಲದಿರುವಿಕೆಯು ಸಕಲ ವಿಪತ್ತುಗಳಿಗೂ ಮುಖ್ಯಾಶ್ರಯವು. ಲೋಕದಲ್ಲಿ ವಿವೇಕವಿಲ್ಲದವನು ಪಶು ಸಮಾನನು ಸಂಶಯವಿಲ್ಲ.

೪೧. ರಾಜನಾದರೋ ತಿಳಿಯದೆ ರಾಕ್ಷಸನ ಮೋಸಕೃತ್ಯದಿಂದ ನನಗೆ ಅಭೋಜ್ಯವನ್ನು ಕೊಟ್ಟನು. ಅದು ನ್ಯಾಯವು. ಅಜ್ಞನಾದ ನಾನು ವಿವೇಕವಿಲ್ಲದೆ ಪ್ರತೀಕಾರಮಾಡಲು ಉದ್ಯುಕ್ತನಾಗಿ ಪಾಪಕೃತ್ಯವನ್ನು ಮಾಡಿದೆನು.

೪೨. ಯಾರೇ ಆಗಲಿ ವಿವೇಕವುಳ್ಳವನು ಸುಖಪಡುತ್ತಾನೆ. ವಿವೇಕವಿಲ್ಲದವನು ದುಃಖಭಾಗಿಯಾಗುತ್ತಾನೆ.

೪೩. ಈರೀತಿಯಾಗಿ ತನ್ನನ್ನೇ ತಾನು ನಿಂದಿಸಿಕೊಂಡು, ಎಲೈ ದೊರೆಯೇ ಈ ರಾಕ್ಷಸಜನ್ಮವು ನಿನಗೆ ಕೊನೆಯವರಿಗೂ ಇರುವುದಿಲ್ಲ. ಹನ್ನೆರಡು ವರ್ಷಗಳ ಕಾಲ ಮಾತ್ರ ಇರುತ್ತದೆ.

ಗಂಗಾಬಿಂದ್ವಭಿಷಿಕ್ತಸ್ತು ತ್ಯಕ್ತ್ವಾ ವೈ ರಾಕ್ಷಸೀಂ ತನುಂ ।
ಪೂರ್ವರೂಪಂ ತ್ವಮಾಪನ್ನೋ ಭೋಕ್ಷ್ಯಸೇ ಮೇದಿನೀಮಿಮಾಂ ॥ ೪೪ ॥

ತದ್ಬಿಂದುಸೇಕಸಂಭೂತಜ್ಞಾನೇನ ಗತಕಲ್ಮಷಃ ।
ಹರಿಸೇವಾಪರೋ ಭೂತ್ವಾ ಪರಾಂ ಶಾಂತಿಂ ಗಮಿಷ್ಯಸಿ ॥ ೪೫ ॥

ಇತ್ಯುಕ್ತ್ವಾಥರ್ವವಿದ್ಭೂಪಂ ವಸಿಷ್ಠಸ್ಸ್ವಾಶ್ರಮಂ ಯಯೌ ।
ರಾಜಾಪಿ ದುಃಖಸಂಪನ್ನೋ ರಾಕ್ಷಸೀಂ ತನುಮಾಶ್ರಿತಃ ॥ ೪೬ ॥

ಕ್ಷುತ್ಪಿಪಾಸಾವಿಶೇಷಾರ್ತೋ ನಿತ್ಯಂ ಕ್ರೋಧಪರಾಯಣಃ ।
ಕೃಷ್ಣಕ್ಷಪಾದ್ಯುತಿರ್ಭೀಮೋ ಬಭ್ರಾಮ ವಿಜನೇ ವನೇ ॥ ೪೭ ॥

ಮೃಗಾಂಶ್ಚ ವಿವಿಧಾಂಸ್ತತ್ರ ಮಾನುಷಾಂಶ್ಚ ಸರೀಸೃಪಾನ್ ।
ವಿಹಂಗಮಾನ್ ಪ್ಲವಂಗಾಂಶ್ಚ ಪ್ರಶಸ್ತಾಂಸ್ತಾನಭಕ್ಷಯುತ್ ॥ ೪೮ ॥

---

೪೪. ಬಳಿಕ ಗಂಗೋದಕಸೇಚನದಿಂದ ಈ ರಾಕ್ಷಸಜನ್ಮವು ನಿವೃತ್ತವಾಗಿ, ನಿನ್ನ ಹಿಂದಿನ ಶರೀರವು ಪ್ರಾಪ್ತವಾಗಿ, ಈ ರಾಜ್ಯವನ್ನನುಭವಿಸುವೆ.

೪೫. ಆ ಗಂಗೆಯ ಉದಕಪ್ರೋಕ್ಷಣೆಯಿಂದ ನಿನಗೆ ಪಾಪಪರಿಹಾರವಾಗಿ, ತತ್ವಜ್ಞಾನವು ಸಂಭವಿಸಿ, ವಿಷ್ಣುಸೇವಾತತ್ಪರನಾಗಿ ಮೋಕ್ಷವನ್ನು ಹೊಂದುವೆ.

೪೬. ಎಂದು ರಾಜನಿಗೆ ಹೇಳಿ ಅಥರ್ವವೇದಜ್ಞಾನಿಯಾದ ವಸಿಷ್ಠನು ತನ್ನ ಆಶ್ರಮಕ್ಕೆ ಹೋದನು. ರಾಜನೂ ಸಹ ದುಃಖಿತನಾಗಿ ರಾಕ್ಷಸಶರೀರವನ್ನು ತಾಳಿದನು.

೪೭. ಆ ರಾಕ್ಷಸನು ಹಸಿವು, ನೀರಡಿಕೆಗಳಿಂದ ಪೀಡಿತನಾಗಿ, ಯಾವಾಗಲೂ ಕೋಪನಿರತನಾಗಿ, ಕೃಷ್ಣಪಕ್ಷದ ರಾತ್ರಿಯ ರೂಪದಂತೆ ಭಯಂಕರಬಣ್ಣವುಳ್ಳವನಾಗಿ, ನಿರ್ಜನವಾದ ಕಾಡಿನಲ್ಲಿ ಸಂಚರಿಸುತ್ತಿದ್ದನು.

೪೮. ಆ ಕಾಡಿನಲ್ಲಿ ಅವನು ನಾನಾ ವಿಧವಾದ ಮೃಗಗಳನ್ನೂ, ಮನುಷ್ಯರು, ಹಾವು, ಪಕ್ಷಿಗಳು ಮತ್ತು ಉತ್ತಮವಾದ ಕಪಿ ಇವುಗಳನ್ನೂ ತಿನ್ನುತ್ತಿದ್ದನು.

ಅಸ್ಥಿಭಿರ್ಬಹುಭಿರ್ಭೂಯಃ ಪೀತರಕ್ತಕಲೇಬರೈಃ ।
ರಕ್ತಾಂತಪ್ರೇತಕೇಶೈಶ್ಚ ಚಿತ್ರಾಸೀದ್ಭೂರ್ಭಯಂಕರೀ ॥ ೪೯ ॥

ಋತುತ್ರಯೇ ಸ ಪೃಥಿವೀಂ ಶತಯೋಜನವಿಸ್ತೃತಾಂ ।
ಕೃತ್ವಾ ವಿದೂಷಿತಾಂ ಪಶ್ಚಾದ್ವನಾಂತರಮುಪಾಗಮತ್ ॥ ೫೦ ॥

ತತ್ರಾಪಿ ಕೃತವಾನ್ನಿತ್ಯಂ ನರಮಾಂಸಾಶನಂ ಸದಾ ।
ಜಗಾಮ ನರ್ಮದಾತೀರಂ ಮುನಿಸಿದ್ಧನಿಷೇವಿತಂ ॥ ೫೧ ॥

ವಿಚರನ್ನರ್ಮದಾತೀರೇ ಸರ್ವಲೋಕಭಯಂಕರಃ ।
ಅಪಶ್ಯತ್ಕಂಚನ ಮುನಿಂ ರಮಂತಂ ಪ್ರಿಯಯಾ ಸಹ ॥ ೫೨ ॥

ಕ್ಷುಧಾನಲೇನ ಸಂತಪ್ತಸ್ತಂ ಮುನಿಂ ಸಮುಪಾದ್ರವತ್ ।
ಜಗ್ರಾಹ ಚಾತಿವೇಗೇನ ವ್ಯಾಘ್ರೋ ಮೃಗಶಿಶುಂ ಯಥಾ ॥ ೫೩ ॥

---

೪೯. ಆ ಕಾಡಿನ ಭೂಭಾಗವು ಬಹಳ ಮೂಳೆಗಳು, ರಕ್ತವನ್ನು ಹೀರಿ ನಿಸ್ಸಾರವಾಗಿ ಮಾಡಲ್ಪಟ್ಟ ಶರೀರಗಳು, ರಕ್ತದಲ್ಲಿ ನೆನೆದ ಶವದ ಕೂದಲುಗಳು ಇವುಗಳಿಂದ ಚಿತ್ರಿತವಾಗಿ ಭಯಂಕರವಾಗಿದ್ದಿತು.

೫೦. ಅವನು ಆರು ತಿಂಗಳಕಾಲದಲ್ಲಿ ನೂರು ಗಾವುದ ವಿಸ್ತಾರವುಳ್ಳ ಭೂಮಿಯನ್ನು ಕಲುಷಿತವನ್ನಾಗಿ ಮಾಡಿ ಇನ್ನೊಂದು ವನಕ್ಕೆ ಹೊರಟನು.

೫೧. ಅಲ್ಲಿಯೂ ಸಹ ಯಾವಾಗಲೂ ನರಮಾಂಸ ಭೋಜನವನ್ನು ಮಾಡುತ್ತಿದ್ದನು. ಹಾಗೆಯೇ ಅವನು ಋಷಿಗಳು ಮತ್ತು ಸಿದ್ಧರಿಂದ ಸೇವಿಸಲ್ಪಡುತ್ತಿದ್ದ ನರ್ಮದಾನದಿಯ ತೀರಪ್ರದೇಶಕ್ಕೆ ಹೊರಟನು.

೫೨. ಸಕಲ ಲೋಕಕ್ಕೂ ಭಯಂಕರನಾದ ಆ ರಾಕ್ಷಸನು ನರ್ಮದಾ ನದಿಯ ದಡದಲ್ಲಿ ಸಂಚರಿಸುತ್ತಿರುವಾಗ ಹೆಂಡತಿಯೊಡನೆ ಸಂಭೋಗಮಾಡುತ್ತಿದ್ದ ಒಬ್ಬ ಮುನಿಯನ್ನು ನೋಡಿದನು.

೫೩. ಹಸಿವಿನಿಂದ ಬಳಲಿ ದುಃಖಿಸುತ್ತಿದ್ದ ಆ ರಾಕ್ಷಸನು ಆ ಮುನಿಯ ಹತ್ತಿರಕ್ಕೆ ಅತ್ಯಂತ ವೇಗದಿಂದ ಓಡಿಹೋಗಿ, ಬೇಡನು ಜಿಂಕೆಯಮರಿಯನ್ನು ಹಿಡಿಯುವಂತೆ ಅವನನ್ನು ಹಿಡಿದುಕೊಂಡನು.

**ಬ್ರಾಹ್ಮಣೀ ಸ್ವಪತಿಂ ವೀಕ್ಷ್ಯ ನಿಶಾಚರಕರಸ್ಥಿತಂ ।**
**ಶಿರಸ್ಯಂಜಲಿಮಾಧಾಯ ಪ್ರೋವಾಚ ಭಯವಿಹ್ವಲಾ ॥ ೫೪ ॥**

**ಬ್ರಾಹ್ಮಣ್ಯುವಾಚ**

**ಭೋ ಭೋ ನೃಪತಿಶಾರ್ದೂಲ ತ್ರಾಹಿ ಮಾಂ ಭಯವಿಹ್ವಲಾಂ ।**
**ಪ್ರಿಯಪ್ರಾಣಪ್ರದಾನೇನ ಕುರು ಪೂರ್ಣಂ ಮನೋರಥಂ ॥ ೫೫ ॥**

**ನಾಮ್ನಾ ಮಿತ್ರಸಹಸ್ತ್ವಂ ಹಿ ಸೂರ್ಯವಂಶಸಮುದ್ಭವಃ ।**
**ನ ರಾಕ್ಷಸಸ್ತತೋಽನಾಥಾಂ ಪಾಹಿ ಮಾಂ ವಿಜನೇ ವನೇ ॥ ೫೬ ॥**

**ಯಾ ನಾರೀ ಭರ್ತೃರಹಿತಾ ಜೀವತ್ಯಪಿ ಮೃತೋಪಮಾ ।**
**ತಥಾಪಿ ಬಾಲವೈಧವ್ಯಂ ಕಿಂ ವಕ್ಷ್ಯಾಮ್ಯರಿಮರ್ದನ ॥ ೫೭ ॥**

**ನ ಮಾತಾಪಿತರೌ ಜಾನೇ ನಾಪಿ ಬಂಧುಂ ಚ ಕಂಚನ ।**
**ಪತಿರೇವ ಪರೋ ಬಂಧುಃ ಪರಮಂ ಜೀವನಂ ಮಮ ॥ ೫೮ ॥**

---

೫೪. ಬ್ರಾಹ್ಮಣಪತ್ನಿಯು ರಾಕ್ಷಸನ ಕೈಗೆ ಸಿಕ್ಕಿದ ತನ್ನ ಗಂಡನನ್ನು ನೋಡಿ ಅತ್ಯಂತ ಭೀತಳಾಗಿ ತಲೆಯಮೇಲೆ ಕೈಜೋಡಿಸಿ ಮಾತನಾಡಿದಳು.

೫೫. ಬ್ರಾಹ್ಮಣಿಯು ಹೇಳುತ್ತಾಳೆ—ರಾಜಶ್ರೇಷ್ಠನೇ! ಭಯದಿಂದ ಪ್ರಾಣವನ್ನು ಕಳೆದುಕೊಂಡಂತಿರುವ ನನ್ನನ್ನು ರಕ್ಷಿಸು. ಗಂಡನನ್ನು ಸಂಹರಿಸದೆ ಬಿಟ್ಟು ನನ್ನ ಅಭೀಷ್ಟವನ್ನು ಪೂರ್ಣಗೊಳಿಸು.

೫೬. ನೀನು ಸೂರ್ಯವಂಶದಲ್ಲಿಹುಟ್ಟಿದ ಮಿತ್ರಸಹನೆಂಬ ರಾಜನು ರಾಕ್ಷಸನಲ್ಲ. ಆದುದರಿಂದ ಈ ಜನರಹಿತವಾದ ಕಾಡಿನಲ್ಲಿ ಅನಾಥಳಾಗಿರುವ ನನ್ನನ್ನು ರಕ್ಷಿಸು.

೫೭. ಗಂಡನಿಲ್ಲದ ಹೆಂಗಸು ಬದುಕಿದ್ದರೂ ಮೃತಪ್ರಾಯಳೇ ಸರಿ. ಶತ್ರುಸಂಹಾರಕನೇ ! ಬಾಲ್ಯದಲ್ಲಿಯೇ ಸಂಭವಿಸಿದ ವೈಧವ್ಯವನ್ನು ಏನೆಂದು ವರ್ಣಿಸಲಿ.

೫೮. ತಾಯಿತಂದೆಗಳನ್ನರಿಯೆ. ಓರ್ವ ಬಂಧುವನ್ನೂ ಕಾಣೆ. ನನಗೆ ಗಂಡನೇ ಉತ್ತಮ ಬಂಧುವು. ಅವನೇ ನನ್ನ ಜೀವನ.

ಭವಾನ್ವೇತ್ಯಖಿಲಾನ್ ಧರ್ಮಾನ್ಸ್ತ್ರೀಣಾಂ ವರ್ತನಂ ಯಥಾ ।
ತ್ರಾಯಸ್ವ ಬಂಧುರಹಿತಾಂ ಬಾಲಾಪತ್ಯಾಂ ಜನೇಶ್ವರ ॥ ೫೯ ॥

ಕಥಂ ಜೀವಾಮಿ ಪತ್ಯಾಸ್ಮಿನ್ ಹೀನಾ ಹಿ ವಿಜನೇ ವನೇ ।
ದುಹಿತ್ರಾಽಹಂ ಚ ಭವತಸ್ತ್ರಾಹಿ ಮಾಂ ಪತಿದಾನತಃ ॥ ೬೦ ॥

ಪ್ರಾಣದಾನಾತ್ಪರಂ ದಾನಂ ನ ಭೂತಂ ನ ಭವಿಷ್ಯತಿ ।
ವದಂತೀತಿ ಮಹಾಪ್ರಾಜ್ಞಾಃ ಪ್ರಾಣದಾನಂ ಕುರುಷ್ವ ಮೇ ॥ ೬೧ ॥

ಇತ್ಯುಕ್ತ್ವಾ ಸಾ ಪಪಾತಾಸ್ಯ ರಾಕ್ಷಸಸ್ಯ ಪದಾಗ್ರತಃ ।
ಏವಂ ಸಂಪ್ರಾರ್ಥ್ಯಮಾನೋಽಪಿ ಬ್ರಾಹ್ಮಣ್ಯಾ ರಾಕ್ಷಸೋ ದ್ವಿಜಂ ॥ ೬೨ ॥

ಅಭಕ್ಷಯತ್ತಪ್ತಸಾರಶಿಶುಂ ವ್ಯಾಘ್ರೋ ಯಥಾ ಬಲಾತ್ ।
ತತೋ ವಿಲಪ್ಯ ಬಹುಧಾ ತಸ್ಯ ಪತ್ನೀ ಪತಿವ್ರತಾ ॥ ೬೩ ॥

---

೫೯. ಜನಪತಿಯೇ! ನೀನು ಸಮಸ್ತಧರ್ಮಗಳನ್ನೂ, ಸ್ತ್ರೀಯರ ಸದ್ವೃತ್ತಗಳನ್ನೂ ತಿಳಿದಿರುವೆ. ಬಂಧುವಿರಹಿತಳಾದ ಚಿಕ್ಕಮಗನುಳ್ಳ ನನ್ನನ್ನು ಸಂರಕ್ಷಿಸು.

೬೦. ಈ ನಿರ್ಜನವಾದ ಕಾಡಿನಲ್ಲಿ ನಾನು ಪತಿಯಿಲ್ಲದೇ ಹೇಗೆ ಜೀವಿಸಲಿ? ನಾನು ನಿನ್ನ ಮಗಳಾಗಿದ್ದೇನೆ. ಪತಿಯನ್ನು ಉಳಿಸಿ ಕಾಪಾಡು.

೬೧. ಮಹಾಜ್ಞಾನಿಗಳು ಪ್ರಾಣದಾನಕ್ಕಿಂತ ಉತ್ತಮದಾನವು ಯಾವುದೂ ಯಾವಾಗಲೂ ಇಲ್ಲವೆಂದು ಹೇಳುತ್ತಾರೆ. ಆದುದರಿಂದ ನನಗೆ ಪ್ರಾಣದಾನಮಾಡು.

೬೨-೬೩. ಆಕೆಯು ಈರೀತಿಯಾಗಿ ಹೇಳಿ ರಾಕ್ಷಸನ ಕಾಲಿಗೆ ಬಿದ್ದಳು. ಈ ಪ್ರಕಾರ ಬಹುವಾಗಿ ಬ್ರಾಹ್ಮಣಪತ್ನಿಯಿಂದ ಪ್ರಾರ್ಥಿತನಾದಾಗ್ಯೂ ರಾಕ್ಷಸನು, ಹುಲಿಯು ಜಿಂಕೆಯುಮರಿಯನ್ನು ಬಲಾತ್ಕಾರದಿಂದ ತಿನ್ನುವಂತೆ ಬ್ರಾಹ್ಮಣನನ್ನು ತಿಂದನು.

ಪೂರ್ವಶಾಪಹತಂ ಭೂಪಮುಶಪತ್ಕ್ರೋಧಿತಾ ಪುನಃ ।
ಪತಿಂ ಮೇ ಸುರತಾಸಕ್ತಂ ಯಸ್ಮಾದ್ಧಿಂಸಿತವಾನ್ಬಲಾತ್ ॥ ೬೪ ॥

ತಸ್ಮಾತ್ ಸ್ತ್ರೀಸಂಗಮಂ ಪ್ರಾಪ್ತಸ್ತ್ವಮಪಿ ಪ್ರಾಪ್ಸ್ಯಸೇ ಮೃತಿಂ ।
ಶಪ್ತ್ವೈವಂ ಬ್ರಾಹ್ಮಣೀ ಕ್ರುದ್ಧಾ ಪುನಃ ಶಾಪಾಂತರಂ ದದೌ ॥ ೬೫ ॥

ರಾಕ್ಷಸತ್ವಂ ಧ್ರುವಂ ತೇಽಸ್ತು ಮತ್ಪತಿರ್ಭಕ್ಷಿತೋ ಯತಃ ।
ಸೋಽಪಿ ಶಾಪದ್ವಯಂ ಶ್ರುತ್ವಾ ತಯಾದತ್ತಂ ನಿಶಾಚರಃ ॥ ೬೬ ॥

ಪ್ರಮನ್ಯುಃ ಪ್ರಾಹ ವಿಸೃಜನ್ಕೋಪಾದಂಗಾರಸಂಚಯಂ ।
ದುಷ್ಟೇ ಕಸ್ಮಾತ್ಪ್ರದತ್ತಂ ಮೇ ವೃಥಾ ಶಾಪದ್ವಯಂ ತ್ವಯಾ ॥ ೬೭ ॥

ಏಕಸ್ಯೈವಾಪರಾಧಸ್ಯ ಶಾಪಸ್ತ್ವೇಕೋ ಮಮೋಚಿತಃ ।
ಯಸ್ಮಾಚ್ಛಪ್ತಾಸಿ ದುಷ್ಟಾಗ್ರೇ ಮಯಿ ಶಾಪಾಂತರಂ ತತಃ ॥ ೬೮ ॥

---

೬೪-೬೬. ತರುವಾಯ ಪತಿವ್ರತೆಯಾದ ಬ್ರಾಹ್ಮಣಪತ್ನಿಯು ಬಹು ಪ್ರಕಾರವಾಗಿ ರೋದನ ಮಾಡಿ, ಕೋಪಾವಿಷ್ಟಳಾಗಿ ಹಿಂದಿನ ಶಾಪದಿಂದ ದುಃಖವನ್ನು ಅನುಭವಿಸುತ್ತಿರುವ ರಾಜನಿಗೆ ನೀನು ನನ್ನ ಗಂಡನನ್ನು ಸಂಭೋಗ ಕಾಲದಲ್ಲಿ ಬಲಾತ್ಕಾರದಿಂದ ಹಿಂಸಿಸಿರುವೆಯಾದ ಕಾರಣ ನೀನೂ ಸಹ ಸ್ತ್ರೀ ಸಂಭೋಗವು ಪ್ರಾಪ್ತವಾದಾಗ ಸಾಯುವೆ ಎಂಬುದಾಗಿ ಪುನಃ ಶಾಪಕೊಟ್ಟಳು. ಈರೀತಿ ಶಾಪಕೊಟ್ಟ ಬ್ರಾಹ್ಮಣಸ್ತ್ರೀಯು ಇನ್ನೂ ಕುಪಿತಳಾಗಿ ನನ್ನ ಪತಿಯನ್ನು ನೀನು ಭಕ್ಷಣ ಮಾಡಿರುವುದರಿಂದ ಈಗ ನಿನಗೆ ಬಂದಿರುವ ರಾಕ್ಷಸಜನ್ಮವು ಶಾಶ್ವತವಾಗಿರಲಿ ಎಂಬುದಾಗಿ ಇನ್ನೊಂದು ಶಾಪವನ್ನು ಕೊಟ್ಟಳು.

೬೬-೭೦. ಆ ರಾಕ್ಷಸನು ಅವಳಿಂದ ಕೊಡಲ್ಪಟ್ಟ ಎರಡುಶಾಪಗಳನ್ನೂ ಕೇಳಿ ಕೋಪದಿಂದ ಬೆಂಕಿಯನ್ನು ಕಾರುತ್ತಾ, ಎಲೈ ದುಷ್ಟಳೇ ! ನನಗೆ ಏಕೆ ಕಾರಣವಿಲ್ಲದೆ ಎರಡು ಶಾಪಗಳನ್ನು ಕೊಟ್ಟಿರುತ್ತೀಯೆ ? ನಾನು ಮಾಡಿದ ತಪ್ಪು ಒಂದು. ಅದಕ್ಕೆ ಒಂದೇ ಶಾಪವು ನ್ಯಾಯವಾದದ್ದು. ನೀನು ಮೊದಲು ಒಂದು ಶಾಪವನ್ನು ಕೊಟ್ಟು ಪುನಃ ಮತ್ತೊಂದು ಶಾಪವನ್ನು ಕೊಟ್ಟಿರುವಿಯಾದಕಾರಣ

ಪಿಶಾಚಯೋನಿಮುದ್ಯೈವ ಯಾಹಿ ಪುತ್ರಸಮನ್ವಿತಾ ।
ತೇನೈವಂ ಬ್ರಾಹ್ಮಣೀ ಶಪ್ತಾ ಪಿಶಾಚತ್ವಂ ತದಾಗತಾ ॥ ೬೯ ॥

ಕ್ಷುಧಾರ್ತಾ ಸುಸ್ವರಂ ಭೀತಾ ರುರೋದಾಪತ್ಯಸಂಯುತಾ ।
ರಾಕ್ಷಸಶ್ಚ ಪಿಶಾಚೀ ಚ ಕ್ರೋಶಂತೌ ನಿರ್ಜನೇ ವನೇ ॥ ೭೦ ॥

ಜಗ್ಮತುರ್ನರ್ಮದಾತೀರೇ ವಟಂ ರಾಕ್ಷಸಸೇವಿತಂ ।
ಔದಾಸೀನ್ಯಂ ಗುರೌ ಕೃತ್ವಾ ರಾಕ್ಷಸೀಂ ತನುಮಾಶ್ರಿತಃ ॥ ೭೧ ॥

ತತ್ರಾಸ್ತೇ ದುಃಖಸಂತಪ್ತಃ ಕಶ್ಚಿಲ್ಲೋಕವಿರೋಧಕೃತ್ ।
ರಾಕ್ಷಸಂ ಚ ಪಿಶಾಚೀಂ ಚ ದೃಷ್ಟ್ವಾ ಸ್ವವಟಮಾಗತೌ ॥ ೭೨ ॥

ಉವಾಚ ಕ್ರೋಧಬಹುಳೋ ವಟಸ್ಥೋ ಬ್ರಹ್ಮರಾಕ್ಷಸಃ ।
ಕಿಮರ್ಥಮಾಗತೌ ಭೀಮೌ ಯುವಾಂ ಮತ್ಸ್ಥಾನಮೀಪ್ಸಿತಂ ॥ ೭೩ ॥

---

ಈಗಲೇ ನೀನು ಪುತ್ರಸಹಿತಳಾಗಿ ಪಿಶಾಚಯೋನಿಯಲ್ಲಿ ಜನ್ಮವನ್ನು ತಾಳು ಎಂಬುದಾಗಿ ಆಕೆಗೆ ಶಾಪಕೊಡಲು, ಆಗಲೇ ಬ್ರಾಹ್ಮಣಪತ್ನಿಯು ಪಿಶಾಚಜನ್ಮವನ್ನು ಹೊಂದಿ ಭೀತಳಾಗಿ ಮಗುವಿನೊಡನೆ ಹಸಿವಿನಿಂದ ಬಳಲಿ ಅಳುತ್ತಿದ್ದಳು.

೭೦–೭೧. ರಾಕ್ಷಸನು ಮತ್ತು ಪಿಶಾಚಿಯೂ ಸಹ ಜನರಹಿತವಾದ ಕಾಡಿನಲ್ಲಿ ಅರಚುತ್ತಾ, ನರ್ಮದಾತೀರದಲ್ಲಿ ಬ್ರಹ್ಮರಾಕ್ಷಸನಿಂದ ಆಶ್ರಯಿಸಲ್ಪಟ್ಟ ವಟವೃಕ್ಷದ ಸಮೀಪಕ್ಕೆ ಹೋದರು.

೭೧-೭೨. ಆ ವೃಕ್ಷದಲ್ಲಿ ಗುರುಗಳ ವಿಷಯದಲ್ಲಿ ಉದಾಸೀನಭಾವವನ್ನು ತೋರಿಸಿ, ಅದರ ಫಲವಾಗಿ ರಾಕ್ಷಸ ಜನ್ಮವನ್ನು ಹೊಂದಿರುವವನೊಬ್ಬನು ದುಃಖಪೀಡಿತನಾಗಿ ಲೋಕಕ್ಕೆ ಹಿಂಸಕನಾಗಿ ವಾಸಿಸುತ್ತಿದ್ದನು.

೭೨-೭೩. ವಟವೃಕ್ಷದಲ್ಲಿದ್ದ ಬ್ರಹ್ಮರಾಕ್ಷಸನು ಅಲ್ಲಿಗೆ ಬಂದ ರಾಕ್ಷಸ ಮತ್ತು ಪಿಶಾಚಿಗಳನ್ನು ನೋಡಿ, ಅತ್ಯಂತವಾಗಿ ಕೋಪಗೊಂಡು, ಎಲೈ ಭಯಂಕರಸ್ವರೂಪರೇ! ನೀವಿಬ್ಬರೂ ನನಗಭಿಮತವಾದ ಈ ಸ್ಥಳಕ್ಕೆ ಏತಕ್ಕೆ ಬಂದಿರಿ ? ಇಂತಹ ಜನ್ಮವು ನಿಮಗೆ ಬರಲು ಕಾರಣವೇನು ? ಅವುಗಳನ್ನೆಲ್ಲಾ

ಈದೃಶೌ ಕೇನ ಪಾಪೇನ ಜಾತೌ ನೋ ಬ್ರುವತಾಂ ಧ್ರುವಂ ।
ಸೌದಾಸಸ್ತದ್ವಚಃ ಶ್ರುತ್ವಾ ತಯಾ ಯಚ್ಚಾತ್ಮನಾಕೃತಂ ॥ ೭೪ ॥

ಸರ್ವಂ ನಿವೇದಯಿತ್ವಾಸ್ಮೈ ಪಶ್ಚಾದೇತದುವಾಚ ಹ ।

ಸೌದಾಸ ಉವಾಚ

ಕಸ್ತ್ವಂ ವದ ಮಹಾಭಾಗ ತ್ವಯಾ ನ್ವೈ ಕಿಂ ಕೃತಂ ಪುರಾ ।
ಸಖ್ಯುರ್ಮಮಾತಿಸ್ನೇಹೇನ ತತ್ಸರ್ವಂ ವಕ್ತುಮರ್ಹಸಿ ॥ ೭೫ ॥

ಕರೋತಿ ವಂಚನಂ ಮಿತ್ರೇ ಯೋ ವಾ ಕೋ ವಾsಪಿ ದುಷ್ಟಧೀಃ ॥ ೭೬ ॥

ಸ ಹಿ ಪಾಪಫಲಂ ಭುಂಕ್ತೇ ಯುಗಾನಾಂ ಕೋಟಿಕೋಟಿಷು ।
ಜಂತೂನಾಂ ಸರ್ವದುಃಖಾನಿ ಕ್ಷೀಯಂತೇ ಮಿತ್ರದರ್ಶನಾತ್ ॥ ೭೭ ॥

ತಸ್ಮಾನ್ಮಿತ್ರೇಷು ಮತಿಮಾನ್ನ ಕುರ್ಯಾದ್ವಂಚನಂ ಕದಾ ।
ಕಲ್ಮಾಷಪಾದೇನೇತ್ಯುಕ್ತೋ ವಟಸ್ಥೋ ಬ್ರಹ್ಮರಾಕ್ಷಸಃ ॥ ೭೮ ॥

---

ನಿಜವಾಗಿ ಹೇಳಿರೆಂದನು: ಸುದಾಸಪುತ್ರನು ಆ ಬ್ರಹ್ಮರಾಕ್ಷಸನ ಮಾತನ್ನು ಕೇಳಿ ತಾನು ಮತ್ತು ಆ ಬ್ರಾಹ್ಮಣಪತ್ನಿಯೂ ಸಹ ಮಾಡಿದ ಕೃತ್ಯಗಳನ್ನೆಲ್ಲಾ ಅವನಿಗೆ ಹೇಳಿ, ಅನಂತರ ಮುಂದೆ ಹೇಳುವ ಪ್ರಕಾರ ಮಾತನಾಡಿದನು.

೭೫-೭೯. ಸೌದಾಸನು ಮಾತನಾಡುತ್ತಾನೆ—ಮಹಾಶಯನೇ ! ನೀನು ಯಾರು ? ನೀನು ಪೂರ್ವದಲ್ಲಿ ಏನನ್ನು ಮಾಡಿ ಈ ಜನ್ಮವನ್ನು ಹೊಂದಿರುವೆ ? ಅವೆಲ್ಲವನ್ನೂ ಮಿತ್ರನಾದ ನನಗೆ ಅಭಿಮಾನದಿಂದ ಹೇಳು. ಯಾವ ದುಷ್ಟ ಬುದ್ಧಿಯೇ ಆಗಲಿ ಸ್ನೇಹಿತನಲ್ಲಿ ಮೋಸಮಾಡಿದುದೇ ಆದರೆ ಅಂತಹವನು ಮಹಾಪಾಪಿಯಾಗಿ ಕೋಟ್ಯಂತರ ಯುಗಗಳ ಕಾಲ ಅದರ ಫಲವನ್ನು ಅನು ಭವಿಸುತ್ತಾನೆ. ಪ್ರಾಣಿಗಳಿಗೆ ಸ್ನೇಹಿತರ ದರ್ಶನಮಾತ್ರದಿಂದ ಸಕಲದುಃಖ ಗಳೂ ನಾಶವಾಗುತ್ತವೆ. ಆದುದರಿಂದ ಯಾವಾಗಲೂ ಸ್ನೇಹಿತರಿಗೆ ಮೋಸ

ಉವಾಚ ಪ್ರೀತಿಮಾಪನ್ನೋ ಧರ್ಮವಾಕ್ಯಾನಿ ನಾರದ ।

ಬ್ರಹ್ಮರಾಕ್ಷಸ ಉವಾಚ

ಅಹಮಾಸಂ ಪುರಾ ವಿಪ್ರೋ ಮಾಗಧೋ ವೇದಪಾರಗಃ ॥ ೭೯ ॥

ಸೋಮದತ್ತ ಇತಿ ಖ್ಯಾತೋ ನಾಮ್ನಾ ಧರ್ಮಪರಾಯಣಃ ।
ಪ್ರಮತ್ತೋಽಹಂ ಮಹಾಭಾಗ ವಿದ್ಯಯಾ ವಯಸಾ ಧನೈಃ ॥ ೮೦ ॥

ಔದಾಸೀನ್ಯಂ ಗುರೋಃ ಕೃತ್ವಾ ಪ್ರಾಪ್ತವಾನೀದೃಶೀಂ ಗತಿಂ ।
ನ ಲಭೇಽಹಂ ಸುಖಂ ಕಿಂಚಿನ್ನಿರಾಹಾರೋಽತಿದುಃಖಿತಃ ॥ ೮೧ ॥

ಮಯಾ ತು ಭಕ್ಷಿತಾ ವಿಪ್ರಾಃ ಶತಶೋಽಥ ಸಹಸ್ರಶಃ ।
ಕ್ಷುತ್ಪಿಪಾಸಾಪರೋ ನಿತ್ಯಮಂತಸ್ತಾಪೇನ ಪೀಡಿತಃ ॥ ೮೨ ॥

---

ಮಾಡಬಾರದು ಎಂದು ಕಲ್ಮಾಷಪಾದನು ಹೇಳಲು ವಟವೃಕ್ಷದಲ್ಲಿದ್ದ ಬ್ರಹ್ಮರಾಕ್ಷಸನು ಸಂತುಷ್ಟನಾಗಿ ಧರ್ಮವಚನಗಳನ್ನು ನುಡಿದನು.

೭೯-೮೧. ಬ್ರಹ್ಮರಾಕ್ಷಸನು ಹೇಳಿದನು—ಪೂರ್ವದಲ್ಲಿ ನಾನು ಮಗಧ ದೇಶದಲ್ಲಿ ಸೋಮದತ್ತನೆಂಬ ಹೆಸರಿನಿಂದ ವಿಖ್ಯಾತನಾಗಿ, ಧಾರ್ಮಿಕನು ಮತ್ತು ವೇದಾಧ್ಯಯನಪಾರಂಗತನೂ ಆದ ಬ್ರಾಹ್ಮಣನಾಗಿದ್ದೆನು. ಮಹಾಶಯನೇ! ನಾನು ವಿದ್ಯೆ, ವಯಸ್ಸು, ಐಶ್ವರ್ಯ ಇವುಗಳಿಂದ ಉನ್ಮತ್ತನಾಗಿ ಗುರುಗಳ ವಿಷಯದಲ್ಲಿ ಉದಾಸೀನಭಾವವನ್ನು ತೋರಿಸಿದುದರಿಂದ ಇಂತಹ ಅವಸ್ಥೆಗೆ ಗುರಿಯಾದೆನು. ನನಗೆ ತಕ್ಕಷ್ಟು ಆಹಾರವಿಲ್ಲದೇ ಅತ್ಯಂತ ದುಃಖವುಂಟಾಗಿ ಸ್ವಲ್ಪವೂ ಸುಖವು ಲಭಿಸಲಿಲ್ಲ.

೮೨. ತರುವಾಯ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಯಾವಾಗಲೂ ಒಳಗಿನ ತಾಪದಿಂದ ಬಾಧಿಸಲ್ಪಡುತ್ತಾ ನೂರು, ಸಾವಿರಾರು ಬ್ರಾಹ್ಮಣರನ್ನು ನಾನು ತಿಂದಿರುವೆನು.

**ಜಗತ್ತ್ರಾಸಕರೋ ನಿತ್ಯಂ ಮಾಂಸಾಶನಪರಾಯಣಃ ।**
**ಗುರ್ವವಜ್ಞಾ ಮನುಷ್ಯಾಣಾಂ ರಾಕ್ಷಸತ್ವಪ್ರದಾಯಿನೀ ॥ ೮೩ ॥**

**ಮಯಾನುಭೂತಮೇತದ್ಧಿ ತತೋ ಧೀಮಾನ್ನ ಚಾಚರೇತ್ ।**

**ಕಲ್ಮಾಷಪಾದ ಉವಾಚ**

**ಗುರುಸ್ತು ಕೀದೃಶಃ ಪ್ರೋಕ್ತಃ ಕಸ್ತ್ವಯಾ ಶ್ಲಾಘಿತಃ ಪುರಾ ॥ ೮೪ ॥**

**ತದ್ವದಸ್ವ ಸಖೇ ಸರ್ವಂ ಪರಂ ಕೌತೂಹಲಂ ಹಿ ಮೇ ।**

**ಬ್ರಹ್ಮರಾಕ್ಷಸ ಉವಾಚ**

**ಗುರವಃ ಸಂತಿ ಬಹವಃ ಪೂಜ್ಯಾ ವಂದ್ಯಾಶ್ಚ ಸಾದರಂ ॥ ೮೫ ॥**

**ತಾನಹಂ ಕಥಯಿಷ್ಯಾಮಿ ಶೃಣುಷ್ವೈಕಮನಾಃ ಸಖೇ ।**
**ಅಧ್ಯಾಪಕಶ್ಚ ವೇದಾನಾಂ ವೇದಾರ್ಥಾನಾಂ ಚ ಬೋಧಕಃ ॥ ೮೬ ॥**

---

೮೩. ಸರ್ವದಾ ಜಗತ್ತಿಗೆ ತೊಂದರೆ ಕೊಡುತ್ತಾ, ಮಾಂಸಭಕ್ಷಣ ತತ್ಪರನಾದೆನು. ಗುರುಗಳ ವಿಷಯದಲ್ಲಿ ಮಾಡುವ ತಿರಸ್ಕಾರವು ಮನುಜರಿಗೆ ರಾಕ್ಷಸಜನ್ಮವನ್ನು ಕೊಡುತ್ತದೆ.

೮೪-೮೫. ಇದು ನನಗೆ ಅನುಭವಸಿದ್ಧವಾದುದು. ಆದಕಾರಣ ಬುದ್ಧಿವಂತನಾದವನು ಇಂತಹ ಅಕಾರ್ಯಗಳನ್ನು ಮಾಡಬಾರದು ಎಂಬುದಾಗಿ ಬ್ರಹ್ಮರಾಕ್ಷಸನು ಹೇಳಿದನು. ಕಲ್ಮಷಾಪಾದನು ಕೇಳಿದನು—ನೀನು ಇದುವರೆಗೆ ಸ್ತೋತ್ರಮಾಡಿದ ಗುರುವು ಎಂತಹವನು ? ಸ್ನೇಹಿತನೇ ! ಅದೆಲ್ಲವನ್ನೂ ಕೇಳಬೇಕೆಂದು ನನಗೆ ಬಹಳ ಕುತೂಹಲವುಂಟಾಗಿದೆ. ಆದುದರಿಂದ ಆ ವೃತ್ತಾಂತವನ್ನು ನನಗೋಸ್ಕರ ಹೇಳೆಂದನು. ಬ್ರಹ್ಮರಾಕ್ಷಸನು ಮಾತನಾಡಿದನು—ಎಲೈ ಸ್ನೇಹಿತನೇ ! ಪೂಜನೀಯರು ಮತ್ತು ವಂದನೀಯರೂ ಆದ ಗುರುಗಳು ಬಹಳವಾಗಿದ್ದಾರೆ.

೮೬-೮೯. ಅವರನ್ನು ವಿವರಿಸುತ್ತೇನೆ. ವಿಶ್ವಾಸದಿಂದ ಏಕಾಗ್ರಚಿತ್ತನಾಗಿ ಕೇಳು. ವೇದಾಧ್ಯಾಪಕನು, ವೇದಗಳಿಗೆ ಅರ್ಥವನ್ನು ಬೋಧಿಸುವವನು,

ಶಾಸ್ತ್ರವಕ್ತಾ ಧರ್ಮವಕ್ತಾ ನೀತಿಶಾಸ್ತ್ರೋಪದೇಶಕಃ ।
ಮಂತ್ರೋಪದೇಶವ್ಯಾಖ್ಯಾಕೃದ್ವೇದಸಂದೇಹಹೃತ್ತಥಾ ॥ ೮೭ ॥

ವ್ರತೋಪದೇಶಕಶ್ಚೈವ ಭಯತ್ರಾತಾನ್ನದೋ ಹಿ ಚ ।
ಶ್ವಶುರೋ ಮಾತುಲಶ್ಚೈವ ಜ್ಯೇಷ್ಠಭ್ರಾತಾ ಪಿತಾ ತಥಾ ॥ ೮೮ ॥

ಉಪನೇತಾ ನಿಷೇಕ್ತಾ ಚ ಸಂಸ್ಕರ್ತಾ ಮಿತ್ರಸತ್ತಮ ।
ಏತೇ ಹಿ ಗುರವಃ ಪ್ರೋಕ್ತಾ ಪೂಜ್ಯಾ ವಂದ್ಯಾಶ್ಚ ಸಾದರಂ ॥ ೮೯ ॥

ಕಲ್ಮಾಷಪಾದ ಉವಾಚ

ಗುರವೋ ಬಹವಃ ಪ್ರೋಕ್ತಾ ಏತೇಷಾಂ ಕತಮೋ ವರಃ ।
ತುಲ್ಯಾಃ ಸರ್ವೇಽಪ್ಯುತ ಸಖೇ ತದ್ಯಥಾವದ್ಧಿ ಬ್ರೂಹಿ ಮೇ ॥ ೯೦ ॥

---

ಶಾಸ್ತ್ರಪಾಠ ಹೇಳುವವನು, ಧರ್ಮಬೋಧಕನು, ನೀತಿಶಾಸ್ತ್ರವನ್ನುಪದೇಶಿಸುವವನು, ಮಂತ್ರಗಳನ್ನುಪದೇಶಿಸುವವನು, ವ್ಯಾಖ್ಯಾನಗಳನ್ನು ರಚಿಸುವವನು, ವೇದಪಾಠ, ಅರ್ಥ ಮುಂತಾದುವುಗಳಲ್ಲಿ ಪ್ರಾಪ್ತವಾದ ಸಂಶಯಗಳನ್ನು ಪರಿಹರಿಸುವವನು, ಸದ್ವ್ರತಗಳನ್ನು ಬೋಧಿಸುವವನು, ಭಯದಿಂದ ರಕ್ಷಿಸಿದವನು, ಅನ್ನದಾನಮಾಡಿದವನು, ಹೆಣ್ಣುಕೊಟ್ಟಮಾವ, ಸೋದರಮಾವ, ಅಣ್ಣ, ತಂದೆ, ಉಪನಯನಮಾಡಿದವನು, ನಿಷೇಕಮಾಡಿಸಿದವನು, ಜಾತಕರ್ಮಾದಿ ಸಂಸ್ಕಾರಮಾಡಿಸಿದವನು, ಇವರೆಲ್ಲರೂ ಗುರುಗಳೆಂದು ಹೇಳಲ್ಪಟ್ಟಿದೆ. ಇವರೆಲ್ಲರೂ ಭಕ್ತಿಯಿಂದ ಪೂಜೆ ಮತ್ತುನಮುಸ್ಕಾರಗಳನ್ನು ಮಾಡಿಸಿಕೊಳ್ಳಲು ಅರ್ಹರು ಎಂಬುದಾಗಿ ಬ್ರಹ್ಮರಾಕ್ಷಸನುಹೇಳಿದನು.

೯೦. ಕಲ್ಮಾಷಪಾದನು ಹೇಳುತ್ತಾನೆ—ಸ್ನೇಹಿತನೇ! ಬಹು ಗುರುಗಳೆಂದು ಹೇಳಿದಿ, ಇವರುಗಳಲ್ಲಿ ಯಾರು ಶ್ರೇಷ್ಠರು? ಅಥವಾ ಎಲ್ಲರೂ ಸಮಾನರೇ? ನನಗೆ ಅದನ್ನು ನಿಜವಾಗಿ ತಿಳಿಸು ಎಂಬುದಾಗಿ ಕಲ್ಮಾಷಪಾದನು ಕೇಳಿದನು.

ಬ್ರಹ್ಮರಾಕ್ಷಸ ಉವಾಚ

**ಸಾಧು ಸಾಧು ಮಹಾಪ್ರಾಜ್ಞ ಯತ್ಪೃಷ್ಟಂ ತದ್ವದಾಮಿ ತೇ ।**
**ಗುರುಮಾಹಾತ್ಮ್ಯಕಥನಂ ಶ್ರವಣಂ ಚಾನುಮೋದನಂ ॥ ೯೧ ॥**

**ಸರ್ವೇಷಾಂ ಶ್ರೇಯ ಆಧತ್ತೇ ತಸ್ಮಾದ್ವಕ್ಷ್ಯಾಮಿ ಸಾಂಪ್ರತಂ ।**
**ಏತೇ ಸನ್ಮಾನಪೂಜಾರ್ಹಾಃ ಸರ್ವದಾ ನಾತ್ರ ಸಂಶಯಃ ॥ ೯೨ ॥**

**ತಥಾಪಿ ಶೃಣು ವಕ್ಷ್ಯಾಮಿ ಶಾಸ್ತ್ರಾಣಾಂ ಸಾರನಿಶ್ಚಯಂ ।**
**ಅಧ್ಯಾಪಕಾಶ್ಚ ವೇದಾನಾಂ ಮಂತ್ರವ್ಯಾಖ್ಯಾಕೃತಸ್ತಥಾ ॥ ೯೩ ॥**

**ಪಿತಾ ಚ ಧರ್ಮವಕ್ತಾ ಚ ವಿಶೇಷಗುರವಃ ಸ್ಮೃತಾಃ ।**
**ಏತೇಷಾಮಪಿ ಭೂಪಾಲ ಶೃಣುಷ್ವ ಪ್ರವರಂ ಗುರುಂ ॥ ೯೪ ॥**

**ಸರ್ವಶಾಸ್ತ್ರಾರ್ಥತತ್ವಜ್ಞೈರ್ಭಾಷಿತಂ ಪ್ರವದಾಮಿ ತೇ ।**
**ಯಃ ಪುರಾಣಾನಿ ವದತಿ ಧರ್ಮಯುಕ್ತಾನಿ ಪಂಡಿತಃ ॥ ೯೫ ॥**

---

೯೧-೯೩. ಬ್ರಹ್ಮರಾಕ್ಷಸನು ಹೇಳಿದನು—ಮಹಾಜ್ಞಾನಿಯೇ ! ಒಳ್ಳೆಯದು. ನೀನು ಕೇಳಿರುವುದನ್ನು ಹೇಳುತ್ತೇನೆ. ಗುರುಗಳ ಮಹಿಮೆಯನ್ನು ವರ್ಣಿಸುವುದು, ಕೇಳುವುದು, ಅನುಮೋದಿಸುವುದು ಇವುಗಳೆಲ್ಲವೂ ಸಕಲರಿಗೂ ಶ್ರೇಯಸ್ಕರವಾದುದು. ಆದುದರಿಂದ ಹೇಳುತ್ತೇನೆ. ಯಾವಾಗಲೂ ಈ ಗುರುಗಳೆಲ್ಲರೂ ಸನ್ಮಾನ, ಪೂಜೆಗಳಿಗೆ ಅರ್ಹರು ಸಂಶಯವಿಲ್ಲ. ಆದಾಗ್ಯೂ ಶಾಸ್ತ್ರಗಳಲ್ಲಿ ನಿರ್ಣಯಿಸಿರುವ ಪ್ರಕಾರ ಸಾರವಾದುದನ್ನು ಹೇಳುತ್ತೇನೆ ಕೇಳು.

೯೩-೯೪. ವೇದಗಳ ಅಧ್ಯಾಪಕರು, ಮಂತ್ರಗಳಿಗೆ ವ್ಯಾಖ್ಯಾನಮಾಡಿರುವವರು, ತಂದೆ, ಮತ್ತು ಧರ್ಮೋಪದೇಶಕರು ಇವರುಗಳು ವಿಶೇಷಗುರುಗಳೆಂದು ಹೇಳಲ್ಪಟ್ಟಿದೆ.

೯೪-೯೮. ದೊರೆಯೇ ! ಸಕಲ ಶಾಸ್ತ್ರಾರ್ಥ ತತ್ವಜ್ಞಾನಿಗಳಿಂದ ಹೇಳಲ್ಪಟ್ಟಿರುವ, ಮೇಲೆ ಹೇಳಿದ ವಿಶೇಷಗುರುಗಳಲ್ಲಿಯೂ ಅತ್ಯಂತ ಶ್ರೇಷ್ಠನಾದ ಗುರುವನ್ನು ನಿನಗೆ ತಿಳಿಸುತ್ತೇನೆ, ಕೇಳು. ಸಂಸಾರವೆಂಬ ಬಂಧನವನ್ನು

**ಸಂಸಾರಪಾಶವಿಚ್ಛೇದಕಾರಣಾನಿ ಸ ಉತ್ತಮಃ ।**
**ದೇವಪೂಜಾರ್ಹಕರ್ಮಾಣಿ ದೇವತಾಪೂಜನೇ ಫಲಂ ॥ ೯೬ ॥**

**ಜಾಯತೇ ಚ ಪುರಾಣೇಭ್ಯಸ್ತಸ್ಮಾತ್ತಾನೀಹ ದೇವತಾಃ ।**
**ಸರ್ವವೇದಾರ್ಥಸಾರಾಣಿ ಪುರಾಣಾನೀತಿ ಭೂಪತೇ ॥ ೯೭ ॥**

**ವದಂತಿ ಮುನಯಶ್ಚೈವ ತದ್ವಕ್ತಾ ಪರಮೋ ಗುರುಃ ।**
**ಯಶ್ಚ ಸಂಸಾರಾರ್ಣವಂ ತರ್ತುಮುದ್ಯೋಗಂ ಕುರುತೇ ನರಃ ॥ ೯೮ ॥**

**ಶ್ರೃಣುಯಾತ್ಸ ಪುರಾಣಾನಿ ಇತಿ ಶಾಸ್ತ್ರವಿಭಾಗಕೃತ್ ।**
**ಪ್ರೋಕ್ತವಾನ್ ಸರ್ವಧರ್ಮಾಂಶ್ಚ ಪುರಾಣೇಷು ಮಹೀಪತೇ ॥ ೯೯ ॥**

**ತರ್ಕಸ್ತು ವಾದಹೇತುಃ ಸ್ಯಾನ್ನೀತಿಸ್ತ್ವೈಹಿಕಸಾಧನಂ ।**
**ಪುರಾಣಾನಿ ಮಹಾಬುದ್ಧೇ ಇಹಾಮುತ್ರ ಸುಖಾಯ ಹಿ ॥ ೧೦೦ ॥**

---

ನಾಶಪಡಿಸಲು ಕಾರಣಗಳು, ಧರ್ಮವನ್ನು ಬೋಧಿಸುವುವೂ ಆಗಿರುವ ಪುರಾಣಗಳನ್ನು ಹೇಳುವ ವಿದ್ವಾಂಸನು ಶ್ರೇಷ್ಠಗುರುವು. ದೇವರ ಪೂಜೆಗೆ ಅಂಗವಾದ ಕರ್ಮಗಳು, ದೇವತಾಪೂಜೆಯ ವಿಧಾನ, ಅದರ ಫಲ, ಇವುಗಳೆಲ್ಲವೂ ಪುರಾಣಗಳಿಂದಲೇ ತಿಳಿಯುಬರುತ್ತವೆಯಾದಕಾರಣ, ಈ ಲೋಕದಲ್ಲಿ ಈ ಪುರಾಣಗಳೇ ದೇವತೆಗಳು. ರಾಜನೇ ! ಪುರಾಣಗಳು ಸಕಲ ವೇದಾರ್ಥಗಳಲ್ಲಿಯೂ ಸಾರಭೂತವಾದುದನ್ನು ನಿರೂಪಿಸುತ್ತವೆಂದು ಮುನಿಗಳು ಹೇಳುತ್ತಾರೆ. ಆದಕಾರಣ ಪುರಾಣ ಹೇಳುವವರು ಶ್ರೇಷ್ಠ ಗುರುಗಳು.

೯೮–೯೯. ದೊರೆಯೇ ! ಸಂಸಾರವೆಂಬ ಸಮುದ್ರವನ್ನು ದಾಟಲು ಪ್ರಯತ್ನಮಾಡುವ ಮನುಷ್ಯನು ಪುರಾಣಗಳನ್ನು ಶ್ರವಣಮಾಡಬೇಕೆಂಬುದಾಗಿ ವೇದವಿಭಾಗಮಾಡಿದ ವೇದವ್ಯಾಸರು ಪುರಾಣಗಳಲ್ಲಿ ಸಕಲಧರ್ಮಗಳನ್ನೂ ನಿರೂಪಿಸಿದ್ದಾರೆ.

೧೦೦. ಮಹಾಬುದ್ಧಿಯೇ ! ತರ್ಕಶಾಸ್ತ್ರವು ವಾದಮಾಡುವ ಸಾಮರ್ಥ್ಯವನ್ನು ಕೊಡುತ್ತದೆ. ನೀತಿಶಾಸ್ತ್ರವು ಐಹಿಕಸುಖವನ್ನು ಹೊಂದುವ ಉಪಾಯವನ್ನು ಬೋಧಿಸುತ್ತದೆ. ಪುರಾಣಗಳಾದರೋ ಈಲೋಕ ಪರಲೋಕಗಳೆರಡರಲ್ಲಿಯೂ ಸುಖಹೊಂದಲು ಸಾಧನವನ್ನುಪದೇಶಿಸುತ್ತದೆ.

ಯಶ್ಶೃಣೋತಿ ಪುರಾಣಾನಿ ಸತತಂ ಭಕ್ತಿಸಂಯುತಃ ।
ತಸ್ಯ ಸ್ಯಾನ್ನಿರ್ಮಲಾ ಬುದ್ಧಿಃ ಭೂಯೋ ಧರ್ಮಪರಾಯಣಃ ॥ ೧೦೧ ॥
ಪುರಾಣಶ್ರವಣಾದ್ಭಕ್ತಿರ್ಜಾಯತೇ ಶ್ರೀಪತೌ ಶುಭಾ ।
ವಿಷ್ಣುಭಕ್ತನೃಣಾಂ ಭೂಪ ಧರ್ಮೇ ಬುದ್ಧಿಃ ಪ್ರವರ್ತತೇ ॥ ೧೦೨ ॥
ಧರ್ಮಾತ್ಪಾಪಾನಿ ನಶ್ಯಂತಿ ಜ್ಞಾನಂ ಶುದ್ಧಂ ಚ ಜಾಯತೇ ।
ಧರ್ಮಾರ್ಥಕಾಮಮೋಕ್ಷಾಣಾಂ ಯೇ ಫಲಾನ್ಯಭಿಲಿಪ್ಸವಃ ॥ ೧೦೩ ॥
ಶೃಣುಯುಸ್ತೇ ಪುರಾಣಾನಿ ಪ್ರಾಹುರಿತ್ಥಂ ನ ಸಂಶಯಃ ।
ಅಹಂ ತು ಗೌತಮಮುನೇಃ ಸರ್ವಜ್ಞಾದ್ಬ್ರಹ್ಮವಾದಿನಃ ॥ ೧೦೪ ॥
ಶ್ರುತವಾನ್ ಸರ್ವಧರ್ಮಾಂಶ್ಚ ಗಂಗಾತೀರೇ ಮನೋರಮೇ ।
ಕದಾಚಿತ್ಪರಮೇಶಸ್ಯ ಪೂಜಾಂ ಕರ್ತುಮಹಂ ಗತಃ ॥ ೧೦೫ ॥

---

೧೦೧. ಯಾವಾಗಲೂ ಭಕ್ತಿಯಿಂದ ಪುರಾಣಶ್ರವಣಮಾಡುವವನು ಅಧಿಕವಾಗಿ ಧರ್ಮಾನುಷ್ಠಾನತತ್ಪರನಾಗಿ, ನಿರ್ಮಲವಾದ ಜ್ಞಾನವನ್ನು ಹೊಂದುತ್ತಾನೆ.

೧೦೨. ದೊರೆಯೇ ! ಪುರಾಣಶ್ರವಣದಿಂದ ಲಕ್ಷ್ಮೀಪತಿಯಾದ ನಾರಾಯಣನಲ್ಲಿ ಶ್ರೇಯಸ್ಕರವಾದ ಭಕ್ತಿಯುಂಟಾಗುತ್ತದೆ. ವಿಷ್ಣುಭಕ್ತರಾದ ಮನುಜರಿಗೆ ಧಾರ್ಮಿಕ ವಿಷಯಗಳಲ್ಲಿಯೇ ಬುದ್ಧಿಯು ಪ್ರವರ್ತಿಸುತ್ತದೆ.

೧೦೩-೧೦೪. ಧರ್ಮಾನುಷ್ಠಾನದಿಂದ ಪಾಪನಾಶವೂ, ಪರಿಶುದ್ಧವಾದ ಜ್ಞಾನವೂ ಸಹ ಉಂಟಾಗುತ್ತದೆ. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಬಯಸುವವರು ಪುರಾಣಗಳನ್ನು ಅವಶ್ಯವಾಗಿ ಶ್ರವಣಮಾಡಬೇಕು ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ, ಸಂಶಯವಿಲ್ಲ.

೧೦೪–೧೦೫. ನಾನಾದರೋ ಸರ್ವಜ್ಞರು ಮತ್ತು ಬ್ರಹ್ಮೋಪದೇಶಕರೂ ಆದ ಗೌತಮಮುನಿಗಳಿಂದ ಸಕಲ ಧರ್ಮಗಳನ್ನೂ ಕೇಳಿ ತಿಳಿದಿದ್ದೇನೆ. ಒಂದುದಿನ ಮನೋಹರವಾದ ಗಂಗೆಯತೀರದಲ್ಲಿ ಪರಮೇಶ್ವರನನ್ನು ಪೂಜಿಸಲು ಹೋದೆನು.

ಉಪಸ್ಥಿತಾಯಾಪಿ ತಸ್ಮೈ ಪ್ರಣಾಮಂ ನಹ್ಯಕಾರಿಷಂ ।
ಸ ತು ಶಾಂತೋ ಮಹಾಬುದ್ಧಿರ್ಗೌತಮಸ್ತೇಜಸಾಂ ನಿಧಿಃ ॥ ೧೦೬ ॥

ಮಯೋದಿತಾನಿ ಕರ್ಮಾಣಿ ಕರೋತೀತಿ ಮುದಂ ಯಯೌ ।
ಸ ತ್ವರ್ಚಿತೋ ಮಯಾ ದೇವಃ ಶಿವಃ ಸರ್ವಜಗದ್ಗುರುಃ ॥ ೧೦೭ ॥

ಗುರ್ವವಜ್ಞಾ ಕೃತಾ ಯೇನ ರಾಕ್ಷಸತ್ವೇ ನಿಯುಕ್ತವಾನ್ ।
ಜ್ಞಾನತೋಽಜ್ಞಾನತೋ ವಾಽಪಿ ಯೋಽವಜ್ಞಾಂ ಕುರುತೇ ಗುರೋಃ ॥

ತಸ್ಯೈವಾಶು ಪ್ರಣಶ್ಯಂತಿ ಶ್ರೇಯೋಽಪತ್ಯಧನಕ್ರಿಯಾಃ ।
ಶುಶ್ರೂಷಾಂ ಕುರುತೇ ಯಸ್ತು ಗುರೂಣಾಂ ಸಾದರಂ ನರಃ ॥ ೧೦೯ ॥

ತಸ್ಯ ಸಂಪದ್ಭವೇದ್ಭೂಪ ಇತಿ ಪ್ರಾಹುರ್ವಿಪಶ್ಚಿತಃ ।
ತೇನ ಶಾಪೇನ ದಗ್ಧೋಽಹಮಂತಶ್ಚೈವ ಕ್ಷುಧಾಗ್ನಿನಾ ॥ ೧೧೦ ॥

---

೧೦೬-೧೦೭. ಆಗ ಅಲ್ಲಿಗೆ ಗೌತಮರು ಬಂದರೂ ನಾನು ಅವರಿಗೆ ನಮಸ್ಕಾರಮಾಡಲಿಲ್ಲ. ಸಮಾಧಾನಚಿತ್ತನು, ದೊಡ್ಡ ಜ್ಞಾನಿಯು, ತೇಜಸ್ಸುಗಳಿಗೆ ಆಶ್ರಯನೂ ಆದ ಆ ಗೌತಮಮುನಿಯು ಈತನು ನನ್ನಿಂಗ ಉಪದೇಶಿಸಲ್ಪಟ್ಟ ಕರ್ಮಗಳನ್ನು ಏಕಮನಸ್ಕನಾಗಿ ಮಾಡುತ್ತಿದ್ದಾನೆಂದು ತಿಳಿದು ಸಂತೋಷಪಟ್ಟನು.

೧೦೭-೧೧೧. ಸಕಲ ಲೋಕಗಳಿಗೆ ಗುರುವಾದ ಈಶ್ವರದೇವನು ನನ್ನಿಂದ ಆರಾಧಿಸಲ್ಪಟ್ಟಾಗ್ಯೂ, ಗುರುಗಳ ವಿಷಯದಲ್ಲಿ ತಿರಸ್ಕಾರಭಾವವನ್ನು ತೋರಿಸಿದ ದೋಷದಿಂದ ನನಗೆ ರಾಕ್ಷಸಜನ್ಮವನ್ನು ಕೊಟ್ಟನು. ಜ್ಞಾನಪೂರ್ವಕವಾಗಿ, ಅಥವಾ ಅಜ್ಞಾನದಿಂದಲಾದರೂ ಗುರುಗಳಿಗೆ ತಿರಸ್ಕಾರಭಾವವನ್ನು ತೋರುವವನಿಗೆ ಶೀಘ್ರವಾಗಿಯೇ ಶ್ರೇಯಸ್ಸು, ಮಕ್ಕಳು, ಐಶ್ವರ್ಯ, ಉದ್ಯೋಗ ಇವುಗಳೆಲ್ಲವೂ ನಷ್ಟವಾಗುತ್ತವೆ. ಭಕ್ತಿಪೂರ್ವಕವಾಗಿ ಗುರುಗಳ ಶುಶ್ರೂಷೆಯನ್ನು ಮಾಡುವವರಿಗೆ ಐಶ್ವರ್ಯಾಭಿವೃದ್ಧಿಯಾಗುತ್ತದೆ ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ಅಂತಹ ಗುರುಗಳ ಆಗ್ರಹದಿಂದ ಸುಡಲ್ಪಟ್ಟ ನಾನು ಒಳಗೆ ಹಸಿವೆಂಬ ಬೆಂಕಿಯಿಂದ ದಹಿಸಲ್ಪಟ್ಟಿರುತ್ತೇನೆ. ರಾಜಶ್ರೇಷ್ಠನೇ ! ಈ ಕಷ್ಟದಿಂದ ಯಾವಾಗ ವಿಮೋಚನೆ (ಬಿಡುಗಡೆ) ಯನ್ನು ಹೊಂದುತ್ತೇನೆಯೋ ತಿಳಿಯದು.

**ಮೋಕ್ಷಂ ಕದಾ ಪ್ರಯಾಸ್ಯಾಮಿ ನ ಜಾನೇ ನೃಪಸತ್ತಮ ।**
**ಏವಂ ವದತಿ ವಿಪ್ರೇಂದ್ರ ವಟಸ್ಥೇಽಸ್ಮಿನ್ನಿಶಾಚರೇ ॥ ೧೧೧ ॥**

**ಧರ್ಮಶಾಸ್ತ್ರಪ್ರಸಂಗೇನ ತಯೋಃ ಪಾಪಂ ಕ್ಷಯಂ ಗತಂ ।**
**ಏತಸ್ಮಿನ್ನಂತರೇ ಪ್ರಾಪ್ತಃ ಕಶ್ಚಿದ್ವಿಪ್ರೋಽತಿಧಾರ್ಮಿಕಃ ॥ ೧೧೨ ॥**

**ಕಲಿಂಗದೇಶಸಂಭೂತೋ ನಾಮ್ನಾ ಗರ್ಗ ಇತಿ ಶ್ರುತಃ ।**
**ವಹನ್ ಗಂಗಾಜಲಂ ಸ್ಕಂಧೇ ಸ್ತುವನ್ವಿಶ್ವೇಶ್ವರಂ ಪ್ರಭುಂ ॥ ೧೧೩ ॥**

**ಗಾಯನ್ನಾಮಾನಿ ತಸ್ಯೈವ ಮುದಾ ಹೃಷ್ಟತನೂರುಹಃ ।**
**ತಮಾಗತಂ ಮುನಿಂ ದೃಷ್ಟ್ವಾ ಪಿಶಾಚೀರಾಕ್ಷಸೌ ಚ ತೌ ॥ ೧೧೪ ॥**

**ಪ್ರಾಪ್ತಾ ನಃ ಪಾರಣೇತ್ಯುಕ್ತ್ವಾ ಪ್ರಾದ್ರವನ್ನೂರ್ಧ್ವಬಾಹವಃ ।**
**ತೇನ ಕೀರ್ತಿತನಾಮಾನಿ ಶ್ರುತ್ವಾ ದೂರೇ ವ್ಯವಸ್ಥಿತಾಃ ॥ ೧೧೫ ॥**

---

೧೧೧-೧೧೬. ಬ್ರಾಹ್ಮಣಶ್ರೇಷ್ಠನೇ ! ಆಲದಮರದಲ್ಲಿದ್ದ ಈ ಬ್ರಹ್ಮ ರಾಕ್ಷಸನು ಉಕ್ತರೀತಿಯಾಗಿ ಹೇಳುತ್ತಿರಲು ಧರ್ಮಶಾಸ್ತ್ರತತ್ವಪ್ರಸಕ್ತಿಯಿಂದ ಅವರಿಬ್ಬರ ಪಾಪವು ನಾಶವಾಯಿತು. ಆ ಸಮಯಕ್ಕೆ ಸರಿಯಾಗಿ ಕಳಿಂಗದೇಶದಲ್ಲಿ ಹುಟ್ಟಿದ, ಗರ್ಗ ಎಂಬ ನಾಮಧೇಯವುಳ್ಳ, ಧರ್ಮಿಷ್ಠನಾದ ಬ್ರಾಹ್ಮಣನೊಬ್ಬನು ಭುಜದ ಮೇಲೆ ಗಂಗೋದಕವನ್ನು ಹೊತ್ತುಕೊಂಡು ವಿಶ್ವೇಶ್ವರಸ್ವಾಮಿಯನ್ನು ಸ್ತೋತ್ರಮಾಡುತ್ತಾ, ಆ ವಿಶ್ವೇಶ್ವರನ ನಾಮಸಂಕೀರ್ತನೆ ಮಾಡುವವನಾಗಿ, ಸಂತೋಷದಿಂದ ಉಂಟಾದ ರೋಮಾಂಚದಿಂದ ಕೂಡಿ ಅಲ್ಲಿಗೆ ಬಂದನು. ಅಲ್ಲಿಗೆ ಬಂದ ಮುನಿಯನ್ನು ನೋಡಿ ಆ ಪಿಶಾಚಿ ಮತ್ತು ರಾಕ್ಷಸರಿಬ್ಬರು ಉಪವಾಸದಿಂದ ಬಳಲಿರುವ ನಮಗೆ ಪಾರಣೆಮಾಡಲು ತಕ್ಕ ಆಹಾರವು ದೊರಕಿತೆಂದು ಹೇಳಿ ಕೈಗಳನ್ನೆತ್ತಿಕೊಂಡು ಓಡಿದರು. ಆ ಮುನಿಯು ಕೀರ್ತನೆ ಮಾಡುತ್ತಿದ್ದ ವಿಶ್ವೇಶ್ವರನಾಮಗಳನ್ನು ಕೇಳಿ ರಾಕ್ಷಸರು ದೂರದಲ್ಲಿಯೇ ನಿಂತು, ಆ ಮುನಿಯನ್ನು ಹಿಂಸಿಸಲು ಅಸಮರ್ಥರಾಗಿ, ಮುಂದೆ ಹೇಳುವ ಪ್ರಕಾರ ಮಾತನಾಡಿದರು.

ಅಶಕ್ತಾಸ್ತಂ ಧರ್ಷಯಿತುಮಿದಮೂಚುಶ್ಚ ರಾಕ್ಷಸಾಃ ।
ಅಹೋ ವಿಪ್ರ ಮಹಾಭಾಗ ನಮಸ್ತುಭ್ಯಂ ಮಹಾತ್ಮನೇ ॥ ೧೧೬ ॥

ನಾಮಕೀರ್ತನಮಾಹಾತ್ಮ್ಯಾದ್ರಾಕ್ಷಸಾ ದೂರಗಾ ವಯಂ ।
ಅಸ್ಮಾಭಿರ್ಭಕ್ಷಿತಾಃ ಪೂರ್ವಂ ವಿಪ್ರಾಃ ಕೋಟಿಸಹಸ್ರಶಃ ॥ ೧೧೭ ॥

ನಾಮಪ್ರಾವರಣಂ ವಿಪ್ರ ರಕ್ಷತಿ ತ್ವಾ ಮಹಾಭಯಾತ್ ।
ನಾಮಶ್ರವಣಮಾತ್ರೇಣ ರಾಕ್ಷಸಾ ಅಪಿ ಭೋ ವಯಂ ॥ ೧೧೮ ॥

ಪರಾಂ ಶಾಂತಿಂ ಸಮಾಪನ್ನಾ ಮಹಿಮ್ನಾ ಹ್ಯಚ್ಯುತಸ್ಯ ವೈ ।
ಸರ್ವಥಾ ತ್ವಂ ಮಹಾಭಾಗ ರಾಗಾದಿರಹಿತೋಽಹ್ಯಸಿ ॥ ೧೧೯ ॥

ಗಂಗಾಜಲಾಭಿಷೇಕೇಣ ಪಾಹ್ಯಸ್ಮಾತ್ಪಾತಕೋತ್ತಮಾತ್ ।
ಹರಿಸೇವಾಪರೋ ಭೂತ್ವಾ ಯಶ್ಚಾತ್ಮಾನಂ ತು ತಾರಯೇತ್ ॥ ೧೨೦ ॥

---

೧೧೬-೧೨೦. ಪೂಜ್ಯನಾದ ಬ್ರಾಹ್ಮಣನೇ ! ಮಹಾತ್ಮನಾದ ನಿನಗೆ ನಮಸ್ಕಾರವು. ನಾವು ರಾಕ್ಷಸರು ಪೂರ್ವದಲ್ಲಿ ಸಾವಿರಾರು ಕೋಟಿ ಬ್ರಾಹ್ಮಣರನ್ನು ತಿಂದಿದ್ದೇವೆ. ಆದಾಗ್ಯೂ ಭಗವಂತನ ನಾಮಸಂಕೀರ್ತನದ ಮಹಿಮೆಯಿಂದ ನಿನ್ನ ಹತ್ತಿರ ಬರಲು ಸಾಧ್ಯವಿಲ್ಲದೇ ದೂರದಲ್ಲಿಯೇ ಇರುವಂತಾಗಿದೆ. ಓ ಬ್ರಾಹ್ಮಣನೇ ! ಭಗವಂತನ ನಾಮವೆಂಬ ಉತ್ತಮವಾದ ಆವರಣವು ನಿನ್ನನ್ನು ಮಹಾಭಯದಿಂದ ರಕ್ಷಿಸುತ್ತದೆ. ನಾವು ರಾಕ್ಷಸರಾದಾಗ್ಯೂ ನಾಮವನ್ನು ಕೇಳಿದಮಾತ್ರದಿಂದ ಉತ್ಕೃಷ್ಟವಾದ ಶಾಂತಿಯನ್ನು ಹೊಂದಿದ್ದೇವೆ. ಎಲೈ ಪೂಜ್ಯನೇ! ಆ ಅಚ್ಯುತನ ಮಾಹಾತ್ಮ್ಯೆಯಿಂದ ನೀನು ಸಕಲವಿಧದಿಂದಲೂ ರಾಗದ್ವೇಷಾದಿಶೂನ್ಯನಾಗಿರುವೆ. ನಿನ್ನಲ್ಲಿರುವ ಗಂಗೋದಕದಿಂದ ಸೇಚನಮಾಡಿ ನಾವು ಮಾಡಿರುವ ಮಹಾಪಾಪವನ್ನು ಹೋಗಲಾಡಿಸಿ ಕಾಪಾಡು.

೧೨೦-೧೨೩. ವಿಷ್ಣುಸೇವೆಯಲ್ಲಿ ನಿರತನಾಗಿ ತನ್ನನ್ನು ಉದ್ಧರಿಸಿಕೊಳ್ಳುವವನು ಹರ್ಯನುಗ್ರಹದಿಂದ ಸಕಲ ಜಗತ್ತನ್ನೂ ಉದ್ಧರಿಸಲು ಸಮರ್ಥನಾಗು

**ಸ ತಾರಯೇಜ್ಜಗತ್ಸರ್ವಮಿತಿ ಶಂಸಂತಿ ಸೂರಯಃ ।**
**ಅಪಹಾಯ ಹರೇರ್ನಾಮ ಘೋರಸಂಸಾರಭೇಷಜಂ ॥ ೧೨೧ ॥**

**ಕೇನೋಪಾಯೇನ ಲಭ್ಯೇತ ಮುಕ್ತಿಃ ಸರ್ವತ್ರ ದುರ್ಲಭಾ ।**
**ಲೋಹೋಡುಪೇನ ಪ್ರತರನ್ನಿಮಜ್ಜತ್ಯುದಕೇ ಯಥಾ ॥ ೧೨೨ ॥**

**ತಥೈವಾಕೃತಪುಣ್ಯಾಸ್ತು ತಾರಯಂತಿ ಕಥಂ ಪರಾನ್ ।**
**ಅಹೋ ಚರಿತ್ರಂ ಮಹತಾಂ ಸರ್ವಲೋಕಸುಖಾವಹಂ ॥ ೧೨೩ ॥**

**ಯಥಾ ಹಿ ಸರ್ವಲೋಕಾನಾಮಾನಂದಾಯ ಕಲಾನಿಧಿಃ ।**
**ಪೃಥಿವ್ಯಾಂ ಯಾನಿ ತೀರ್ಥಾನಿ ಪವಿತ್ರಾಣಿ ದ್ವಿಜೋತ್ತಮ ॥ ೧೨೪ ॥**

**ತಾನಿ ಸರ್ವಾಣಿ ಗಂಗಾಯಾಃ ಕಣಸ್ಯಾಪಿ ಸಮಾನಿ ನ ।**
**ತುಲಸೀದಳಸಂಮಿಶ್ರಮಪಿ ಸರ್ಷಪಮಾತ್ರಕಂ ॥ ೧೨೫ ॥**

---

ತ್ತಾನೆಂದು ಜ್ಞಾನಿಗಳು ಪ್ರಶಂಸೆಮಾಡುತ್ತಾರೆ. ಭಯಂಕರವಾದ ಸಂಸಾರವೆಂಬ ರೋಗಕ್ಕೆ ಔಷಧಸ್ಥಾನೀಯವಾದ ಹರಿನಾಮವನ್ನು ಬಿಟ್ಟು ಇನ್ನಾವ ಉಪಾಯದಿಂದ ಮುಕ್ತಿಯು ಲಭಿಸೀತು? ಮುಕ್ತಿಯು ಎಲ್ಲರಿಗೂ ಅನಾಯಾಸದಿಂದ ದೊರಕುವುದಿಲ್ಲ. ಕಬ್ಬಿಣ ಮುಂತಾದ ಲೋಹದಿಂದ ನಿರ್ಮಿತವಾದ ದೋಣಿಯಿಂದ ಸಮುದ್ರವನ್ನು ದಾಟಲು ಯತ್ನಿಸುವವನು ನೀರಿನಲ್ಲಿ ಮುಳುಗುವಂತೆ, ಪುಣ್ಯವನ್ನು ಗಳಿಸದಿರುವವರು ಸಂಸಾರದಲ್ಲಿ ಸಿಲುಕಿ ಪೇಚಾಡುತ್ತಾ ತಾವೇ ಸದ್ಗತಿಯನ್ನು ಹೊಂದಲು ಅಸಮರ್ಥರಾಗಿರುವಾಗ, ಇತರರನ್ನು ಈ ಸಂಸಾರಸಾಗರದಿಂದ ಹೇಗೆ ಪಾರುಮಾಡಿಯಾರು?

೧೨೩-೧೨೭. ಚಂದ್ರನು ಸಕಲಜನರಿಗೂ ಆನಂದವನ್ನುಂಟುಮಾಡುವಂತೆ ಮಹಾತ್ಮರ ಚರಿತ್ರೆಯು ಸಕಲರಿಗೂ ಸುಖಪ್ರದವು. ಆಶ್ಚರ್ಯ! ಬ್ರಾಹ್ಮಣಶ್ರೇಷ್ಠನೇ! ಭೂಲೋಕದಲ್ಲಿ ಪುಣ್ಯಕರವಾದ ತೀರ್ಥಗಳು ಎಷ್ಟಿವೆಯೋ ಅವೆಲ್ಲವೂ ಒಟ್ಟಾಗಿ ಸೇರಿದರೂ ಗಂಗೆಯ ಒಂದು ತೊಟ್ಟಿಗೆ ಸಮಾನವಾಗಲಾರವು. ತುಳಸೀದಳಸಹಿತವಾದ ಗಂಗೋದಕವು. ಸಾಸಿವೆಕಾಳಿನಷ್ಟಿದ್ದಾಗ್ಯೂ ಇಪ್ಪತ್ತೊಂದು

ಗಂಗಾಜಲಂ ಪುನಾತ್ಯೇನ ಕುಲಾನಾಮೇಕವಿಂಶತಿಂ ।
ತಸ್ಮಾದ್ವಿಪ್ರ ಮಹಾಭಾಗ ಸರ್ವಶಾಸ್ತ್ರಾರ್ಥಕೋವಿದ ॥ ೧೨೬ ॥

ಗಂಗಾಜಲಪ್ರದಾನೇನ ಪಾಹ್ಯಸ್ಮಾನ್ ಪಾಪಕರ್ಮಿಣಃ ।
ಇತ್ಯಾಖ್ಯಾತಂ ರಾಕ್ಷಸೈಸ್ತೈಃ ಗಂಗಾಮಾಹಾತ್ಮ್ಯಮುತ್ತಮಂ ॥ ೧೨೭ ॥

ನಿಶಮ್ಯ ವಿಸ್ಮಯಾವಿಷ್ಟೋ ಬಭೂವ ದ್ವಿಜಸತ್ತಮಃ ।
ಏಷಾಮಪೀದೃಶೀ ಭಕ್ತಿರ್ಗಂಗಾಯಾಂ ಲೋಕಮಾತರಿ ॥ ೧೨೮ ॥

ಕಿಮು ಜ್ಞಾನಪ್ರಧಾನಾನಾಂ ಮಹತಾಂ ಪುಣ್ಯಶಾಲಿನಾಂ ।
ಅಥಾಸೌ ಮನಸಾ ಧರ್ಮಂ ವಿನಿಶ್ಚಿತ್ಯ ದ್ವಿಜೋತ್ತಮಃ ॥ ೧೨೯ ॥

ಸರ್ವಭೂತಹಿತೇ ಯುಕ್ತಃ ಪ್ರಾಪ್ನೋತಿ ಪರಮಂ ಪದಂ ।
ತತೋ ವಿಪ್ರಃ ಕೃಪಾವಿಷ್ಟೋ ಗಂಗಾಜಲಮನುತ್ತಮಂ ॥ ೧೩೦ ॥

---

ಕುಲಗಳನ್ನು ಪರಿಶುದ್ಧಿಗೊಳಿಸುತ್ತದೆ. ಆದಕಾರಣ ಸಕಲಶಾಸ್ತ್ರಾರ್ಥಪಂಡಿತನು ಪೂಜ್ಯನೂ ಆದ ಬ್ರಾಹ್ಮಣನೇ! ಗಂಗೋದಕವನ್ನು ಕೊಟ್ಟು ಪಾಪಕೃತ್ಯವನ್ನು ಮಾಡಿರುವ ನಮ್ಮನ್ನು ಕಾಪಾಡು ಎಂಬುದಾಗಿ ಆ ರಾಕ್ಷಸರಿಂದ ಗಂಗಾ ಮಾಹಾತ್ಮ್ಯೆಯು ಹೇಳಲ್ಪಟ್ಟಿತು.

೧೨೮-೧೨೯. ಬ್ರಾಹ್ಮಣಶ್ರೇಷ್ಠನು ಗಂಗಾಮಾಹಾತ್ಮ್ಯೆಯನ್ನು ಕೇಳಿ ಲೋಕಮಾತೆಯಾದ ಗಂಗೆಯಲ್ಲಿ ಇವರಿಗೂ ಸಹ ಇಂತಹ ಉತ್ಕೃಷ್ಟಭಕ್ತಿಯಿರುವಾಗ ಪುಣ್ಯವಂತರು, ಜ್ಞಾನಿಗಳೂ ಆದ ಮಹಾತ್ಮರಿಗೆ ಗಂಗೆಯಲ್ಲಿ ಇನ್ನೆಷ್ಟು ಭಕ್ತಿಯಿರಬೇಕು ಎಂಬುದಾಗಿ ಆಶ್ಚರ್ಯಚಕಿತನಾದನು.

೧೨೯-೧೩೨. ತರುವಾಯ ದ್ವಿಜೋತ್ತಮನು ಸಕಲಪ್ರಾಣಿಗಳಿಗೂ ಅನುಕೂಲವನ್ನು ಮಾಡುವವನು ಉತ್ತಮಪದವಿಯನ್ನು ಹೊಂದುತ್ತಾನಾದ ಕಾರಣ ಪರೋಪಕಾರವು ಧರ್ಮವೆಂದು ನಿರ್ಣಯಿಸಿ, ಆ ರಾಕ್ಷಸರಲ್ಲಿ ದಯೆಯುಂಟಾದವನಾಗಿ, ತುಲಸೀದಳದಿಂದ ಸಹಿತವಾದ ಗಂಗೋದಕವನ್ನು ಅವರಿಗೆ ಪ್ರೋಕ್ಷಿಸಿದನು. ಸಾಸಿವೆಕಾಳಿನಷ್ಟು ಅಲ್ಪವಾದ ಗಂಗೋದಕದ ಬಿಂದುವು

ತುಲಸೀದಲಸಂಮಿಶ್ರಂ ತೇಷು ರಕ್ಷಃಸ್ವಸೇಚಯತ್ ।
ರಾಕ್ಷಸಾಸ್ತೇನ ಸಿಕ್ತಾಸ್ತು ಸರ್ಷಪೋಪಮಬಿಂದುನಾ ॥ ೧೩೧ ॥

ವಿಸೃಜ್ಯ ರಾಕ್ಷಸಂ ಭಾವಮಭವನ್ದೇವತೋಪಮಾಃ ।
ಬ್ರಾಹ್ಮಣೀ ಪುತ್ರಸಂಯುಕ್ತಾ ಸೋಮದತ್ತಸ್ತಥೈವ ಚ ॥ ೧೩೨ ॥

ಕೋಟಿಸೂರ್ಯಪ್ರತೀಕಾಶಮಾಪನ್ನೌ ವಿಬುಧರ್ಷಭಾಃ ।
ಶಂಖಚಕ್ರಗದಾಚಿಹ್ನ ಹರಿಸಾರೂಪ್ಯಮಾಗತೌ ॥ ೧೩೩ ॥

ಸ್ತುವಂತೌ ಬ್ರಾಹ್ಮಣಂ ಸಮ್ಯಗ್ಜಗ್ಮತುರ್ಹರಿಮಂದಿರಂ ।
ರಾಜಾ ಕಲ್ಮಾಷಪಾದಸ್ತು ನಿಜರೂಪಂ ಸಮಾಸ್ಥಿತಃ ॥ ೧೩೪ ॥

ತತೋಽಪಿ ಮನಸಾ ಚಿಂತಾಂ ಮಹತೀಮಾಪ್ತವಾಂಸ್ತದಾ ।
ತಸ್ಮಿನ್ರಾಜನಿ ದುಃಖಾರ್ತೇ ಗೂಢರೂಪಾ ಸರಸ್ವತೀ ॥ ೧೩೫ ॥

ಧರ್ಮಮೂಲಂ ಮಹಾವಾಕ್ಯಂ ಬಭಾಷೇ ಗಾಥಯಾ ಗಿರಾ ।
ಭೋ ಭೋ ರಾಜನ್ ಮಹಾಭಾಗ ನ ದುಃಖಂ ಗಂತುಮರ್ಹಸಿ ॥ ೧೩೬ ॥

---

ರಾಕ್ಷಸರ ಮೇಲೆ ಬಿದ್ದಕೂಡಲೇ ಅವರು ತಮ್ಮ ರಾಕ್ಷಸಭಾವವನ್ನು ತ್ಯಜಿಸಿ ದೇವತೆಗಳಂತೆ ರೂಪವನ್ನು ತಾಳಿದರು.

೧೩೨-೧೩೪. ಜ್ಞಾನಿಶ್ರೇಷ್ಠರೇ! ಮಗನಿಂದ ಸಹಿತಳಾದ ಬ್ರಾಹ್ಮಣ ಸ್ತ್ರೀಯು ಮತ್ತು ಸೋಮದತ್ತನೂ ಸಹ ಕೋಟಿಸೂರ್ಯರುಗಳಿಗೆ ಸಮಾನವಾದ ತೇಜಸ್ಸುಳ್ಳವರಾಗಿ, ಶಂಖ, ಚಕ್ರ ಮತ್ತು ಗದೆಗಳಿಂದ ಅಂಕಿತನಾದ ಶ್ರೀ ಹರಿಯ ಸಾದೃಶ್ಯವನ್ನು ಹೊಂದಿದವರಾಗಿ, ಬ್ರಾಹ್ಮಣನನ್ನು ಚೆನ್ನಾಗಿ ಸ್ತೋತ್ರ ಮಾಡುತ್ತಾ ಹರಿಸ್ಥಾನವಾದ ವೈಕುಂಠಕ್ಕೆ ಹೋದರು.

೧೩೪-೧೩೫. ರಾಜನಾದ ಕಲ್ಮಾಷಪಾದನಾದರೋ ತನ್ನ ಹಿಂದಿನ ರೂಪವನ್ನು ಹೊಂದಿದನು. ಆದಾಗ್ಯೂ ಅವನು ಆಗ ಮನಸ್ಸಿನಲ್ಲಿ ಬಹಳವಾಗಿ ಚಿಂತಾಕ್ರಾಂತನಾದನು.

೧೩೫-೧೩೬. ಆ ದೊರೆಯು ದುಃಖಪೀಡಿತನಾಗಿರಲು ಸರಸ್ವತೀ ದೇವಿಯು ತನ್ನ ರೂಪವನ್ನು ಮರೆಮಾಚಿಕೊಂಡು ಬಂದು ಗಾದೆಯ ರೂಪವಾದ ವಾಕ್ಯದಿಂದ ಧರ್ಮಬೋಧಕವಾದ ವಚನವನ್ನು ನುಡಿದಳು

ರಾಜಂಸ್ತವಾಪಿ ಭೋಗಾಂತೇ ಮಹಚ್ಛ್ರೇಯೋ ಭವಿಷ್ಯತಿ ।
ಸತ್ಕರ್ಮಧೂತಪಾಪಾ ಯೇ ಹರಿಭಕ್ತಿಪರಾಯಣಾಃ ॥ ೧೩೭ ॥

ಪ್ರಯಾಂತಿ ನಾತ್ರ ಸಂದೇಹಸ್ತದ್ವಿಷ್ಣೋಃ ಪರಮಂ ಪದಂ ।
ಸರ್ವಭೂತದಯಾಯುಕ್ತಾ ಧರ್ಮಮಾರ್ಗಪ್ರವರ್ತಿನಃ ॥ ೧೩೮ ॥

ಪ್ರಯಾಂತಿ ಪರಮಂ ಸ್ಥಾನಂ ಗುರುಪೂಜಾಪರಾಯಣಾಃ ।
ಇತೀರಿತಂ ಸಮಾಕರ್ಣ್ಯ ಭಾರತ್ಯಾ ನೃಪಸತ್ತಮಃ ॥ ೧೩೯ ॥

ಮನಸಾ ನಿರ್ವೃತಿಂ ಪ್ರಾಪ್ಯ ಸಸ್ಮಾರ ಚ ಗುರೋರ್ವಚಃ ।
ಸ್ತುವನ್ಗುರುಂ ಚ ತಂ ವಿಪ್ರಂ ಹರಿಂ ಚೈವಾತಿಹರ್ಷಿತಃ ॥ ೧೪೦ ॥

ಪೂರ್ವವೃತ್ತಂ ಚ ವಿಪ್ರಾಯ ಸರ್ವಂ ತಸ್ಮೈ ನ್ಯವೇದಯತ್ ।
ತತೋ ನೃಪಸ್ತು ಕಾಲಿಂಗಂ ಪ್ರಣಮ್ಯ ವಿಧಿವನ್ಮುನೇ ॥ ೧೪೧ ॥

---

೧೩೬-೧೩೭. ಮಾನ್ಯನಾದ ರಾಜನೇ! ನಿನಗೂ ಸಹ ಈ ಐಹಿಕಸಂಪತ್ತನ್ನು ಅನುಭವಿಸಿದ ನಂತರ ದೊಡ್ಡ ಶ್ರೇಯಸ್ಸುಂಟಾಗುತ್ತದೆ. ಆದುದರಿಂದ ನೀನು ದುಃಖಪಡಬೇಡ.

೧೩೭-೧೩೯. ಸತ್ಕರ್ಮಾನುಷ್ಠಾನದಿಂದ ಪಾಪಗಳನ್ನು ಪರಿಹರಿಸಿಕೊಂಡು ವಿಷ್ಣುಭಕ್ತಿನಿರತರಾದವರು ಆ ವಿಷ್ಣುವಿನ ಪರಮಪದ ಎಂದರೆ ವೈಕುಂಠಲೋಕವನ್ನು ಖಂಡಿತವಾಗಿ ಹೊಂದುತ್ತಾರೆ. ಸಂಶಯವಿಲ್ಲ. ಸಕಲ ಪ್ರಾಣಿಗಳಲ್ಲಿಯೂ ದಯೆಯುಳ್ಳವರಾಗಿ, ಧರ್ಮಮಾರ್ಗದಲ್ಲಿಯೇ ಪ್ರವರ್ತಿಸುತ್ತಿರುವವರು, ಗುರುಪೂಜೆಯಲ್ಲಿ ಆಸಕ್ತರಾಗಿರುವವರು ಉತ್ತಮಪದವಿಗೆ ಎಂದರೆ ಮುಕ್ತಿಗೆ ಹೋಗುತ್ತಾರೆ.

೧೩೯-೧೪೧. ರಾಜಶ್ರೇಷ್ಠನು ಈ ಪ್ರಕಾರ ಸರಸ್ವತೀದೇವಿಯಿಂದ ಹೇಳಲ್ಪಟ್ಟ ಮಾತನ್ನು ಕೇಳಿ ಮನಸ್ಸಿನಲ್ಲಿ ಸಂತೋಷಗೊಂಡವನಾಗಿ ಗುರುಗಳಾದ ವಸಿಷ್ಠರ ಮಾತನ್ನು ಸ್ಮರಿಸಿಕೊಂಡನು. ಈ ರೀತಿ ಅತ್ಯಂತ ಸಂತೋಷಪಟ್ಟವನಾಗಿ, ಗುರುಗಳು, ಆ ಬ್ರಾಹ್ಮಣನು, ವಿಷ್ಣುವು ಇವರುಗಳನ್ನು ಸ್ತೋತ್ರಮಾಡುತ್ತಾ, ಆ ಬ್ರಾಹ್ಮಣನಿಗೆ ನಡೆದ ಹಿಂದಿನ ವೃತ್ತಾಂತವನ್ನೆಲ್ಲಾ ಹೇಳಿದನು.

ನಾಮಾನಿ ವ್ಯಾಹರನ್ವಿಷ್ಣೋಃ ಸದ್ಯೋ ವಾರಾಣಸೀಂ ಯಯೌ ।
ಷಣ್ಮಾಸಂ ತತ್ರ ಗಂಗಾಯಾಂ ಸ್ನಾತ್ವಾ ದೃಷ್ಟ್ವಾ ಸದಾಶಿವಂ ॥ ೧೪೨ ॥

ಬ್ರಾಹ್ಮಣೀ ದತ್ತಶಾಪಾತ್ತು ಮುಕ್ತೋ ಮಿತ್ರಸಹೋಽಭವತ್ ।
ತತಸ್ತು ಸ್ವಪುರೀಂ ಪ್ರಾಪ್ತೋ ವಸಿಷ್ಠೇನ ಮಹಾತ್ಮನಾ ॥ ೧೪೩ ॥

ಅಭಿಷಿಕ್ತೋ ಮುನಿಶ್ರೇಷ್ಠ ಸ್ವಕಂ ರಾಜ್ಯಮಪಾಲಯತ್ ।
ಪಾಲಯಿತ್ವಾ ಮಹೀಂ ಕೃತ್ಸ್ನಾಂ ಭುಕ್ತ್ವಾ ಭೋಗಾನ್ಮನೋರಮಾನ್ ॥

ವಸಿಷ್ಠಾತ್ಪ್ರಾಪ್ಯ ಸಂತಾನಂ ಗತೋ ಮೋಕ್ಷಂ ನೃಪೋತ್ತಮಃ ।
ನೈತಚ್ಚಿತ್ರಂ ದ್ವಿಜಶ್ರೇಷ್ಠ ವಿಷ್ಣೋರ್ವಾರಾಣಸೀಗುಣಾನ್ ॥ ೧೪೫ ॥

ಗೃಣನ್ ಶೃಣ್ವನ್ ಸ್ಮರನ್ ಗಂಗಾಂ ಪೀತ್ವಾ ಮುಕ್ತೋ ಭವೇನ್ನರಃ ।
ತಸ್ಮಾನ್ಮಹಿಮ್ನೋ ವಿಪ್ರೇಂದ್ರ ಗಂಗಾಯಾಃ ಶಕ್ಯತೇ ನ ಹಿ ॥ ೧೪೬ ॥

---

೧೪೧-೧೪೩. ನಾರದಮುನಿಯೇ! ತರುವಾಯ ದೊರೆಯು ಕಲಿಂಗದೇಶೀಯನಾದ ಬ್ರಾಹ್ಮಣನನ್ನು ವಿಧಾನೋಕ್ತಪ್ರಕಾರವಾಗಿ ನಮಸ್ಕರಿಸಿ, ವಿಷ್ಣುನಾಮಗಳನ್ನು ಹೇಳುತ್ತಾ ತಕ್ಷಣವೇ ಕಾಶೀಕ್ಷೇತ್ರಕ್ಕೆ ಹೊರಟನು. ಅಲ್ಲಿ ಮಿತ್ರಸಹನು ಆರುತಿಂಗಳ ಕಾಲ ಗಂಗೆಯಲ್ಲಿ ಸ್ನಾನಮಾಡಿ, ಸದಾಶಿವನನ್ನು ಸಂದರ್ಶಿಸಿದುದರಿಂದ ಬ್ರಾಹ್ಮಣಸ್ತ್ರೀಯು ಕೊಟ್ಟಶಾಪದಿಂದ ಮುಕ್ತನಾದನು.

೧೪೩-೧೪೫. ತರುವಾಯ ಮಿತ್ರಸಹನು ತನ್ನ ಪಟ್ಟಣಕ್ಕೆ ಬಂದು ಮಹಾತ್ಮರಾದ ವಸಿಷ್ಠರಿಂದ ಪಟ್ಟಾಭಿಷೇಕಮಾಡಿಸಿಕೊಳ್ಳಲ್ಪಟ್ಟವನಾಗಿ ತನ್ನ ರಾಜ್ಯವನ್ನು ಪಾಲಿಸುತ್ತಿದ್ದನು. ಹೀಗೆ ಸಮಸ್ತಭೂಮಂಡಲವನ್ನು ರಕ್ಷಿಸುತ್ತಾ ಮನೋಹರವಾದ ಭೋಗಗಳನ್ನು ಅನುಭವಿಸಿ, ವಸಿಷ್ಠರ ಅನುಗ್ರಹದಿಂದ ಮಕ್ಕಳನ್ನು ಪಡೆದು ಮೋಕ್ಷಕ್ಕೆ ಹೋದನು.

೧೪೫-೧೪೭. ಬ್ರಾಹ್ಮಣೋತ್ತಮನೇ! ಮನುಷ್ಯನು ವಿಷ್ಣು ಮತ್ತು ಕಾಶೀಕ್ಷೇತ್ರದ ಗುಣಗಳ ಪಠನ, ಶ್ರವಣ, ಸ್ಮರಣಗಳನ್ನು ಮಾಡುವವನಾಗಿ ಗಂಗೋದಕವನ್ನು ಪಾನಮಾಡಿ ಮುಕ್ತನಾಗುತ್ತಾನೆಂಬ ಈ ವಿಷಯವು ಆಶ್ಚರ್ಯ

**ಪಾರಂ ಗಂತುಂ ಸುರಾಧೀಶೈರ್ಬ್ರಹ್ಮವಿಷ್ಣುಶಿವೈರಪಿ ।
ಯನ್ನಾಮಸ್ಮರಣಾದೇವ ಮಹಾಪಾತಕಕೋಟಿಭಿಃ ॥ ೧೪೭ ॥**

**ವಿಮುಕ್ತೋ ಬ್ರಹ್ಮಸದನಂ ನರೋ ಯಾತಿ ನ ಸಂಶಯಃ ।
ಗಂಗಾ ಗಂಗೇತಿ ಯನ್ನಾಮ ಸಕೃದಪ್ಯುಚ್ಯತೇ ಯದಾ ।
ತದೈವ ಪಾಪನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೧೪೮ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ
ಪ್ರಥಮಪಾದೇ ಗಂಗಾಮಾಹಾತ್ಮ್ಯೇ
ನವಮೋಽಧ್ಯಾಯಃ**

---

ಕರವಲ್ಲ. ಎಲೈ ವಿಪ್ರೇಂದ್ರನೇ! ಗಂಗೆಯ ಮಹಿಮಾತಿಶಯದ ಕೊನೆಯನ್ನು ಮುಟ್ಟಲು ದೇವೋತ್ತಮರಾದ ಬ್ರಹ್ಮ ವಿಷ್ಣು ರುದ್ರರಿಗೂ ಸಹ ಸಾಧ್ಯವಲ್ಲ. ಮನುಜನು ಗಂಗೆಯ ನಾಮವನ್ನು ಸ್ಮರಿಸುವ ಮಾತ್ರದಿಂದ ಕೋಟ್ಯಂತರ ಮಹಾಪಾತಕಗಳನ್ನು ಪರಿಹರಿಸಿಕೊಂಡು ಖಂಡಿತವಾಗಿ ಬ್ರಹ್ಮಸದನ ಎಂದರೆ ಸತ್ಯಲೋಕಕ್ಕೆ ಹೋಗಿ ಸುಖಪಡುತ್ತಾನೆ. ಗಂಗಾ, ಗಂಗಾ ಎಂಬ ನಾಮವನ್ನು ಒಂದು ಸಲವಾದರೂ ಹೇಳುವವನಿಗೆ ತಕ್ಷಣಪಾಪಮೋಚನೆಯಾಗಿ ಬ್ರಹ್ಮಲೋಕದಲ್ಲಿ ಮಾನ್ಯಪದವಿಯು ದೊರಕುತ್ತದೆ.

ಇಂತು ಶ್ರೀ ಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ
ಪ್ರಥಮಪಾದದಲ್ಲಿ ಗಂಗಾಮಾಹಾತ್ಮ್ಯ ಕಥನವೆಂಬ
ಒಂಭತ್ತನೆಯ ಅಧ್ಯಾಯವು ಮುಗಿದುದು.

---

### ಕಥಾಸಾರಾಂಶ

ಮಿತ್ರಸಹರಾಜನು ಈ ಅಖಂಡಲಭೂಮಂಡಲಕ್ಕೇ ಅಧಿಪತಿಯಾಗಿ ಮೂವತ್ತು ಸಹಸ್ರ ವರ್ಷಗಳ ಕಾಲ ರಾಜ್ಯವಾಳಿದನು. ಅವನು ಒಂದಾನೊಂದು ದಿವಸ ಬೇಟೆಯಾಡಬೇಕೆಂದು ಕಾಡಿಗೆ ಹೋಗಿ ಏಕಾಕಿಯಾಗಿ, ಓಡು

ತ್ತಿದ್ದ ಜಿಂಕೆಯನ್ನು ಹಿಂಬಾಲಿಸಿ ಹೋಗುತ್ತಿರಲು ಒಂದು ಗುಹೆಯಲ್ಲಿ ಸುರತ ಕರ್ಮದಲ್ಲಿ ನಿರತವಾಗಿದ್ದ ಎರಡು ಹುಲಿಗಳನ್ನು ಕಂಡು ಅದರಕಡೆ ತಿರುಗಿ ಬಾಣದಿಂದ ಹೆಣ್ಣುಹುಲಿಯನ್ನು ಕೊಂದನು. ಗಂಡು ಹುಲಿಯು, ನಾವು ಕ್ರೀಡಿಸುತ್ತಿರುವಾಗ ನಿಷ್ಕಾರಣವಾಗಿ ಅದಕ್ಕೆ ಭಂಗತಂದಿರುವ ನಿನಗೆ ಪ್ರತೀ ಕಾರವನ್ನು ಮಾಡುತ್ತೇನೆಂದು ರಾಜನಿಗೆ ಹೇಳಿ ಅದೃಶ್ಯವಾಯಿತು. ರಾಜನು ಭೀತನಾಗಿ ತನ್ನ ನಗರಕ್ಕೆ ಹಿಂದಿರುಗಿ ಇನ್ನು ಬೇಟೆಯಾಡುವುದಿಲ್ಲವೆಂದು ಸಂಕ ಲ್ಪಿಸಿ, ಕೆಲವು ಕಾಲಾನಂತರ ಅಶ್ವಮೇಧಯಾಗವನ್ನು ಮಾಡಿದನು. ಅದಕ್ಕೆ ಬಂದಿದ್ದ ಕುಲಗುರುಗಳಾದ ವಸಿಷ್ಠರು ಯಜ್ಞಕರ್ಮಗಳನ್ನು ಮುಗಿಸಿ ಸ್ನಾನಕ್ಕೆ ಹೋಗಿದ್ದ ಸಮಯದಲ್ಲಿ ಪೂರ್ವದಲ್ಲಿ ರಾಜನಿಂದ ಅಪಕೃತವಾದ ವ್ಯಾಘ್ರವು ವಸಿಷ್ಠವೇಷದಿಂದ ಬಂದು ನನಗೆ ನರಮಾಂಸವನ್ನು ಕೊಡು ಎಂದು ರಾಜನನ್ನು ಕೇಳಿ ಕೂಡಲೇ ಅಡಿಗೆಯವನ ವೇಷದಿಂದ ನರಮಾಂಸವನ್ನು ಪಕ್ವಮಾಡಿ ತಂದು ರಾಜನಿಗೆ ಕೊಟ್ಟಿತು. ಅವನು ಕಾದಿದ್ದು ವಸಿಷ್ಠನು ಬಂದ ಕೂಡಲೇ ಆ ನರಮಾಂಸವನ್ನು ಅವನಿಗೆ ಕೊಟ್ಟನು. ಅವನು ಕುಪಿತನಾಗಿ ಇಂತಹ ಅಭಕ್ಷ್ಯವಾದುದನ್ನು ಕೊಟ್ಟುದಕ್ಕಾಗಿ ರಾಕ್ಷಸಜನ್ಮಬರಲೆಂದು ರಾಜನನ್ನು ಶಪಿಸಿ ದನು.' ರಾಜನು ನೀವು ಕೇಳಿದುದನ್ನು ನಾನು ಕೊಟ್ಟೆನು, ನನ್ನ ತಪ್ಪೇನು ? ಏಕೆ ಶಾಪಕೊಟ್ಟಿರಿ ? ಎಂದು ವಿಜ್ಞಾಪಿಸಲು ವಸಿಷ್ಠನು ಜ್ಞಾನದೃಷ್ಟಿಯಿಂದ ಇದು ರಾಕ್ಷಸಮಾಯೆಯು ಈತನು ನಿರಪರಾಧಿಯೆಂಬುದನ್ನು ಅರಿತು ರಾಜನೇ ! ನಿನಗೆ ರಾಕ್ಷಸಜನ್ಮವು ಶಾಶ್ವತವಾಗಿರುವುದಿಲ್ಲ; ಕೆಲವು ವರ್ಷಗಳನಂತರ ಗಂಗೋದಕಪ್ರೋಕ್ಷಣದಿಂದ ಅದು ನಿವೃತ್ತವಾಗಿ ಪುನಃ ನೀನು ರಾಜನಾಗಿ ಸುಖವಾಗಿರುತ್ತೀಯೆ ಎಂದು ಹೇಳಿದನು. ಅದರಂತೆ ಅವನು ರಾಕ್ಷಸಜನ್ಮ ವನ್ನು ಹೊಂದಿ ಮಾಂಸಭಕ್ಷಕನಾಗಿ ಕಾಡಿನಲ್ಲಿ ಅನೇಕ ವರ್ಷಗಳ ಕಾಲ ಅಲೆ ದಾಡುತ್ತಿರಲು, ಗಂಗೋದಕವನ್ನು ತರುತ್ತಿದ್ದ ಒಬ್ಬ ಬ್ರಾಹ್ಮಣನು ಸಿಕ್ಕಿ ಅವ ನನ್ನು ತಿನ್ನಲು ಉದ್ಯುಕ್ತನಾದಾಗ, ಅವನ ಹತ್ತಿರ ಹೋಗಲು ಸಾಧ್ಯವಿಲ್ಲದಂತಾಗಿ ಅವನನ್ನು ಪ್ರಾರ್ಥಿಸಿಕೊಂಡನು. ಆಗ ಅವನು ತನ್ನಲ್ಲಿದ್ದ ಗಂಗೋದಕ ವನ್ನು ಪ್ರೋಕ್ಷಿಸಿ, ರಾಕ್ಷಸಜನ್ಮವನ್ನು ಪರಿಹರಿಸಿದನು. ತರುವಾಯ ಅವನು ನಿಜರೂಪದಿಂದ ರಾಜ್ಯಕ್ಕೆ ಬಂದು ಪಟ್ಟಾಭಿಷಿಕ್ತನಾಗಿ ಸಕಲ ಭೋಗಗಳನ್ನೂ ಅನುಭವಿಸಿ ಮುಕ್ತಿಯನ್ನು ಹೊಂದಿದನು ಮುಂತಾಗಿ ವರ್ಣಿತವಾಗಿದೆ.

# ದಶಮೋಽಧ್ಯಾಯಃ

—————

ನಾರದ ಉವಾಚ

ವಿಷ್ಣುಪಾದಾಗ್ರಸಂಭೂತಾ ಯಾ ಗಂಗೇತ್ಯಭಿಧೀಯತೇ ।
ತದುತ್ಪತ್ತಿಂ ವದ ಭ್ರಾತರನುಗ್ರಾಹ್ಯೋಽಸ್ಮಿ ತೇ ಯದಿ ॥ ೧ ॥

ಸನಕ ಉವಾಚ

ಶೃಣು ನಾರದ ವಕ್ಷ್ಯಾಮಿ ಗಂಗೋತ್ಪತ್ತಿಂ ತವಾನಘ ।
ವದತಾಂ ಶೃಣ್ವತಾಂ ಚೈವ ಪುಣ್ಯದಾಂ ಪಾಪನಾಶಿನೀಂ ॥ ೨ ॥

ಆಸೀದಿಂದ್ರಾದಿದೇವಾನಾಂ ಜನಕಃ ಕಶ್ಯಪೋ ಮುನಿಃ ।
ದಕ್ಷಾತ್ಮಜೇ ತಸ್ಯ ಭಾರ್ಯೇ ದಿತಿಶ್ಚಾದಿತಿರೇವ ಚ ॥ ೩ ॥

---

## ಹತ್ತನೆಯ ಅಧ್ಯಾಯ

೧. ನಾರದನು ಹೇಳಿದನು—ಸಹೋದರನೇ ! ನಾರಾಯಣನ ಪಾದದ ಅಗ್ರಭಾಗದಲ್ಲಿ ಹುಟ್ಟಿದ ಗಂಗಾ ಎಂಬ ನಾಮಧೇಯವುಳ್ಳ ನದಿಯ ಉತ್ಪತ್ತಿ ಪ್ರಕಾರವನ್ನು ಹೇಳಿದರೆ ಅದನ್ನು ಕೇಳಿ ಧನ್ಯನಾಗುತ್ತೇನೆ.

೨. ಸನಕನು ಹೇಳಿದನು-ಪುಣ್ಯವಂತನಾದ ನಾರದನೇ! ಹೇಳುವವರು ಮತ್ತು ಕೇಳುವವರಿಗೂ ಸಹ ಪುಣ್ಯಪ್ರದವೂ ಮತ್ತು ಪಾಪಪರಿಹಾರಕವೂ ಆದ ಗಂಗೆಯ ಉತ್ಪತ್ತಿಪ್ರಕಾರವನ್ನು ನಿನಗಾಗಿ ಹೇಳುತ್ತೇನೆ ಕೇಳು.

೩. ಇಂದ್ರ ಮುಂತಾದ ದೇವತೆಗಳಿಗೆ ತಂದೆಯಾದ ಕಶ್ಯಪಋಷಿಯು, ಅವನಿಗೆ ದಕ್ಷಕುಮಾರಿಯರಾದ ದಿತಿ ಮತ್ತು ಅದಿತಿ ಎಂಬ ಇಬ್ಬರು ಹೆಂಡತಿಯರೂ ಸಹ ಇದ್ದರು.

**ಅದಿತಿರ್ದೇವಮಾತಾ ಸಾ ದೈತ್ಯಾನಾಂ ಜನನೀ ದಿತಿಃ ।**
**ತೇ ತಯೋರಾತ್ಮಜಾ ವಿಪ್ರ ಪರಸ್ಪರಜಯೈಷಿಣಃ ॥ ೪ ॥**

**ಸರ್ವದಾ ಪೂರ್ವದೇವಾಸ್ತು ಯತೋ ದೈತ್ಯಾಃ ಪ್ರಕೀರ್ತಿತಾಃ ।**
**ಆದಿದೈತ್ಯೋಽದಿತೇಃ ಪುತ್ರೋ ಹಿರಣ್ಯಕಶಿಪುರ್ಬಲೀ ॥ ೫॥**

**ಪ್ರಹ್ಲಾದಸ್ತಸ್ಯ ಪುತ್ರೋಽಭೂತ್ಸುಮಹಾನ್ ದೈತ್ಯಸತ್ತಮಃ ।**
**ವಿರೋಚನಸ್ತಸ್ಯ ಸುತೋ ಬಭೂವ ದ್ವಿಜಭಕ್ತಿಮಾನ್ ॥ ೬ ॥**

**ತಸ್ಯ ಪುತ್ರೋಽತಿತೇಜಸ್ವೀ ಬಲಿರಾಸೀತ್ಪ್ರತಾಪವಾನ್ ।**
**ಸ ಏವ ವಾಹಿನೀಪಾಲೋ ದೈತ್ಯಾನಾಮಭವನ್ಮುನೇ ॥ ೭ ॥**

---

೪. ಅದಿತಿಯು ದೇವತೆಗಳಿಗೆ ತಾಯಿಯು. ದಿತಿಯು ದೈತ್ಯರಿಗೆ ಮಾತೆಯು. ಓ ಬ್ರಾಹ್ಮಣನೇ! ಅವರಿಬ್ಬರ ಮಕ್ಕಳಾದ ದೇವಾಸುರರು ಯಾವಾಗಲೂ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಅಪೇಕ್ಷೆಯುಳ್ಳವರಾಗಿದ್ದರು.

೫. ದಿತಿ ಪುತ್ರರಾದ ರಾಕ್ಷಸರು ಪೂರ್ವದೇವತೆಗಳೆಂದು ಪ್ರಸಿದ್ಧರಾದರು. ಆ ದೈತ್ಯರಲ್ಲಿ ದಿತಿಯ ಪುತ್ರನು, ಬಲಿಷ್ಠನೂ ಆದ "ಹಿರಣ್ಯಕಶಿಪು" ಎಂಬುವನೇ ಮೊದಲನೆಯುವನು.

೬. ಆ ಹಿರಣ್ಯಕಶಿಪುವಿಗೆ ಅತ್ಯಂತ ಪೂಜ್ಯನಾದ ಪ್ರಹ್ಲಾದನೆಂಬ ಮಗನು ಹುಟ್ಟಿದನು. ಅವನಿಗೆ ದೈತ್ಯಶ್ರೇಷ್ಠನಾದ ಬ್ರಾಹ್ಮಣಭಕ್ತಿಯುಳ್ಳ ವಿರೋಚನನೆಂಬ ಮಗನಾದನು.

೭. ಆ ವಿರೋಚನನಿಗೆ ಅತ್ಯಂತ ವರ್ಚಸ್ವಿಯೂ ಪರಾಕ್ರಮಶಾಲಿಯೂ ಆದ ಬಲಿ ಎಂಬ ಮಗನು ಹುಟ್ಟಿದನು. ಮುನಿಯೇ! ಅವನೇ ದೈತ್ಯರ ಸೇನಾಧಿಪತಿಯಾದನು.

ಬಲೇನ ಮಹತಾ ಯುಕ್ತೋ ಬುಭುಜೇ ಮೇದಿನೀಮಿಮಾಂ ।
ವಿಜಿತ್ಯ ವಸುಧಾಂ ಸರ್ವಾಂ ಸ್ವರ್ಗಂ ಜೇತುಂ ಮನೋ ದಧೇ ॥ ೮ ॥

ಗಜಾಶ್ಚ ಯಸ್ಯಾಯುತಕೋಟಿಲಕ್ಷಾ-
ಸ್ತಾವಂತ ಏವಾಶ್ವರಥಾ ಮುನೀಂದ್ರ ।
ಗಜೇ ಗಜೇ ಪಂಚಶತೀ ಪದಾತೇಃ
ಕಿಂ ವರ್ಣ್ಯತೇ ತಸ್ಯ ಚಮೂ ವರಿಷ್ಠಾ ॥ ೯ ॥

ಅಮಾತ್ಯಕೋಟಿಪ್ರವರಾವಮಾತ್ಯೌ
ಕುಂಭಾಂಡನಾಮಾಪ್ಯಥ ಕೂಪಕರ್ಣಃ ।
ಪಿತ್ರಾ ಸಮಃ ಸತ್ವಪರಾಕ್ರಮಾಭ್ಯಾಂ
ಬಾಣೋ ಬಲೇಃ ಪುತ್ರಶತಾಗ್ರಜೋಽಭೂತ್ ॥ ೧೦ ॥

---

೮. ಬಲಿಚಕ್ರವರ್ತಿಯು ಹೆಚ್ಚಾದ ಬಲವುಳ್ಳವನಾಗಿ ಈ ಭೂಮಂಡಲವನ್ನು ಆಳಿದನು. ಲೋಕವನ್ನೆಲ್ಲಾ ಗೆದ್ದು ಸ್ವರ್ಗಲೋಕವನ್ನೂ ಜಯಿಸಬೇಕೆಂದು ಸಂಕಲ್ಪಿಸಿದನು.

೯. ಬಲಿಚಕ್ರವರ್ತಿಯು ಸೈನ್ಯವು ಶ್ರೇಷ್ಠವಾದುದು. ಅದರ ಮಹತ್ವವನ್ನು ವರ್ಣಿಸಲು ಸಾಧ್ಯವಿಲ್ಲ. ಆ ಸೈನ್ಯದಲ್ಲಿ ಹತ್ತುಸಾವಿರಕೋಟಿಲಕ್ಷ ಆನೆಗಳು, ಅಷ್ಟೇ ಕುದುರೆಯ ಬಂಡಿಗಳೂ ಮತ್ತು ಪ್ರತಿಯೊಂದು ಗಜಕ್ಕೂ ಐನೂರರಂತೆ ಕಾಲಾಳುಗಳೂ ಅಡಗಿದ್ದವು.

೧೦. ಬಲಿಚಕ್ರವರ್ತಿಗೆ ಮಂತ್ರಿವರ್ಗದಲ್ಲಿ ಶ್ರೇಷ್ಠರಾದ ಕುಂಭಾಂಡ ಮತ್ತು ಕೂಪಕರ್ಣ ಎಂಬ ಇಬ್ಬರು ಮಂತ್ರಿಗಳೂ ಮತ್ತು ಬಲಪರಾಕ್ರಮಗಳಲ್ಲಿ ತಂದೆಗೆ ಸಮಾನನಾದ, ನೂರುಜನ ಮಕ್ಕಳಲ್ಲಿ ಜ್ಯೇಷ್ಠನೂ ಆದ ಬಾಣನೆಂಬ ಮಗನೂ ಸಹ ಇದ್ದರು.

ಬಲಿಃ ಸುರಾನ್ ಜೇತುಮನಾಃ ಪ್ರವೃತ್ತಃ
ಸೈನ್ಯೇನ ಯುಕ್ತೋ ಮಹತಾ ಪ್ರತಸ್ಥೇ ।
ಧ್ವಜಾತಪತ್ರೈರ್ಗಗನಾಂಬುರಾಶೇಸ್ತರಂಗ-
ವಿದ್ಯುತ್ಸ್ಫುರಣಂ ಪ್ರಕುರ್ವನ್ ॥ ೧೧ ॥

ಅವಾಪ್ಯ ವೃತ್ರಾರಿಪುರಂ ಸುರಾರೀ
ರುರೋಧ ದೈತ್ಯೈರ್ಮೃಗರಾಜಗಾಢೈಃ ।
ಸುರಾಶ್ಚ ಯುದ್ಧಾಯ ಪುರಾತ್ತದೈವ ।
ವಿನಿರ್ಯಯುರ್ವಜ್ರಕರಾದಯಶ್ಚ ॥ ೧೨ ॥

ತತಃ ಪ್ರವವೃತೇ ಯುದ್ಧಂ ಘೋರಂ ಗೀರ್ವಾಣದೈತ್ಯಯೋಃ ।
ಕಲ್ಪಾಂತಮೇಘನಿರ್ಘೋಷಂ ಡಿಂಡಿಮಧ್ವಾನಸಂಭ್ರಮಂ ॥ ೧೩ ॥

ಮುಮುಚುಃ ಶರಜಾಲಾನಿ ದೈತ್ಯಾಃ ಸುಮನಸಾಂ ಬಲೇ ।
ದೇವಾಶ್ಚ ದೈತ್ಯಸೇನಾಸು ಸಂಗ್ರಾಮೇಽತ್ಯಂತದಾರುಣೇ ॥ ೧೪ ॥

---

೧೧. ದೇವತೆಗಳನ್ನು ಜಯಿಸಬೇಕೆಂಬ ಮನಸ್ಸಿನಿಂದ ಉದ್ಯುಕ್ತನಾದ ಬಲಿಚಕ್ರವರ್ತಿಯು ಪತಾಕೆಗಳು ಮತ್ತು ಶ್ವೇತಛತ್ರಗಳಿಂದ ಅಂತರಿಕ್ಷದಲ್ಲಿ ಸಮುದ್ರದ ಅಲೆಗಳು ಮತ್ತು ಮಿಂಚುಗಳನ್ನು ಸ್ಫುರಿಸಿಕೊಳ್ಳುವಂತೆ ಮಾಡುವವನಾಗಿ ದೊಡ್ಡ ಸೈನ್ಯದೊಡನೆ ಪ್ರಯಾಣಮಾಡಿದನು.

೧೨. ದೇವಶತ್ರುವಾದ ಬಲಿಯು ಸಿಂಹಕ್ಕಿಂತಲೂ ಅತಿಶಯಪರಾಕ್ರಮಿಗಳಾದ ದೈತ್ಯರೊಡನೆ ವೃತ್ರಾಸುರನ ವೈರಿಯಾದ ಇಂದ್ರನ ಪಟ್ಟಣವನ್ನು ಸಮೀಪಿಸಿ ಅದನ್ನು ಮುತ್ತಿದನು. ಕೂಡಲೇ ವಜ್ರಾಯುಧಪಾಣಿಯಾದ ಇಂದ್ರನೇ ಮುಂತಾದ ದೇವತೆಗಳು ಯುದ್ಧಕ್ಕಾಗಿ ಪಟ್ಟಣದಿಂದ ಹೊರಟರು.

೧೩. ತರುವಾಯ ದೇವದೈತ್ಯರುಗಳಿಗೆ ಪ್ರಳಯಕಾಲದ ಮೇಘನಾದಕ್ಕೆ ಸದೃಶವಾದ, ಡಿಂಡಿಮ (ಢಿಮಕಿ) ಧ್ವನಿಯಿಂದ ವಿಭ್ರಮೆಗೊಳಿಸುವ, ಭಯಂಕರವಾದ ಯುದ್ಧವು ಪ್ರಾರಂಭವಾಯಿತು.

೧೪. ಯುದ್ಧವು ಅತ್ಯಂತ ಭೀಕರವಾಗಲು ದೈತ್ಯರು ದೇವತೆಗಳ ಸೈನ್ಯದ ಮೇಲೂ ದೇವತೆಗಳು ದೈತ್ಯಸೈನ್ಯದ ಮೇಲೂ ಸಹ ಗುಂಪುಗುಂಪಾಗಿ ಬಾಣಗಳನ್ನು ಬಿಟ್ಟರು.

ಜಹಿ ದಾರಯ ಭಿಂಧೀತಿ ಛಿಂಧಿ ಮಾರಯ ತಾಡಯ ।
ಇತ್ಯೇವಂ ಸುಮಹಾನ್ ಘೋಷೋ ವದತಾಂ ಸೇನಯೋರಭೂತ್ ೧೫ ॥

ಶರದುಂದುಭಿನಿರ್ಧ್ವಾನೈಃ ಸಿಂಹನಾದೈಃ ಸುರದ್ವಿಷಾಂ ।
ಭಾಂಕಾರೈಃ ಸ್ಯಂದನಾನಾಂ ಚ ಬಾಣಕ್ರೇಂಕಾರನಿಸ್ವನೈಃ ॥ ೧೬ ॥

ಅಶ್ವಾನಾಂ ಹೇಷಿತೈಶ್ಚೈವ ಗಜಾನಾಂ ಬೃಂಹಿತೈಸ್ತಥಾ ।
ಟಂಕಾರೈರ್ಧನುಷಾಂ ಚೈವ ಲೋಕಃ ಶಬ್ದಮಯೋಽಭವತ್ ॥ ೧೭ ॥

ಸುರಾಸುರವಿನಿರ್ಮುಕ್ತಬಾಣನಿಷ್ಪೇಷಜಾನಲಂ ।
ಅಕಾಲಪ್ರಲಯಂ ಮೇನೇ ನಿರೀಕ್ಷ್ಯ ಸಕಲಂ ಜಗತ್ ॥ ೧೮ ॥

ಬಭೌ ದೇವದ್ವಿಷಾಂ ಸೇನಾ ಸ್ಫುರಚ್ಛಸ್ತ್ರೌಘಧಾರಿಣೀ ।
ಚಲದ್ವಿದ್ಯುನ್ನಿಭಾ ರಾತ್ರಿಶ್ಛಾದಿತಾ ಜಲದೈರಿವ ॥ ೧೯ ॥

---

೧೫. ಉಭಯ ಸೈನ್ಯಗಳಲ್ಲಿಯೂ ಬಿಡು, ಸೀಳು, ಭೇದಿಸು, ಕತ್ತರಿಸು ಕೊಲ್ಲು, ಹೊಡೆ ಎಂಬೀರೀತಿ ಗಟ್ಟಿಯಾದ ಶಬ್ದವುಂಟಾಯಿತು.

೧೬-೧೭. ನಗಾರಿಯ ಧ್ವನಿಯಂತಿರುವ ಬಾಣಧ್ವನಿಗಳು, ಸಿಂಹನಾದ ದಂತಿರುವ ದೈತ್ಯರ ಕೂಗುಗಳು, ರಥಗಳ ಭಾಂಕಾರಗಳು, ಬಾಣಗಳ ಕ್ರೇಂಕಾರ ಧ್ವನಿಗಳು, ಕುದುರೆಗಳ ಹೇಷಾಶಬ್ದಗಳು, ಆನೆಗಳ ಶಬ್ದಗಳು ಮತ್ತು ಧನುಷ್ಟಂಕಾರ ಇವುಗಳಿಂದ ಜಗತ್ತೆಲ್ಲಾ ಶಬ್ದಮಯವಾಯಿತು.

೧೮. ಸಕಲಜನರೂ ದೇವತೆಗಳು ಮತ್ತು ರಾಕ್ಷಸರಿಂದ ಬಿಡಲ್ಪಟ್ಟ ಬಾಣಸಂಘರ್ಷದಿಂದುಂಟಾದ ಬೆಂಕಿಯನ್ನು ನೋಡಿ ಅಕಾಲದಲ್ಲಿ ಸಂಭವಿಸಿದ ಪ್ರಳಯವೆಂದು ತಿಳಿದರು.

೧೯. ಪ್ರಕಾಶಮಾನವಾದ ಶಸ್ತ್ರಗಳ ರಾಶಿಯನ್ನು ಧರಿಸಿರುವ, ಚಲಿಸುತ್ತಿರುವ ಮಿಂಚುಗಳಿಗೆ ಸಮಾನವಾದ, ದೇವಶತ್ರುಗಳ (ದೈತ್ಯರ) ಸೈನ್ಯವು ಮೇಘಗಳಿಂದ ಮುಚ್ಚಲ್ಪಟ್ಟ ರಾತ್ರಿಯಂತೆ ಪ್ರಕಾಶಿಸಿತು.

ತಸ್ಮಿನ್ಯುದ್ಧೇ ಮಹಾಘೋರೈರ್ಗಿರೀನ್ ಕ್ಷಿಪ್ತಾನ್ ಸುರಾರಿಭಿಃ ।
ನಾರಾಚೈಶ್ಚೂರ್ಣಯಾಮಾಸುಃ ದೇವಾಸ್ತೇಽಲಘುವಿಕ್ರಮಾಃ ॥ ೨೦ ॥

ಕೇಚಿತ್ಸಂತಾಡಯಾಮಾಸುಃ ನಾಗೈರ್ನಾಗಾನ್ರಥಾನ್ರಥೈಃ ।
ಅಶ್ವೈರಶ್ವಾಂಶ್ಚ ಕೇಚಿತ್ತು ದಂಡಾನ್ದಂಡೈಶ್ಚ ಕೇಚನ ॥ ೨೧ ॥

ಪರಿಘೈಸ್ತಾಡಿತಾಃ ಕೇಚಿತ್ಪೇತುಃ ಶೋಣಿತಕರ್ದಮೇ ।
ಸಮುತ್ಕ್ರಾಂತಾಸವಃ ಕೇಚಿದ್ವಿಮಾನಾನಿ ಸಮಾಶ್ರಿತಾಃ ॥ ೨೨ ॥

ರಾಕ್ಷಸಾ ನಿಹತಾ ದೇವೈರ್ಯೇ ತ ಏವ ತದೈವ ಹಿ ।
ದೇವಭಾವಂ ಸಮಾಪನ್ನಾ ಅಸುರಾನ್ಸಮುಪಾದ್ರವನ್ ॥ ೨೩ ॥

ಅಥ ದೈತ್ಯಗಣಾಃ ಕ್ರುದ್ಧಾಸ್ತಾಡ್ಯಮಾನಾಃ ಸುರೈರ್ಭೃಶಂ ।
ಶಸ್ತ್ರೈರ್ಬಹುವಿಧೈರ್ದೇವಾನ್ನಿಜಘ್ನುರತಿದಾರುಣಾಃ ॥ ೨೪ ॥

---

೨೦. ಆ ಯುದ್ಧದಲ್ಲಿ ಅತಿಭಯಂಕರರಾದ ದೈತ್ಯರಿಂದ ಎಸೆಯಲ್ಪಟ್ಟ ಪರ್ವತಗಳನ್ನು ಅಧಿಕ ಪರಾಕ್ರಮವುಳ್ಳ ಆ ದೇವತೆಗಳು ಬಾಣಗಳಿಂದ ಪುಡಿ ಪುಡಿಮಾಡಿದರು.

೨೧. ಕೆಲವರು ಸರ್ಪಗಳಿಂದ ಸರ್ಪಗಳನ್ನೂ ಇತರ ಕೆಲವರು ಬಂಡಿಗಳಿಂದ ಬಂಡಿಗಳನ್ನೂ ಮತ್ತೆ ಕೆಲವರು ಕುದುರೆಗಳಿಂದ ಕುದುರೆಗಳನ್ನೂ ಇನ್ನೂ ಕೆಲವರು ಕೋಲುಗಳಿಂದ ಕೋಲುಗಳನ್ನು ಹೊಡೆದರು.

೨೨. ಕೆಲವರು ದೊಣ್ಣೆಗಳಿಂದ ಹೊಡಿಸಿಕೊಳ್ಳಲ್ಪಟ್ಟು ಪ್ರಾಣಬಿಟ್ಟವರಾಗಿ ರಕ್ತದ ಕೆಸರಿನಲ್ಲಿ ಬಿದ್ದರು. ಕೆಲವರು ವಿಮಾನಗಳಲ್ಲಿ ಕುಳಿತು ತಲೆ ತಪ್ಪಿಸಿಕೊಂಡರು.

೨೩. ದೇವತೆಗಳಿಂದ ಸಂಹರಿಸಲ್ಪಟ್ಟ ದೈತ್ಯರು ತಕ್ಷಣದಲ್ಲಿಯೇ ದೇವತೆಗಳಾಗಿ ಆವಿರ್ಭವಿಸಿ ರಾಕ್ಷಸರನ್ನು ಬಾಧಿಸಿದರು.

೨೪. ತರುವಾಯ ರಾಕ್ಷಸರ ಸಂಘಗಳು ದೇವತೆಗಳಿಂದ ಬಹಳವಾಗಿ ಪೆಟ್ಟುತಿಂದು ಕುಪಿತರೂ ಅತ್ಯಂತ ಭಯಂಕರರೂ ಆಗಿ ನಾನಾವಿಧವಾದ ಶಸ್ತ್ರಗಳಿಂದ ದೇವತೆಗಳನ್ನು ಸಂಹರಿಸಿದರು.

ದ್ರುಘುಣೈರ್ಭಿಂದಿಪಾಲೈಶ್ಚ ಖಡ್ಗೈಃ ಪರಶುತೋಮರೈಃ ।
ಪರಿಘೈಶ್ಚುರಿಕಾಭಿಶ್ಚ ಕುಂತೈಶ್ಚಕ್ರೈಶ್ಚ ಶಂಕುಭಿಃ ॥ ೨೫ ॥

ಮುಸಲೈರಂಕುಶೈಶ್ಚೈವ ಲಾಂಗಲೈಃ ಪಟ್ಟಿಶೈಸ್ತಥಾ ।
ಶಕ್ತ್ಯೋಪಲೈಶ್ಶತಘ್ನೀಭಿಃ ಪಾಶೈಶ್ಚ ತಲಮುಷ್ಟಿಭಿಃ ॥ ೨೬ ॥

ಶೂಲೈರ್ನಾಲೀಕನಾರಾಚೈಃ ಕ್ಷೇಪಣೀಯಾಸ್ತ್ರ ಸಂಕುಲೈಃ ।
ರಥಾಶ್ವನಾಗಪದಗೈಃ ಸಂಕುಲೋ ವವೃಧೇ ರಣಃ ॥ ೨೭ ॥

ದೇವಾಶ್ಚ ವಿವಿಧಾಸ್ತ್ರಾಣಿ ದೈತೇಯೇಭ್ಯಃ ಸಮಾಕ್ಷಿಪನ್ ।
ಏವಮಬ್ದಸಹಸ್ರಾಣಿ ಯುದ್ಧಮಾಸೀತ್ಸುದಾರುಣಂ ॥ ೨೮ ॥

ಅಥ ದೈತ್ಯಬಲೇ ವೃದ್ಧೇ ಪರಾಭೂತಾ ದಿವೌಕಸಃ ।
ಸುರಲೋಕಂ ಪರಿತ್ಯಜ್ಯ ಸರ್ವೇ ಭೀತಾಃ ಪ್ರದುದ್ರುವುಃ ॥ ೨೯ ॥

ನರರೂಪಪರಿಚ್ಛನ್ನಾ ವಿಚೇರುರವನೀತಲೇ ।
ವೈರೋಚನಿಸ್ತ್ರಿಭುವನಂ ನಾರಾಯಣಪರಾಯಣಃ ॥ ೩೦ ॥

---

೨೫-೨೮. ಕಬ್ಬಿಣದ ಕುಸುವಾರಿ ಅಥವಾ ಗುದಿಗೆ ಕಲ್ಲು ಎಸೆಯುವುದಕ್ಕೆ ಸಾಧಕವಾದ ದಾರದ ಯಂತ್ರ, ಕತ್ತಿ, ಕೊಡಲಿ, ತೋಮರ, (ಮರದ ಪಿಳ್ಳೇದಾಣಿ ಮುಂತಾದ ಆಯುಧ) ಲೋಹದ ಕಟ್ಟುಗಳನ್ನು ಹಾಕಿರುವ ದೊಣ್ಣೆ ಚಾಕು, ಈಟೀಕೋಲು, ಚಕ್ರ, ಗೂಟ, ಒನಕೆ, ಅಂಕುಶ, ನೇಗಿಲು, ಪಟ್ಟಿಶ, ಶಕ್ತ್ಯಾಯುಧ, ಕಲ್ಲು, ಹಗ್ಗ, ಪಾದ, ಮುಷ್ಟಿ, ಶೂಲ, ಭಲ್ಲೆ, ಬಾಣ, ಹಾರಿಸುವ ಅಸ್ತ್ರ ಇವುಗಳಿಂದಲೂ ಮತ್ತು ರಥ, ಕುದುರೆ, ಆನೆ, ಕಾಲಾಳು ಇವುಗಳಿಂದಲೂ ಸಹ ಕೂಡಿದ ಯುದ್ಧವು ಅಭಿವೃದ್ಧಿಯಾಯಿತು.

೨೯. ತರುವಾಯ ದೈತ್ಯರ ಸಾಮರ್ಥ್ಯವು ಹೆಚ್ಚಾಗಲು ದೇವತೆಗಳು ಪರಾಜಿತರಾಗಿ ಎಲ್ಲರೂ ಭಯದಿಂದ ದೇವಲೋಕವನ್ನು ಬಿಟ್ಟು ಓಡಿಹೋಗಿ ಮನುಷ್ಯವೇಷವನ್ನು ಧರಿಸಿ ಭೂಲೋಕದಲ್ಲಿ ಸಂಚರಿಸುತ್ತಿದ್ದರು.

೩೦-೩೧. ಮಹಾಬಲಿಷ್ಠನಾದ ಬಲಿಯು ನಾರಾಯಣನನ್ನು ಧ್ಯಾನಿಸುತ್ತಾ ನಿರವಧಿಕವಾದ ಐಶ್ವರ್ಯದಿಂದ ಅಭಿವೃದ್ಧಿಗೊಂಡ ಸಂಪತ್ತುಳ್ಳವನಾಗಿ

ಬುಭುಜೇಽವ್ಯಾಹತೈಶ್ವರ್ಯಃ ಪ್ರವೃದ್ಧಶ್ರೀರ್ಮಹಾಬಲಃ ।
ಇಯಾಜ ಚಾಶ್ವಮೇಧೈಃ ಸ ವಿಷ್ಣುಪ್ರೀಣನತತ್ಪರಃ ॥ ೩೧ ॥

ಇಂದ್ರತ್ವಂಚಾಕರೋತ್ಸ್ವರ್ಗೇ ದಿಕ್ಪಾಲತ್ವಂ ತಥೈವ ಚ ।
ದೇವಾನಾಂ ಪ್ರೀಣನಾರ್ಥಾಯ ಯೇ ಕ್ರಿಯಂತೇ ದ್ವಿಜೈರ್ಮಖಾಃ ॥ ೩೨ ॥

ತೇಷು ಯಜ್ಞೇಷು ಸರ್ವೇಷು ಹವಿರ್ಭುಂಕ್ತೇ ಸ ದೈತ್ಯರಾಟ್ ।
ಅದಿತಿಃ ಸ್ವಾತ್ಮಜಾನ್ವೀಕ್ಷ್ಯ ದೇವಮಾತಾಽತಿದುಃಖಿತಾ ॥ ೩೩ ॥

ವೃಥಾಽತ್ರ ನಿವಸಾಮೀತಿ ಮತ್ವಾಽಗಾದ್ಧಿಮವದ್ಗಿರಿಂ ।
ಶಕ್ರಸ್ಯೈಶ್ವರ್ಯಮಿಚ್ಛಂತೀ ದೈತ್ಯಾನಾಂ ಚ ಪರಾಜಯಂ ॥ ೩೪ ॥

ಹರಿಧ್ಯಾನಪರಾ ಭೂತ್ವಾ ತಪಸ್ತೇಪೇಽತಿದುಷ್ಕರಂ ।
ಕಿಂಚಿತ್ಕಾಲಂ ಸಮಾಸೀನಾ ತಿಷ್ಠಂತೀ ಚ ತತಃ ಪರಂ ॥ ೩೫ ॥

---

ಮೂರುಲೋಕಗಳನ್ನೂ ಆಳುತ್ತಾ ಸುಖವಾಗಿದ್ದನು. ಮತ್ತು ಅವನು ವಿಷ್ಣುವನ್ನು ಸಂತೋಷಪಡಿಸುವ ಕಾರ್ಯದಲ್ಲಿ ನಿರತನಾಗಿ ಅಶ್ವಮೇಧಯಾಗಗಳನ್ನು ಮಾಡಿದನು.

೩೨–೩೩. ಬಲಿಯು ಸ್ವರ್ಗಲೋಕದಲ್ಲಿ ಇಂದ್ರಭಾವ ಮತ್ತು ದಿಕ್ಪಾಲಕ ಭಾವವನ್ನೂ ಸಹ ಹೊಂದಿದನು. ದೇವತೆಗಳ ಪ್ರೀತ್ಯರ್ಥವಾಗಿ ದ್ವಿಜರು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ಮಾಡುತ್ತಿದ್ದ ಸಕಲ ಯಜ್ಞಗಳಲ್ಲಿಯೂ ಆ ದೈತ್ಯೇಂದ್ರನೇ ಹವಿರ್ಭಾಗವನ್ನು ಸ್ವೀಕರಿಸುತ್ತಿದ್ದನು.

೩೩-೩೫. ದೇವತೆಗಳ ತಾಯಿಯಾದ ಅದಿತಿಯು ತನ್ನ ಮಕ್ಕಳನ್ನು ನೋಡಿ ಬಹಳ ದುಃಖಪಟ್ಟವಳಾಗಿ ತಾನು ಇಲ್ಲಿ ಸುಮ್ಮನಿರುವುದು ಅನುಚಿತವೆಂದು ತಿಳಿದು ಹಿಮತ್ಪರ್ವತಕ್ಕೆ ಹೋದಳು. ಅಲ್ಲಿ ಆಕೆಯು ಇಂದ್ರನಿಗೆ ಐಶ್ವರ್ಯ ದೈತ್ಯರಿಗೆ ಪರಾಜಯ ಇವುಗಳುಂಟಾಗಬೇಕೆಂಬ ಅಪೇಕ್ಷೆಯಿಂದ ವಿಷ್ಣುಧ್ಯಾನನಿರತಳಾಗಿ ಅತಿ ದುಃಸ್ಸಾಧ್ಯವಾದ ತಪಸ್ಸನ್ನು ಮಾಡಿದಳು.

**ಪಾದೇನೈಕೇನ ಸುಚಿರಂ ತತಃ ಪಾದಾಗ್ರಮಾತ್ರತಃ ।**
**ಕಂಚಿತ್ಕಾಲಂ ಫಲಾಹಾರಾ ತತಃ ಶೀರ್ಣದಲಾಶನಾ ॥ ೩೬ ॥**

**ತತೋ ಜಲಾಶನಾ ವಾಯುಭೋಜನಾಹಾರವರ್ಜಿತಾ ।**
**ಸಚ್ಚಿದಾನಂದಸಂದೋಹಂ ಧ್ಯಾಯತ್ಯಾತ್ಮಾನಮಾತ್ಮನಾ ॥ ೩೭ ॥**

**ದಿವ್ಯಾಬ್ದಾನಾಂ ಸಹಸ್ರಂ ಸಾ ತಪೋಽತಪ್ಯತ ನಾರದ ।**
**ದುರಂತಂ ತತ್ತಪಃ ಶ್ರುತ್ವಾ ದೈತೇಯಾ ಮಾಯಿನೋಽದಿತಿಂ ॥ ೩೮ ॥**

**ದೇವತಾರೂಪಮಾಸ್ಥಾಯ ಸಂಪ್ರೋಚುರ್ಬಲಿನೋದಿತಾಃ ।**
**ಕಿಮರ್ಥಂ ತಪ್ಯಸೇ ಮಾತಃ ಶರೀರಪರಿಶೋಷಣಂ ॥ ೩೯ ॥**

**ಯದಿ ಜಾನಂತಿ ದೈತೇಯಾ ಮಹದ್ದುಃಖಂ ತತೋ ಭವೇತ್ ।**
**ತ್ಯಜೇದಂ ದುಃಖಬಹುಲಂ ಕಾಯಶೋಷಣಕಾರಣಂ ॥ ೪೦ ॥**

---

೩೫-೩೮. ಆ ಅದಿತಿದೇವಿಯು ಸ್ವಲ್ಪಕಾಲ ಕುಳಿತು, ಅನಂತರ ನಿಂತು, ತರುವಾಯ ಬಹುಕಾಲ ಒಂದೇ ಕಾಲಿನಿಂದ ನಿಂತು, ಆಮೇಲೆ ಪಾದದ ಕೊನೆಯಭಾಗ ಎಂದರೆ ಕಾಲಿನ ಬೆಟ್ಟುಗಳನ್ನು ಮಾತ್ರ ಭೂಮಿಯ ಮೇಲೆ ಊರಿ ನಿಂತುಕೊಂಡು, ಸ್ವಲ್ಪಕಾಲ ಹಣ್ಣುಗಳನ್ನೂ, ಅನಂತರ ಒಣಗಿದ ಎಲೆಗಳನ್ನೂ, ತರುವಾಯ ನೀರನ್ನು ಮಾತ್ರ ಆಮೇಲೆ ಗಾಳಿಯನ್ನು ಮಾತ್ರ ಸೇವಿಸಿ ಆಹಾರವಿಲ್ಲದೆಯೂ ಸಚ್ಚಿದಾನಂದಪೂರ್ಣನಾದ ಹರಿಯನ್ನು ಮನಃಪೂರ್ವಕವಾಗಿ ಧ್ಯಾನಿಸುತ್ತಾ ದೇವಮಾನದ ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದಳು.

೩೮-೪೦. ಮಾಯಾವಿಗಳಾದ ದೈತ್ಯರು, ಅದಿತಿದೇವಿಯು ಕೊನೆಮುಟ್ಟದ ತಪಸ್ಸು ಮಾಡುವುದನ್ನು ಕೇಳಿ ಬಲಿಯಿಂದ ಪ್ರೇರಿತರಾಗಿ ದೇವತೆಗಳ ವೇಷವನ್ನು ಹಾಕಿಕೊಂಡು ಅದಿತಿಯ ಬಳಿಗೆ ಬಂದು ಮುಂದೆ ಹೇಳುವ ರೀತಿಯಲ್ಲಿ ಮಾತನಾಡಿದರು. ತಾಯಿಯೇ ! ನೀನು ಏತಕ್ಕೋಸ್ಕರ ದೇಹವನ್ನು ಒಣಗಿಸುವಂತಹ ತಪಸ್ಸನ್ನು ಮಾಡುತ್ತಿದ್ದೀಯೆ!? ಒಂದುವೇಳೆ ದೈತ್ಯರಿಗೆ ತಿಳಿದರೆ ಅದರಿಂದ ಬಹು ದುಃಖವುಂಟಾದೀತು. ಆದುದರಿಂದ ಬಹು ದುಃಖಗಳಿಗೂ ಮತ್ತು ಶರೀರಶೋಷಣಕ್ಕೂ ಕಾರಣವಾಗಿರುವ ಈ ತಪಸ್ಸನ್ನು ಬಿಡು.

**ಪ್ರಯಾಸಸಾಧ್ಯಂ ಸುಕೃತಂ ನ ಪ್ರಶಂಸಂತಿ ಪಂಡಿತಾಃ ।**
**ಶರೀರಂ ಯತ್ನತೋ ರಕ್ಷ್ಯಂ ಧರ್ಮಸಾಧನತತ್ಪರೈಃ ॥ ೪೧ ॥**

**ಯೇ ಶರೀರಮುಪೇಕ್ಷಂತೇ ತೇಸ್ಯುರಾತ್ಮವಿಘಾತಿನಃ ।**
**ಸುಖಂ ತ್ವಂ ತಿಷ್ಠ ಸುಭಗೇ ಪುತ್ರಾನಸ್ಮಾನ್ನಖೇದಯ ॥ ೪೨ ॥**

**ಮಾತ್ರಾಹೀನಾ ಜನಾ ಮಾತರ್ಮೃತಪ್ರಾಯಾ ನ ಸಂಶಯಃ ।**
**ಗಾವೋ ವಾ ಪಶವೋ ವಾಽಪಿ ಪನ್ನಗಾ ವಾ ಮಹೀರುಹಾಃ ॥ ೪೩ ॥**

**ನ ಲಭಂತೇ ಸುಖಂ ಕಿಂಚಿನ್ಮಾತ್ರಾ ಹೀನಾ ಮೃತೋಪಮಾಃ ।**
**ದರಿದ್ರೋ ವಾಽಪಿ ರೋಗೀ ವಾ ದೇಶಾಂತರಗತೋಽಪಿ ವಾ ॥ ೪೪ ॥**

**ಮಾತುರ್ದರ್ಶನಮಾತ್ರೇಣ ಲಭತೇ ಪರಮಾಂ ಮುದಂ ।**
**ಅನ್ನೇ ವಾ ಸಲಿಲೇ ವಾಽಪಿ ಧನಾದೌ ವಾ ಪ್ರಿಯಾಸು ಚ ॥ ೪೫ ॥**

---

೪೧-೪೨. ಜ್ಞಾನಿಗಳು ಕಷ್ಟದಿಂದ ಸಂಪಾದಿಸುವ ಪುಣ್ಯವನ್ನು ಪ್ರಶಸ್ತವೆಂದು ಹೇಳುವುದಿಲ್ಲ. ಧರ್ಮ ಸಂಪಾದನೆಯಲ್ಲಿ ಆಸಕ್ತರಾಗಿರುವವರು ಶರೀರವನ್ನು ಪ್ರಯತ್ನಪೂರ್ವಕವಾಗಿ ಕಾಪಾಡಿಕೊಳ್ಳಬೇಕು. ಶರೀರವನ್ನು ಉದಾಸೀನಮಾಡುವವರು ಆತ್ಮಹಿಂಸಕರು. ಆದುದರಿಂದ ಸೌಭಾಗ್ಯವತಿಯಾದ ನೀನು ಈ ಉಗ್ರತಪಸ್ಸನ್ನು ಬಿಟ್ಟು ಸುಖವಾಗಿರು. ಮಕ್ಕಳಾದ ನಮ್ಮನ್ನು ದುಃಖಪಡಿಸಬೇಡ.

೪೩-೪೬. ತಾಯಿಯೇ ! ತಾಯಿಯಿಲ್ಲದ ಜನರು ಖಂಡಿತವಾಗಿಯೂ ಸತ್ತಂತೆಯೇ ಸರಿ. ಗೋವು, ಪಶು, ಸರ್ಪ ಮತ್ತು ವೃಕ್ಷ ಇವುಗಳೆಲ್ಲಾ ತಾಯಿಯಿಲ್ಲದಿದ್ದರೆ ಸತ್ತಂತಾಗಿ ಸ್ವಲ್ಪವೂ ಸುಖವನ್ನು ಹೊಂದುವುದಿಲ್ಲ. ಬಡವ, ಕಾಹಿಲೆಯವನು, ದೇಶಾಂತರಕ್ಕೆ ಹೋದವನಾದರೂ ಸರಿ, ತಾಯಿಯನ್ನು ನೋಡುವ ಮಾತ್ರದಿಂದ ಉತ್ತಮ ಸಂತೋಷವನ್ನು ಹೊಂದುತ್ತಾನೆ. ಮನುಷ್ಯನು ಅನ್ನ, ಉದಕ, ಹಣ ಮುಂತಾದುವು, ಹೆಂಡತಿ, ಇವುಗಳ ವಿಷಯದಲ್ಲಿಯಾವಾಗಲಾದರೂ ವಿಮುಖನಾಗಬಹುದು. ಮಾತೃ ವಿಷಯದಲ್ಲಿ ಮಾತ್ರ

ಕದಾಚಿದ್ವಿಮುಖೋ ಯಾತಿ ಜನೋ ಮಾತರಿ ಕೋಽಪಿ ನ ।
ಯಸ್ಯ ಮಾತಾ ಗೃಹೇ ನಾಸ್ತಿ ಯತ್ರ ಧರ್ಮಪರಾಯಣಾ ।
ಸಾಧ್ವೀ ಚ ಸ್ತ್ರೀ ಪತಿಪ್ರಾಣಾ ಗಂತವ್ಯಂ ತೇನ ವೈ ವನಂ ॥ ೪೬ ॥

ಧರ್ಮಶ್ಚ ನಾರಾಯಣಭಕ್ತಿಹೀನೋ
ಧನಂ ಚ ಸದ್ಭೋಗವಿವರ್ಜಿತಂ ಹಿ ।
ಗೃಹಂ ಚ ಭಾರ್ಯಾತನಯೈರ್ವಿಹೀನಂ
ಯಥಾ ತಥಾ ಮಾತೃವಿಹೀನಮರ್ತ್ಯಃ ॥ ೪೭ ॥

ತಸ್ಮಾದ್ದೇವಿ ಪರಿತ್ರಾಹಿ ದುಃಖಾರ್ತಾನಾತ್ಮಜಾಂಸ್ತವ ।
ಇತ್ಯುಕ್ತಾಪ್ಯದಿತಿರ್ದೈತ್ಯೈಃ ನ ಚಚಾಲ ಸಮಾಧಿತಃ ॥ ೪೮ ॥

ಏವಮುಕ್ತ್ವಾಽಸುರಾಃ ಸರ್ವೇ ಹರಿಧ್ಯಾನಪರಾಯಣಾಂ ।
ನಿರೀಕ್ಷ್ಯ ಕ್ರೋಧಸಂಯುಕ್ತಾ ಹಂತುಂ ಚಕ್ರುರ್ಮನೋರಥಂ ॥ ೪೯ ॥

---

ಯಾರೂ ವಿಮುಖರಾಗುವುದಿಲ್ಲ. ಯಾವನ ಮನೆಯಲ್ಲಿ ತಾಯಿಯಿಲ್ಲವೋ, ಗಂಡನಲ್ಲಿ ಪ್ರಾಣವನ್ನಿಟ್ಟಿರುವ ಧರ್ಮನಿರತಳಾದ ಸಾಧ್ವೀಮಣಿಯೂ ಸಹ ಇರುವುದಿಲ್ಲವೋ ಅಂತಹವನು ಅರಣ್ಯಕ್ಕೆ ಹೋಗುವುದೇ ಲೇಸು.

೪೭-೪೯. ನಾರಾಯಣ ಭಕ್ತಿಯಿಲ್ಲದ ಧರ್ಮ, ಒಳ್ಳೆಯ ಭೋಗಗಳಿಗಾಗಿ ವಿನಿಯೋಗಿಸದಿರುವ ಧನ ಮತ್ತು ಹೆಂಡತಿಮಕ್ಕಳಿಲ್ಲದ ಮನೆ ಇವುಗಳಂತೆ ಮಾತೃವಿಲ್ಲದ ನರನು ನಿಷ್ಫಲನಾಗುತ್ತಾನೆ. ಆದಕಾರಣ ದೇವಿಯೇ! ದುಃಖಪೀಡಿತರಾದ ನಿನ್ನ ಮಕ್ಕಳನ್ನು ಸಂರಕ್ಷಿಸು. ಈ ರೀತಿಯಾಗಿ ದೈತ್ಯರು ಹೇಳಿದರೂ ಅದಿತಿಯು ಸಮಾಧಿಯೋಗದಲ್ಲಿ ಧ್ಯಾನಮಾಡುತ್ತಿದ್ದುದನ್ನು ಬಿಡಲಿಲ್ಲ. ಸಕಲ ರಾಕ್ಷಸರೂ ಈರೀತಿ ಹೇಳಿದಾಗ್ಯೂ ಅದಿತಿಯು ಸ್ವಲ್ಪವೂ ಚಲಿಸದೇ ವಿಷ್ಣುಧ್ಯಾನನಿರತಳಾಗಿದ್ದುದನ್ನು ನೋಡಿ ಕೋಪಗೊಂಡು ಅವಳನ್ನು ಸಂಹರಿಸಬೇಕೆಂದು ಸಂಕಲ್ಪಿಸಿದರು.

ಕಲ್ಪಾಂತಮೇಘನಿರ್ಘೋಷಾಃ ಕ್ರೋಧಸಂರಕ್ತಲೋಚನಾಃ ।
ದಂಷ್ಟ್ರಾಗ್ರೈರಸೃಜನ್ವಹ್ನಿಂ ಸೋಽದಹತ್ಕಾನನಂ ಕ್ಷಣಾತ್ ॥ ೫೦ ॥

ಶತಯೋಜನವಿಸ್ತೀರ್ಣಂ ನಾನಾಜೀವಸಮಾಕುಲಂ ।
ತೇನೈವ ದಗ್ಧಾ ದೈತೇಯಾ ಯೇ ಪ್ರಧರ್ಷಯಿತುಂ ಗತಾಃ ॥ ೫೧ ॥

ಸೈಕಾಽವಶಿಷ್ಟಾ ಜನನೀ ಸುರಾಣಾಂ
ತೇನಾನಲೇನಾಚ್ಯುತಸಕ್ತಚಿತ್ತಾ ।
ಸಂರಕ್ಷಿತಾ ವಿಷ್ಣುಸುದರ್ಶನೇನ
ದೈತ್ಯಾಂತಕೇನ ಸ್ವಜನಾನುಕಂಪಿನಾ ॥ ೫೨ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ಗಂಗೋತ್ಪತ್ತೌ ಬಲಿಕೃತದೇವಪರಾಜಯವರ್ಣನಂ
ನಾಮ ದಶಮೋಽಧ್ಯಾಯಃ

---

೫೦-೫೨. ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ರಾಕ್ಷಸರು ಪ್ರಳಯ ಕಾಲದ ಮೇಘನಾದದಂತೆ ಶಬ್ದಮಾಡುತ್ತಾ, ಕೋರೆಹಲ್ಲುಗಳ ಕೊನೆಯಭಾಗ ಗಳಿಂದ ಬೆಂಕಿಯನ್ನು ಹುಟ್ಟಿಸಿದರು. ಅದು ತಕ್ಷಣದಲ್ಲಿಯೇ ನೂರುಗಾವುದ ವಿಸ್ತೀರ್ಣವುಳ್ಳ ನಾನಾಪ್ರಾಣಿಗಳಿಂದ ಕೂಡಿದ ಅರಣ್ಯವನ್ನು ಸುಟ್ಟಿತು. ಅದಿತಿ ದೇವಿಯನ್ನು ಸಂಹರಿಸಲು ಬಂದಿದ್ದ ದೈತ್ಯರೂ ಸಹ ಆ ಬೆಂಕಿಯಿಂದಲೇ ದಹಿ ಸಲ್ಪಟ್ಟರು. ದೇವಮಾತೆಯು, ಹರಿಧ್ಯಾನ ತತ್ಪರಳೂ, ಆದ ಆ ಅದಿತಿ ದೇವಿಯು ಮಾತ್ರ ದೈತ್ಯಸಂಹಾರಕನೂ ಭಕ್ತಜನಕೃಪಾಳುವೂ ಆದ ಶ್ರೀ ವಿಷ್ಣು ವಿನ ಸುದರ್ಶನದಿಂದ ರಕ್ಷಿಸಲ್ಪಟ್ಟವಳಾಗಿ ಆ ಬೆಂಕಿಗೆ ಸಿಲುಕದೆ ಹಾಗೆಯೇ ಉಳಿದಳು.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ
ಗಂಗೋತ್ಪತ್ತಿ ಪ್ರಕರಣದಲ್ಲಿ ಬಲಿಯಿಂದ ಕೃತವಾದ ದೇವಪರಾಜಯ
ಕಥನವೆಂಬ ಹತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯವು ಗಂಗೋತ್ಪತ್ತಿವಿಧಾನವನ್ನುಪದೇಶಿಸಬೇಕೆಂಬ ನಾರದರ ಪ್ರಶ್ನೆಯಿಂದ ಪ್ರಾರಂಭಿಸಲ್ಪಟ್ಟಿದೆ. ಕಶ್ಯಪನೆಂಬ ಮುನಿಯು ಇದ್ದನು. ಆತನಿಗೆ ಅದಿತಿ ಮತ್ತು ದಿತಿ ಎಂಬ ಇಬ್ಬರು ಹೆಂಡತಿಯರು ಇದ್ದರು. ಇಂದ್ರಾದಿ ದೇವತೆಗಳು ಅದಿತಿಯ ಮಕ್ಕಳು. ದೈತ್ಯರು ದಿತಿಯ ಮಕ್ಕಳು. ಈ ದೇವಾಸುರರು ಯಾವಾಗಲೂ ಪರಸ್ಪರ ವಿಜಯಾಕಾಂಕ್ಷಿಗಳಾಗಿದ್ದರು. ದೈತ್ಯಪರಂಪರೆಯಲ್ಲಿ ಜನಿಸಿದ ಬಲಿ ಎಂಬ ರಾಕ್ಷಸನು ಬಹಳ ಬಲಿಷ್ಠನಾಗಿ ಭೂಲೋಕವನ್ನೆಲ್ಲಾ ಜಯಿಸಿ ಸಪರಿವಾರನಾಗಿ ಯುದ್ಧಕ್ಕೆ ಹೊರಟು ಇಂದ್ರಾದಿ ದೇವತೆಗಳನ್ನು ಜಯಿಸಿ ಸ್ವರ್ಗಲೋಕದಿಂದ ದೇವತೆಗಳನ್ನು ಹೊರಡಿಸಿ ಮೂರು ಲೋಕಗಳಿಗೂ ತಾನೇ ಅಧಿಪತಿಯಾದನು. ತರುವಾಯ ದೇವತೆಗಳು ರಾಜ್ಯವನ್ನು ಕಳೆದುಕೊಂಡು ದುಃಖಪಡುತ್ತಿದ್ದುದನ್ನು ನೋಡಿ ದೇವಮಾತೆಯಾದ ಅದಿತಿಯು ಹಿಮವತ್ಪರ್ವತಕ್ಕೆ ಹೋಗಿ ವಿಷ್ಣುವನ್ನು ಕುರಿತು ಸಾವಿರಾರು ವರ್ಷ ತಪಸ್ಸು ಮಾಡುತ್ತಿರುವಾಗ ದೈತ್ಯರು ಅದಕ್ಕೆ ವಿಘ್ನಮಾಡಬೇಕೆಂದು ಬಲಿರಾಜನಿಂದ ಪ್ರೇರಿತರಾಗಿ ದೇವತೆಗಳ ವೇಷವನ್ನುಧರಿಸಿ ಅದಿತಿಯ ಬಳಿಗೆ ಬಂದು ಅಮ್ಮಾ! ತಪಸ್ಸನ್ನು ನಿಲ್ಲಿಸಿ ನಮ್ಮ ಕ್ಲೇಶವನ್ನು ಪರಿಹರಿಸು ಎಂಬುದಾಗಿ ಬಹುಪ್ರಕಾರವಾಗಿ ಪ್ರಾರ್ಥಿಸಿಕೊಂಡರು. ಆದಾಗ್ಯೂ ಅದಿತಿಯು ಕಣ್ತೆರೆದು ನೋಡಲಿಲ್ಲ. ಅವಳು ಕೇವಲ ಹರಿಧ್ಯಾನದಲ್ಲಿಯೇ ನಿರತಳಾಗಿದ್ದುದರಿಂದ ದೈತ್ಯರು ಕೋಪಗೊಂಡು ಅವಳನ್ನು ಸಂಹರಿಸಲೋಸುಗ ದೊಡ್ಡ ಬೆಂಕಿಯನ್ನು ಸೃಷ್ಟಿಸಿದರು. ಅದರಿಂದ ಆ ಕಾಡು ಮತ್ತು ದೈತ್ಯರೂ ಸಹ ಸುಡಲ್ಪಟ್ಟರು. ಶ್ರೀಪರಮಾತ್ಮನ ಧ್ಯಾನದಲ್ಲೇ ನಿರತಳಾಗಿ ಬಾಹ್ಯ ವ್ಯಾಪಾರವನ್ನೇ ಅರಿಯದ ಅದಿತಿದೇವಿಯೊಬ್ಬಳು ಮಾತ್ರ ವಿಷ್ಣುವಿನ ಅನುಗ್ರಹದಿಂದ ರಕ್ಷಿಸಲ್ಪಟ್ಟು ಹಾಗೆಯೇ ಸಮಾಧಿಯಲ್ಲಿ ಕುಳಿತಿದ್ದಳು ಎಂಬಲ್ಲಿ ಅಧ್ಯಾಯವು ಮುಗಿಯಿತು.

---

## ಏಕಾದಶೋಽಧ್ಯಾಯಃ

---

ನಾರದ ಉವಾಚ

**ಅಹೋ ಹ್ಯತ್ಯದ್ಭುತಂ ಪ್ರೋಕ್ತಂ ತ್ವಯಾ ಭ್ರಾತರಿದಂ ಮಮ ।**
**ಸ ವಹ್ನಿರದಿತಿಂ ಮುಕ್ತ್ವಾ ಕಥಂ ತಾನದಹತ್ ಕ್ಷಣಾತ್ ॥ ೧ ॥**

**ವದಾದಿತೇರ್ಮಹಾಸತ್ತ್ವಂ ವಿಶೇಷಾಶ್ಚರ್ಯಕಾರಣಂ ।**
**ಪರೋಪದೇಶನಿರತಾಃ ಸಜ್ಜನಾ ಹಿ ಮುನೀಶ್ವರಾಃ ॥ ೨ ॥**

ಸನಕ ಉವಾಚ

**ಶೃಣು ನಾರದ ಮಾಹಾತ್ಮ್ಯಂ ಹರಿಭಕ್ತಿರತಾತ್ಮನಾಂ ।**
**ಹರಿಧ್ಯಾನಪರಾನ್ಸಾಧೂನ್ಕಃ ಸಮರ್ಥಃ ಪ್ರಬಾಧಿತುಂ ॥ ೩ ॥**

---

### ಹನ್ನೊಂದನೆಯ ಅಧ್ಯಾಯವು

೧-೨. ನಾರದನು ಹೇಳಿದನು—ಆಶ್ಚರ್ಯ! ಸಹೋದರನೇ! ನೀನು ಅತ್ಯಾಶ್ಚರ್ಯಕರವಾದ ಈ ವಿಷಯವನ್ನು ನನಗೆ ಹೇಳಿರುತ್ತೀಯೆ. ಆ ಬೆಂಕಿಯು ಅದಿತಿಯನ್ನು ಮಾತ್ರ ಬಿಟ್ಟು ರಾಕ್ಷಸರನ್ನು ಕ್ಷಣಮಾತ್ರದಲ್ಲಿ ಹೇಗೆ ಸುಟ್ಟಿತು? ಅತ್ಯಂತಾಶ್ಚರ್ಯಕರವಾದ ಅದಿತಿಯ ಮಹಾಮಹಿಮೆಯನ್ನು ಹೇಳು. ಸಾಧುಗಳಾದ ಮುನಿಶ್ರೇಷ್ಠರು ಸ್ವಾಭಾವಿಕವಾಗಿ ಇತರರಿಗೆ ತತ್ತ್ವೋಪದೇಶಮಾಡಲು ಆಸಕ್ತಿಯುಳ್ಳವರು. ಆದುದರಿಂದ ನೀನು ನನಗೆ ಅದಿತಿಯ ಮಹಿಮೆಯನ್ನು ಪದೇಶಿಸು.

೩. ಸನಕನು ಹೇಳಿದನು—ನಾರದನೇ! ವಿಷ್ಣುಭಕ್ತಿನಿರತರಾದವರ ಮಾಹಾತ್ಮ್ಯೆಯನ್ನು ಹೇಳುತ್ತೇನೆ ಕೇಳು. ಹರಿ ಧ್ಯಾನದಲ್ಲಿ ಆಸಕ್ತರಾದ ಸಜ್ಜನರನ್ನು ಹಿಂಸಿಸಲು ಯಾವನು ಶಕ್ತನು ?

ಹರಿಭಕ್ತಿಪರೋ ಯತ್ರ ತತ್ರ ಬ್ರಹ್ಮಾ ಹರಿಃ ಶಿವಃ ।
ದೇವಾಃ ಸಿದ್ಧಾ ಮುನೀಶಾಶ್ಚ ನಿತ್ಯಂ ತಿಷ್ಠಂತಿ ಸತ್ತಮಾಃ ॥ ೪ ॥

ಹರಿರಾಸ್ತೇ ಮಹಾಭಾಗ ಹೃದಯೇ ಶಾಂತಚೇತಸಾಂ ।
ಹರಿನಾಮಪರಾಣಾಂ ಚ ಕಿಮು ಧ್ಯಾನರತಾತ್ಮನಾಂ ॥ ೫ ॥

ಶಿವಪೂಜಾರತೋ ವಾಽಪಿ ವಿಷ್ಣುಪೂಜಾಪರೋಽಪಿ ವಾ ।
ಯತ್ರ ತಿಷ್ಠತಿ ತತ್ರೈವ ಲಕ್ಷ್ಮೀಃ ಸರ್ವಾಶ್ಚ ದೇವತಾಃ ॥ ೬ ॥

ಯತ್ರ ಪೂಜಾಪರೋ ವಿಷ್ಣೋರ್ವಹ್ನಿಸ್ತತ್ರ ನ ಬಾಧತೇ ।
ರಾಜಾ ವಾ ತಸ್ಕರೋ ವಾಽಪಿ ವ್ಯಾಧಯಶ್ಚ ನ ಸಂತಿ ಹಿ ॥ ೭ ॥

ಪ್ರೇತಾ ಪಿಶಾಚಾ ಕೂಷ್ಮಾಂಡಗ್ರಹಾ ಬಾಲಗ್ರಹಾಸ್ತಥಾ ।
ಡಾಕಿನ್ಯೋ ರಾಕ್ಷಸಾಶ್ಚೈವ ನ ಬಾಧಂತೇಽಚ್ಯುತಾರ್ಚಕಂ ॥ ೮ ॥

---

೪. ಹರಿಭಕ್ತರಿರುವೆಡೆಯಲ್ಲಿ ಬ್ರಹ್ಮ, ಹರಿ, ರುದ್ರ ಮುಂತಾದ ದೇವತೆಗಳು, ಸಿದ್ಧರು, ಋಷಿಶ್ರೇಷ್ಠರು, ಸಾಧೂತ್ತಮರೂ ಸಹ ಯಾವಾಗಲೂ ಸನ್ನಿಹಿತರಾಗಿರುತ್ತಾರೆ.

೫. ಮಾನ್ಯನೇ! ಶಾಂತಚಿತ್ತರಾಗಿ ಹರಿನಾಮಸಂಕೀರ್ತನೆಮಾಡುವವರ ಹೃದಯದಲ್ಲಿ ಹರಿಯು ಸನ್ನಿಹಿತನಾಗಿರುತ್ತಾನೆ. ಹೀಗಿರುವಾಗ ಆದರದಿಂದ ಧ್ಯಾನಮಾಡುವವರಲ್ಲಿ ಹರಿಯು ಸನ್ನಿಹಿತನಾಗಿರುತ್ತಾನೆಂದು ಹೇಳತಕ್ಕದ್ದೇನು.

೬. ಶಿವಪೂಜೆಯನ್ನು ಮಾಡುವವನು ಅಥವಾ ವಿಷ್ಣುಪೂಜೆಯಲ್ಲಿ ಆಸಕ್ತಿಯುಳ್ಳವನು ಇರುವ ಸ್ಥಳದಲ್ಲಿ ಲಕ್ಷ್ಮಿಯು ಮತ್ತು ಸಕಲ ದೇವತೆಗಳೂ ಸಹ ವಾಸಿಸುತ್ತಾರೆ.

೭-೮. ಭಕ್ತಿಯಿಂದ ವಿಷ್ಣುಪೂಜೆ ಮಾಡುವವನಿರುವೆಡೆಯಲ್ಲಿ ಬೆಂಕಿಯು ಹಿಂಸಿಸುವುದಿಲ್ಲ, ರಾಜನೂ ಸಹ ವಿಷ್ಣುಪೂಜಕನಿಗೆ ತೊಂದರೆ ಮಾಡುವುದಿಲ್ಲ. ಅಂತಹವನಿಗೆ ಕಳ್ಳನ ಮತ್ತು ರೋಗಗಳ ಬಾಧೆಯೂ ಇಲ್ಲ. ಪ್ರೇತ, ಪಿಶಾಚ ಭೃಂಗ್ಯಾದಿಗಳು, ಗ್ರಹ, ಬಾಲಗ್ರಹ, ಡಾಕಿನೀಶಕ್ತಿಗಳು ಮತ್ತು ರಾಕ್ಷಸ ಇವರುಗಳು ವಿಷ್ಣುಪೂಜಕನನ್ನು ಬಾಧಿಸಲಾರವು.

ಪರಪೀಡಾರತಾ ಯೇ ತು ಭೂತವೇತಾಲಕಾದಯಃ ।
ನಶ್ಯಂತಿ ಯತ್ರ ಸದ್ಭಕ್ತೋ ಹರಿಲಕ್ಷ್ಮ್ಯರ್ಚನೇ ರತಃ ॥ ೯ ॥

ಜಿತೇಂದ್ರಿಯಃ ಸರ್ವಹಿತೋ ಧರ್ಮಕರ್ಮಪರಾಯಣಃ ।
ಯತ್ರ ತಿಷ್ಠತಿ ತತ್ರೈವ ಸರ್ವತೀರ್ಥಾನಿ ದೇವತಾಃ ॥ ೧೦ ॥

ನಿಮಿಷಂ ನಿಮಿಷಾರ್ಧಂ ವಾ ಯತ್ರ ತಿಷ್ಠಂತಿ ಯೋಗಿನಃ ।
ತತ್ರೈವ ಸರ್ವಶ್ರೇಯಾಂಸಿ ತತ್ತೀರ್ಥಂ ತತ್ತಪೋವನಂ ॥ ೧೧ ॥

ಯನ್ನಾಮೋಚ್ಚಾರಣಾದೇವ ಸರ್ವೇ ನಶ್ಯಂತ್ಯುಪದ್ರವಾಃ ।
ಸ್ತೋತ್ರೈರ್ವಾಪ್ಯರ್ಹಣಾಭಿರ್ವಾ ಕಿಮು ಧ್ಯಾನೇನ ಕಥ್ಯತೇ ॥ ೧೨ ॥

---

೯. ಹರಿ ಮತ್ತು ಲಕ್ಷ್ಮೀದೇವಿ ಇವರುಗಳ ಪೂಜೆಯಲ್ಲಿ ಆಸಕ್ತನಾದ ಸದ್ಭಕ್ತನಿರುವ ಸ್ಥಳದಲ್ಲಿ ಸ್ವಾಭಾವಿಕವಾಗಿ ಇತರರನ್ನು ಬಾಧಿಸುವ ಭೂತ, ಬೇತಾಲ ಮುಂತಾದುವುಗಳು ಪರಿಹಾರವಾಗುತ್ತವೆ.

೧೦. ಇಂದ್ರಿಯನಿಗ್ರಹಮಾಡುವವನೂ, ಎಲ್ಲರಿಗೂ ಅನುಕೂಲವನ್ನು ಮಾಡುವವನೂ, ಧರ್ಮ ಮತ್ತು ವಿಹಿತ ಕರ್ಮಗಳ ಅನುಷ್ಠಾನಪರನೂ ಆಗಿರುವವನು ಇರುವ ಸ್ಥಳವೇ ಸಕಲ ತೀರ್ಥಗಳು. ಅಲ್ಲಿ ಎಲ್ಲಾ ದೇವತೆಗಳ ಸನ್ನಿಧಾನವೂ ಇರುತ್ತದೆ.

೧೧. ಒಂದು ನಿಮಿಷ ಅಥವಾ ಅರ್ಧ ನಿಮಿಷವಾದರೂ ಯೋಗಿಗಳು ನಿಂತಿದ್ದ ಸ್ಥಳವು ಸಕಲ ಶ್ರೇಯಸ್ಸಿಗೂ ಸಾಧನವು. ಅಂತಹ ಸ್ಥಳವೇ ತೀರ್ಥ ಮತ್ತು ತಪೋವನವಾಗುವುದು.

೧೨. ಯಾವ ಭಗವಂತನ ನಾಮಸಂಕೀರ್ತನಮಾತ್ರದಿಂದಲೇ ಸಕಲ ಬಾಧೆಗಳೂ ಹೋಗುತ್ತವೆಯೋ ಅಂತಹ ಹರಿಯ ಸ್ತೋತ್ರ, ಪೂಜೆ, ಧ್ಯಾನ ಇವುಗಳನ್ನು ಮಾಡುವವರಿಗೆ ಯಾವ ಬಾಧೆಯೂ ಸಂಭವಿಸುವುದಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು.

**ಏವಂ ತೇನಾಗ್ನಿನಾ ವಿಪ್ರ ದಗ್ಧಂ ಸಾಸುರಕಾನನಂ ।**
**ಸ್ವಾsದಿತಿರ್ನೈವದಗ್ಧಾಭೂತ್ ವಿಷ್ಣುಚಕ್ರಾಭಿರಕ್ಷಿತಾ ॥ ೧೩ ॥**

**ತತಃ ಪ್ರಸನ್ನವದನಃ ಪದ್ಮಪತ್ರಾಯತೇಕ್ಷಣಃ ।**
**ಪ್ರಾದುರಾಸೀತ್ಸಮೀಪೇsಸ್ಯಾಃ ಶಂಖಚಕ್ರಗದಾಧರಃ ॥ ೧೪ ॥**

**ಈಷದ್ಧಾಸ್ಯಸ್ಫುರದ್ದಂತಪ್ರಭಾಭಾಸಿತದಿಙ್ಮುಖಃ ।**
**ಸ್ಪೃಶನ್ಕರೇಣ ಪುಣ್ಯೇನ ಪ್ರಾಹ ಕಶ್ಯಪವಲ್ಲಭಾಂ ॥ ೧೫ ॥**

**ಶ್ರೀಭಗವಾನುವಾಚ**

**ದೇವಮಾತಃ ಪ್ರಸನ್ನೋsಸ್ಮಿ ತಪಸಾರಾಧಿತಸ್ತ್ವಯಾ ।**
**ಚಿರಂ ಶ್ರಾಂತಾಸಿ ಭದ್ರಂ ತೇ ಭವಿಷ್ಯತಿ ನ ಸಂಶಯಃ ॥ ೧೬ ॥**

**ವರಂ ವರಯ ದಾಸ್ಯಾಮಿ ಯತ್ತೇ ಮನಸಿ ರೋಚತೇ ।**
**ಮಾಭೈರ್ಭದ್ರೇ ಮಹಾಭಾಗೇ ಧ್ರುವಂ ಶ್ರೇಯೋ ಭವಿಷ್ಯತಿ ॥ ೧೭ ॥**

---

೧೩. ಬ್ರಾಹ್ಮಣನೇ! ಈರೀತಿಯಾಗಿ ಬೆಂಕಿಯಿಂದ ರಾಕ್ಷಸರು ಮತ್ತು ಅರಣ್ಯವೂ ಸಹ ದಹಿಸಲ್ಪಟ್ಟಾಗ್ಯೂ ಆ ಬೆಂಕಿಗೆ ವಿಷ್ಣುಚಕ್ರದಿಂದ ರಕ್ಷಿಸಲ್ಪಟ್ಟ ಅದಿತಿಯನ್ನು ಸುಡಲು ಸಾಧ್ಯವಾಗಲಿಲ್ಲ. ಆದುದರಿಂದ ಅದಿತಿಯು ಉಳಿದಳು.

೧೪-೧೫. ಅರಣ್ಯ ಮತ್ತು ರಾಕ್ಷಸರ ದಹನವಾದ ತರುವಾಯ ಪ್ರಸನ್ನಮುಖನು, ಕಮಲಪತ್ರದಂತೆ ವಿಶಾಲವಾದ ಕಣ್ಣುಗಳುಳ್ಳವನೂ ಆದ ಹರಿಯು ಶಂಖ, ಚಕ್ರ, ಗದೆಗಳನ್ನು ಧರಿಸಿ ಅದಿತಿದೇವಿಯ ಸಮೀಪದಲ್ಲಿಯೇ ಆವಿರ್ಭವಿಸಿದನು. ಕೂಡಲೇ ಶ್ರೀಹರಿಯು ಮುಗುಳುನಗೆಯಿಂದ ಪ್ರಕಾಶಮಾನವಾದ ಹಲ್ಲುಗಳ ಕಾಂತಿಯನ್ನು ಬೀರಿ ದಿಕ್ಕುಗಳನ್ನೇ ಪ್ರಕಾಶಗೊಳಿಸುತ್ತಿರುವ ಮುಖವುಳ್ಳವನಾಗಿ ಕಶ್ಯಪ ಪತ್ನಿಯಾದ ಅದಿತಿಯನ್ನು ಪುಣ್ಯಕರವಾದ ಹಸ್ತದಿಂದ ಸ್ಪರ್ಶಮಾಡಿ ಮಾತನಾಡಿದನು.

೧೬-೧೭. ದೇವ ಮಾತೆಯೇ! ನಿನ್ನ ತಪಸ್ಸಿನಿಂದ ಸತ್ಕರಿಸಲ್ಪಟ್ಟ ನಾನು ಪ್ರಸನ್ನನಾಗಿರುವೆನು. ಬಹುಕಾಲದಿಂದ ಬಳಲಿದ್ದೀಯೆ. ನಿನಗೆ

**ಇತ್ಯುಕ್ತ್ವಾ ದೇವಮಾತಾ ಸಾ ದೇವದೇವೇನ ಚಕ್ರಿಣಾ ।**
**ತುಷ್ಟಾವ ಪ್ರಣಿಪತ್ಯೈನಂ ಸರ್ವಲೋಕಸುಖಾವಹಂ ॥ ೧೮ ॥**

**ಅದಿತಿರುವಾಚ**

**ನಮಸ್ತೇ ದೇವದೇವೇಶ ಸರ್ವವ್ಯಾಪಿನ್ಜನಾರ್ದನ ।**
**ಸತ್ವಾದಿ ಗುಣಭೇದೇನ ಲೋಕವ್ಯಾಪಾರಕಾರಣ ॥ ೧೯ ॥**

**ನಮಸ್ತೇ ಬಹುರೂಪಾಯಾರೂಪಾಯ ಚ ಮಹಾತ್ಮನೇ ।**
**ಸರ್ವೈಕರೂಪರೂಪಾಯ ನಿರ್ಗುಣಾಯ ಗುಣಾತ್ಮನೇ ॥ ೨೦ ॥**

**ನಮಸ್ತೇ ಲೋಕನಾಥಾಯ ಪರಮಜ್ಞಾನರೂಪಿಣೇ ।**
**ಸದ್ಭಕ್ತಜನವಾತ್ಸಲ್ಯಶಾಲಿನೇ ಮಂಗಳಾತ್ಮನೇ ॥ ೨೧ ॥**

---

ಖಂಡಿತವಾಗಿಯೂ ಮಂಗಳವಾಗುತ್ತದೆ. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳು ಕೊಡುತ್ತೇನೆ. ಮಾನ್ಯಳೂ ಮಂಗಳಕರಳೂ ಆದ ನೀನು ಭಯ ಪಡಬೇಡ. ನಿಜವಾಗಿಯೂ ನಿನಗೆ ಶ್ರೇಯಸ್ಸಾಗುತ್ತದೆಂದು ದೇವೋತ್ತಮನು, ಚಕ್ರಧಾರಿಯೂ ಆದ ಭಗವಂತನು ಹೇಳಲಾಗಿ ಅದಿತಿಯು ಸಕಲ ಲೋಕಕ್ಕೂ ಆನಂದಪ್ರದನಾದ ಆ ಭಗವಂತನನ್ನು ನಮಸ್ಕರಿಸಿ ಸ್ತೋತ್ರಮಾಡಿದಳು.

೧೯. ಅದಿತಿಯು ನುಡಿದಳು—ದೇವದೇವೋತ್ತಮನು, ಸರ್ವವ್ಯಾಪಕನೂ ಸತ್ವರಜಸ್ತಮೋಗುಣಗಳ ಮೂಲಕವಾಗಿ ಜಗತ್ತಿನ ಭಿನ್ನ ಭಿನ್ನ ಕಾರ್ಯಗಳಿಗೆ ನಿಮಿತ್ತಕಾರಣನೂ ಆಗಿರುವ ಜನಾರ್ದನಸ್ವಾಮಿಯೇ! ನಿನಗೆ ನಮಸ್ಕಾರ.

೨೦. ನಾನಾವಿಧವಾದ ಅವತಾರ ರೂಪವನ್ನು ತಾಳಿರುವ, ಪ್ರಕೃತಿ ನಿರ್ಮಿತವಾದ ರೂಪವಿಲ್ಲದ, ಸಕಲ ಪದಾರ್ಥಗಳಲ್ಲಿಯೂ ಒಂದೇ ವಿಧವಾದ ರೂಪದಿಂದ ಅಂತರ್ಯಾಮಿಯಾಗಿರುವ, ಪ್ರಾಕೃತಗುಣಶೂನ್ಯನೂ ಅಪ್ರಾಕೃತ ಜ್ಞಾನಾನಂದಾದಿಗುಣಸ್ವರೂಪನೂ ಮಹಾತ್ಮನೂ ಆಗಿರುವ ನಿನಗೆ ನಮಸ್ಕಾರ.

೨೧. ಜಗತ್ತಿಗೆಲ್ಲಾ ಸ್ವಾಮಿಯು, ಉತ್ಕೃಷ್ಟಜ್ಞಾನಸ್ವರೂಪಿಯೂ, ಸಾಧುಗಳಾದ ಭಕ್ತಜನರಲ್ಲಿ ಸ್ವಾಭಾವಿಕವಾದ ಪ್ರೇಮ ಮಾಡುವ ಮಂಗಳ ಸ್ವರೂಪಿಯೂ ಆದ ನಿನಗೆ ನಮಸ್ಕಾರ.

ಯಸ್ಯಾವತಾರರೂಪಾಣಿ ಹ್ಯರ್ಚಯಂತಿ ಮುನೀಶ್ವರಾಃ ।
ತಮಾದಿಪುರುಷಂ ದೇವಂ ನಮಾಮಿ ಹ್ಯರ್ಥಸಿದ್ಧಯೇ ॥ ೨೨ ॥

ಶ್ರುತಯೋ ಯಂ ನ ಜಾನಂತಿ ನ ಜಾನಂತಿ ಚ ಸೂರಯಃ ।
ತಂ ನಮಾಮಿ ಜಗದ್ಧೇತುಂ ಸಮಾಯಂ ಚಾಪ್ಯಮಾಯಿನಂ ॥ ೨೩ ॥

ಯಸ್ಯಾವಲೋಕನಂ ಚಿತ್ರಂ ಮಾಯೋಪದ್ರವಕಾರಣಂ ।
ಜಗದ್ರೂಪಂ ಜಗದ್ಧೇತುಂ ತಂ ವಂದೇ ಸರ್ವವಂದಿತಂ ॥ ೨೪ ॥

ಯತ್ಪಾದಾಂಬುಜಕಿಂಜಲ್ಕಸೇವಾರಕ್ಷಿತಮಸ್ತಕಾಃ ।
ಅವಾಪುಃ ಪರಮಾಂ ಸಿದ್ಧಿಂ ತಂ ವಂದೇ ಕಮಲಾಧವಂ ॥ ೨೫ ॥

---

೨೨. ಯಾವಾತನ ಅವತಾರ ರೂಪಗಳನ್ನು ಮುನಿವರ್ಯರು ಪೂಜಿಸುತ್ತಾರೆಯೋ ಅಂತಹ ಮೂಲಪುರುಷನಾದ ನಾರಾಯಣ ದೇವನನ್ನು ಮೋಕ್ಷಾದಿ ಪುರುಷಾರ್ಥಕ್ಕೋಸ್ಕರ ನಮಸ್ಕರಿಸುತ್ತೇನೆ.

೨೩. ವೇದಗಳೂ ಮತ್ತು ಜ್ಞಾನಿಗಳೂ ಸಹ ಯಾವ ಭಗವತ್ಸ್ವರೂಪವನ್ನು ಸಂಪೂರ್ಣವಾಗಿ ತಿಳಿಯಲು ಸಾಧ್ಯವಾಗುವುದಿಲ್ಲವೋ ಅಂತಹ ಮಾಯೆಗೆ ಅಧೀನನಾಗದೇ ಅದನ್ನು ತನ್ನ ವಶದಲ್ಲಿಟ್ಟುಕೊಂಡಿರುವ ಜಗತ್ಕಾರಣನಾದ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

೨೪. ಯಾವಾತನ ದರ್ಶನವು ಆಶ್ಚರ್ಯಕರವಾದುದೋ ಅಂತಹ, ಮಾಯೆಯ ಮೂಲಕವಾಗಿ ದುಃಖವನ್ನುಂಟುಮಾಡುವವನು, ಸಕಲ ಪ್ರಪಂಚದಲ್ಲಿಯೂ ಅಂತರ್ಯಾಮಿಯಾಗಿರುವವನು, ಜಗತ್ಕಾರಣನೂ ಆಗಿರುವ, ಸರ್ವಜನಗಳಿಂದಲೂ ನಮಸ್ಕರಿಸಲ್ಪಟ್ಟ ಭಗವಂತನನ್ನು ಸೇವಿಸುತ್ತೇನೆ.

೨೫. ಯಾವ ಭಗವಂತನ ಪಾದಕಮಲಗಳ ಕುಸರುಗಳನ್ನು ತಲೆಬಾಗಿ ನಮಸ್ಕರಿಸಿ ಸೇವಿಸುವುದರಿಂದ ರಕ್ಷಿಸಲ್ಪಟ್ಟ ಭಕ್ತರು ಮೋಕ್ಷವನ್ನು ಹೊಂದಿರುತ್ತಾರೆಯೋ ಅಂತಹ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

ಯಸ್ಯ ಬ್ರಹ್ಮಾದಯೋ ದೇವಾಃ ಮಹಿಮಾನಂ ನ ವೈ ವಿದುಃ ।
ಅತ್ಯಾಸನ್ನಂ ಚ ಭಕ್ತಾನಾಂ ತಂ ವಂದೇ ಭಕ್ತಸಂಗಿನಂ ॥ ೨೬ ॥

ಯೋ ದೇವಸ್ತ್ಯಕ್ತಸಂಗಾನಾಂ ಶಾಂತಾನಾಂ ಕರುಣಾರ್ಣವಃ ।
ಕರೋತಿ ಹ್ಯಾತ್ಮನಃ ಸಂಗಂ ತಂ ವಂದೇ ಸಂಗವರ್ಜಿತಂ ॥ ೨೭ ॥

ಯಜ್ಞೇಶ್ವರಂ ಯಜ್ಞಭುಜಂ ಯಜ್ಞಕರ್ಮಸು ನಿಷ್ಠಿತಂ ।
ನಮಾಮಿ ಯಜ್ಞಫಲದಂ ಯಜ್ಞಕರ್ಮಪ್ರಬೋಧಕಂ ॥ ೨೮ ॥

ಅಜಾಮಿಳೋಽಪಿ ಪಾಪಾತ್ಮಾ ಯನ್ನಾಮೋಚ್ಚಾರಣಾದನು ।
ಪ್ರಾಪ್ತವಾನ್ಪರಮಂ ಧಾಮ ತಂ ವಂದೇ ಲೋಕಸಾಕ್ಷಿಣಂ ॥ ೨೯ ॥

---

೨೬. ಚತುರ್ಮುಖಬ್ರಹ್ಮ, ರುದ್ರ ಮುಂತಾದ ದೇವತೆಗಳೂ ಸಹ ತಿಳಿದುಕೊಳ್ಳಲು ಅಸಾಧ್ಯವಾದ ಮಾಹಾತ್ಮ್ಯೆಯುಳ್ಳ, ಭಕ್ತರಿಗೆ ಅತ್ಯಂತ ಸಮೀಪದಲ್ಲಿದ್ದು ಅವರ ಸಹವಾಸವನ್ನು ಮಾಡುತ್ತಿರುವ ಭಗವಂತನನ್ನು ನಮಿಸುತ್ತೇನೆ.

೨೭. ವಿಷಯಸಂಬಂಧವನ್ನು ತ್ಯಜಿಸಿ ಶಾಂತರಾಗಿರುವ ಭಕ್ತರಿಗೆ ತನ್ನ ಸಂಬಂಧವನ್ನುಂಟುಮಾಡುವ, (ಅನುಗ್ರಹಿಸುವ) ಸಂಗ (ವಿಷಯ ಸಂಬಂಧವಾದ ಆಶೆ ಮುಂತಾದುವು) ವಿಲ್ಲದಿರುವ, ಪರಮಾತ್ಮನನ್ನು ನಮ ಸ್ಕರಿಸುತ್ತೇನೆ.

೨೮. ಯಜ್ಞಾದಿ ಕರ್ಮಗಳಲ್ಲಿದ್ದು ಯಜ್ಞಗಳಿಗೆ ನಿಯಾಮಕನು, ಯಜ್ಞಫಲಸಾರಭೋಕ್ತೃವು, ಯಜ್ಞಾದಿ ಕರ್ಮಗಳನ್ನು ಅಭಿವೃದ್ಧಿಗೊಳಿಸು ವವನು ಮತ್ತು ಅನುಷ್ಠಾತೃಗಳಿಗೆ ಯಜ್ಞಫಲವನ್ನು ಕೊಡುವವನೂ ಆದ ಭಗವಂತನನ್ನು ನಮಸ್ಕರಿಸುತ್ತೇನೆ.

೨೯. ಪಾಪಿಯಾದ ಅಜಾಮಿಳನೂ ಸಹ ಯಾವ ಭಗವಂತನ ನಾಮ ಸಂಕೀರ್ತನೆ ಮಾಡಿದ ಕೂಡಲೇ ವೈಕುಂಠಲೋಕವನ್ನು ಹೊಂದಿದನೋ ಅಂತಹ ಲೋಕವನ್ನೆಲ್ಲಾ ಸಾಕ್ಷಾತ್ತಾಗಿ ನೋಡುತ್ತಿರುವ ಭಗವಂತನನ್ನು ನಮಸ್ಕರಿಸುತ್ತೇನೆ.

ಹರಿರೂಪೀ ಮಹಾದೇವಃ ಶಿವರೂಪೀ ಜನಾರ್ದನಃ ।
ಇತಿ ಲೋಕಸ್ಯ ನೇತಾ ಯಸ್ತಂ ನಮಾಮಿ ಜಗದ್ಗುರುಂ ॥ ೩೦ ॥

ಬ್ರಹ್ಮಾದ್ಯಾ ಅಪಿ ದೇವೇಶಾ ಯನ್ಮಾಯಾಪಾಶಯಂತ್ರಿತಾಃ ।
ನ ಜಾನಂತಿ ಪರಂ ಭಾವಂ ತಂ ವಂದೇ ಸರ್ವನಾಯಕಂ ॥ ೩೧ ॥

ಹೃತ್ಪದ್ಮನಿಲಯೋಽಜ್ಞಾನಾಂ ದೂರಸ್ಥ ಇವ ಭಾಸತೇ ।
ಪ್ರಮಾಣಾತೀತಸದ್ಭಾವಸ್ತಂ ವಂದೇ ಜ್ಞಾನಸಾಕ್ಷಿಣಂ ॥ ೩೨ ॥

ಯನ್ಮುಖಾದ್ಬ್ರಾಹ್ಮಣೋ ಜಾತೋ ಬಾಹುಭ್ಯಾಂ ಕ್ಷತ್ರಿಯೋಽಜನಿ ।
ಊರ್ವೋರ್ವೈಶ್ಯಃ ಸಮುತ್ಪನ್ನಃ ಪದ್ಭ್ಯಾಂ ಶೂದ್ರೋಽಭ್ಯಜಾಯತ ॥ ೩೩ ॥

ಮನಸಶ್ಚಂದ್ರಮಾ ಜಾತೋ ಜಾತಃ ಸೂರ್ಯಶ್ಚ ಚಕ್ಷುಷಃ ।
ಮುಖಾದಗ್ನಿಸ್ತಥೇಂದ್ರಶ್ಚ ಪ್ರಾಣಾದ್ವಾಯುರಜಾಯತ ॥ ೩೪ ॥

---

೩೦. ವಿಷ್ಣುರೂಪಿಯು, ಸರ್ವೋತ್ತಮದೇವನೂ, ಮಂಗಳಸ್ವರೂಪನೂ, ಜಗತ್ತಿಗೆ ನಿಯಾಮಕನೂ, ಜಗದ್ಗುರುವೂ ಆದ ಜನಾರ್ದನನನ್ನು ನಮಸ್ಕರಿಸುತ್ತೇನೆ.

೩೧. ಬ್ರಹ್ಮ ಮುಂತಾದ ಉತ್ತಮ ದೇವತೆಗಳೂ ಸಹ ಯಾವ ಭಗವಂತನ ಮಾಯೆಯೆಂಬ ಪಾಶದಿಂದ ಬದ್ಧರಾಗಿ ಆತನ ಪೂರ್ಣಮಹಿಮೆಯನ್ನು ತಿಳಿಯಲಾರರೋ ಅಂತಹ ಸರ್ವೇಶ್ವರನಾದ ಭಗವಂತನನ್ನು ನಮಸ್ಕರಿಸುತ್ತೇನೆ.

೩೨. ತಮ್ಮ ಹೃದಯಕಮಲದಲ್ಲಿಯೇ ಇದ್ದರೂ ಅಜ್ಞಾನಿಗಳಿಗೆ ಬಹುದೂರದಲ್ಲಿದ್ದಂತೆ ತೋರುವವನು, ಪ್ರಮಾಣಗಳಿಂದ ಸಮಗ್ರವಾಗಿ ತಿಳಿಯಲಶಕ್ಯವಾದ ಸತ್ವವುಳ್ಳವನು, ಮತ್ತು ಜ್ಞಾನದಿಂದ ಸರ್ವವನ್ನೂ ಅಪರೋಕ್ಷೀಕರಿಸಿರುವವನೂ ಆಗಿರುವ ಭಗವಂತನನ್ನು ನಮಸ್ಕರಿಸುತ್ತೇನೆ.

೩೩-೩೫. ಯಾವ ವಿಷ್ಣುವಿನ ಮುಖದಿಂದ ಬ್ರಾಹ್ಮಣನು, ತೋಳುಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನೂ, ಪಾದಗಳಿಂದ ಶೂದ್ರನೂ ಹುಟ್ಟಿದರೋ, ಯಾವ ವಿಷ್ಣುವಿನ ಮನಸ್ಸಿನಿಂದ ಚಂದ್ರನು, ಕಣ್ಣಿನಿಂದ ಸೂರ್ಯನು

ಋುಗ್ಯಜುಃಸಾಮರೂಪಾಯ ಸಪ್ತಸ್ವರಗತಾತ್ಮನೇ ।
ಷಡಂಗರೂಪಿಣೇ ತುಭ್ಯಂ ಭೂಯೋಭೂಯೋ ನಮೋ ನಮಃ ॥ ೩೫ ॥

ತ್ವಮಿಂದ್ರಃ ಪವನಃ ಸೋಮಸ್ತ್ವಮೀಶಾನಸ್ತ್ವಮಂತಕಃ ।
ತ್ವಮಗ್ನಿರ್ನಿರ್ಋತಿಶ್ಚೈವ ವರುಣಸ್ತ್ವಂ ದಿವಾಕರಃ ॥ ೩೬ ॥

ದೇವಾಶ್ಚ ಸ್ಥಾವರಾಶ್ಚೈವ ಪಿಶಾಚಾಶ್ಚೈವ ರಾಕ್ಷಸಾಃ ।
ಗಿರಯಃ ಸಿದ್ಧಗಂಧರ್ವಾಃ ನದ್ಯೋ ಭೂಮಿಶ್ಚ ಸಾಗರಾಃ ॥ ೩೭ ॥

ತ್ವಮೇವ ಜಗತಾಮೀಶೋ ಯತ್ರಾಸಿ ತ್ವಂ ಪರಾತ್ಪರಃ ।
ತ್ವದ್ರೂಪಮಖಿಲಂ ದೇವ ತಸ್ಮಾನ್ನಿತ್ಯಂ ನಮೋಽಸ್ತು ತೇ ॥ ೩೮ ॥

---

ಮುಖದಿಂದ ಅಗ್ನಿ ಮತ್ತು ಇಂದ್ರ ಇವರುಗಳು, ಪ್ರಾಣವಾಯುವಿನಿಂದ ವಾಯು ದೇವನೂ, ಸಹ ಹುಟ್ಟಿದರೋ ಅಂತಹವನು, ಮತ್ತು ಋಗ್ವೇದ ಯಜುರ್ವೇದ ಸಾಮವೇದ, ಏಳು ಸ್ವರಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪಗಳೆಂಬ ಆರು ಅಂಗಶಾಸ್ತ್ರಗಳು ಇವುಗಳೆಲ್ಲಕ್ಕೂ ಮುಖ್ಯ ವಾಚ್ಯನೂ ಆಗಿರುವ ನಿನಗೆ ಪುನಃಪುನಃ ನಮಸ್ಕಾರ, ನಮಸ್ಕಾರ.

೩೬-೩೮. ಇಂದ್ರ, ವಾಯು, ಸೋಮ, ರುದ್ರ, ಯಮ, ಅಗ್ನಿ, ನಿರ್ಋತಿ ವರುಣ, ಸೂರ್ಯ, ದೇವತೆಗಳು, ಸ್ಥಿರ ಪ್ರಾಣಿಗಳು, ಪಿಶಾಚ, ರಾಕ್ಷಸ, ಪರ್ವತ, ಸಿದ್ಧರು, ಗಂಧರ್ವರು, ನದಿಗಳು, ಭೂಮಿ, ಮತ್ತು ಸಮುದ್ರ ಇವುಗಳೆಲ್ಲವೂ ನೀನೇ ಎಂದರೆ ಇವುಗಳೆಲ್ಲಾ ನೀನೇ ಅಂತರ್ಯಾಮಿಯಾಗಿದ್ದು ಅವರಿಗೆ ಆಯಾ ಕಾರ್ಯಗಳ ನಿರ್ವಾಹಶಕ್ತಿಯನ್ನು ಅನುಗ್ರಹಿಸುವ ನಿಯಾಮಕ ನಾಗಿರುವೆಯೆಂದು ತಾತ್ಪರ್ಯ. ಈ ಅಭಿಪ್ರಾಯವೇ ಮುಂದಿನ ಶ್ಲೋಕ ದಲ್ಲಿ ಹೇಳಲ್ಪಟ್ಟಿದೆ. ಉತ್ತಮೋತ್ತಮನಾದ ನೀನೇ ಜಗತ್ತಿನಲ್ಲೆಲ್ಲಾ ಇರುವೆ. ಆದುದರಿಂದ ಜಗತ್ತಿಗೆ ನೀನೇ ಒಡೆಯನು. ಸಕಲವೂ ನಿನ್ನಿಂದ ನಿಯಮ್ಯ ವಾದ ರೂಪಗಳು. ಈರೀತಿ ಸರ್ವನಿಯಾಮಕತ್ವಾದಿ ಮಹಾ ಮಹಿಮೆಯುಳ್ಳ ನಿನಗೆ ಯಾವಾಗಲೂ ನಮಸ್ಕರಿಸುವೆನು.

ಅನಾಥನಾಥ ಸರ್ವಜ್ಞ ಭೂತಾದೇ ವೇದವಿಗ್ರಹ ।
ದೈತೇಯೈರ್ಬಾಧಿತಾನ್ಪುತ್ರಾನ್ಮಮ ಪಾಹಿ ಜನಾರ್ದನ ॥ ೩೯ ॥

ಇತಿ ಸ್ತುತ್ವಾ ದೇವಮಾತಾ ದೇವಂ ನತ್ವಾ ಪುನಃ ಪುನಃ ।
ಉವಾಚ ಪ್ರಾಂಜಲಿರ್ಭೂತ್ವಾ ಹರ್ಷಾಶ್ರುಕ್ಷಾಲಿತಸ್ತನೀ ॥ ೪೦ ॥

ಅನುಗ್ರಾಹ್ಯಾಸ್ಮಿ ದೇವೇಶ ತ್ವಯಾ ಸರ್ವಾದಿಕಾರಣ ।
ಅಕಂಟಕಾಂ ಶ್ರಿಯಂ ದೇಹಿ ಮತ್ಸುತಾನಾಂ ದಿವೌಕಸಾಂ ॥ ೪೧ ॥

ಅಂತರ್ಯಾಮಿಜಗದ್ರೂಪ ಸರ್ವಜ್ಞ ಪರಮೇಶ್ವರ ।
ಅಜ್ಞಾತಂ ಕಿಂ ತವ ಶ್ರೀಶ ಕಿಂ ಮಾಂ ಮೋಹಯಸಿ ಪ್ರಭೋ ॥ ೪೨ ॥

ತಥಾಪಿ ತವ ವಕ್ಷ್ಯಾಮಿ ಯನ್ಮೇ ಮನಸಿ ರೋಚತೇ ।
ವೃಥಾಪುತ್ರಾಽಸ್ಮಿ ದೇವೇಶ ರಕ್ಷೋಭಿಃ ಪರಿಪೀಡಿತಾ ॥ ೪೩ ॥

---

೩೯. ರಕ್ಷಕರಿಲ್ಲದಿರುವವರನ್ನು ರಕ್ಷಿಸುವವನು, ಸರ್ವಜ್ಞನು, ಭೂತಗಳಿಗೆ ಕಾರಣನು, ವೇದೋಕ್ತಮೂರ್ತಿಯೂ ಆಗಿರುವ ಜನಾರ್ದನಸ್ವಾಮಿಯೇ! ನೀನು ದಿತಿ ಪುತ್ರರಿಂದ ಹಿಂಸಿಸಲ್ಪಟ್ಟಿರುವ ನನ್ನ ಮಕ್ಕಳನ್ನು ರಕ್ಷಿಸು.

೪೦. ದೇವಮಾತೆಯಾದ ಅದಿತಿಯು ಈ ಪ್ರಕಾರ ಸ್ತೋತ್ರಮಾಡಿ ಪುನಃಪುನಃ ದೇವರನ್ನು ನಮಸ್ಕರಿಸಿ ಕಂಬನಿಗಳಿಂದ ತೊಳೆಯಲ್ಪಟ್ಟ ಸ್ತನವುಳ್ಳವಳಾಗಿ (ಸಂತೋಷಾಧಿಕ್ಯದಿಂದ ಕಣ್ಣೀರು ಸುರಿಸುತ್ತಾ) ಕೈ ಮುಗಿದುಕೊಂಡು ಹೀಗೆ ಹೇಳಿದಳು.

೪೧-೪೪. ಸಕಲಲೋಕಕ್ಕೂ ಮೂಲಕಾರಣನಾದ ದೇವೋತ್ತಮನೇ! ನೀನು ಅನುಗ್ರಹಿಸಬೇಕು. ನನ್ನ ಮಕ್ಕಳಾದ ದೇವತೆಗಳಿಗೆ ನಿಷ್ಕಂಟಕವಾದ ಐಶ್ವರ್ಯವನ್ನು ಕೊಡು. ಜಗದಂತರ್ಯಾಮಿಸ್ವರೂಪನೂ, ಸರ್ವಜ್ಞನು, ಪರಮೇಶ್ವರನು, ಲಕ್ಷ್ಮೀಪತಿಯೂ ಆಗಿರುವ ಸ್ವಾಮಿಯೇ ನಿನಗೆ ತಿಳಿಯದಿರುವುದು ಯಾವುದು? ಏತಕ್ಕೆ ನನ್ನನ್ನು ಮೋಹಪಡಿಸುತ್ತೀಯೆ? ಆದಾಗ್ಯೂ ನನ್ನ ಮನೋಭೀಷ್ಟವನ್ನು ನಿನಗೆ ಹೇಳುತ್ತೇನೆ. ದೇವೇಶನೇ! ನನಗೆ ಮಕ್ಕ

ತಾನ್ನ ಹಿಂಸಿತುಮಿಚ್ಛಾಮಿ ಯತಸ್ತೇಽಪಿ ಸುತಾ ಮಮ ।
ತಾನಹತ್ವಾ ಶ್ರಿಯಂ ದೇಹಿ ಮತ್ಸುತಾಯೇತಿಚಾಬ್ರವೀತ್ ॥ ೪೪ ॥

ಇತ್ಯುಕ್ತೋ ದೇವದೇವೇಶಃ ಪುನಃ ಪ್ರೀತಿಮುಪಾಗತಃ ।
ಉವಾಚ ಹರ್ಷಯನ್ವಿಪ್ರ ದೇವಮಾತರಮಾದರಾತ್ ॥ ೪೫ ॥

ಶ್ರೀಭಗವಾನುವಾಚ

ಪ್ರೀತೋಽಸ್ಮಿ ದೇವಿ ಭದ್ರಂ ತೇ ಭವಿಷ್ಯಾಮಿ ಸುತೋಽಹ್ಯಹಂ ।
ಯತಃ ಸಪತ್ನಿಪುತ್ರೇಷು ವಾತ್ಸಲ್ಯಂ ದೇವಿ ದುರ್ಲಭಂ ॥ ೪೬ ॥

ತ್ವಯಾ ತು ಯತ್ಕೃತಂ ಸ್ತೋತ್ರಂ ತತ್ಪಠಂತಿ ನರಾಸ್ತು ಯೇ ।
ತೇಷಾಂ ಸಂಪದ್ವರಾ ಪುತ್ರಾ ನ ಹೀಯಂತೇ ಕದಾಚನ ॥ ೪೭ ॥

---

ಳಿದ್ದಾಗ್ಯೂ ರಾಕ್ಷಸರ ಬಾಧೆಯಿಂದ ವ್ಯರ್ಥವಾಗಿದೆ. ಆ ರಾಕ್ಷಸರೂ ನನ್ನ ಮಕ್ಕಳೇ ಆಗಿರುವುದರಿಂದ ಅವರನ್ನು ಸಂಹರಿಸುವ ಇಚ್ಛೆಯಿಲ್ಲ; ಅವರನ್ನು ಕೊಲ್ಲದೇ ನನ್ನ ಮಕ್ಕಳಾದ ದೇವತೆಗಳಿಗೆ ಐಶ್ವರ್ಯವನ್ನು ದಯಪಾಲಿಸು ಎಂಬುದಾಗಿ ಹೇಳಿದಳು.

೪೫. ಈ ರೀತಿಯಾಗಿ ಅದಿತಿಯು ಹೇಳಿದುದನ್ನು ಕೇಳಿ ದೇವದೇವೋತ್ತಮನು ಸಂತುಷ್ಟನಾಗಿ ವಿಶ್ವಾಸದಿಂದ ದೇವಮಾತೆಯನ್ನು ಸಂತೋಷಪಡಿಸಿ ಮಾತನಾಡಿದನು.

೪೬–೪೮. ದೇವಿಯೇ! ಸೌತಿಯ ಮಕ್ಕಳಲ್ಲಿ ತನ್ನ ಮಕ್ಕಳಂತೆ ಪ್ರೀತಿಯನ್ನಿಟ್ಟಿರುವವರು ಬಹಳ ಅಪರೂಪ. ನೀನು ಅಂತಹವರಲ್ಲಿಯೂ ಸಹ ಪುತ್ರವಾತ್ಸಲ್ಯವನ್ನಿಟ್ಟಿರುವುದರಿಂದ ನಿನ್ನ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಾನೇ ನಿನ್ನ ಮಗನಾಗಿ ಹುಟ್ಟುತ್ತೇನೆ. ನೀನು ಮಾಡಿದ ಸ್ತೋತ್ರವನ್ನು ಪಠನೆ ಮಾಡುವವರಿಗೆ ಉತ್ತಮವಾದ ಸಂಪತ್ತು ಮತ್ತು ಮಕ್ಕಳೂ ಸಹ ಯಾವಾಗಲೂ ಕ್ಷೀಣವಾಗುವುದಿಲ್ಲ. ತನ್ನ ಮಕ್ಕಳಲ್ಲಿ

ಸ್ವಾತ್ಮಜೇ ವಾಽನ್ಯಪುತ್ರೇ ವಾ ಯಃ ಸಮತ್ವೇನ ವರ್ತತೇ |
ನ ತಸ್ಯ ಪುತ್ರಶೋಕಃ ಸ್ಯಾದಿತ್ಯಾಹ ಭಗವಾನ್ ಹರಿಃ ॥ ೪೮ ॥

ಅದಿತಿರುವಾಚ

ನಾಹಂ ವೋಢುಂ ಕ್ಷಮಾ ದೇವ ತ್ವಾಮಾದ್ಯಂ ಪುರುಷಂ ಪರಂ ।
ಬ್ರಹ್ಮಾಂಡಕೋಟಿಸಹಸ್ರಂ ರೋಮ್ಣಿ ರೋಮ್ಣಿ ತವಾವ್ಯಯ ॥ ೪೯ ॥

ಯತ್ಪ್ರಭಾವಂ ನ ಜಾನಂತಿ ಶ್ರುತಯಃ ಸರ್ವದೇವತಾಃ ।
ತಮಹಂ ದೇವದೇವೇಶಂ ಪ್ರಧಾಸ್ಯಾಮಿ ಕಥಂ ಪ್ರಭೋ ॥ ೫೦ ॥

ಅಣೋರಣೀಯಾಂಸಮಜಂ ಪರಾತ್ಪರತರಂ ಪ್ರಭುಂ ।
ಧಾರಯಾಮಿ ಕಥಂ ದೇವ ತ್ವಾಮಹಂ ಪುರುಷೋತ್ತಮಂ ॥ ೫೧ ॥

ಮಹಾಪಾತಕಯುಕ್ತೋಽಪಿ ಯನ್ನಾಮಸ್ಮೃತಿಮಾತ್ರತಃ |
ಮುಚ್ಯತೇ ಸ ಕಥಂ ದೇವೋ ಗರ್ಭ್ಯೇಷು ಜನಿಮರ್ಹತಿ ॥ ೫೨ ॥

---

ಮತ್ತು ಇತರರ ಮಕ್ಕಳಲ್ಲಿಯೂ ಸಹ ಸಮದೃಷ್ಟಿಯಿಂದ ವರ್ತಿಸುವವರಿಗೆ ಪುತ್ರಶೋಕವುಂಟಾಗುವುದಿಲ್ಲ ಎಂಬುದಾಗಿ ಭಗವಂತನಾದ ಶ್ರೀಹರಿಯು ಹೇಳಿದನು.

೪೯-೫೪. ಅದಿತಿದೇವಿಯು ಹೇಳಿದಳು—ದೇವನೇ! ಪರಮಪುರುಷನು, ಆದಿಕಾರಣನೂ ಆಗಿರುವ ನಿನ್ನನ್ನು ಭಜಿಸಲು ನಾನು ಸಮರ್ಥಳಲ್ಲ. ನಾಶರಹಿತನೇ! ನಿನ್ನ ಒಂದೊಂದು ರೋಮದಲ್ಲಿಯೂ ಕೋಟಿಸಾವಿರ ಬ್ರಹ್ಮಾಂಡಗಳು ಅಡಗಿವೆ. ದೇವದೇವೋತ್ತಮ ಪ್ರಭುವೇ! ವೇದಗಳು, ಸಕಲ ದೇವತೆಗಳೂ ಸಹ ಅರಿಯಲಶಕ್ಯವಾದ ಮಾಹಾತ್ಮ್ಯೆಯುಳ್ಳ ನಿನ್ನನ್ನು ನಾನು ಹೇಗೆ ಧರಿಸಲಿ? ಸ್ವಾಮಿಯೇ! ಅಣುವಸ್ತುಗಳಲ್ಲಿ ಅದಕ್ಕಿಂತಲೂ ಸೂಕ್ಷ್ಮವಾಗಿರುವವನು, ಉತ್ಪತ್ತಿರಹಿತನು, ಉತ್ತಮರಾದ ದೇವತೆಗಳಿಗಿಂತಲೂ ಶ್ರೇಷ್ಠನು, ಕ್ಷರಾಕ್ಷರಪುರುಷರಿಗಿಂತಲೂ ಉತ್ತಮನು, ಸರ್ವಶಕ್ತನೂ ಆಗಿರುವ ನಿನ್ನನ್ನು ನಾನು ಹೇಗೆ ಧರಿಸಲಿ? ಪಂಚಮಹಾಪಾತಕಗಳನ್ನು ಮಾಡಿರುವವನನ್ನೂ ಸಹ ನಾಮಸ್ಮರಣೆ ಮಾತ್ರದಿಂದ ಪರಿಶುದ್ಧನನ್ನಾಗಿ ಮಾಡುವ ನೀನು ಅಪರಿಶುದ್ಧರಾದ ನಮ್ಮಂತಹವರಲ್ಲಿ ಹೇಗೆ ಉದ್ಭವಿಸುವೆ? ಓ ಪ್ರಭುವೇ! ವರಾಹ, ಮತ್ಸ್ಯ,

**ಯಥಾ ಸೂಕರಮತ್ಸ್ಯಾದ್ಯಾ ಅವತಾರಾಸ್ತವ ಪ್ರಭೋ ।**
**ತಥಾಽಯಮಪಿ ಕೋ ವೇದ ತವ ವಿಶ್ವೇಶ ಚೇಷ್ಟಿತಂ ॥ ೫೩ ॥**

**ತ್ವತ್ಪಾದಪದ್ಮಪ್ರಣತಾ ತ್ವನ್ನಾಮಸ್ಮೃತಿತತ್ಪರಾ ।**
**ತ್ವಾಮೇವ ಚಿಂತಯೇದೇವ ಯಥೇಚ್ಛಸಿ ತಥಾ ಕುರು ॥ ೫೪ ॥**

**ತಯೋಕ್ತಂ ವಚನಂ ಶ್ರುತ್ವಾ ದೇವದೇವೋ ಜನಾರ್ದನಃ ।**
**ದತ್ವಾಽಭಯಂ ದೇವಮಾತುರಿದಂ ವಚನಮಬ್ರವೀತ್ ॥ ೫೫ ॥**

**ಶ್ರೀಭಗವಾನುವಾಚ**

**ಸತ್ಯಮುಕ್ತಂ ಮಹಾಭಾಗೇ ತ್ವಯಾ ನಾಸ್ತ್ಯತ್ರ ಸಂಶಯಃ ।**
**ತಥಾಪಿ ಶ್ರುಣು ವಕ್ಷ್ಯಾಮಿ ಗುಹ್ಯಾದ್ಗುಹ್ಯತರಂ ಶುಭೇ ॥ ೫೬ ॥**

**ರಾಗದ್ವೇಷವಿಹೀನಾ ಯೇ ಮದ್ಭಕ್ತಾ ಮತ್ಪರಾಯಣಾಃ ।**
**ವಹಂತಿ ಸತತಂ ತೇ ಮಾಂ ಗತಾಸೂಯಾ ಅದಾಂಭಿಕಾಃ ॥ ೫೭ ॥**

---

ಕೂರ್ಮ ಮುಂತಾದ ನಿನ್ನ ಅವತಾರಗಳಂತೆ ಇದೂ ಆಗಬಹುದು. ವಿಶ್ವೇಶ್ವರನೇ! ನಿನ್ನ ವ್ಯಾಪಾರವನ್ನು ಯಾರು ತಿಳಿಯಬಲ್ಲರು? ದೇವನೇ! ನಿನ್ನ ಪಾದಕಮಲದಲ್ಲಿ ಬಿದ್ದು ನಿನ್ನ ನಾಮಸ್ಮರಣೆಯನ್ನೇ ಮಾಡುತ್ತಾ ನಿನ್ನನ್ನೇ ಧ್ಯಾನಿಸುತ್ತೇನೆ. ನಿನ್ನ ಇಷ್ಟಬಂದಂತೆ ನಡೆಸು.

೫೫. ಅದಿತಿ ಹೇಳಿದ ಮಾತನ್ನು ಕೇಳಿ ದೇವೋತ್ತಮನಾದ ಜನಾರ್ದನನು ದೇವಮಾತೆಗೆ ಅಭಯವಿತ್ತು ಈರೀತಿ ಹೇಳಿದನು.

೫೬. ಶ್ರೀಹರಿಯು ಹೇಳುತ್ತಾನೆ—ಮಂಗಳಕರಳಾದ ಮಹಾನುಭಾವಳೇ! ನೀನು ಹೇಳಿದ್ದೆಲ್ಲಾ ನಿಜ. ಸಂಶಯವಿಲ್ಲ. ಆದಾಗ್ಯೂ ಗೋಪ್ಯ ವಿಷಯಗಳಲ್ಲಿಯೂ ಅತ್ಯಂತ ಗೋಪ್ಯವಾದುದನ್ನು ಹೇಳುತ್ತೇನೆ ಕೇಳು.

೫೭. ರಾಗ, ದ್ವೇಷಗಳಿಲ್ಲದವರು, ನನ್ನ ಭಕ್ತರು, ನನ್ನನ್ನೇ ಚಿಂತನೆ ಮಾಡುವರು, ಹೊಟ್ಟೇಕಿಚ್ಚು ಇಲ್ಲದವರು, ಡಂಭಾಚಾರರಹಿತರೂ ಆಗಿರುವವರು ನನ್ನನ್ನು ಭಜಿಸುತ್ತಾರೆ.

ಪರೋಪತಾಪವಿಮುಖಾಃ ಶಿವಭಕ್ತಿಪರಾಯಣಾಃ ।
ಮತ್ಕಥಾಶ್ರವಣಾಸಕ್ತಾ ವಹಂತಿ ಸತತಂ ಹಿ ಮಾಂ ॥ ೫೮ ॥

ಪತಿವ್ರತಾಃ ಪತಿಪ್ರಾಣಾಃ ಪತಿಭಕ್ತಿಪರಾಯಣಾಃ ।
ವಹಂತಿ ಸತತಂ ದೇವಿ ಸ್ತ್ರಿಯೋಽಪಿ ತ್ಯಕ್ತಮತ್ಸರಾಃ ॥ ೫೯ ॥

ಮಾತಾಪಿತ್ರೋಶ್ಚ ಶುಶ್ರೂಷುರ್ಗುರುಭಕ್ತೋಽತಿಥಿಪ್ರಿಯಃ ।
ಹಿತಕೃದ್ಬ್ರಾಹ್ಮಣಾನಾಂ ಯಃ ಸ ಮಾಂ ವಹತಿ ಸರ್ವದಾ ॥ ೬೦ ॥

ಪುಣ್ಯತೀರ್ಥರತಾ ನಿತ್ಯಂ ಸತ್ಸಂಗನಿರತಾಸ್ತಥಾ ।
ಲೋಕಾನುಗ್ರಹಶೀಲಾಶ್ಚ ಸತತಂ ತೇ ವಹಂತಿ ಮಾಂ ॥ ೬೧ ॥

---

೫೮. ಇತರರನ್ನು ನೋಯಿಸದಿರುವವರು ಪರಮಮಂಗಳಕರನಾದ ಭಗವಂತನ ಭಕ್ತಿಯಲ್ಲಿ ಆಸಕ್ತರು ಮತ್ತು ನನ್ನ ಕಥೆಯನ್ನು ಶ್ರವಣಮಾಡುತ್ತಿರುವವರು ಯಾವಾಗಲೂ ನನ್ನನ್ನು ಭರಿಸುತ್ತಾರೆ.

೫೯. ಪತಿವ್ರತೆಯರು, ಪತಿಯಲ್ಲಿಯೇ ಪ್ರಾಣವನ್ನಿಟ್ಟಿರುವವರು, ಪತಿ ಭಕ್ತಿನಿರತರೂ, ಮಾತ್ಸರ್ಯವನ್ನು ಬಿಟ್ಟಿರುವವರೂ ಆಗಿರುವ ಸ್ತ್ರೀಯರೂ ಸಹ ನನ್ನನ್ನು ಭರಿಸುತ್ತಾರೆ.

೬೦. ತಾಯಿ ತಂದೆಗಳ ಸೇವೆಯನ್ನು ಮಾಡುವವನು, ಗುರುಗಳಲ್ಲಿ ಭಕ್ತಿಯುಳ್ಳವನು, ಅತಿಥಿಗಳಿಗೆ ಹಿತವನ್ನು ಮಾಡುವವನು, ಮತ್ತು ಬ್ರಾಹ್ಮಣರಿಗೆ ಅನುಕೂಲಪಡಿಸುವವನು ಯಾವಾಗಲೂ ನನ್ನನ್ನು ವಹಿಸಲು ಶಕ್ತನಾಗುತ್ತಾನೆ.

೬೧. ಯಾವಾಗಲೂ ಪುಣ್ಯತೀರ್ಥ ಸೇವೆಯಲ್ಲಿ ಆಸಕ್ತರಾಗಿರುವವರು ಸಜ್ಜನಸಹವಾಸದಲ್ಲಿ ನಿರತರು ಮತ್ತು ಸ್ವಾಭಾವಿಕವಾಗಿ ಲೋಕಕ್ಕೆ ಅನುಗ್ರಹ ಮಾಡುವವರು ಯಾವಾಗಲೂ ನನ್ನನ್ನು ಭರಿಸಲು ಶಕ್ತರಾಗುತ್ತಾರೆ.

**ಪರೋಪಕಾರನಿರತಾ ಪರದ್ರವ್ಯಪರಾಙ್ಮುಖಾಃ ।**
**ನಪುಂಸಕಾಃ ಪರಸ್ತ್ರೀಷು ತೇ ವಹಂತಿ ಚ ಮಾಂ ಸದಾ ॥ ೬೨ ॥**

**ತುಲಸ್ಯುಪಾಸನರತಾಃ ಸದಾ ನಾಮಪರಾಯಣಾಃ ।**
**ಗೋರಕ್ಷಣಪರಾ ಯೇ ಚ ಸತತಂ ಮಾಂ ವಹಂತಿ ತೇ ॥ ೬೩ ॥**

**ಪ್ರತಿಗ್ರಹನಿವೃತ್ತಾ ಯೇ ಪರಾನ್ನವಿಮುಖಾಸ್ತಥಾ ।**
**ಅನ್ನೋದಕಪ್ರದಾತಾರೋ ವಹಂತಿ ಸತತಂ ಹಿ ಮಾಂ ॥ ೬೪ ॥**

**ತ್ವಂ ತು ದೇವಿ ಪತಿಪ್ರಾಣಾ ಸಾಧ್ವೀ ಭೂತಹಿತೇ ರತಾ ।**
**ಸಂಪ್ರಾಪ್ಯ ಪುತ್ರಭಾವಂ ತೇ ಸಾಧಯಿಷ್ಯೇ ಮನೋರಥಂ ॥ ೬೫**

---

೬೨. ಪರೋಪಕಾರ ಮಾಡುವುದರಲ್ಲಿ ಅತ್ಯಂತ ಅಭಿಲಾಷೆಯುಳ್ಳವರು ಪರದ್ರವ್ಯವನ್ನು ಆಶಿಸದಿರುವವರು ಮತ್ತು ಪರಸ್ತ್ರೀಯರ ವಿಷಯದಲ್ಲಿ ನಪುಂಸಕರಂತಿರುವವರು ಯಾವಾಗಲೂ ನನ್ನನ್ನು ಭರಿಸುತ್ತಾರೆ.

೬೩. ತುಲಸಿಯ ಧ್ಯಾನಮಾಡುವವರು, ಯಾವಾಗಲೂ ಭಗವನ್ನಾಮ ಸಂಕೀರ್ತನೆ ಮಾಡುವವರು ಮತ್ತು ಗೋರಕ್ಷಣನಿರತರೂ ಯಾವಾಗಲೂ ನನ್ನನ್ನು ಭರಿಸಲು ಸಮರ್ಥರು.

೬೪. ದಾನವನ್ನು ತೆಗೆದುಕೊಳ್ಳದಿರುವವರು, ಇತರರ ಮನೆಯಲ್ಲಿ ಊಟ ಮಾಡದಿರುವವರು ಮತ್ತು ಅನ್ನ, ಉದಕ, ಇವುಗಳನ್ನು ದಾನಮಾಡುವವರು ನನ್ನನ್ನು ಯಾವಾಗಲೂ ಭರಿಸಲು ಶಕ್ತರಾಗುತ್ತಾರೆ.

೬೫. ದೇವಿಯೇ! ನೀನು ಪತಿಯಲ್ಲಿಯೇ ಪ್ರಾಣಗಳನ್ನಿಟ್ಟಿರುವವಳು, ಸಾಧು ಸ್ವಭಾವೋಪೇತಳು, ಪ್ರಾಣಿಗಳಿಗೆ ಉಪಕಾರ ಮಾಡುವುದರಲ್ಲಿ ಆಸಕ್ತಳೂ ಆಗಿರುವುದರಿಂದ ನಾನು ನಿನ್ನ ಮಗನಾಗಿ ಹುಟ್ಟಿ ನಿನ್ನ ಮನೋಭೀಷ್ಟವನ್ನು ಸಾಧಿಸಿಕೊಡುವೆನು.

ಇತ್ಯುಕ್ತ್ವಾ ದೇವದೇವೇಶೋಽಹ್ಯದಿತಿಂ ದೇವಮಾತರಂ ।
ದತ್ವಾ ಕಂಠಗತಾಂ ಮಾಲಾಮಭಯಂ ಚ ತಿರೋದಧೇ ॥ ೬೬ ॥

ಸಾ ತು ಸಂಹೃಷ್ಟಮನಸಾ ದೇವಸೂರ್ದಕ್ಷನಂದಿನೀ ।
ಪ್ರಣಮ್ಯ ಕಮಲಾಕಾಂತಂ ಪುನಃ ಸ್ವಸ್ಥಾನಮಾವ್ರಜತ್ ॥ ೬೭ ॥

ತತೋಽದಿತಿರ್ಮಹಾಭಾಗ ಸುಪ್ರೀತಾ ಲೋಕವಂದಿತಾ ।
ಅಸೂತ ಸಮಯೇ ಪುತ್ರಂ ಸರ್ವಲೋಕನಮಸ್ಕೃತಂ ॥ ೬೮ ॥

ಶಂಖಚಕ್ರಧರಂ ಶಾಂತಂ ಚಂದ್ರಮಂಡಲಮಧ್ಯಗಂ ।
ಸುಧಾಕಲಶದಧ್ಯನ್ನಕರಂ ವಾಮನಸಂಜ್ಞಿತಂ ॥ ೬೯ ॥

ಸಹಸ್ರಾದಿತ್ಯಸಂಕಾಶಂ ವ್ಯಾಕೋಶಕಮಲೇಕ್ಷಣಂ ।
ಸರ್ವಾಭರಣಸಂಯುಕ್ತಂ ಪೀತಾಂಬರಧರಂ ಹರಿಂ ।
ಸ್ತುತ್ಯಂ ಮುನಿಗಣೈರ್ಯುಕ್ತಂ ಸರ್ವಲೋಕೈಕನಾಯಕಂ ॥ ೭೦ ॥

---

೬೬. ದೇವದೇವೋತ್ತಮನು ದೇವಮಾತೆಯಾದ ಅದಿತಿಗೆ ಈಪ್ರಕಾರ ಹೇಳಿ ತನ್ನ ಕುತ್ತಿಗೆಯಲ್ಲಿದ್ದ ಹಾರವನ್ನು ಮತ್ತು ಅಭಯವನ್ನೂ ಸಹ ಕೊಟ್ಟು ಅಂತರ್ಧಾನವನ್ನು ಹೊಂದಿದನು.

೬೭. ದೇವಮಾತೆಯು, ದಕ್ಷಪುತ್ರಿಯೂ ಆದ ಅದಿತಿಯು ಸಂತೋಷ ಚಿತ್ತಳಾಗಿ ಲಕ್ಷ್ಮೀಪತಿಯನ್ನು ಪುನಃ ನಮಸ್ಕರಿಸಿ ತನ್ನ ಸ್ಥಳಕ್ಕೆ ಬಂದಳು.

೬೮-೭೦. ಧನ್ಯನಾದ ನಾರದನೇ! ತರುವಾಯ ಸಂತುಷ್ಟಳು, ಲೋಕ ಮಾನ್ಯಳೂ ಆದ ಅದಿತಿಯು, ಸರ್ವರಿಂದಲೂ ನಮಸ್ಕರಿಸಲ್ಪಟ್ಟ, ಶಂಖಚಕ್ರ ಧಾರಿಯು, ಶಾಂತನು, ಚಂದ್ರಮಂಡಲ ಮಧ್ಯವರ್ತಿಯು, ಕೈಗಳಲ್ಲಿ ಅಮೃತ ಕಲಶ ಮತ್ತು ದಧ್ಯನ್ನಗಳನ್ನು ಹಿಡಿದುಕೊಂಡಿರುವವನು, ಸಾವಿರ ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳವನು, ಅರಳಿದ ಕಮಲಗಳಿಗೆ ಸದೃಶವಾದ ಕಣ್ಣು ಗಳುಳ್ಳವನು, ಸಕಲಾಭರಣಗಳನ್ನೂ ಧರಿಸಿರುವವನು, ಮುನಿಸಂಘಗಳಿಂದ ಕೂಡಿದವನು, ಸ್ತೋತ್ರಮಾಡಲರ್ಹನು ಮತ್ತು ಸಕಲಲೋಕಗಳಿಗೂ ಮುಖ್ಯ

ಆವಿರ್ಭೂತಂ ಹರಿಂ ಜ್ಞಾತ್ವಾ ಕಶ್ಯಪೋ ಹರ್ಷವಿಹ್ವಲಃ ।
ಪ್ರಣಮ್ಯ ಪ್ರಾಂಜಲಿರ್ಭೂತ್ವಾ ಸ್ತೋತುಂ ಸಮುಪಚಕ್ರಮೇ ॥ ೭೧ ॥

ಕಶ್ಯಪ ಉವಾಚ

ನಮೋನಮಸ್ತೇಽಖಿಲಕಾರಣಾಯ
ನಮೋನಮಸ್ತೇಽಖಿಲಪಾಲಕಾಯ ।
ನಮೋನಮಸ್ತೇಽಮರನಾಯಕಾಯ
ನಮೋನಮೋ ದೈತ್ಯವಿನಾಶನಾಯ ॥ ೭೨ ॥

ನಮೋನಮೋ ಭಕ್ತಜನಪ್ರಿಯಾಯ
ನಮೋನಮಸ್ಸಜ್ಜನರಂಜಿತಾಯ ।
ನಮೋನಮೋ ದುರ್ಜನನಾಶನಾಯ
ನಮೋಽಸ್ತು ತಸ್ಮೈ ಜಗದೀಶ್ವರಾಯ ॥ ೭೩ ॥

---

ನಾಯಕನೂ ಆಗಿರುವ 'ವಾಮನ' ಎಂಬ ಹೆಸರುಳ್ಳ ಹರಿಯನ್ನು ಶುಭಸಮಯ ದಲ್ಲಿ ಮಗನನ್ನಾಗಿ ಪ್ರಸವಿಸಿದಳು.

೭೧. ಕಶ್ಯಪನು ಹರಿಯು ಆವಿರ್ಭವಿಸಿದ ವಿಷಯವನ್ನು ತಿಳಿದು ಸಂತೋಷದಿಂದ ಹಿಗ್ಗುತ್ತಾ ನಮಸ್ಕರಿಸಿ ಕೈ ಮುಗಿದುಕೊಂಡು ಸ್ತೋತ್ರಮಾಡ ಲಾರಂಭಿಸಿದನು.

೭೨. ಕಶ್ಯಪನು ಹೇಳಿದನು—ಸಕಲ ಜಗತ್ತಿಗೂ ಕಾರಣನು, ರಕ್ಷಕನು, ದೇವತೆಗಳಿಗೆ ನಿಯಾಮಕನು ಮತ್ತು ದೈತ್ಯರನ್ನು ನಾಶಮಾಡುವವನೂ ಆಗಿ ರುವ ಭಗವಂತನಿಗೆ ನಮಸ್ಕಾರ ನಮಸ್ಕಾರ.

೭೩. ಭಕ್ತಜನಪ್ರಿಯನು, ಸಜ್ಜನರಿಗೆ ಸುಖಪ್ರದನು, ದುರ್ಜನ ವಿನಾ ಶಕನು, ಜಗದೊಡೆಯನೂ ಆದ ಭಗವಂತನಿಗೆ ನಮಸ್ಕಾರ ನಮಸ್ಕಾರ.

ನಮೋನಮಃ ಕಾರಣಕಾರಣಾಯ
ನಾರಾಯಣಾಯಾಮಿತವಿಕ್ರಮಾಯ ।
ಶ್ರೀಶಾರ್ಙ್ಗಚಕ್ರಾಸಿಗದಾಧರಾಯ
ನಮೋಽಸ್ತು ತಸ್ಮೈ ಪುರುಷೋತ್ತಮಾಯ ॥ ೭೪ ॥

ನಮಃ ಪಯೋರಾಶಿನಿವಾಸನಾಯ
ನಮೋಽಸ್ತು ಸದ್ಧೃತ್ಕಮಲಸ್ಥಿತಾಯ ॥ ೭೫ ॥

ನಮೋಽಸ್ತು ಸೂರ್ಯಾಂಶುನಿಭಪ್ರಭಾಯ
ನಮೋನಮಃ ಪುಣ್ಯಕಥಾಗತಾಯ ।
ನಮೋನಮೋಽರ್ಕೇಂದುವಿಲೋಚನಾಯ
ನಮೋಽಸ್ತು ತೇ ಯಜ್ಞಫಲಪ್ರದಾಯ ॥ ೭೬ ॥

ನಮೋಽಸ್ತು ಯಜ್ಞಾಂಗವಿರಾಜಿತಾಯ
ನಮೋಽಸ್ತು ತೇ ಸಜ್ಜನವಲ್ಲಭಾಯ ।
ನಮೋ ಜಗತ್ಕಾರಣಕಾರಣಾಯ
ನಮೋಽಸ್ತು ಶಬ್ದಾದಿವಿವರ್ಜಿತಾಯ ॥ ೭೭ ॥

---

೭೪. ಕಾರಣಗಳಿಗೆಲ್ಲಾ ಶಕ್ತಿಪ್ರದನು, ಅಪರಿಮಿತವಾದ ಪರಾಕ್ರಮ ಶಾಲಿಯು, ಬಿಲ್ಲು, ಚಕ್ರ, ಕತ್ತಿ, ಗದೆ ಇವುಗಳನ್ನು ಧರಿಸಿರುವವನು, ಪುರುಷೋತ್ತಮನೂ ಆದ ನಾರಾಯಣನಿಗೆ ನಮಸ್ಕಾರ ನಮಸ್ಕಾರ.

೭೫. ಕ್ಷೀರಸಮುದ್ರದಲ್ಲಿ ವಾಸಿಸುತ್ತಿರುವ, ಸಜ್ಜನರ ಹೃದಯಕಮಲ ದಲ್ಲಿರುವ ಹರಿಗೆ ನಮಸ್ಕಾರ ನಮಸ್ಕಾರ.

೭೬. ಸೂರ್ಯಕಿರಣದಂತೆ ಪ್ರಕಾಶವಮಾನನು, ಪುಣ್ಯಕಥೆಗಳಲ್ಲಿ ಹೊಗಳಿಸಿಕೊಳ್ಳಲ್ಪಟ್ಟಿರುವವನು, ಸೂರ್ಯ ಚಂದ್ರರೆಂಬ ನೇತ್ರಗಳುಳ್ಳವನು ಮತ್ತು ಯಜ್ಞಗಳಿಗೆ ಸಾಫಲ್ಯಕಾರಕನೂ ಆಗಿರುವ ಶ್ರೀಹರಿಗೆ ನಮಸ್ಕಾರ, ನಮಸ್ಕಾರ.

೭೭. ಯಜ್ಞವೆಂಬ ಅಂಗದಿಂದ ಪ್ರಕಾಶಿಸಲ್ಪಡುತ್ತಿರುವವನು, ಸಜ್ಜನ ಪ್ರಿಯನು, ಕಾರಣಗಳಿಗೆಲ್ಲಾ ಕಾರ್ಯಜನನಸಾಮರ್ಥ್ಯಪ್ರದನು, ಶಬ್ದ ಮುಂತಾದ

ನಮೋಽಸ್ತು ತೇ ದಿವ್ಯಸುಖಪ್ರದಾಯ
ನಮೋನಮೋ ಭಕ್ತಮನೋಗತಾಯ ।
ನಮೋಽಸ್ತು ತೇ ಧ್ವಾಂತವಿನಾಶಕಾಯ
ನಮೋಽಸ್ತು ತೇ ಮಂದರಧಾರಕಾಯ ॥ ೭೮ ॥

ನಮೋಽಸ್ತು ತೇ ಯಜ್ಞವರಾಹನಾಮ್ನೇ
ನಮೋ ಹಿರಣ್ಯಾಕ್ಷವಿದಾರಕಾಯ ।
ನಮೋಽಸ್ತು ತೇ ವಾಮನರೂಪಭಾಜೇ
ನಮೋಽಸ್ತು ತೇ ಕ್ಷತ್ರಕುಲಾಂತಕಾಯ ॥ ೭೯ ॥

ನಮೋಽಸ್ತು ತೇ ರಾವಣಮರ್ದನಾಯ
ನಮೋಽಸ್ತು ತೇ ನಂದಸುತಾಗ್ರಜಾಯ ।
ನಮಸ್ತೇ ಕಮಲಾಕಾಂತ ನಮಸ್ತೇ ಸುಖದಾಯಿನೇ ॥ ೮೦ ॥

---

ಪ್ರಾಕೃತ ವಿಷಯರಹಿತನೂ ಆಗಿರುವ ಭಗವಂತನಿಗೆ ನಮಸ್ಕಾರ, ನಮಸ್ಕಾರ, ನಮಸ್ಕಾರ, ನಮಸ್ಕಾರ.

೭೮. ಉತ್ತಮಸುಖದಾಯಕನು, ಭಕ್ತರ ಮನಸ್ಸಿನಲ್ಲಿ ನೆಲೆಸಿರುವವನು, ಅಜ್ಞಾನಾಂಧಕಾರವನ್ನು ನಾಶಗೊಳಿಸುವವನು ಮತ್ತು ಮಂದರ ಪರ್ವತವನ್ನು ಧರಿಸಿರುವವನೂ ಆದ ಹರಿಗೆ ನಮಸ್ಕಾರ, ನಮಸ್ಕಾರ.

೭೯-೮೦. ಯಜ್ಞವರಾಹವೆಂಬುದಾಗಿ ನಾಮಧೇಯವುಳ್ಳವನು, ಹಿರಣ್ಯಾಕ್ಷನನ್ನು ಸೀಳಿದವನು, ವಾಮನ ರೂಪವನ್ನು ಹೊಂದಿರುವವನು, ಕ್ಷತ್ರಿಯ ಕುಲ ಸಂಹಾರಕನು, ರಾವಣನೆಂಬ ರಾಕ್ಷಸನನ್ನು ಕೊಂದವನು ಮತ್ತು ನಂದ ಗೋಪನ ಪುತ್ರವರೇಣ್ಯನೂ ಆಗಿರುವ ಭಗವಂತನಿಗೆ ನಮಸ್ಕಾರ, ನಮಸ್ಕಾರ. ಲಕ್ಷ್ಮೀಪತಿಯೇ! ನಿನಗೆ ನಮಸ್ಕಾರ. ಸುಖದಾಯಕನೇ! ನಿನಗೆ ನಮಸ್ಕಾರ.

ಸ್ಮೃತಾರ್ತಿನಾಶಿನೇ ತುಭ್ಯಂ ಭೂಯೋಭೂಯೋ ನಮೋನಮಃ ।
ಯಜ್ಞೇಶ ಯಜ್ಞವಿನ್ಯಾಸ ಯಜ್ಞವಿಘ್ನವಿನಾಶನ ॥ ೮೧ ॥

ಯಜ್ಞರೂಪ ಯಜದ್ರೂಪ ಯಜ್ಞಾಂಗ ತ್ವಾಂ ಯಜಾಮ್ಯಹಂ ।
ಇತಿ ಸ್ತುತಃ ಸ ದೇವೇಶೋ ವಾಮನೋ ಲೋಕಪಾವನಃ ॥ ೮೨ ॥

ಉವಾಚ ಪ್ರಹಸನ್ಹರ್ಷಂ ವರ್ಧಯನ್ಕಶ್ಯಪಸ್ಯ ಸಃ ।
ಶ್ರೀಭಗವಾನುವಾಚ
ತಾತ ತುಷ್ಟೋಽಸ್ಮಿ ಭದ್ರಂ ತೇ ಭವಿಷ್ಯತಿ ಸುರಾರ್ಚಿತ ॥ ೮೩ ॥

ಅಚಿರಾತ್ಸಾಧಯಿಷ್ಯಾಮಿ ನಿಖಿಲಂ ತ್ವನ್ಮನೋರಥಂ ।
ಅಹಂ ಜನ್ಮದ್ವಯೇತ್ವೇವಂ ಯುವಯೋಃ ಪುತ್ರತಾಂ ಗತಃ ॥ ೮೪ ॥

ಭಾವಿಜನ್ಮನ್ಯಪಿ ತಥಾ ಸಾಧಯಾಮ್ಯುತ್ತಮಂ ಸುಖಂ ।
ಅತ್ರಾಂತರೇ ಬಲಿರ್ದೈತ್ಯೋ ದೀರ್ಘಸತ್ರಂ ಮಹಾಮುಖಂ ॥ ೮೫ ॥

---

೮೧-೮೨. ಸ್ಮರಿಸುವವರ ವ್ಯಥೆಯನ್ನು ಪರಿಹರಿಸುವ ನಿನಗೆ ಪುನಃ ಪುನಃ ನಮಸ್ಕಾರ, ನಮಸ್ಕಾರ. ಯಜ್ಞಸ್ವಾಮಿಯು, ಯಜ್ಞದಲ್ಲಿ ಸನ್ನಿಧಾನವುಳ್ಳವನು, ಯಜ್ಞಗಳ ವಿಘ್ನವನ್ನು ಪರಿಹರಿಸುವವನು, ಯಜ್ಞರೂಪಿಯು, ಯಜ್ಞಕರ್ತ್ರಂತರ್ಗತನು ಮತ್ತು ಯಜ್ಞದ ಅಂಗಕಲಾಪವನ್ನು ಸೃಷ್ಟಿಸುವ ಅವಯವಗಳುಳ್ಳವನೂ ಆದ ನಿನ್ನನ್ನು ನಾನು ಪೂಜಿಸುತ್ತೇನೆ.

೮೨-೮೩. ಲೋಕವನ್ನು ಶುದ್ಧಿಗೊಳಿಸುವ ದೇವಸ್ವಾಮಿಯಾದ ಆ ವಾಮನನು ಈ ರೀತಿಯಾದ ಕಶ್ಯಪನ ಸ್ತೋತ್ರವನ್ನು ಕೇಳಿ ನಕ್ಕು ಕಶ್ಯಪನಿಗೆ ಸಂತೋಷವನ್ನು ಅಭಿವೃದ್ಧಿಗೊಳಿಸುತ್ತಾ ಹೀಗೆ ಮಾತನಾಡಿದನು.

೮೩-೮೫. ಅಪ್ಪ! ನಾನು ಪ್ರಸನ್ನನಾಗಿದ್ದೇನೆ. ದೇವತೆಗಳಿಂದ ಪೂಜಿಸಿಕೊಳ್ಳಲ್ಪಟ್ಟ ನಿನಗೆ ಮಂಗಳವಾಗುತ್ತದೆ. ಶೀಘ್ರದಲ್ಲಿಯೇ ನಿನ್ನ ಮನೋಭೀಷ್ಟವನ್ನೆಲ್ಲಾ ಸಾಧಿಸಿಕೊಡುವೆನು. ನಾನು ಎರಡು ಅವತಾರಗಳಲ್ಲಿ ಈ ರೀತಿ ನಿಮ್ಮ ಮಗನಾಗುತ್ತೇನೆ. ಮುಂದಿನ ಜನ್ಮದಲ್ಲಿಯೂ ಸಹ ನಿಮಗೆ ಉತ್ತಮವಾದ ಸುಖವನ್ನು ಸಾಧಿಸಿಕೊಡುವೆನು.

ಆರೇಭೇ ಗುರುಣಾ ಯುಕ್ತಃ ಕಾವ್ಯೇನ ಚ ಮುನೀಶ್ವರೈಃ ।
ತಸ್ಮಿನ್ಮಖೇ ಸಮಾಹೂತೋ ವಿಷ್ಣುರ್ಲಕ್ಷ್ಮೀಸಮನ್ವಿತಃ ॥ ೮೬ ॥

ಹವಿಃ ಸ್ವೀಕರಣಾರ್ಥಾಯ ಋಷಿಭಿರ್ಬ್ರಹ್ಮವಾದಿಭಿಃ ।
ಪ್ರವೃದ್ಧೈಶ್ವರ್ಯದೈತ್ಯಸ್ಯ ವರ್ತಮಾನೇ ಮಹಾಕ್ರತೌ ॥ ೮೭ ॥

ಆಮಂತ್ರ್ಯ ಮಾತಾಪಿತರೌ ಸ ವಟುರ್ವಾಮನೋ ಯಯೌ ।
ಸ್ಮಿತೇನ ಮೋಹಯನ್ ಲೋಕಂ ವಾಮನೋ ಭಕ್ತವತ್ಸಲಃ ॥ ೮೮ ॥

ಹವಿರ್ಭೋಕ್ತುಮಿವಾಯಾತೋ ಬಲೇಃ ಪ್ರತ್ಯಕ್ಷತೋ ಹರಿಃ ।
ದುರ್ವೃತ್ತೋ ವಾ ಸುವೃತ್ತೋ ವಾ ಜಡೋ ವಾ ಪಂಡಿತೋಽಪಿ ವಾ ॥ ೮೯ ॥

ಯೋ ಭಕ್ತಿಯುಕ್ತಸ್ತಸ್ಯಾಂತಃ ಸದಾ ಸನ್ನಿಹಿತೋ ಹರಿಃ ।
ಆಯಾಂತಂ ವಾಮನಂ ದೃಷ್ಟ್ವಾ ಋಷಯೋ ಜ್ಞಾನಚಕ್ಷುಷಃ ॥ ೯೦ ॥

---

೮೫-೮೭. ಈ ಸಮಯದಲ್ಲಿ ದೈತ್ಯನಾದ ಬಲಿಯು, ಗುರುಗಳಾದ ಶುಕ್ರಾಚಾರ್ಯರು ಮತ್ತು ಅನೇಕ ಮುನೀಶ್ವರರು ಇವರುಗಳಿಂದ ಸಹಿತನಾಗಿ ದೀರ್ಘ ಸತ್ರವೆಂಬ ಮಹಾಯಜ್ಞವನ್ನು ಮಾಡಲು ಆರಂಭಿಸಿದನು. ಆ ಯಜ್ಞದಲ್ಲಿ ಬ್ರಹ್ಮಜ್ಞಾನಿಗಳಾದ ಋಷಿಗಳು ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಲಕ್ಷ್ಮೀಸಹಿತನಾದ ವಿಷ್ಣುವನ್ನು ಆಹ್ವಾನಿಸಿದರು.

೮೭-೮೯. ಸಮುಗ್ರೈಶ್ವರ್ಯವಂತನಾದ ದೈತ್ಯನ ಮಹಾಯಜ್ಞವು ನಡೆಯುತ್ತಿರಲಾಗಿ ತಂದೆ ತಾಯಿಗಳನ್ನು ಕರೆದುಕೊಂಡು ಬ್ರಹ್ಮಚಾರಿಯಾದ ಆ ವಾಮನನು ಹೊರಟು, ಮಂದಹಾಸದಿಂದ ಲೋಕವನ್ನೇ ಮೋಹಗೊಳಿಸುವವನಾಗಿ, ಹರಿಯೇ ಪ್ರತ್ಯಕ್ಷವಾಗಿ ಹವಿಸ್ಸನ್ನು ಸ್ವೀಕರಿಸಲು ಬಂದಂತೆ ಯಜ್ಞಶಾಲೆಯ ಹತ್ತಿರ ಬಂದನು.

೮೯-೯೦. ದುರಾಚಾರಿ ಅಥವಾ ಸದಾಚಾರಿ ಅಜ್ಞಾನಿ ಅಥವಾ ಪಂಡಿತ ಎಂತಹವನಾದರೂ ಸರಿ ಭಕ್ತಿಯುಳ್ಳವನಾದರೆ ಅಂತಹ ಭಕ್ತನ ಅಂತರಂಗದಲ್ಲಿ ಹರಿಯು ಯಾವಾಗಲೂ ತನ್ನ ಸಾನ್ನಿಧ್ಯವನ್ನು ನೀಡುವನು.

ಜ್ಞಾತ್ವಾ ನಾರಾಯಣಂ ದೇವಮುದ್ಯಯುಃ ಸಭ್ಯಸಂಯುತಾಃ ।
ಏತದ್ಜ್ಞಾತ್ವಾ ದೈತ್ಯಗುರುರೇಕಾಂತೇ ಬಲಿಮಬ್ರವೀತ್ ॥ ೯೧ ॥

ಸ್ವಸಾರಮವಿಚಾರ್ಯೈವ ಖಲಾಃ ಕಾರ್ಯಾಣಿ ಕುರ್ವತೇ ।

ಶುಕ್ರ ಉವಾಚ

ಭೋ ಭೋ ದೈತ್ಯಪತೇ ಸೌಮ್ಯ ಹ್ಯಪಹರ್ತುಂ ತವ ಶ್ರಿಯಂ ॥ ೯೨ ॥

ವಿಷ್ಣುರ್ವಾಮನರೂಪೇಣ ಹ್ಯದಿತೇಃ ಪುತ್ರತಾಂ ಗತಃ ।
ತವಾಧ್ವರಂ ಸ ಆಯಾತಿ ತ್ವಯಾ ತಸ್ಯಾಸುರೇಶ್ವರ ॥ ೯೩ ॥

ನ ಕಿಂಚಿದಪಿ ದಾತವ್ಯಂ ಮನ್ಮತಂ ಶೃಣು ಪಂಡಿತ ।
ಆತ್ಮಬುದ್ಧಿಃ ಸುಖಕರೀ ಗುರುಬುದ್ಧಿರ್ವಿಶೇಷತಃ ॥ ೯೪ ॥

---

೯೦-೯೨. ಜ್ಞಾನದೃಷ್ಟಿಯುಳ್ಳ ಋಷಿಗಳು ಬರುತ್ತಿದ್ದ ವಾಮನನನ್ನು ನೋಡಿ ಅವನನ್ನು ನಾರಾಯಣನೆಂದು ತಿಳಿದು ಸಭಿಕರಿಂದ ಸಹಿತರಾಗಿ ಇದಿರುಗೊಳ್ಳಲು ಹೊರಟರು. ಇದನ್ನು ತಿಳಿದು ದೈತ್ಯಗುರುಗಳಾದ ಶುಕ್ರಾಚಾರ್ಯರು ರಹಸ್ಯವಾಗಿ ಬಲಿಯನ್ನು ಕುರಿತು ದುಷ್ಟರು ತಮ್ಮ ಶಕ್ತಿಯನ್ನು ತಿಳಿಯದೇ ಕೆಲಸಗಳಲ್ಲಿ ಪ್ರವರ್ತಿಸುತ್ತಾರೆ ಎಂಬುದಾಗಿ ಹೇಳಿದರು.

೯೨-೯೫. ಶುಕ್ರಾಚಾರ್ಯರು ಮುಂದುವರಿಯುತ್ತಾ ಶಾಂತನಾದ ದೈತ್ಯರಾಜನೇ! ನಿನ್ನ ಐಶ್ವರ್ಯವನ್ನು ಅಪಹರಿಸುವುದಕ್ಕಾಗಿ ವಿಷ್ಣುವು ವಾಮನ ರೂಪದಿಂದ ಅದಿತಿಗೆ ಮಗನಾಗಿ ಹುಟ್ಟಿ ನಿನ್ನ ಯಜ್ಞಕ್ಕೆ ಬರುತ್ತಿದ್ದಾನೆ. ರಾಕ್ಷಸಸ್ವಾಮಿಯೇ! ನೀನು ಜ್ಞಾನಿಯು. ಆದರೂ ನನ್ನ ಅಭಿಪ್ರಾಯವನ್ನು ಲಾಲಿಸು. ಅವನಿಗೆ ನೀನು ಏನನ್ನೂ ಕೊಡಬೇಡ. ತನ್ನ ಸ್ವಂತ ಬುದ್ಧಿಯು ಸುಖದಾಯಕವು. ಗುರುಗಳ ಬುದ್ಧಿಯು ವಿಶೇಷವಾಗಿ ಸುಖಪ್ರದವು, ಇತರರ ಬುದ್ಧಿಯು ವಿನಾಶಹೇತುವು. ಹೆಂಗಸರ ಬುದ್ಧಿಯಂತೂ

ಪರಬುದ್ಧಿರ್ವಿನಾಶಾಯ ಸ್ತ್ರೀಬುದ್ಧಿಃ ಪ್ರಳಯಂಕರೀ ।
ಶತ್ರುಪ್ರಾಣಾಂ ಹಿತಕೃದ್ಯಸ್ತು ಸ ಹಂತವ್ಯೋ ವಿಶೇಷತಃ ॥ ೯೫ ॥

ಬಲಿರುವಾಚ

ಏವಂ ಗುರೋ ನ ವಕ್ತವ್ಯಂ ಧರ್ಮಮಾರ್ಗವಿರೋಧತಃ ।
ಯದಾದತ್ತೇ ಸ್ವಯಂ ವಿಷ್ಣುಃ ಕಿಮಸ್ಮಾದಧಿಕಂ ವರಂ ॥ ೯೬ ॥

ಕುರ್ವಂತಿ ವಿದುಷೋ ಯಜ್ಞಾನ್ವಿಷ್ಣುಪ್ರೀಣನಕಾರಣಾತ್ ।
ಸ ಚೇತ್ಸಾಕ್ಷಾದ್ಧವಿರ್ಭೋಗೀ ಮತ್ತಃ ಕೋಽಭ್ಯಧಿಕೋ ಭುವಿ ॥ ೯೭ ॥

ದರಿದ್ರೇಣಾಪಿ ಯತ್ಕಿಂಚಿದ್ದೀಯತೇ ವಿಷ್ಣವೇ ಗುರೋ ।
ತದೇವ ಪರಮಂ ದಾನಂ ದತ್ತಂ ಭವತಿ ಚಾಕ್ಷಯಂ ॥ ೯೮ ॥

---

ಪ್ರಳಯವನ್ನೇ ಎಂದರೆ ಮಹಾಕ್ರಾಂತಿಯನ್ನೇ ಉಂಟುಮಾಡುತ್ತದೆ. ಶತ್ರು ಪಕ್ಷಕ್ಕೆ ಅನುಕೂಲಮಾಡುವವನನ್ನು ವಿಶೇಷವಾಗಿ ಸಂಹರಿಸಬೇಕು (ನಿರ್ಮೂಲ ಮಾಡಬೇಕು) ಎಂಬುದಾಗಿ ಹೇಳಿದರು.

೯೬. ಬಲಿಯು ಉತ್ತರವಿತ್ತನು—ಗುರುವರ್ಯರೇ! ಧರ್ಮಮಾರ್ಗ ವಿರುದ್ಧವಾಗಿ ಹೀಗೆ ಹೇಳಬಾರದು. ನಾವು ಕೊಡುವುದನ್ನು ವಿಷ್ಣುವೇ ಸಾಕ್ಷಾತ್ತಾಗಿ ಸ್ವೀಕರಿಸುವುದಕ್ಕಿಂತ ಹೆಚ್ಚಾದ ಫಲವಾವುದು?

೯೭. ಜ್ಞಾನಿಗಳು ವಿಷ್ಣುವು ಸಂತೋಷಪಡಲೆಂಬ ಉದ್ದೇಶದಿಂದ ಯಜ್ಞಗಳನ್ನು ಮಾಡುತ್ತಾರೆ. ಹೀಗಿರುವಾಗ ಅಂತಹ ವಿಷ್ಣುವೇ ಸಾಕ್ಷಾತ್ತಾಗಿ ಬಂದು ನಮ್ಮ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದಾದರೆ ಈ ಭೂಲೋಕದಲ್ಲಿ ನನಗಿಂತಲೂ ಹೆಚ್ಚಾದ ಪುಣ್ಯವಂತನು ಯಾರು?

೯೮. ಗುರುಗಳೇ! ಬಡವನಾದರೂ ತನ್ನ ಶಕ್ತ್ಯನುಸಾರವಾಗಿ ಸ್ವಲ್ಪವನ್ನಾದರೂ ವಿಷ್ಣುವಿಗೆ ಕೊಡುತ್ತಾನೆ. ವಿಷ್ಣುವಿಗೆ ಕೊಟ್ಟುದೇ ಉತ್ತಮ ದಾನವು. ಅದೇ ಅಕ್ಷಯವಾಗುತ್ತದೆ.

**ಸ್ಮೃತೋಽಪಿ ಪರಯಾ ಭಕ್ತ್ಯಾ ಪುನಾತಿ ಪುರುಷೋತ್ತಮಃ ।**
**ಯೇನ ಕೇನಾಪ್ಯರ್ಚಿತಶ್ಚೇದ್ದದಾತಿ ಪರಮಾಂ ಗತಿಂ　　॥ ೯೯ ॥**

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।**
**ಅನಿಚ್ಛಯಾಽಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ　　॥ ೧೦೦ ॥**

**ಜಿಹ್ವಾಗ್ರೇ ವಸತೇ ಯಸ್ಯ ಹರಿರಿತ್ಯಕ್ಷರದ್ವಯಂ ।**
**ಸ ವಿಷ್ಣುಲೋಕಮಾಪ್ನೋತಿ ಪುನರಾವೃತ್ತಿದುರ್ಲಭಂ　　॥ ೧೦೧ ॥**

**ಗೋವಿಂದೇತಿ ಸದಾ ಧ್ಯಾಯೇದ್ಯಸ್ತು ರಾಗಾದಿವರ್ಜಿತಃ ।**
**ಸ ಯಾತಿ ವಿಷ್ಣುಭವನಮಿತಿ ಪ್ರಾಹುರ್ಮನೀಷಿಣಃ　　॥ ೧೦೨ ॥**

---

೯೯. ಉತ್ಕೃಷ್ಟ ಭಕ್ತಿಯಿಂದ ಪುರುಷೋತ್ತಮನನ್ನು ಸ್ಮರಿಸುವವನಿಗೆ ಅವನು ಪರಿಶುದ್ಧಿಯನ್ನೂ, ಪೂಜೆಮಾಡುವವನಿಗೆ ಉತ್ತಮಗತಿ ಎಂದರೆ ಮೋಕ್ಷವನ್ನೂ ಕೊಡುತ್ತಾನೆ.

೧೦೦. ಕಾಣದೇ ಮುಟ್ಟಿದಾಗ್ಯೂ ಅಗ್ನಿಯು ಹೇಗೆ ಸುಡುವುದೋ ಅಂತೆಯೇ ದುಷ್ಟ ಮನಸ್ಸಿನಿಂದ ಸ್ಮರಣೆಮಾಡಿದರೂ ಸಹ ಶ್ರೀಹರಿಯು ಪಾಪಗಳನ್ನು ಪರಿಹರಿಸುತ್ತಾನೆ.

೧೦೧. ಯಾವನ ನಾಲಿಗೆಯ ಕೊನೆಯಲ್ಲಿ 'ಹರಿ' ಎಂಬ ಎರಡು ಅಕ್ಷರಗಳು ಇರುತ್ತವೆಯೋ (ಯಾವನು ಹರಿನಾಮವನ್ನು ಪಠನೆಮಾಡುತ್ತಿರುತ್ತಾನೆಯೋ) ಅಂತಹವನಿಗೆ ಪುನರಾವೃತ್ತಿಯಿಲ್ಲದ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆ.

೧೦೨. ರಾಗದ್ವೇಷಗಳಿಲ್ಲದೆ ಗೋವಿಂದ ಎಂಬ ನಾಮವನ್ನು ಯಾವಾಗಲೂ ಧ್ಯಾನಿಸುವವನು ಶಾಶ್ವತ ಸುಖಮಯವಾದ ವೈಕುಂಠಲೋಕಕ್ಕೆ ಹೋಗುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ.

ಅಗ್ನೌ ವಾ ಬ್ರಾಹ್ಮಣೇ ವಾSಪಿ ಹೂಯತೇ ಯದ್ಧವಿರ್ಗುರೋ ।
ಹರಿಭಕ್ತ್ಯಾ ಮಹಾಭಾಗ ತೇನ ವಿಷ್ಣುಃ ಪ್ರಸೀದತಿ ॥ ೧೦೩ ॥

ಅಹಂ ತು ಹರಿತುಷ್ಟ್ಯರ್ಥಂ ಕರೋಮ್ಯಧ್ವರಮುತ್ತಮಂ ।
ಸ್ವಯಮಾಯಾತಿ ಚೇದ್ವಿಷ್ಣುಃ ಕೃತಾರ್ಥೋSಸ್ಮಿ ನ ಸಂಶಯಃ ॥ ೧೦೪ ॥

ಏವಂ ವದತಿ ದೈತ್ಯೇಂದ್ರೇ ವಿಷ್ಣುರ್ವಾಮನರೂಪಧೃಕ್ ।
ಪ್ರವಿವೇಶಾಧ್ವರಸ್ಥಾನಂ ಹುತವಹ್ನಿಮನೋರಮಂ ॥ ೧೦೫ ॥

ತಂ ದೃಷ್ಟ್ವಾ ಕೋಟಿಸೂರ್ಯಾಭಂ ಯೋಗ್ಯಾವಯವಸುಂದರಂ ।
ವಾಮನಂ ಸಹಸೋತ್ಥಾಯ ಪ್ರತ್ಯಗೃಹ್ಣಾತ್ಕೃತಾಂಜಲಿಃ ॥ ೧೦೬ ॥

ದತ್ವಾಸನಂ ಚ ಪ್ರಕ್ಷಾಲ್ಯ ಪಾದೌ ವಾಮನರೂಪಿಣೇ ।
ಸಕುಟುಂಬೋ ವಹನ್ಮೂರ್ಧ್ನಾ ಪರಮಾಂ ಮುದಮಾಪ್ತವಾನ್ ॥ ೧೦೭ ॥

---

೧೦೩. ಧನ್ಯರಾದ ಗುರುಗಳೇ! ಹರಿಭಕ್ತಿಪೂರ್ವಕವಾಗಿ ಅಗ್ನಿ ಅಥವಾ ಬ್ರಾಹ್ಮಣನಿಗೆ ಹವಿಸ್ಸನ್ನು ಕೊಟ್ಟರೆ ಅದರಿಂದ ವಿಷ್ಣುವು ಪ್ರಸನ್ನನಾಗುತ್ತಾನೆ.

೧೦೪. ನಾನಾದರೋ ಹರಿ ಪ್ರೀತಿಗೋಸ್ಕರವಾಗಿಯೇ ಶ್ರೇಷ್ಠವಾದ ಯಜ್ಞವನ್ನು ಮಾಡುತ್ತಿದ್ದೇನೆ. ಆ ವಿಷ್ಣುವೇ ಸಾಕ್ಷಾತ್ತಾಗಿ ಬಂದರೆ ಖಂಡಿತವಾಗಿಯೂ ನಾನು ಕೃತಕೃತ್ಯನಾಗುತ್ತೇನೆ. ಸಂದೇಹವಿಲ್ಲ.

೧೦೫. ದೈತ್ಯರಾಜನಾದ ಬಲಿಯು ಈ ಪ್ರಕಾರವಾಗಿ ಹೇಳುತ್ತಿರುವಾಗ ವಾಮನರೂಪಿಯಾದ ವಿಷ್ಣುವು ಹೋಮಮಾಡಿಸಿಕೊಳ್ಳಲ್ಪಟ್ಟ ಅಗ್ನಿಯಿಂದ ಮನೋಹರವಾದ ಯಜ್ಞಮಂಟಪವನ್ನು ಪ್ರವೇಶಿಸಿದನು.

೧೦೬. ಕೋಟಿಸೂರ್ಯರಂತೆ ಪ್ರಕಾಶಮಾನನಾದ ಉಚಿತವಾದ ಅವಯವ ಸೌಂದರ್ಯವುಳ್ಳ ಆ ವಾಮನನನ್ನು ನೋಡಿ ಬಲಿಯು ತಕ್ಷಣ ಎದ್ದು ಕೈ ಮುಗಿದುಕೊಂಡು ಸ್ವಾಗತಿಸಿದನು.

೧೦೭. ಬಲಿಯು ಪತ್ನಿಯಿಂದ ಸಹಿತನಾಗಿ ವಾಮನರೂಪಿಯಾದ ಹರಿಗೆ ಆಸನವನ್ನು ಕೊಟ್ಟು ಕುಳ್ಳಿರಿಸಿ, ಅವನ ಕಾಲುಗಳನ್ನು ತೊಳೆದು ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿ ಅತ್ಯಂತ ಸಂತೋಷಪಟ್ಟನು.

ವಿಷ್ಣವೇಽಸ್ಮೈ ಜಗದ್ಧಾಮ್ನೇ ದತ್ತ್ವಾಽರ್ಘ್ಯಂ ವಿಧಿವದ್ಬಲಿಃ ।
ರೋಮಾಂಚಿತತನುರ್ಭೂತ್ವಾ ಹರ್ಷಾಶ್ರುನಯನೋಽಬ್ರವೀತ್ ॥ ೧೦೮ ॥

ಬಲಿರುವಾಚ

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲೋ ಮಖಃ ।
ಜೀವಿತಂ ಸಫಲಂ ಮೇಽದ್ಯ ಕೃತಾರ್ಥೋಽಸ್ಮಿ ನ ಸಂಶಯಃ ॥ ೧೦೯ ॥

ಅಮೋಘಾಮೃತವೃಷ್ಟಿರ್ಮೇ ಸಮಾಯಾತಾಽತಿದುರ್ಲಭಾ ।
ತ್ವದಾಗಮನಮಾತ್ರೇಣ ಹ್ಯನಾಯಾಸೋ ಮಹೋತ್ಸವಃ ॥ ೧೧೦ ॥

ಏತೇ ಚ ಋಷಯಃ ಸರ್ವೇ ಕೃತಾರ್ಥಾ ನಾತ್ರ ಸಂಶಯಃ ।
ಯೈಃ ಪೂರ್ವಂ ಹಿ ತಪಸ್ತಪ್ತಂ ತದದ್ಯ ಸಫಲಂ ಪ್ರಭೋ ॥ ೧೧೧ ॥

---

೧೦೮. ಬಲಿಯು ಜಗದ್ವ್ಯಾಪಿಯೂ ವಾಮನರೂಪಿಯೂ ಆದ ವಿಷ್ಣುವಿಗೆ ವಿಧಾನೋಕ್ತರೀತಿಯಿಂದ ಅರ್ಘ್ಯ ಕೊಟ್ಟು ಶರೀರದಲ್ಲಿ ರೋಮಾಂಚವುಳ್ಳವನಾಗಿ ಸಂತೋಷದಿಂದ ಕಣ್ಣಿನಲ್ಲಿ ನೀರುತುಂಬಿಕೊಂಡು ಮಾತನಾಡಿದನು.

೧೦೯-೧೧೦. ಬಲಿಯು ಹೇಳಿದನು—ವಾಮನದೇವನೇ! ನೀನು ಬಂದಮಾತ್ರದಿಂದ ನನ್ನ ಜನ್ಮವು ಈಗ ಸಾರ್ಥಕವಾಯಿತು. ನಿನ್ನ ಸಾನ್ನಿಧ್ಯದಿಂದ ಈಗ ನನ್ನ ಯಜ್ಞವು ಸಫಲವಾಯಿತು. ನಿನ್ನ ಸಂದರ್ಶನದಿಂದ ಈಗ ನನ್ನ ಜೀವಿತವು ಸಾರ್ಥಕವಾಯಿತು. ನಿಜವಾಗಿಯೂ ನಾನು ಕೃತಕೃತ್ಯನಾದೆನು. ಸಂಶಯವಿಲ್ಲ. ನಿನ್ನ ಆಗಮನಮಾತ್ರದಿಂದ ಯಾರಿಗೂ ಲಭಿಸದ ಅಮೋಘವಾದ ಅಮೃತವೃಷ್ಟಿಯು ನನಗೆ ಬಂದಂತಾಗಿ ಅನಾಯಾಸವಾಗಿ ಮಹೋತ್ಸವವುಂಟಾಯಿತು.

೧೧೧. ಸ್ವಾಮಿಯೇ! ಈ ಋಷಿಗಳೆಲ್ಲರೂ ಕೃತಾರ್ಥರಾದರು ಹಿಂದೆ ಮಾಡಿದ ತಪಸ್ಸು ನಿಜವಾಗಿಯೂ ಈಗ ನಿನ್ನ ದರ್ಶನದಿಂದ ಸಾರ್ಥಕವಾಯಿತು. ಸಂಶಯವಿಲ್ಲ.

ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ನ ಸಂಶಯಃ ।
ತಸ್ಮಾತ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋನಮಃ ॥ ೧೧೨ ॥

ತ್ವದಾಜ್ಞಯಾ ತ್ವನ್ನಿಯೋಗಂ ಸಾಧಯಾಮೀತಿ ಮನ್ಮನಃ ।
ಅತ್ಯುತ್ಸಾಹಸಮಾಯುಕ್ತಂ ಸಮಾಜ್ಞಾಪಯ ಮಾಂ ಪ್ರಭೋ ॥ ೧೧೩ ॥

ಏವಮುಕ್ತೋ ದೀಕ್ಷಿತೇನ ಪ್ರಹಸನ್ವಾಮನೋಽಬ್ರವೀತ್ ।
ದೇಹಿ ಮೇ ತಪಸಿ ಸ್ಥಾತುಂ ಭೂಮಿಂ ತ್ರಿಪದಸಂಮಿತಾಂ ॥ ೧೧೪ ॥

ಏತಚ್ಛ್ರುತ್ವಾ ಬಲಿಃ ಪ್ರಾಹ ರಾಜ್ಯಂ ಯಾಚಿತವಾನ್ನ ಹಿ ।
ಗ್ರಾಮಂ ವಾ ನಗರಂ ಚಾಪಿ ಧನಂ ವಾ ಕಿಂ ಕೃತಂ ತ್ವಯಾ ॥ ೧೧೫ ॥

ತನ್ನಿಶಮ್ಯ ಬಲಿಂ ಪ್ರಾಹ ವಿಷ್ಣುಃ ಕಪಟವೇಷಧೃಕ್ ।
ಆಸನ್ನಭ್ರಷ್ಟರಾಜ್ಯಸ್ಯ ವೈರಾಗ್ಯಂ ಜನಯನ್ನಿವ ॥ ೧೧೬ ॥

---

೧೧೨. ಸಂದೇಹವಿಲ್ಲದೆ ನಿಜವಾಗಿಯೂ ನಾನು ಕೃತಾರ್ಥನಾದೆನು. ಧನ್ಯನಾದೆನು. ಕೃತಕೃತ್ಯನಾದೆನು. ಆದಕಾರಣ ನಿನಗೆ ನಮಸ್ಕಾರ, ನಮಸ್ಕಾರ ನಮಸ್ಕಾರ.

೧೧೩. ನಿನ್ನ ಅಪ್ಪಣೆಯ ಪ್ರಕಾರ ನೀನು ವಿಧಿಸಿದುದನ್ನು ಸಾಧಿಸಬೇಕೆಂಬುದೇ ನನ್ನ ಮನೋಗತ. ಸ್ವಾಮಿಯೇ! ಅತ್ಯಂತವಾದ ಉತ್ಸಾಹದಿಂದ ಕೂಡಿರುವ ನನಗೆ ಅಪ್ಪಣೆಮಾಡು.

೧೧೪. ಯಜ್ಞದೀಕ್ಷೆಯನ್ನು ವಹಿಸಿದ ಬಲಿಯು ಹೀಗೆ ಹೇಳಿದುದನ್ನು ಕೇಳಿ ವಾಮನನು ನಕ್ಕು ತಪಸ್ಸು ಮಾಡುವುದಕ್ಕಾಗಿ ಮೂರು ಪಾದದಷ್ಟು ಭೂಮಿಯನ್ನು ನನಗೆ ಕೊಡು ಎಂದು ಕೇಳಿದನು.

೧೧೫. ಇದನ್ನು ಕೇಳಿ ಬಲಿಯು ಸ್ವಾಮಿಯೇ! ನೀನು ರಾಜ್ಯವನ್ನು ಬೇಡಲಿಲ್ಲ. ಹಳ್ಳಿ ಅಥವಾ ಪಟ್ಟಣ ಅಥವಾ ಪುಷ್ಕಳದ್ರವ್ಯ, ಇವುಗಳಾವುದನ್ನೂ ಕೇಳಲಿಲ್ಲ. ನೀನು ಏನು ಮಾಡಿದಂತಾಯಿತು? ಎಂದು ಹೇಳಿದನು.

೧೧೬. ಬಲಿಯ ಮಾತನ್ನು ಕೇಳಿ ಕಪಟ ವೇಷಧಾರಿಯಾದ ವಿಷ್ಣುವು ರಾಜ್ಯವು ಕೈಬಿಟ್ಟುಹೋಗುವ ಸಂದರ್ಭದಲ್ಲಿ ರಾಜನಿಗೆ ವೈರಾಗ್ಯವನ್ನು ಹುಟ್ಟಿಸುವವನಂತೆ ಬಲಿಗೆ ಹೇಳಿದನು.

## ಶ್ರೀಭಗವಾನುವಾಚ

ಶೃಣು ದೈತ್ಯೇಂದ್ರ ವಕ್ಷ್ಯಾಮಿ ಗುಹ್ಯಾದ್ಗುಹ್ಯತಮಂ ಪರಂ ।
ಸರ್ವಸಂಗವಿಹೀನಾನಾಂ ಕಿಮರ್ಥೈಃ ಸಾಧ್ಯತೇ ವದ　　॥ ೧೧೭ ॥

ಅಹಂ ತು ಸರ್ವಭೂತಾನಾಂ ಅಂತರ್ಯಾಮೀತಿ ಭಾವಯ ।
ಮಯಿ ಸರ್ವಮಿದಂ ದೈತ್ಯ ಕಿಮನ್ಯೈಃ ಸಾಧ್ಯತೇ ವದ　　॥ ೧೧೮ ॥

ರಾಗದ್ವೇಷವಿಹೀನಾನಾಂ ಶಾಂತಾನಾಂ ತ್ಯಕ್ತಮಾಯಿನಾಂ ।
ನಿತ್ಯಾನಂದಸ್ವರೂಪಾಣಾಂ ಕಿಮನ್ಯೈಃ ಸಾಧ್ಯತೇ ವದ　　॥ ೧೧೯ ॥

ಆತ್ಮವತ್ಸರ್ವಭೂತಾನಿ ಪಶ್ಯತಾಂ ಶಾಂತಚೇತಸಾಂ ।
ಅಭಿನ್ನಮಾತ್ಮನಃ ಸರ್ವಂ ಕೋ ದಾತಾ ದೀಯತೇ ಚ ಕಿಂ　　॥ ೧೨೦ ॥

---

೧೧೭. ಭಗವಂತನು ಮಾತನಾಡಿದನು — ರಾಕ್ಷಸಾಧಿಪತಿಯೇ! ಅತ್ಯಂತ ರಹಸ್ಯವಾದ ಉತ್ತಮ ಪ್ರಮೇಯವನ್ನು ಹೇಳುತ್ತೇನೆ ಕೇಳು ಸಕಲ ವಿಷಯಗಳಲ್ಲಿಯೂ ಆಶೆಯನ್ನು ಬಿಟ್ಟಿರುವವರಿಗೆ ದ್ರವ್ಯದಿಂದ ಸಾಧಿಸಬೇಕಾದುದೇನು? ಹೇಳು.

೧೧೮. ನಾನಾದರೋ ಸಕಲ ಪ್ರಾಣಿಗಳಿಗೂ ಅಂತರ್ಯಾಮಿಯು. ಸಕಲ ಜಗತ್ತೂ ನನ್ನನ್ನೇ ಆಶ್ರಯಿಸಿದೆ. ಹೀಗಿರುವಾಗ ದೈತ್ಯನೇ! ಇತರ ವಸ್ತುಗಳಿಂದ ನಾನು ಸಾಧಿಸಬೇಕಾದುದೇನಿದೆ? ಹೇಳು.

೧೧೯. ರಾಗದ್ವೇಷಗಳಿಲ್ಲದವರು, ಶಾಂತರು, ಮೋಹವನ್ನು ಬಿಟ್ಟಿರುವವರು ಮತ್ತು ಶಾಶ್ವತವಾದ ಆನಂದಸ್ವರೂಪರೂ ಆಗಿರುವವರಿಗೆ ಇತರ ವಸ್ತುಗಳಿಂದ ಆಗಬೇಕಾದುದೇನು? ನೀನೇ ಹೇಳು.

೧೨೦. ಸಕಲವೂ ಪರಮಾತ್ಮನದೇ ಆಗಿದೆ. ಸಕಲ ಪ್ರಾಣಿಗಳೂ ಪರಮಾತ್ಮನ ಅಧೀನವು ಎಂದು ತಿಳಿದು ಶಾಂತಮನಸ್ಕರಾಗಿರುವವರಿಗೆ ಕೊಡುವವರು ಯಾರು? ಕೊಡಲ್ಪಡುವುದಾದರೂ ಏನು?

ಪೃಥ್ವೀಯಂ ಕ್ಷತ್ರಿಯವಶಾ ಇತಿ ಶಾಸ್ತ್ರೇಷು ನಿಶ್ಚಿತಂ ।
ತದಾಜ್ಞಯಾ ಸ್ಥಿತಾಃ ಸರ್ವೇ ಲಭಂತೇ ಪರಮಂ ಸುಖಂ ॥ ೧೨೧ ॥

ದಾತವ್ಯೋ ಮುನಿಭಿಶ್ಚಾಪಿ ಷಷ್ಠಾಂಶೋ ಭೂಭುಜೇ ಬಲೇ ।
ಮಹೀಯಂ ಬ್ರಾಹ್ಮಣಾನಾಂ ತು ದಾತವ್ಯಾ ಸರ್ವಯತ್ನತಃ ॥ ೧೨೨ ॥

ಭೂಮಿದಾನಸ್ಯ ಮಾಹಾತ್ಮ್ಯಂ ನ ಭೂತಂ ನ ಭವಿಷ್ಯತಿ ।
ಪರಂ ನಿರ್ವಾಣಮಾಪ್ನೋತಿ ಭೂಮಿದೋ ನಾತ್ರಸಂಶಯಃ ॥ ೧೨೩ ॥

ಸ್ವಲ್ಪಾಮಪಿ ಮಹೀಂ ದತ್ವಾ ಶ್ರೋತ್ರಿಯಾಯಾಹಿತಾಗ್ನಯೇ ।
ಬ್ರಹ್ಮಲೋಕಮವಾಪ್ನೋತಿ ಪುನರಾವೃತ್ತಿದುರ್ಲಭಂ ॥ ೧೨೪ ॥

---

೧೨೧. ಈ ಭೂಮಿಯು ಕ್ಷತ್ರಿಯರ ಅಧೀನವೆಂದು ಶಾಸ್ತ್ರಗಳಲ್ಲಿ ನಿರ್ಣಯಿಸಲ್ಪಟ್ಟದೆ. ಅವರ ಅಪ್ಪಣೆಯಪ್ರಕಾರ ನಡೆಯುವ ಸರ್ವರೂ ಉತ್ತಮವಾದ ಸುಖವನ್ನು ಹೊಂದುತ್ತಾರೆ.

೧೨೨. ಬಲಿಯೇ! ಋಷಿಗಳೂ ಸಹ ತಮ್ಮ ಆದಾಯದ ಆರನೆಯ ಒಂದು ಭಾಗವನ್ನು ರಾಜನಿಗೆ ಕೊಡಬೇಕು. ಈ ಭೂಮಿಯನ್ನು ಸಕಲ ಪ್ರಯತ್ನದಿಂದಲೂ ಬ್ರಾಹ್ಮಣರಿಗೆ ದಾನಮಾಡಬೇಕು.

೧೨೩. ಭೂಮಿದಾನದ ಮಹಿಮೆಯು ಅಪಾರವಾದದ್ದು, ಯಾವ ದಾನವೂ ಭೂತ ಭವಿಷ್ಯತ್ಕಾಲಗಳಲ್ಲಿ ಅಂತಹ ಮಾಹಾತ್ಮ್ಯೆಯನ್ನು ಹೊಂದಿಲ್ಲ, ಹೊಂದಲಾರದು. ಭೂಮಿಯನ್ನು ದಾನಮಾಡಿದವನು ಮುಕ್ತಿಯನ್ನು ನಿಜವಾಗಿಯೂ ಹೊಂದುತ್ತಾನೆ, ಸಂಶಯವಿಲ್ಲ.

೧೨೪. ವೇದ ಶಾಸ್ತ್ರಗಳನ್ನು ಅಧ್ಯಯನಮಾಡಿ ವಿಹಿತ ಯಜ್ಞಾದಿ ಕರ್ಮಗಳನ್ನು ಅನುಷ್ಠಾನ ಮಾಡುತ್ತಿರುವ ಬ್ರಾಹ್ಮಣನಿಗೆ ಸ್ವಲ್ಪವಾದರೂ ಭೂಮಿಯನ್ನು ಕೊಟ್ಟರೆ ಪುನಃ ಹಿಂದಿರುಗದಂತಹ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ.

ಭೂಮಿದಃ ಸರ್ವದಃ ಪ್ರೋಕ್ತೋ ಭೂಮಿದೋ ಮೋಕ್ಷಭಾಗ್ಭವೇತ್ ।
ಭೂಮಿದಾನಂ ತು ತಜ್ಜ್ಞೇಯಂ ಸರ್ವಪಾಪಪ್ರಣಾಶನಂ ॥ ೧೨೫ ॥

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ದಶಹಸ್ತಾಂ ಮಹೀಂ ದತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೧೨೬ ॥

ಸತ್ಪಾತ್ರೇ ಭೂಮಿದಾತಾ ಯಃ ಸರ್ವದಾನಫಲಂ ಲಭೇತ್ ।
ಭೂಮಿದಾನಸಮಂ ನಾನ್ಯತ್ತ್ರಿಷು ಲೋಕೇಷು ವಿದ್ಯತೇ ॥ ೧೨೭ ॥

ದ್ವಿಜಾಯ ವೃತ್ತಿಹೀನಾಯ ಯಃ ಪ್ರದದ್ಯಾನ್ಮಹೀಂ ಬಲೇ ।
ತಸ್ಯ ಪುಣ್ಯಫಲಂ ವಕ್ತುಂ ನ ಕ್ಷಮೋಽಬ್ದಶತೈರಹಂ ॥ ೧೨೮ ॥

ಸಕ್ತಾಯ ದೇವಪೂಜಾಸು ವೃತ್ತಿಹೀನಾಯ ದೈತ್ಯಪ ।
ಸ್ವಲ್ಪಾಮಪಿ ಮಹೀಂ ದದ್ಯಾದ್ಯಸ್ಸ ವಿಷ್ಣುರ್ನ ಸಂಶಯಃ ॥ ೧೨೯ ॥

---

೧೨೫. ಭೂಮಿಯನ್ನು ದಾನಮಾಡಿದವನು ಸಕಲ ದಾನಗಳ ಫಲವನ್ನೂ ಹೊಂದುವನೆಂದು ಶಾಸ್ತ್ರದಲ್ಲಿ ಹೇಳಿದೆ. ಭೂಮಿ ದಾತೃವಿಗೆ ಮೋಕ್ಷವು ಲಭಿಸುತ್ತದೆ. ಭೂಮಿ ದಾನವು ಸಕಲ ಪಾಪಗಳನ್ನೂ ಪರಿಹರಿಸುತ್ತದೆ.

೧೨೬. ಮಹಾಪಾತಕಗಳನ್ನು ಮಾಡಿರುವವನು ಅಥವಾ ಸಕಲ ಪಾಪಗಳನ್ನು ಮಾಡಿದವನಾದರೂ ಸರಿ ಹತ್ತು ಗೇಣು ಪರಿಮಿತವಾದ ಭೂಮಿಯನ್ನು ದಾನಮಾಡಿದರೆ ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೨೭. ಯೋಗ್ಯನಾದ ಸತ್ಪಾತ್ರನಿಗೆ ಭೂಮಿಯನ್ನು ದಾನಮಾಡುವವನು ಸಕಲ ದಾನಗಳ ಫಲವನ್ನೂ ಹೊಂದುತ್ತಾನೆ. ಮೂರು ಲೋಕಗಳಲ್ಲಿಯೂ ಭೂಮಿದಾನಕ್ಕೆ ಸಮವಾದ ಮತ್ತೊಂದು ಧರ್ಮವಿಲ್ಲ.

೧೨೮. ಬಲಿಯೇ! ಜೀವನೋಪಾಯವಿಲ್ಲದ ದ್ವಿಜನಿಗೆ ಭೂಮಿದಾನ ಮಾಡುವವನ ಪುಣ್ಯಫಲವು ಅನಂತವಾದುದು. ಅದನ್ನು ಹೇಳಲು ನೂರಾರು ವರ್ಷಗಳಾದಾಗ್ಯೂ ಸಾಧ್ಯವಾಗುವುದಿಲ್ಲ.

೧೨೯. ದೈತ್ಯರಾಜನೇ! ಭಕ್ತಿಯಿಂದ ದೇವರ ಪೂಜೆಯನ್ನು ಮಾಡುವ, ಜೀವನೋಪಾಯವಿಲ್ಲದ ಬ್ರಾಹ್ಮಣನಿಗೆ ಸ್ವಲ್ಪವಾದರೂ ಭೂಮಿಯನ್ನು

ಇಕ್ಷುಗೋಧೂಮತುಲಸೀಪೂಗವೃಕ್ಷಾದಿಸಂಯುತಾ ।
ಪೃಥ್ವೀ ಪ್ರದೀಯತೇ ಯೇನ ಸ ವಿಷ್ಣುರ್ನಾತ್ರ ಸಂಶಯಃ ॥ ೧೩೦ ॥

ವೃತ್ತಿಹೀನಾಯ ವಿಪ್ರಾಯ ದರಿದ್ರಾಯ ಕುಟುಂಬಿನೇ ।
ಸ್ವಲ್ಪಾಮಪಿ ಮಹೀಂ ದತ್ವಾ ವಿಷ್ಣುಸಾಯುಜ್ಯಮಾಪ್ನುಯಾತ್ ॥ ೧೩೧ ॥

ಸಕ್ತಾಯ ದೇವಪೂಜಾಸು ವಿಪ್ರಾಯಾಢಕಿಕಾಂ ಮಹೀಂ ।
ದತ್ವಾ ಲಭೇತ ಗಂಗಾಯಾಂ ತ್ರಿರಾತ್ರಸ್ನಾನಜಂ ಫಲಂ ॥ ೧೩೨ ॥

ವಿಪ್ರಾಯ ವೃತ್ತಿಹೀನಾಯ ಸದಾಚಾರರತಾಯ ಚ ।
ದ್ರೋಣಿಕಾಂ ಪೃಥಿವೀಂ ದತ್ವಾ ಯತ್ಫಲಂ ಲಭತೇ ಶೃಣು ॥ ೧೩೩ ॥

ಗಂಗಾತೀರೇಽಶ್ವಮೇಧಾನಾಂ ಶತಾನಿ ವಿಧಿವನ್ನರಃ ।
ಕೃತ್ವಾ ಯತ್ಫಲಮಾಪ್ನೋತಿ ತದಾಪ್ನೋತಿ ಸ ಪುಷ್ಕಲಂ ॥ ೧೩೪ ॥

---

ಕೊಡುವವನು ನಿಜವಾಗಿಯೂ ವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾಗುವನು ಸಂಶಯವಿಲ್ಲ.

೧೩೦. ಕಬ್ಬು, ಗೋಧಿಯ ಪೈರು, ತುಲಸೀಗಿಡ, ಅಡಿಕೆಯಮರ ಮುಂತಾದವುಗಳಿಂದ ಸಮೃದ್ಧವಾದ ಭೂಮಿಯನ್ನು ದಾನಮಾಡುವವನು ವಿಷ್ಣುವಿನ ಅನುಗ್ರಹಕ್ಕೆ ಪಾತ್ರನೆಂಬುದರಲ್ಲಿ ಸಂದೇಹವಿಲ್ಲ.

೧೩೧. ಭೂಮಿಯಿಲ್ಲದ, ಬಡವನಾಗಿ ಕುಟುಂಬಿಯಾಗಿರುವ ಬ್ರಾಹ್ಮಣನಿಗೆ ಸ್ವಲ್ಪವಾದರೂ ಭೂಮಿಯನ್ನು ಕೊಟ್ಟರೆ ವಿಷ್ಣು ಸಾಯುಜ್ಯವನ್ನು ಹೊಂದುವನು.

೧೩೨. ಆದರದಿಂದ ದೇವಪೂಜೆಯನ್ನು ಮಾಡುತ್ತಿರುವ ಬ್ರಾಹ್ಮಣನಿಗೆ ಬಳ್ಳ ಬೀಜವರಿ ಭೂಮಿಯನ್ನು ದಾನಮಾಡಿದರೆ ಮೂರು ದಿನ ಗಂಗಾಸ್ನಾನ ಮಾಡಿದ ಫಲವು ಲಭಿಸುತ್ತದೆ.

೧೩೩-೧೩೪. ಸದಾಚಾರಿಯಾದ, ಜೀವನೋಪಾಯವಿಲ್ಲದ ಬ್ರಾಹ್ಮಣನಿಗೆ ಇಕ್ಕಳ ಬೀಜವರಿ ಭೂಮಿಯನ್ನು ದಾನಮಾಡಿದರೆ ಬರುವ ಫಲವನ್ನು

**ದದಾತಿ ಖಾರಿಕಾಂ ಭೂಮಿಂ ದರಿದ್ರಾಯ ದ್ವಿಜಾಯ ಯಃ ।**
**ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ವದತೋ ಮೇ ನಿಶಾಮಯ ॥ ೧೩೫ ॥**

**ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।**
**ವಿಧಾಯ ಜಾಹ್ನವೀತೀರೇ ಯತ್ಫಲಂ ತಲ್ಲಭೇದ್ಧ್ರುವಂ ॥ ೧೩೬ ॥**

**ಭೂಮಿದಾನಂ ಮಹಾದಾನಮತಿದಾನಂ ಪ್ರಕೀರ್ತಿತಂ ।**
**ಸರ್ವಪಾಪಪ್ರಶಮನಮಪವರ್ಗಫಲಪ್ರದಂ ॥ ೧೩೭ ॥**

**ಅತ್ರೇತಿಹಾಸಂ ವಕ್ಷ್ಯಾಮಿ ಶೃಣು ದೈತ್ಯಕುಲೇಶ್ವರ ।**
**ಯಚ್ಛೃತ್ವಾ ಶ್ರದ್ಧಯಾ ಯುಕ್ತೋ ಭೂಮಿದಾನಫಲಂ ಲಭೇತ್ ॥೧೩೮॥**

---

ಕೇಳು. ಗಂಗಾತೀರದಲ್ಲಿ ನೂರು ಅಶ್ವಮೇಧ ಯಾಗಗಳನ್ನು ಮಾಡಿದವನಿಗುಂಟಾಗುವ ಫಲಕ್ಕೆ ಸದೃಶವಾದ ಫಲವು ದ್ರೋಣಿಕಾಪರಿಮಿತ ಭೂದಾತೃವಿಗೆ ಸಂಪೂರ್ಣವಾಗಿ ಲಭಿಸುತ್ತದೆ.

೧೩೫-೧೩೬. ಬಡ ಬ್ರಾಹ್ಮಣನಿಗೆ ಖಂಡಗ ಬೀಜವರೀ ಭೂಮಿಯನ್ನು ದಾನ ಮಾಡುವವನಿಗೆ ಲಭಿಸುವ ಪುಣ್ಯವನ್ನು ಹೇಳುತ್ತೇನೆ, ಕೇಳು. ಗಂಗಾನದಿಯ ತೀರದಲ್ಲಿ ಸಾವಿರ ಅಶ್ವಮೇಧ ಯಾಗಗಳನ್ನು ಮತ್ತು ನೂರು ವಾಜಪೇಯ ಯಜ್ಞಗಳನ್ನೂ ಸಹ ಮಾಡಿದರೆ ಉಂಟಾಗುವ ಫಲಕ್ಕೆ ಸಮಾನವಾದ ಫಲವು ಅವನಿಗೆ ಲಭಿಸುತ್ತದೆ. ನಿಶ್ಚಿತವು.

೧೩೭. ಭೂಮಿ ದಾನವು ಶಾಸ್ತ್ರದಲ್ಲಿ ಅತಿದಾನ ಮಹಾದಾನ ಎಂಬುದಾಗಿ ಹೊಗಳಿದೆ. ಅದು ಸಕಲ ಪಾಪ ಪರಿಹಾರಕ ಮತ್ತು ಮೋಕ್ಷಪ್ರದವು.

೧೩೮. ದೈತ್ಯಕುಲಸ್ವಾಮಿಯೇ! ಭೂಮಿದಾನದ ಮಹಿಮೆಯ ವಿಷಯದಲ್ಲಿ ಒಂದು ಪೂರ್ವ ಕಥೆಯನ್ನು ಹೇಳುತ್ತೇನೆ ಕೇಳು. ಶ್ರದ್ಧೆಯಿಂದ ಅದನ್ನು ಕೇಳಿದರೆ ಭೂಮಿದಾನಮಾಡಿದ ಫಲವು ಲಭಿಸುತ್ತದೆ.

ಆಸೀತ್ಪುರಾ ದ್ವಿಜವರೋ ಬ್ರಾಹ್ಮಕಲ್ಪೇ ಮಹಾಮತಿಃ ।
ದರಿದ್ರೋ ವೃತ್ತಿಹೀನಶ್ಚ ನಾಮ್ನಾ ಭದ್ರಮತಿರ್ಬಲೇ ॥ ೧೩೯ ॥

ಶ್ರುತಾನಿ ಸರ್ವಶಾಸ್ತ್ರಾಣಿ ತೇನ ವೇದವಿದಾಽನಿಶಂ ।
ಶ್ರುತಾನಿ ಚ ಪುರಾಣಾನಿ ಧರ್ಮಶಾಸ್ತ್ರಾಣಿ ಸರ್ವಶಃ ॥ ೧೪೦ ॥

ಅಭವಂಸ್ತಸ್ಯ ಷಟ್ಪತ್ನ್ಯಃ ಶ್ರುತಿಃ ಸಿಂಧುರ್ಯಶೋವತೀ ।
ಕಾಮಿನೀ ಮಾಲಿನೀ ಚೈವ ಶೋಭಾ ಚೇತಿ ಪ್ರಕೀರ್ತಿತಾಃ ॥ ೧೪೧ ॥

ಆಸು ಪತ್ನೀಷು ತಸ್ಯಾಸನ್ ಚತ್ವಾರಿಂಶಚ್ಛತದ್ವಯಂ ।
ಪುತ್ರಾಣಾಮಸುರಶ್ರೇಷ್ಠ ಸರ್ವೇ ನಿತ್ಯಂ ಬುಭುಕ್ಷಿತಾಃ ॥ ೧೪೨ ॥

ಅಕಿಂಚನೋ ಭದ್ರಮತಿಃ ಕ್ಷುಧಾರ್ತಾನಾತ್ಮಜಾನ್ಪ್ರಿಯಾಃ ।
ಪಶ್ಯನ್ಸ್ವಯಂ ಕ್ಷುಧಾರ್ತಶ್ಚ ವಿಲಲಾಪಾಕುಲೇಂದ್ರಿಯಃ ॥ ೧೪೩ ॥

---

೧೩೯. ಬಲಿಯೇ! ಹಿಂದಿನ ಬ್ರಾಹ್ಮಕಲ್ಪದಲ್ಲಿ ಮಹಾ ಬುದ್ಧಿವಂತನು ಬಡವನು ಭೂಮಿಯಿಲ್ಲದವನೂ ಆದ ಭದ್ರಮತಿಯೆಂಬ ಬ್ರಾಹ್ಮಣಶ್ರೇಷ್ಠನಿದ್ದನು.

೧೪೦. ವೇದಾಧ್ಯಯನಸಂಪನ್ನನಾದ ಆ ಭದ್ರಮತಿಯು ಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಇವುಗಳನ್ನು ಸಮಗ್ರವಾಗಿ ಶ್ರವಣಮಾಡಿದ್ದನು.

೧೪೧. ಆ ಭದ್ರಮತಿಗೆ ಶ್ರುತಿ, ಸಿಂಧು, ಯಶೋವತೀ, ಕಾಮಿನೀ, ಮಾಲಿನೀ ಮತ್ತು ಶೋಭಾ, ಎಂಬುದಾಗಿ ಆರುಜನ ಹೆಂಡತಿಯರಿದ್ದರು.

೧೪೨. ಅವನಿಗೆ ಆರು ಜನ ಹೆಂಡತಿಯರಲ್ಲಿ ಇನ್ನೂರನಲವತ್ತು ಮಕ್ಕಳು ಹುಟ್ಟಿದರು. ರಾಕ್ಷಸವರನೇ! ಅವರೆಲ್ಲರೂ ಯಾವಾಗಲೂ ಹಸಿವಿನಿಂದ ಬಳಲುತ್ತಿದ್ದರು.

೧೪೩. ಬಡವನಾದ ಭದ್ರಮತಿಯು ಹಸಿವಿನಿಂದ ಬಳಲುತ್ತಿರುವ ಮಕ್ಕಳನ್ನೂ ಹೆಂಡತಿಯರನ್ನೂ ನೋಡುತ್ತಾ ತಾನೂ ಹಸಿವಿನಿಂದ ಬಳಲಿದವನಾಗಿ ಒಂದೂ ತೋರದೇ ಅತ್ತನು.

ಧಿಗ್ಜನ್ಮ ಭಾಗ್ಯರಹಿತಂ ಧಿಗ್ಜನ್ಮ ಧನವರ್ಜಿತಂ ।
ಧಿಗ್ಜನ್ಮ ಧರ್ಮರಹಿತಂ ಧಿಗ್ಜನ್ಮ ಖ್ಯಾತಿವರ್ಜಿತಂ ॥ ೧೪೪ ॥

ನರಸ್ಯ ಬಹ್ವಪತ್ಯಸ್ಯ ಧಿಗ್ಜನ್ಮೈಶ್ವರ್ಯವರ್ಜಿತಂ ।
ಅಹೋ ಗುಣಾಃ ಸೌಮ್ಯತಾ ಚ ವಿದ್ವತ್ತಾ ಜನ್ಮ ಸತ್ಕುಲೇ ॥ ೧೪೫ ॥

ದಾರಿದ್ರ್ಯಾಂಬುಧಿಮಗ್ನಸ್ಯ ಸರ್ವಮೇತನ್ನ ಶೋಭತೇ ।
ಪ್ರಿಯಾಃ ಪುತ್ರಾಶ್ಚ ಪೌತ್ರಾಶ್ಚ ಬಾಂಧವಾಃ ಭ್ರಾತರಸ್ತಥಾ ॥ ೧೪೬ ॥

ಶಿಷ್ಯಾಶ್ಚ ಸರ್ವಮನುಜಾಸ್ತ್ಯಜಂತ್ಯೈಶ್ವರ್ಯವರ್ಜಿತಂ ।
ಚಾಂಡಾಲೋ ವಾ ದ್ವಿಜೋ ವಾಽಪಿ ಭಾಗ್ಯವಾನೇವ ಪೂಜ್ಯತೇ ॥ ೧೪೭ ॥

ದರಿದ್ರಃ ಪುರುಷೋ ಲೋಕೇ ಶವವಲ್ಲೋಕನಿಂದಿತಃ ।
ಅಹೋ ಸಂಪತ್ಸಮಾಯುಕ್ತೋ ನಿಷ್ಠುರೋಽಪ್ಯನಿಷ್ಠುರಃ ॥ ೧೪೮ ॥

---

೧೪೪. ಭಾಗ್ಯವಿಲ್ಲದ ಜನ್ಮವು ಕಷ್ಟ, ಹಣವಿಲ್ಲದ ಬಾಳು ಕಷ್ಟ. ಧರ್ಮವಿಲ್ಲದ ಜನ್ಮವು ಕಷ್ಟ. ಕೀರ್ತಿಗೆ ಬಾರದ ಜನ್ಮವು ಕಷ್ಟ.

೧೪೫-೧೪೬. ಬಹು ಮಕ್ಕಳಿರುವ ಮನುಷ್ಯನ ಜನ್ಮವು ಐಶ್ವರ್ಯವಿಲ್ಲದಿದ್ದರೆ ಕಷ್ಟ. ಆಶ್ಚರ್ಯ! ಶಾಂತತೆ, ಪಾಂಡಿತ್ಯ, ಸಜ್ಜನರ ವಂಶದಲ್ಲಿ ಜನನ ಮುಂತಾದ ಗುಣಗಳೆಲ್ಲವೂ ಬಡತನವೆಂಬ ಸಮುದ್ರದಲ್ಲಿ ಮುಳುಗಿರುವವರಿಗೆ ಶೋಭಿಸುವುದಿಲ್ಲ.

೧೪೬-೧೪೭. ಹೆಂಡತಿ, ಮಕ್ಕಳು, ಮೊಮ್ಮಕ್ಕಳು, ನಂಟರು, ಸಹೋದರರು, ಶಿಷ್ಯರು, ಸಕಲ ಮನುಷ್ಯರೂ ಸಹ ಐಶ್ವರ್ಯವಿಲ್ಲದವನನ್ನು ಬಿಟ್ಟು ಬಿಡುತ್ತಾರೆ.

೧೪೭-೧೪೮. ಹೊಲೆಯನಾಗಲೀ ತ್ರಿವರ್ಣದವನಾಗಲೀ ಐಶ್ವರ್ಯವಂತನಾದರೆ ಅವನೇ ಸತ್ಕಾರಾರ್ಹನಾಗುತ್ತಾನೆ. ಪ್ರಪಂಚದಲ್ಲಿ ಬಡವನಾದ ಮನುಷ್ಯನು ಹೆಣದಂತೆ ತಿರಸ್ಕಾರಕ್ಕೆ ಪಾತ್ರನಾಗುತ್ತಾನೆ.

ಗುಣಹೀನೋಽಪಿ ಗುಣವಾನ್ಮೂರ್ಖೋಽಪ್ಯಥ ಪಂಡಿತಃ ।
ಐಶ್ವರ್ಯಗುಣಯುಕ್ತಶ್ಚೇತ್ಪೂಜ್ಯ ಏವ ನ ಸಂಶಯಃ ॥ ೧೪೯ ॥

ಅಹೋ ದರಿದ್ರತಾ ದುಃಖಂ ತತ್ರಾಪ್ಯಾಶಾಽತಿದುಃಖದಾ ।
ಆಶಾಭಿಭೂತಾಃ ಪುರುಷಾಃ ದುಃಖಮಶ್ನುವತೇಽಕ್ಷಯಂ ॥ ೧೫೦ ॥

ಆಶಾಯಾ ದಾಸಾ ಯೇ ದಾಸಾಸ್ತೇ ಸರ್ವಲೋಕಸ್ಯ ।
ಆಶಾ ದಾಸೀ ಯೇಷಾಂ ತೇಷಾಂ ದಾಸಾಯತೇ ಲೋಕಃ ॥ ೧೫೧ ॥

ಮಾನಂ ಹಿ ಮಹತಾಂ ಲೋಕೇ ಧನಮಕ್ಷಯಮುಚ್ಯತೇ ।
ತಸ್ಮಿನ್ನಾಶಾಖ್ಯರಿಪುಣಾ ಮಾನೇ ನಷ್ಟೇ ದರಿದ್ರತಾ ॥ ೧೫೨ ॥

---

೧೪೮-೧೪೯. ಐಶ್ವರ್ಯವಂತನಾದರೆ ನಿಷ್ಠುರಭಾಷಿಯಾದರೂ ಮೃದುಭಾಷಿಯೆನಿಸುತ್ತಾನೆ. ಆಶ್ಚರ್ಯ! ಐಶ್ವರ್ಯವೆಂಬೊಂದು ಗುಣವಿದ್ದರೆ ಗುಣವಿಲ್ಲದವನೂ ಗುಣವಂತನು, ಅಜ್ಞಾನಿಯು ಪಂಡಿತನು ಎನಿಸಿ ಖಂಡಿತವಾಗಿಯೂ ಪೂಜಾರ್ಹನಾಗುತ್ತಾನೆ. ಸಂದೇಹವಿಲ್ಲ.

೧೫೦. ಆಶ್ಚರ್ಯ! ಬಡತನವು ದುಃಖಕರವು. ಅದರಲ್ಲಿಯೂ ಆಶೆಯು ಇನ್ನೂ ಹೆಚ್ಚು ದುಃಖಸಾಧನ. ಆಶಾಪೂರ್ಣರಾದ ಮನುಷ್ಯರು ಅಂತ್ಯವಿಲ್ಲದಷ್ಟು ದುಃಖವನ್ನು ಅನುಭವಿಸುತ್ತಾರೆ.

೧೫೧. ಆಶೆಗೆ ದಾಸರಾದವರು ಎಂದರೆ ಆಶೆ ಪಡುವವರು ಸರ್ವರಿಗೂ ದಾಸರಾಗುತ್ತಾರೆ ಎಂದರೆ ಎಲ್ಲರಿಗೂ ಅಧೀನರಾಗುತ್ತಾರೆ. ಆಶೆಯನ್ನೇ ತಮ್ಮ ಅಧೀನದಲ್ಲಿಟ್ಟುಕೊಂಡಿರುವವರಿಗೆ ಪ್ರಪಂಚವೇ ವಶವಾಗುತ್ತದೆ ಎಂದರೆ ದುರಾಶೆಯನ್ನು ಬಿಟ್ಟು ನಿಸ್ಪೃಹರಾಗಿ ಇರಬೇಕೆಂದು ತಾತ್ಪರ್ಯ.

೧೫೨. ಜಗತ್ತಿನಲ್ಲಿ ದೊಡ್ಡವರಿಗೆ ಮರ್ಯಾದೆಯೇ ಕ್ಷೀಣವಾಗದಂತಹ ಧನವೆಂದು ಹೇಳಲ್ಪಟ್ಟಿದೆ. ಅಂತಹ ಮರ್ಯಾದೆಯು ಆಶೆಯೆಂಬ ಶತ್ರುವಿನಿಂದ ನಾಶವಾಗುತ್ತದೆ. ಮರ್ಯಾದೆಯು ಹೋದರೆ ಬಡತನವು ಹಿಂಬಾಲಿಸುತ್ತದೆ.

**ಸರ್ವಶಾಸ್ತ್ರಾರ್ಥವೇತ್ತ್ಯಾಽಪಿ ದರಿದ್ರೋ ಭಾತಿ ಮೂರ್ಖವತ್ ।**
**ನೈಷ್ಕಿಂಚಿನ್ಯಮಹಾಗ್ರಾಹಗ್ರಸ್ತಾನಾಂ ಕೋ ವಿಮೋಚಕಃ ॥ ೧೫೩ ॥**

**ಅಹೋ ದುಃಖಮಹೋ ದುಃಖಮಹೋ ದುಃಖಂ ದರಿದ್ರತಾ ।**
**ತತ್ರಾಪಿ ಪುತ್ರಭಾರ್ಯಾಣಾಂ ಬಾಹುಳ್ಯಮತಿದುಃಖದಂ ॥ ೧೫೪ ॥**

**ಏವಮುಕ್ತ್ವಾ ಭದ್ರಮತಿಃ ಸರ್ವಶಾಸ್ತ್ರಾರ್ಥಪಾರಗಃ ।**
**ಅತ್ಯೈಶ್ವರ್ಯಪ್ರದಂ ಧರ್ಮಂ ಮನಸ್ಯಾಽಚಿಂತಯತ್ತದಾ ॥ ೧೫೫ ॥**

**ಭೂಮಿದಾನಂ ವಿನಿಶ್ಚಿತ್ಯ ಸರ್ವದಾನೋತ್ತಮೋತ್ತಮಂ ।**
**ತದ್ದಾನಂ ಸುಮಹತ್ಪುಣ್ಯಂ ಸ ಏವ ಕೃತವಾನ್ಪುರಾ ॥ ೧೫೬ ॥**

---

೧೫೩. ಸಕಲ ಶಾಸ್ತ್ರಗಳನ್ನು ತಿಳಿದವನಾದಾಗ್ಯೂ ಬಡವನು ಕೇವಲ ಅಜ್ಞಾನಿಯಂತೆ ತೋರುತ್ತಾನೆ. ದಾರಿದ್ರ್ಯವೆಂಬ ಮಹಾಪಿಶಾಚಹಿಡಿದಿರುವವರನ್ನು ಬಿಡಿಸುವವರು ಯಾರು ?

೧೫೪. ಅಯ್ಯೋ ಬಡತನವು ದುಃಖಕರ. ಅಯ್ಯೋ ಕಷ್ಟ, ಕಷ್ಟ, ಅದರಲ್ಲಿಯೂ ಹೆಚ್ಚು ಮಕ್ಕಳು ಹೆಂಡತಿ ಇವರುಗಳಿದ್ದರಂತೂ ಬಡತನದಿಂದಾಗುವ ದುಃಖವನ್ನು ಹೇಳತೀರದು.

೧೫೫. ಸಕಲ ಶಾಸ್ತ್ರಗಳಲ್ಲಿಯೂ ಸಂಪೂರ್ಣ ಪಂಡಿತನಾದ ಭದ್ರಮತಿಯು ಈರೀತಿ ಹೇಳಿ ಕೂಡಲೇ ಹೇರಳವಾದ ಐಶ್ವರ್ಯವನ್ನು ಕೊಡುವಂತಹ ಧರ್ಮವನ್ನು ಮನಸ್ಸಿನಲ್ಲಿಯೇ ಆಲೋಚಿಸಿದನು.

೧೫೬. ಭೂಮಿದಾನವೇ ಸರ್ವೋತ್ತಮದಾನವೆಂದು ನಿಶ್ಚಯಿಸಿ ಆ ಭದ್ರಮತಿಯು ಪೂರ್ವದಲ್ಲಿಯೇ ಅತ್ಯಂತಪುಣ್ಯಕರವಾದ ಭೂಮಿದಾನವನ್ನು ಮಾಡಿದ್ದನು.

ಪಾವಕಂ ಪರಮಂ ಧರ್ಮ್ಯಂ ಸರ್ವಕಾಮಫಲಪ್ರದಂ ।
ದಾನಾನಾಮುತ್ತಮಂ ದಾನಂ ಭೂದಾನಂ ಪರಿಕೀರ್ತಿತಂ ॥ ೧೫೭ ॥

ಯದ್ದತ್ವಾ ಸಮವಾಪ್ನೋತಿ ಯದ್ಯದಿಷ್ಟತಮಂ ನರಃ ।
ಇತಿ ನಿಶ್ಚಿತ್ಯ ಮತಿಮಾನ್ಧೀರೋ ಭದ್ರಮತಿರ್ಬಲೇ ॥ ೧೫೮ ॥

ಕೌಶಾಂಬೀಂ ನಾಮ ನಗರೀಂ ಕಲತ್ರಾಪತ್ಯಯುಗ್ಯಯೌ ।
ಸುಘೋಷಂ ನಾಮ ವಿಪ್ರೇಂದ್ರಂ ಸರ್ವೈಶ್ವರ್ಯಸಮನ್ವಿತಂ ॥ ೧೫೯ ॥

ಗತ್ವಾ ಯಾಚಿತವಾನ್ಭೂಮಿಂ ಪಂಚಹಸ್ತಾಯತಾಂ ಬಲೇ ।
ಸುಘೋಷೋ ಧರ್ಮನಿರತಸ್ತಂ ನಿರೀಕ್ಷ್ಯ ಕುಟುಂಬಿನಂ ॥ ೧೬೦ ॥

ಮನಸಾ ಪ್ರೀಯಮಾಣೇನ ಸಮಭ್ಯರ್ಚ್ಯೇದಮಬ್ರವೀತ್ ।
ಕೃತಾರ್ಥೋಽಹಂ ಭದ್ರಮತೇ ಸಫಲಂ ಮಮ ಜನ್ಮ ಚ ॥ ೧೬೧ ॥

---

೧೫೭-೧೫೯. ಬಲಿಯೇ! ಬುದ್ಧಿವಂತನು ಧೈರ್ಯಶಾಲಿಯೂ ಆದ ಆ ಭದ್ರಮತಿಯು, ಯಾವ ದಾನವನ್ನು ಮಾಡಿ ಮನುಷ್ಯನು ತನಗೆ ಅತ್ಯಂತ ಇಷ್ಟವಾದುದನ್ನೆಲ್ಲಾ ಸಂಪಾದಿಸಿಕೊಳ್ಳುವನೋ ಅಂತಹ ಭೂಮಿದಾನವು, ಪವಿತ್ರತೆಯನ್ನುಂಟುಮಾಡುವ್ವುದು, ಉತ್ತಮಪುಣ್ಯಸಾಧನವು, ಸಕಲೇಷ್ಟಾರ್ಥಪ್ರದವು, ಮತ್ತು ದಾನಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದುದು ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆಯೆಂದು ನಿರ್ಣಯಿಸಿ ಹೆಂಡತಿ ಮಗನೊಡನೆ ಕೌಶಾಂಬೀ ಎಂಬ ಪಟ್ಟಣಕ್ಕೆ ಹೊರಟನು.

೧೫೯-೧೬೦. ಬಲಿಯೇ! ಅಲ್ಲಿ ಸಕಲ ಸಂಪತ್ತುಗಳಿಂದ ಕೂಡಿದ ಸುಘೋಷನೆಂಬ ಬ್ರಾಹ್ಮಣಶ್ರೇಷ್ಠನ ಹತ್ತಿರ ಹೋಗಿ ಐದುಮೊಳ ವಿಸ್ತೀರ್ಣವಾದ ಭೂಮಿಯನ್ನು ಬೇಡಿದನು.

೧೬೦-೧೬೩. ಧರ್ಮಿಷ್ಠನಾದ ಸುಘೋಷನು ಪತ್ನೀಪುತ್ರಸಹಿತನಾದ ಆ ಭದ್ರಮತಿಯನ್ನು ಕಂಡು ಸಂತುಷ್ಟಮನಸ್ಸಿನಿಂದ ಅವನನ್ನು ಸತ್ಕರಿಸಿ,

ಮತ್ಕುಲಂ ಪಾವನಂ ಜಾತಂ ತ್ವದನುಗ್ರಹತೋ ದ್ವಿಜ ।
ಇತ್ಯುಕ್ತ್ವಾ ತಂ ಸಮಭ್ಯರ್ಚ್ಯ ಸುಘೋಷೋ ಧರ್ಮತತ್ಪರಃ ॥ ೧೬೨ ॥

ಪಂಚಹಸ್ತಮಿತಾಂ ಭೂಮಿಂ ದದೌ ತಸ್ಮೈ ಮಹಾಮತಿಃ ।
ಪೃಥಿವೀ ವೈಷ್ಣವೀ ಪುಣ್ಯಾ ಪೃಥಿವೀ ವಿಷ್ಣುಪಾಲಿತಾ ॥ ೧೬೩ ॥

ಪೃಥಿವ್ಯಾಸ್ತು ಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ।
ಮಂತ್ರೇಣಾನೇನ ದೈತ್ಯೇಂದ್ರ ಸುಘೋಷಸ್ತಂ ದ್ವಿಜೋತ್ತಮಂ ॥ ೧೬೪ ॥

ವಿಷ್ಣುಬುದ್ಧ್ಯಾ ಸಮಭ್ಯರ್ಚ್ಯ ತಾವತೀಂ ಪೃಥಿವೀಂ ದದೌ ।
ಸೋಽಪಿ ಭದ್ರಮತಿರ್ವಿಪ್ರೋ ಧೀಮಾಂಸ್ತಾಂ ಯಾಚಿತಾಂ ಭುವಂ ॥ ೧೬೫ ॥

ದತ್ತವಾನ್ ಹರಿಭಕ್ತಾಯ ಶ್ರೋತ್ರಿಯಾಯ ಕುಟುಂಬಿನೇ ।
ಸುಘೋಷೋ ಭೂಮಿದಾನೇನ ಕೋಟಿವಂಶಸಮನ್ವಿತಃ ॥ ೧೬೬ ॥

---

ಭದ್ರಮತಿಯೇ ! ನಿನ್ನ ಅನುಗ್ರಹದಿಂದ ನಾನು ಕೃತಾರ್ಥನಾದೆನು. ನನ್ನ ಜನ್ಮವು ಸಫಲವಾಯಿತು. ನನ್ನ ವಂಶವೇ ಪವಿತ್ರವಾಯಿತು ಎಂಬುದಾಗಿ ಹೇಳಿದನು. ಅನಂತರ ಧಾರ್ಮಿಕನೂ ಮಹಾಬುದ್ಧಿವಂತನೂ ಆದ ಸುಘೋಷನು ಭದ್ರಮತಿಯನ್ನು ಪೂಜಿಸಿ ಐದು ಮೊಳ ಭೂಮಿಯನ್ನು ಕೊಟ್ಟನು.

೧೬೩-೧೬೫. ಪೃಥಿವಿಯು ವಿಷ್ಣುವಿನದು, ಪುಣ್ಯಕರವು, ಅವನಿಂದಲೇ ರಕ್ಷಿಸಲ್ಪಟ್ಟದು, ಅಂತಹ ಪೃಥಿವಿಯನ್ನು ದಾನಮಾಡುವುದರಿಂದ ವಿಷ್ಣುವು ನನಗೆ ಪ್ರಸನ್ನನಾಗಲಿ ಎಂಬೀ ಮಂತ್ರದಿಂದ ಸುಘೋಷನು ದ್ವಿಜಶ್ರೇಷ್ಠನಾದ ಭದ್ರಮತಿಯನ್ನು ವಿಷ್ಣುಸನ್ನಿಧಾನಪಾತ್ರನೆಂಬ ಬುದ್ಧಿಯಿಂದ ಚನ್ನಾಗಿ ಪೂಜಿಸಿ ಅವನು ಬೇಡಿದಷ್ಟು ಭೂಮಿಯನ್ನು ಕೊಟ್ಟನು.

೧೬೫-೧೬೭. ಬುದ್ಧಿವಂತನಾದ ಆ ಭದ್ರಮತಿಯೆಂಬ ಬ್ರಾಹ್ಮಣನೂ ಸಹ ಯಾಚನೆಯಿಂದ ಸಂಪಾದಿಸಿದ ಆ ಭೂಮಿಯನ್ನು ವಿಷ್ಣುಭಕ್ತನು ವೇದ ಶಾಸ್ತ್ರಾಧ್ಯಯನ ಸಂಪನ್ನನು, ಪತ್ನೀಪುತ್ರಾದಿಗಳಿಂದ ಕೂಡಿರುವವನೂ ಆದ

ಪ್ರಪೇದೇ ವಿಷ್ಣುಭವನಂ ಯತ್ರ ಗತ್ವಾ ನ ಶೋಚತಿ ।
ಬಲೇ ಭದ್ರಮತಿಶ್ಚಾಪಿ ಯತಃ ಪ್ರಾರ್ಥಿತವಾನ್ ಶ್ರಿಯಂ ॥ ೧೬೭ ॥

ಸ್ಥಿತವಾನ್ ವಿಷ್ಣುಭವನೇ ಸಕುಟುಂಬೋ ಯುಗಾಯುತಂ ।
ತಥೈವ ಬ್ರಹ್ಮಸದನೇ ಸ್ಥಿತ್ವಾ ಕೋಟಿಯುಗಾಯುತಂ ॥ ೧೬೮ ॥

ಐಂದ್ರಂ ಪದಂ ಸಮಾಸಾದ್ಯ ಸ್ಥಿತವಾನ್ ಕಲ್ಪಪಂಚಕಂ ।
ತತೋ ಭುವಂ ಸಮಾಸಾದ್ಯ ಸರ್ವೈಶ್ವರ್ಯಸಮನ್ವಿತಃ ॥ ೧೬೯ ॥

ಜಾತಿಸ್ಮರೋ ಮಹಾಭಾಗೋ ಬುಭುಜೇ ಭೋಗಮುತ್ತಮಂ ।
ತತೋ ಭದ್ರಮತಿರ್ದೈತ್ಯೋ ನಿಷ್ಕಾಮೋ ವಿಷ್ಣುತತ್ಪರಃ ॥ ೧೭೦ ॥

ಪೃಥಿವೀಂ ವೃತ್ತಿಹೀನೇಭ್ಯೋ ಬ್ರಾಹ್ಮಣೇಭ್ಯಃ ಪ್ರದತ್ತವಾನ್ ।
ತಸ್ಯ ವಿಷ್ಣುಃ ಪ್ರಸನ್ನಾತ್ಮಾ ದತ್ವೈಶ್ವರ್ಯಮನುತ್ತಮಂ ॥ ೧೭೧ ॥

---

ಬ್ರಾಹ್ಮಣನಿಗೆ ದಾನ ಮಾಡಿದನು, ಸುಘೋಷನು ಭೂದಾನ ಮಾಡಿದ್ದರಿಂದ ಕೋಟಿವಂಶ ಸಹಿತನಾಗಿ ದುಃಖ ಸಂಬಂಧವಿಲ್ಲದ ವಿಷ್ಣುಲೋಕಕ್ಕೆ ಹೋದನು.

೧೬೭-೧೬೯. ಬಲಿಯೇ! ಭದ್ರಮತಿಯು ಪತ್ನೀಪುತ್ರರೊಡನೆ ವಿಷ್ಣು ಲೋಕದಲ್ಲಿ ಹತ್ತುಸಾವಿರ ಯುಗಪರ್ಯಂತವಾಗಿದ್ದು ಅದರಂತೆಯೇ ಬ್ರಹ್ಮ ಲೋಕದಲ್ಲಿ ಹತ್ತುಸಾವಿರ ಕೋಟಿಯುಗಗಳ ಕಾಲ ಸುಖವಾಗಿದ್ದು, ಅನಂತರ ಇಂದ್ರಪದವಿಯನ್ನು ಹೊಂದಿ ಐದು ಕಲ್ಪಗಳು ದೇವಲೋಕಾಧಿಪತಿಯಾಗಿದ್ದನು.

೧೬೯-೧೭೦. ದೈತ್ಯನೇ ! ತರುವಾಯ ಭದ್ರಮತಿಯು ಐಶ್ವರ್ಯವನ್ನು ಯಾಚನೆಮಾಡಿದ್ದುದರಿಂದ ಪುನಃ ಭೂಲೋಕಕ್ಕೆ ಬಂದು ಧನ್ಯನೂ, ಜಾತಿ ಸ್ಮರನೂ ಆಗಿ ಸಕಲೈಶ್ವರ್ಯದೊಡನೆ ಉತ್ತಮಭೋಗವನ್ನು ಅನುಭವಿಸಿದನು.

೧೭೦-೧೭೧. ಆಮೇಲೆ ಅವನು ಆಶೆಯನ್ನು ಬಿಟ್ಟು ವಿಷ್ಣುಭಕ್ತನಾಗಿ ಭೂಮಿಯಿಲ್ಲದ ಬ್ರಾಹ್ಮಣರಿಗೆ ಭೂಮಿಯನ್ನು ದಾನಮಾಡಿದನು.

**ಕೋಟಿವಂಶಸಮೇತಸ್ಯ ದದೌ ಮೋಕ್ಷಮನುತ್ತಮಂ ।**
**ತಸ್ಮಾದ್ದೈತ್ಯಪತೇ ಮಹ್ಯಂ ಸರ್ವಧರ್ಮಪರಾಯಣ ॥ ೧೭೨ ॥**

**ತಪಶ್ಚರಿಷ್ಯೇ ಮೋಕ್ಷಾಯ ದೇಹಿ ತ್ವಂ ತ್ರಿಪದಾಂ ಮಹೀಂ ।**
**ವೈರೋಚನಿಸ್ತತೋ ಹೃಷ್ಟಃ ಕಲಶಂ ಜಲಪೂರಿತಂ ॥ ೧೭೩ ॥**

**ಆದದೇ ಪೃಥಿವೀಂ ದಾತುಂ ವರ್ಣಿನೇ ವಾಮನಾಯ ಸಃ ।**
**ವಿಷ್ಣುಃ ಸರ್ವಗತೋ ಜ್ಞಾತ್ವಾ ಜಲಧಾರಾವಿರೋಧಿನಂ ॥ ೧೭೪ ॥**

**ಕಾವ್ಯಂ ಹಸ್ತಸ್ಥದರ್ಭಾಗ್ರಂ ತದ್ವಾರಿ ಸನ್ಯವೇಶಯತ್ ।**
**ದರ್ಭಾಗ್ರೋಽಭೂನ್ಮಹಾಶಸ್ತ್ರಂ ಕೋಟಿಸೂರ್ಯಸಮಪ್ರಭಂ ॥ ೧೭೫ ॥**

**ಅಮೋಘಂ ಬ್ರಾಹ್ಮಮತ್ಯುಗ್ರಂ ಕಾವ್ಯಾಕ್ಷಿಗ್ರಾಸಲೋಲುಪಂ ।**
**ವಿಯೂಯ ಭಾರ್ಗವ ಸುರಾನಸುರಾನೇಕಚಕ್ಷುಷಾ ॥ ೧೭೬ ॥**

---

ವಿಷ್ಣುವು ಪ್ರಸನ್ನನಾಗಿ ಶ್ರೇಷ್ಠವಾದ ಐಶ್ವರ್ಯವನ್ನು ಕೊಟ್ಟು ಕೋಟಿವಂಶ ಸಹಿತವಾಗಿ ಅವನಿಗೆ ಉತ್ತಮ ಮೋಕ್ಷವನ್ನು ಕೊಟ್ಟನು.

೧೭೨-೧೭೩. ಆದಕಾರಣ ಸಕಲ ಧರ್ಮಗಳಲ್ಲಿಯೂ ಆಸಕ್ತನಾದ ದೈತ್ಯಸ್ವಾಮಿಯಾದ ನೀನು ಮೂರು ಪಾದದಷ್ಟು ಭೂಮಿಯನ್ನು ನನಗೆ ಕೊಡು ಮೋಕ್ಷಕ್ಕಾಗಿ ತಪಸ್ಸುಮಾಡುತ್ತೇನೆ.

೧೭೩-೧೭೪. ತರುವಾಯ ವಿರೋಚನ ಪುತ್ರನಾದ ಆ ಬಲಿಯು ಸಂತೋಷಪಟ್ಟವನಾಗಿ ವರ್ಣಿಸುತ್ತಿರುವ ವಾಮನನಿಗೆ ಭೂಮಿಯನ್ನು ದಾನ ಮಾಡುವುದಕ್ಕೋಸ್ಕರ ನೀರು ತಂಬಿದ ಕಲಶವನ್ನು ತೆಗೆದುಕೊಂಡನು.

೧೭೪-೧೭೬. ಸರ್ವವ್ಯಾಪಿಯಾದ ವಿಷ್ಣುವು ಶುಕ್ರಾಚಾರ್ಯನು ಧಾರೆ ಯೆರೆಯುವುದಕ್ಕೆ ಅಡಚಣೆ ಮಾಡುತ್ತಾನೆಂದು ತಿಳಿದು ಕೈಯಲ್ಲಿದ್ದ ದರ್ಭೆಯ ಅಗ್ರಭಾಗವನ್ನು ಆ ಕಲಶೋದಕದಲ್ಲಿ ಸೇರಿಸಿದನು. ಆ ದರ್ಭಾಗ್ರವು ಸಫಲವು, ಬ್ರಹ್ಮನಿರ್ಮಿತವೂ, ಅತಿಭಯಂಕರವೂ, ಶುಕ್ರಾಚಾರ್ಯರ ಕಣ್ಣನ್ನು ನಾಶಪಡಿಸು

**ಪಶ್ಯೇತಿ ವ್ಯಾದಿದೇಶೇವ ದರ್ಭಾಗ್ರಂ ಶಸ್ತ್ರಸನ್ನಿಭಂ ।**
**ಬಲಿರ್ದದೌ ಮಹಾವಿಷ್ಣೋಃ ಮಹೀಂ ತ್ರಿಪದಸಂಮಿತಾಂ ॥ ೧೭೭ ॥**

**ವವೃಧೇ ಸೋಽಪಿ ವಿಶ್ವಾತ್ಮಾ ಆಬ್ರಹ್ಮಭುವನಂ ತದಾ ।**
**ಅಮಿಮೀತ ಮಹೀಂ ದ್ಯಾಂಚ ಪದ್ಭ್ಯಾಂ ವಿಶ್ವತನುರ್ಹರಿಃ ॥ ೧೭೮ ॥**

**ಆಬ್ರಹ್ಮಾಂಡಕಟಾಹಾಂತಂ ಪದಂ ನ್ಯಸ್ಯಾಽಮಿತಪ್ರಭಃ ।**
**ಪಾದಾಂಗುಷ್ಠಾಗ್ರನಿರ್ಭಿನ್ನಂ ಬ್ರಹ್ಮಾಂಡಂ ವಿಭಿದೇ ದ್ವಿಧಾ ॥ ೧೭೯ ॥**

**ತದ್ದ್ವಾರಾ ಬಾಹ್ಯಸಲಿಲಂ ಬಹುಧಾರಂ ಸಮಾಗತಂ ।**
**ಧೌತವಿಷ್ಣುಪದಂ ತೋಯಂ ನಿರ್ಮಲಂ ಲೋಕಪಾವನಂ ॥ ೧೮೦ ॥**

---

ವುದೂ, ಕೋಟಿ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳದೂ ಆದ ದೊಡ್ಡ ಅಸ್ತ್ರವಾಯಿತು.

೧೭೬-೧೭೭. ವಿಷ್ಣುವು ಶುಕ್ರಾಚಾರ್ಯನೇ ! ನೀನು ದೇವತೆಗಳು ಮತ್ತು ರಾಕ್ಷಸರನ್ನು ಒಂದೇ ಕಣ್ಣಿನಿಂದ ನೋಡು ಎಂದು ಅವನಿಗೆ ಅಪ್ಪಣೆ ಮಾಡಿದ ನೆಂಬಂತೆ ಶಸ್ತ್ರಸಮಾನವಾದ ದರ್ಭಾಗ್ರವು ಬಂದು ಶುಕ್ರಾಚಾರ್ಯರ ಒಂದು ಕಣ್ಣನ್ನು ಅಪಹರಿಸಿತು. ಬಲಿಯು ಮಹಾವಿಷ್ಣುವಿಗೆ ಮೂರು ಪಾದದಷ್ಟು ಭೂಮಿಯನ್ನು ದಾನಮಾಡಿದನು.

೧೭೮. ತಕ್ಷಣದಲ್ಲಿಯೇ ಜಗದಂತರ್ಯಾಮಿಯಾದ ವಾಮನನು ಬ್ರಹ್ಮಲೋಕಪರ್ಯಂತವಾಗಿ ವ್ಯಾಪಿಸುವಂತಹ ದೊಡ್ಡ ಶರೀರವನ್ನು ಸ್ವೀಕರಿಸಿದನು. ಜಗತ್ತಿನಂತೆ ದೊಡ್ಡ ಶರೀರವುಳ್ಳ ಅಪರಿಮಿತ ಕಾಂತಿಯುಕ್ತನಾದ ಹರಿಯು ಎರಡುಪಾದಗಳಿಂದ ಭೂಮಿ ಮತ್ತು ಅಂತರಿಕ್ಷಗಳನ್ನು ಅಳೆದನು.

೧೭೯. ಈ ಪಾದವು ಸಮಗ್ರ ಬ್ರಹ್ಮಾಂಡವನ್ನೂ ಆವರಿಸಿತು. ಹರಿಯ ಕಾಲಿನ ಹೆಬ್ಬೆಟ್ಟಿನ ಕೊನೆಯ ಭಾಗದಿಂದ ಭೇದಿಸಲ್ಪಟ್ಟು ಬ್ರಹ್ಮಾಂಡವು ಎರಡು ಭಾಗವಾಗಿ ಸೀಳಲ್ಪಟ್ಟಿತು.

೧೮೦-೧೮೧. ಆ ರಂಧ್ರದಿಂದ ಬಹುಮುಖವಾಗಿ ಬಾಹ್ಯೋದಕವು ಬಂದಿತು. ಪರಿಶುದ್ಧವು, ಲೋಕವನ್ನೇ ಪವಿತ್ರಮಾಡುವುದು,

ಅಜಾಂಡಬಾಹ್ಯನಿಲಯಂ ಧಾರಾರೂಪಮವರ್ತತ ।
ತಜ್ಜಲಂ ಪಾವನಂ ಶ್ರೇಷ್ಠಂ ಬ್ರಹ್ಮಾದೀನ್ಪಾವಯನ್ಸುರಾನ್ ॥ ೧೮೧ ॥

ಸಪ್ತರ್ಷಿಸೇವಿತಂ ಚೈವ ನ್ಯಪತನ್ಮೇರುಮೂರ್ಧನಿ ।
ಏತದ್ದೃಷ್ಟ್ವಾಽದ್ಭುತಂ ಕರ್ಮ ಬ್ರಹ್ಮಾದ್ಯಾ ದೇವತಾಗಣಾಃ ॥ ೧೮೨ ॥

ಋಷಯೋ ಮನವಶ್ಚೈವ ಹ್ಯಸ್ತುವನ್ಹರ್ಷವಿಹ್ವಲಾಃ ।

ದೇವಾ ಊಚುಃ

ನಮಃ ಪರೇಶಾಯ ಪರಾತ್ಮರೂಪಿಣೇ ।
ಪರಾತ್ಪರಾಯಾಪರರೂಪಧಾರಿಣೇ ॥ ೧೮೩ ॥

ಬ್ರಹ್ಮಾತ್ಮನೇ ಬ್ರಹ್ಮರತಾತ್ಮಬುದ್ಧಯೇ ।
ನಮೋಽಸ್ತು ತೇಽವ್ಯಾಹತ ಕರ್ಮಶೀಲಿನೇ ।
ಪರೇಶ ಪರಮಾನಂದ ಪರಮಾತ್ಮನ್ಪರಾತ್ಪರ ॥ ೧೮೪ ॥

---

ಬ್ರಹ್ಮಾಂಡದ ಹೊರಭಾಗದಲ್ಲಿರುವುದೂ ಆದ, ವಿಷ್ಣುಪಾದವನ್ನು ತೊಳೆದು ಬಂದಿರುವ ಉದಕವು ಪ್ರವಾಹರೂಪವಾಗಿತ್ತು.

೧೮೧-೧೮೨. ಶುದ್ಧಿಕರವೂ ಉತ್ತಮವೂ ಆದ ಆ ನೀರು ಬ್ರಹ್ಮಾದಿ ದೇವತೆಗಳನ್ನು ಪರಿಶುದ್ಧಿ ಮಾಡಿ ಸಪ್ತರ್ಷಿಗಳಿಂದ ಸೇವಿಸಲ್ಪಟ್ಟು ಮೇರು ಪರ್ವತದ ಶಿಖರದಲ್ಲಿ ಬಿದ್ದಿತು.

೧೮೨-೧೮೩. ಈ ಆಶ್ಚರ್ಯಕರವಾದ ವ್ಯಾಪಾರವನ್ನು ನೋಡಿ ಬ್ರಹ್ಮಾದಿದೇವಸಂಘಗಳು, ಋಷಿಗಳು, ಮನುಗಳೂ ಸಹ ಸಂತೋಷಭರದಿಂದ ಸ್ತುತಿಸಿದರು.

೧೮೩-೧೮೪. ದೇವತೆಗಳು ಹೇಳಿದರು:—ಉತ್ತಮರಾದ ದೇವತೆಗಳಿಗೆ ಸ್ವಾಮಿಯು, ಉತ್ಕೃಷ್ಟಾತ್ಮಸ್ವರೂಪಿಯು, ಉತ್ತಮರಾದ ಬ್ರಹ್ಮಾದಿದೇವತೆಗಳಿಗಿಂತಲೂ ಶ್ರೇಷ್ಠನು, ಲೋಕವಿಲಕ್ಷಣನು ಎಂದರೆ ಅಪ್ರಾಕೃತವಾದ ರೂಪವನ್ನು ಧರಿಸಿರುವವನು, ಪೂರ್ಣಾತ್ಮನು, ವೇದೈಕಗಮ್ಯನು ಮತ್ತು ನಿರಾತಂಕವಾಗಿ ಕರ್ಮಗಳನ್ನು ಮಾಡುವವನೂ ಆಗಿರುವ ಸ್ವಾಮಿಯೇ! ನಿನಗೆ ನಮಸ್ಕಾರ ನಮಸ್ಕಾರ.

೧೮೪-೧೮೫. ದೇವತೆಗಳಿಗೆ ಸ್ವಾಮಿಯು, ಶ್ರೇಷ್ಠಾನಂದಸ್ವರೂಪನು, ಉತ್ತಮೋತ್ತಮನು, ಸರ್ವಾಂತರ್ಯಾಮಿಯು, ಜಗದ್ವ್ಯಾಪಿಯು, ಸಂಪೂರ್ಣ

**ಸರ್ವಾತ್ಮನೇ ಜಗನ್ಮೂರ್ತೇ ಪ್ರಮಾಣಾತೀತ ತೇ ನಮಃ ।**
**ವಿಶ್ವತಶ್ಚಕ್ಷುಷೇ ತುಭ್ಯಂ ವಿಶ್ವತೋ ಬಾಹವೇ ನಮಃ ॥ ೧೮೫ ॥**

**ವಿಶ್ವತಃ ಶಿರಸೇ ಚೈವ ವಿಶ್ವತೋ ಗತಯೇ ನಮಃ ।**
**ಏವಂ ಸ್ತುತೋ ಮಹಾವಿಷ್ಣುರ್ಬ್ರಹ್ಮಾದೀನಾಂ ದಿವೌಕಸಾಂ ॥ ೧೮೬ ॥**

**ದತ್ವಾ ಸ್ವಸ್ವಪದಂ ತೇಷಾಂ ಪ್ರಹಸನ್ನಭಯಂ ದದೌ ।**
**ವಿರೋಚನಾತ್ಮಜಂ ದೈತ್ಯಂ ಪದೈಕಾರ್ಥಂ ಬಬಂಧ ಹ ॥ ೧೮೭ ॥**

**ತತಃ ಪ್ರಪನ್ನಂ ತು ಬಲಿಂ ಜ್ಞಾತ್ವಾ ಚಾಸ್ಯೈ ರಸಾತಲಂ ।**
**ದದೌ ತದ್ದ್ವಾರಪಾಲಶ್ಚ ಭಕ್ತವಶ್ಯೋ ಬಭೂವ ಹ ॥ ೧೮೮ ॥**

---

ವಾಗಿ ಪ್ರಮಾಣಗಳಿಗೆ ಗೋಚರನಾಗವಿರುವವನೂ ಆಗಿರುವ ಪರಮಾತ್ಮನೇ! ನಿನಗೆ ನಮಸ್ಕಾರ ನಮಸ್ಕಾರ.

೧೮೫-೧೮೬. ಪೂರ್ಣವಾದ ನೇತ್ರ, ಪೂರ್ಣವಾದ ಬಾಹು, ಪೂರ್ಣ ಶಿರಸ್ಸು ಮತ್ತು ಪೂರ್ಣವಾದಪಾದ ಇವುಗಳುಳ್ಳ ಭಗವಂತನೇ! ನಿನಗೆ ನಮಸ್ಕಾರ ಎಂದರೆ ಭಗವಂತನು ಪೂರ್ಣನು. ಅವನ ಒಂದೊಂದು ಅವಯವವೂ ಸಹ ಪೂರ್ಣವು; ಅವನಲ್ಲಿ ಅಪೂರ್ಣವಾದುದು ಯಾವುದೂ ಇಲ್ಲವೆಂದು ತಾತ್ಪರ್ಯ.

೧೮೬-೧೮೭. ಈ ರೀತಿಯಾಗಿ ಸ್ತೋತ್ರಮಾಡಿದ ಮೇಲೆ ಮಹಾ ವಿಷ್ಣುವು ಆ ಬ್ರಹ್ಮಾದಿ ದೇವತೆಗಳಿಗೆ ಅವರವರ ಪದವಿಯನ್ನು ಕೊಟ್ಟು ನಗುತ್ತಾ ಅಭಯಕೊಟ್ಟನು. ವಿರೋಚನಪುತ್ರನಾದ ಬಲಿಯನ್ನು ಇನ್ನೊಂದು ಪಾದದಷ್ಟು ಭೂಮಿಗಾಗಿ ನಿರ್ಬಂಧಿಸಿದನು.

೧೮೮. ತರುವಾಯ ಬಲಿಯು ಶರಣಾಗತನಾದುದನ್ನು ತಿಳಿದು ಇವನಿಗೆ ರಸಾತಲವೆಂಬ ಅಧೋಲೋಕದಲ್ಲಿ ನಿವಾಸವನ್ನು ಕೊಟ್ಟನು. ಮತ್ತು ಅವನ ಭಕ್ತಿಗೆ ವಶನಾಗಿ ಅವನ ಮನೆಯ ಬಾಗಿಲನ್ನು ಕಾದನು.

ನಾರದ ಉವಾಚ

ರಸಾತಲೇ ಮಹಾವಿಷ್ಣುರ್ವಿರೋಚನಸುತಸ್ಯ ವೈ ।
ಕಿಂ ಭೋಜ್ಯಂ ಕಲ್ಪಯಾಮಾಸ ಘೋರೇ ಸರ್ಪಭಯಾಕುಲೇ ॥ ೧೮೯ ॥

ಸನಕ ಉವಾಚ

ಅನುಮಂತ್ರಿತಂ ಹವಿರ್ಯತ್ತು ಹೂಯತೇ ಜಾತವೇದಸಿ ।
ಅಪಾತ್ರೇ ದೀಯತೇ ಯಚ್ಚ ತತ್ಸರ್ವಂ ಭೋಗಸಾಧನಂ ॥ ೧೯೦ ॥

ಹುತಂ ಹವಿರಶುಚಿನಾ ದತ್ತಂ ಸತ್ಕರ್ಮ ಯತ್ಕೃತಂ ।
ತತ್ಸರ್ವಂ ತತ್ರ ಭೋಗಾರ್ಹಮಧಃಪಾತಫಲಪ್ರದಂ ॥ ೧೯೧ ॥

ಏವಂ ರಸಾತಲಂ ವಿಷ್ಣುರ್ಬಲಯೇ ಸಾಸುರಾಯ ತು ।
ದತ್ವಾऽಭಯಂ ಚ ಸರ್ವೇಷಾಂ ಸುರಾಣಾಂ ತ್ರಿದಿವಂ ದದೌ ॥ ೧೯೨ ॥

ಪೂಜ್ಯಮಾನೋऽಮರಗಣೈಃ ಸ್ತೂಯಮಾನೋ ಮಹರ್ಷಿಭಿಃ ।
ಗಂಧರ್ವೈರ್ಗೀಯಮಾನಶ್ಚ ಪುನರ್ವಾಮನತಾಂ ಗತಃ ॥ ೧೯೩ ॥

---

೧೮೯. ನಾರದನು ಹೇಳಿದನು—ಮಹಾವಿಷ್ಣುವು ಹಾವುಗಳ ಭಯದಿಂದ ತುಂಬಿದ, ಭಯಂಕರವಾದ, ರಸಾತಲದಲ್ಲಿ ವಿರೋಚನ ಪುತ್ರನಾದ ಬಲಿಗೆ ಯಾವ ಆಹಾರವನ್ನು ಕಲ್ಪಿಸಿದನು ?

೧೯೦. ಸನಕನು ಹೇಳಿದನು—ಮಂತ್ರವನ್ನು ಹೇಳದೇ ಅಗ್ನಿಯಲ್ಲಿ ಹೋಮಮಾಡಿದ ಪದಾರ್ಥ ಮತ್ತು ಅಯೋಗ್ಯರಿಗೆ ದಾನಮಾಡಿದ ವಸ್ತು ಇವೆಲ್ಲವೂ ಬಲಿಗೆ ಭೋಗಸಾಧನವಾದ ಆಹಾರವು.

೧೯೧. ಅಶುದ್ಧನು ಹೋಮಮಾಡಿದ ವಸ್ತು, ಮತ್ತು ದಾನಮಾಡಿದ ಪದಾರ್ಥ, ಅಂತಹವನು ಮಾಡಿದ ಸತ್ಕರ್ಮ ಇವೆಲ್ಲವೂ ಅಧೋಲೋಕವಾಸವನ್ನು ಸಫಲಗೊಳಿಸುವ ಭೋಗಯೋಗ್ಯವಸ್ತುವು.

೧೯೨. ವಿಷ್ಣುವು ಈ ಪ್ರಕಾರ ರಾಕ್ಷಸರಿಂದ ಸಹಿತನಾದ ಬಲಿಗೆ ರಸಾತಲವನ್ನು ಅಭಯವನ್ನೂ ಸಹ ಕೊಟ್ಟು ಸಕಲ ದೇವತೆಗಳಿಗೂ ಸ್ವರ್ಗವನ್ನು ಕೊಟ್ಟನು.

೧೯೩. ಅದ್ಭುತಾಕಾರವನ್ನು ಧರಿಸಿದ್ದ ಆ ವಿಷ್ಣುವು ದೇವತೆಗಳೆಲ್ಲರಿಂದಲೂ ಪೂಜೆಯನ್ನು ಮಹರ್ಷಿಗಳಿಂದ ಸ್ತೋತ್ರವನ್ನು ಗಂಧರ್ವರಿದಂ ಗಾನವನ್ನೂ ಮಾಡಿಸಿಕೊಂಡವನಾಗಿ ಪುನಃ ವಾಮನ ರೂಪವನ್ನು ಹೊಂದಿದನು.

ಏತದ್ದೃಷ್ಟ್ವಾ ಮಹತ್ಕರ್ಮ ಮುನಯೋ ಬ್ರಹ್ಮವಾದಿನಃ ।
ಪರಸ್ಪರಂ ಸ್ಮಿತಮುಖಾಃ ಪ್ರಣೇಮುಃ ಪುರುಷೋತ್ತಮಂ ॥ ೧೯೪ ॥

ಸರ್ವಭೂತಾತ್ಮಕೋ ವಿಷ್ಣುರ್ವಾಮನತ್ವಮುಪಾಗತಃ ।
ಮೋಹಯನ್ನಖಿಲಂ ಲೋಕಂ ಪ್ರಪೇದೇ ತಪಸೇ ವನಂ ॥ ೧೯೫ ॥

ಏವಂ ಪ್ರಭಾವಾ ಸಾ ದೇವೀ ಗಂಗಾ ವಿಷ್ಣುಪದೋದ್ಭವಾ ।
ಯಸ್ಯಾಃ ಸ್ಮರಣಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೧೯೬ ॥

ಇದಂ ತು ಗಂಗಾಮಾಹಾತ್ಮ್ಯಂ ಯಃ ಪಠೇಚ್ಛೃಣುಯಾದಪಿ ।
ದೇವಾಲಯೇ ನದೀತೀರೇ ಸೋऽಶ್ವಮೇಧಂ ಫಲಂ ಲಭೇತ್ ॥ ೧೯೭ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ
ಪ್ರಥಮಪಾದೇ ಗಂಗೋತ್ಪತ್ತಿವರ್ಣನಂ
ನಾಮೈಕಾದಶೋऽಧ್ಯಾಯಃ

---

೧೯೪. ಬ್ರಹ್ಮಜ್ಞಾನಿಗಳಾದ ಮುನಿಗಳು ಈ ಆಶ್ಚರ್ಯಕರವಾದ ಮಹಾ ಕಾರ್ಯವನ್ನು ನೋಡಿ ಪರಸ್ಪರವಾಗಿ ನಗು ಮುಖವುಳ್ಳವರಾಗಿ ಪುರಷಶ್ರೇಷ್ಠನಾದ ವಾಮನ ದೇವನನ್ನು ನಮಸ್ಕರಿಸಿದರು.

೧೯೫. ಸರ್ವ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ವಿಷ್ಣುವು ವಾಮನ ರೂಪವನ್ನು ಧರಿಸಿ ಸಕಲ ಲೋಕಕ್ಕೂ ಮೋಹವನ್ನುಂಟುಮಾಡಿ ತಪಸ್ಸಿಗಾಗಿ ವನಕ್ಕೆ ಹೊರಟನು.

೧೯೬. ಸ್ಮರಿಸುವಮಾತ್ರದಿಂದಲೇ ಸಕಲ ಪಾಪಗಳನ್ನೂ ಪರಿಹರಿಸುವಂತಹ, ವಿಷ್ಣುವಿನ ಪಾದಕಮಲದಲ್ಲಿ ಉದ್ಭವಿಸಿದ ಆ ಗಂಗಾದೇವಿಯು ಈ ರೀತಿಯಾದ ಮಾಹಾತ್ಮ್ಯೆಯುಳ್ಳವಳು.

೧೯೭. ದೇವಸ್ಥಾನ ಅಥವಾ ನದೀತೀರಗಳಲ್ಲಿ ಈ ಗಂಗಾಮಾಹಾತ್ಮ್ಯೆಯನ್ನು ಶ್ರವಣ ಅಥವಾ ಪಠನೆ ಮಾಡುವವನು ಅಶ್ವಮೇಧಯಾಗ ಫಲಕ್ಕೆ ಸಮಾನವಾದ ಫಲವನ್ನು ಹೊಂದುತ್ತಾನೆ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ
ಪ್ರಥಮಪಾದದಲ್ಲಿ ಗಂಗೋತ್ಪತ್ತಿವರ್ಣನೆಯೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಬೆಂಕಿಯು ಅದಿತಿಯನ್ನು ಮಾತ್ರ ಬಿಟ್ಟು ಅಲ್ಲಿದ್ದ ರಾಕ್ಷಸರನ್ನೆಲ್ಲಾ ಸುಟ್ಟ, ಬಗೆ ಹೇಗೆ ಎಂಬ ನಾರದನ ಪ್ರಶ್ನೆಯಿಂದ ಈ ಅಧ್ಯಾಯವು ಆರಂಭಿಸಲ್ಪಟ್ಟಿದೆ. ಅದಕ್ಕೆ ಉತ್ತರವಾಗಿ ಸನಕನು ಹರಿಭಕ್ತರ ಮಹಿಮೆಯನ್ನು ವಿವರಿಸಿ ಅದಿತಿಯು ಭಕ್ತಾಗ್ರಣಿಯಾದುದರಿಂದ ಬೆಂಕಿಯು ಅವಳನ್ನು ಬಿಟ್ಟು ಉಳಿದ ರಾಕ್ಷಸರನ್ನು ಮಾತ್ರ ಸುಟ್ಟಿತೆಂದು ಹೇಳಿದನು. ಅದೇ ಸಂದರ್ಭದಲ್ಲಿ ಹರಿಯು ಅದಿತಿಯ ತಪಸ್ಸಿಗೆ ಮೆಚ್ಚಿ ಶಂಖಚಕ್ರಗದಾಪಾಣಿಯಾಗಿ ಎದುರಿಗೆ ಬಂದು ನಿನ್ನ ತಪಸ್ಸಿನಿಂದ ಪ್ರಸನ್ನನಾಗಿರುವೆನು; ನಿನಗೆ ಮಂಗಳವಾಗುತ್ತದೆ; ವರವನ್ನು ಕೇಳು; ಕೊಡುತ್ತೇನೆಂದನು. ಆಗ ಅದಿತಿದೇವಿಯು ಹರಿಯನ್ನು ಬಹು ವಿಧವಾಗಿ ಸ್ತೋತ್ರಮಾಡಿ ಸ್ವಾಮಿಯೇ! ಸರ್ವಜ್ಞನಾದ ನಿನಗೆ ತಿಳಿಯದಿರುವುದಾವುದು? ನನಗೇಕೆ ಮೋಹವನ್ನುಂಟುಮಾಡುವೆ? ನಿನಗೆ ನನ್ನಲ್ಲಿ ಅನುಗ್ರಹವುಂಟಾಗಿದ್ದರೆ ನನ್ನ ಮಕ್ಕಳಾದ ದೇವತೆಗಳಿಗೆ ನಿಷ್ಕಂಟಕವಾದ ಸಂಪತ್ತನ್ನು ದಯಪಾಲಿಸು. ದೈತ್ಯರೂ ನನ್ನ ಮಕ್ಕಳೇ ಆಗಿರುವುದರಿಂದ ಅವರನ್ನು ಹಿಂಸಿಸುವುದು ನನಗೆ ಇಷ್ಟವಿಲ್ಲ. ಅವರನ್ನು ಸಂಹರಿಸದೇ ದೇವತೆಗಳಿಗೆ ಐಶ್ವರ್ಯವನ್ನು ಕೊಡಬೇಕೆಂದು ಪ್ರಾರ್ಥಿಸಿದಳು. ಶ್ರೀಹರಿಯು ಅದಿತಿಯನ್ನು ಕುರಿತು ಸವತಿಯ ಮಕ್ಕಳಲ್ಲಿ ಸ್ವಂತ ಮಕ್ಕಳಂತೆ ಪ್ರೇಮವನ್ನಿಟ್ಟಿರುವುದು ಬಹಳ ಶ್ಲಾಘ್ಯವಾದುದು. ನಾನೇ ನಿನ್ನ ಮಗನಾಗಿ ಹುಟ್ಟಿ ನಿನ್ನ ಇಷ್ಟಾರ್ಥವನ್ನು ನೆರವೇರಿಸುವೆನು ಎಂದು ಹೇಳಿದನು. ಅದಿತಿಯು ಪ್ರತಿಯೊಂದು ರೋಮದಲ್ಲಿಯೂ ಬ್ರಹ್ಮಾಂಡವನ್ನು ಧರಿಸಿರುವ ನಿನ್ನನ್ನು ಧರಿಸಲು ನನಗೆ ಸಾಮರ್ಥ್ಯವಿಲ್ಲ ಮುಂತಾಗಿ ಹೇಳಲು ಹರಿಯು ರಾಗದ್ವೇಷವಿಹೀನರಾಗಿ ಯಾವಾಗಲೂ ನನ್ನ ಭಕ್ತರಾಗಿರುವವರು ನನ್ನನ್ನು ಧರಿಸಲು ಸಮರ್ಥರಾಗುತ್ತಾರೆಂದು ಹೇಳಿ ಅದಿತಿಗೆ ಕಂಠಮಾಲೆಯನ್ನು ಕೊಟ್ಟು ಅಂತರ್ಧಾನನಾದನು. ಅದಿತಿಯು ಸಂತೋಷದಿಂದ ಆಶ್ರಮಕ್ಕೆ ಹಿಂದಿರುಗಿ ನಡೆದ ವೃತ್ತಾಂತವನ್ನು ಕಶ್ಯಪರಿಗೆ ಹೇಳಿ ಗರ್ಭವನ್ನು ಧರಿಸಿ ಉಚಿತ ಸಮಯದಲ್ಲಿ ಅಮೃತಕಲಶ ಮತ್ತು ದಧ್ಯನ್ನಗಳನ್ನು ಕೈಗಳಲ್ಲಿ ಧರಿಸಿದ ವಾಮನನನ್ನು ಪ್ರಸವಿಸಿದಳು. ಕಶ್ಯಪನು ಪುತ್ರನನ್ನು ನೋಡಿ ನಮಸ್ಕರಿಸಿ ಸ್ತೋತ್ರಮಾಡಿದನು. ವಾಮನನು ಸ್ವಲ್ಪಕಾಲದಲ್ಲಿಯೇ ನಿನ್ನ ಮನೋರಥವು

ಸಿದ್ಧಿಸಿ ನಿನಗೆ ಮಂಗಳವಾಗುತ್ತದೆಂದು ಕಶ್ಯಪನಿಗೆ ಹೇಳಿದನು. ಆ ಸಮಯಕ್ಕೆ ಸರಿಯಾಗಿ ಬಲಿಯು ಗುರುಗಳಾದ ಶುಕ್ರಾಚಾರ್ಯರೇ ಮುಂತಾದವರನ್ನು ಕರೆಸಿಕೊಂಡು ದೀರ್ಘಸತ್ರವೆಂಬ ಯಾಗವನ್ನು ಮಾಡಲಾರಂಭಿಸಿದನು. ಅಲ್ಲಿಗೆ ವಾಮನನು ಭಿಕ್ಷೆಗಾಗಿ ಬಂದನು. ಶುಕ್ರಾಚಾರ್ಯರು "ಇವನು ಸಾಧಾರಣನಲ್ಲ ಸಾಕ್ಷಾನ್ನಾರಾಯಣನೇ ಈ ವಾಮನರೂಪದಿಂದ ನಿನ್ನ ಐಶ್ವರ್ಯವನ್ನಪಹರಿಸಲು ಬಂದಿರುವನು. ಇವನಿಗೆ ನೀನು ಏನನ್ನೂ ಕೊಡಕೂಡದು'' ಎಂದು ಬಲಿಗೆ ಹೇಳಿದರು. ಆದಾಗ್ಯೂ ಬಲಿಯು ಅದು ಸರಿಯಲ್ಲವೆಂದು ನಿರಾಕರಿಸಿ ಬಂದ ವಾಮನನನ್ನು ಭಕ್ತಿಯಿಂದ ಸತ್ಕರಿಸಿದನು. ಆಗ ವಾಮನನು ಮೂರು ಪಾದದಷ್ಟು ಭೂಮಿಯನ್ನು ಬೇಡಿ ಭೂದಾನದ ಮಾಹಾತ್ಮ್ಯ, ಆ ವಿಷಯದಲ್ಲಿ ಇತಿಹಾಸಗಳನ್ನೂ ವಿಶದವಾಗಿ ಹೇಳಲು ಬಲಿಯು ಭೂದಾನವನ್ನು ಕೊಡುವುದಾಗಿ ಸಂಕಲ್ಪಿಸಿದನು. ಕೂಡಲೇ ವಾಮನನು ಬ್ರಹ್ಮಲೋಕಪರ್ಯಂತವಾದ ದೊಡ್ಡ ಶರೀರವನ್ನು ಸ್ವೀಕರಿಸಿ ಒಂದು ಪಾದದಿಂದ ಭೂಲೋಕವನ್ನೂ ಇನ್ನೊಂದು ಪಾದದಿಂದ ಅಂತರಿಕ್ಷವನ್ನೂ ಅಳೆದನು. ಆಗ ಪಾದಾಂಗುಷ್ಠಾಗ್ರದಿಂದ ಬ್ರಹ್ಮಾಂಡವು ಎರಡು ಭಾಗವಾಗಿ ಒಡೆಯಿತು. ಆ ದ್ವಾರದಿಂದ ವಿಷ್ಣುಪಾದವನ್ನು ತೊಳೆದ ಬಾಹ್ಯೋದಕವು ಬಹುಮುಖವಾಗಿ ಪ್ರವಹಿಸಿ ಬ್ರಹ್ಮಾದಿದೇವತೆಗಳನ್ನು ಪರಿಶುದ್ಧಿಮಾಡಿ ಮೇರುಶಿಖರದ ಮೇಲೆ ಪ್ರವಹಿಸಿತು. ಆ ಅದ್ಭುತವ್ಯಾಪಾರವನ್ನು ನೋಡಿ ದೇವತೆಗಳು ಹರಿಯನ್ನು ಸ್ತೋತ್ರಮಾಡಿದರು. ನಂತರ ಮೂರನೆಯ ಪಾದಕ್ಕೆ ಸ್ಥಳವಿಲ್ಲದೆ ಬಲಿಯನ್ನು ಕೇಳಲು ಶರಣಾಗತನಾದ ಅವನ ತಲೆಯ ಮೇಲೆ ಪಾದವನ್ನಿಟ್ಟು ಅವನನ್ನು ಪಾತಾಳಕ್ಕೆ ಕಳುಹಿಸಿ ರಸಾತಲಲೋಕಕ್ಕೆ ಅಧಿಪತಿಯನ್ನಾಗಿ ಮಾಡಿ ಮುಂದಿನ ಶ್ರೇಯಸ್ಸಿನ ವಿಷಯದಲ್ಲಿ ಅಭಯಪ್ರದಾನ ಮಾಡಿದನು. ದೇವತೆಗಳಿಗೆ ಅವರವರ ಸ್ಥಾನವನ್ನು ಕೊಟ್ಟನು. ಬಲಿಗೂ ರಸಾತಲಲೋಕದಲ್ಲಿದ್ದು ಮಂತ್ರವಿಲ್ಲದೆಯೂ ಅಶುಚಿಯಾಗಿಯೂ ಮಾಡಿದ ಹೋಮದಾನಾದಿಗಳ ಫಲವನ್ನೆಲ್ಲಾ ಅನುಭವಿಸುವಂತೆ ಅನುಗ್ರಹಿಸಿ ಅದ್ಭುತಾಕಾರವನ್ನು ಬಿಟ್ಟು ಪುನಃ ವಾಮನರೂಪವನ್ನು ಸ್ವೀಕರಿಸಿದನು ಎಂದು ಹೇಳಿ ಗಂಗೆಯ ಮಹಿಮಾತಿಶಯವನ್ನು ನಿರೂಪಿಸಿ ಈ ಅಧ್ಯಾಯವು ಕೊನೆಗೊಂಡಿದೆ.

# ದ್ವಾದಶೋಽಧ್ಯಾಯಃ

---

ನಾರದ ಉವಾಚ

ಶ್ರುತಂ ತು ಗಂಗಾಮಾಹಾತ್ಮ್ಯಂ ವಾಂಛಿತಂ ಪಾಪನಾಶನಂ ।
ಅಧುನಾ ಲಕ್ಷಣಂ ಬ್ರೂಹಿ ಭ್ರಾತರ್ನೋ ದಾನಪಾತ್ರಯೋಃ ॥ ೧ ॥

ಸನಕ ಉವಾಚ

ಸರ್ವೇಷಾಮೇವ ವರ್ಣಾನಾಂ ಬ್ರಾಹ್ಮಣಃ ಪರಮೋಗುರುಃ ।
ತಸ್ಮೈ ದಾನಾನಿ ದೇಯಾನಿ ದತ್ತಸ್ಯಾನಂತ್ಯಮಿಚ್ಛತಾ ॥ ೨ ॥

ಬ್ರಾಹ್ಮಣಃ ಪ್ರತಿಗೃಹ್ಣೀಯಾತ್ಸರ್ವತೋ ಭಯವರ್ಜಿತಃ ।
ನ ಕದಾಪಿ ಕ್ಷತ್ರವಿಶೌ ಗೃಹ್ಣೀಯಾತಾಂ ಪ್ರತಿಗ್ರಹಂ ॥ ೩ ॥

---

## ಹನ್ನೆರಡನೆಯ ಅಧ್ಯಾಯ

೧. ನಾರದನು ಹೇಳಿದನು—ಸಹೋದರನೇ! ನನಗೆ ಇಷ್ಟವೂ ಪಾಪ ಪರಿಹಾರಕವೂ ಆದ ಗಂಗೆಯ ಮಾಹಾತ್ಮ್ಯೆಯನ್ನು ಕೇಳಿದ್ದಾಯಿತು. ಈಗ ದಾನ ಮತ್ತು ಅದರ ಪಾತ್ರ (ದಾನವನ್ನು ಯಾರಿಗೆ ಕೊಡಬೇಕೆಂಬುದು) ಇವುಗಳ ಸ್ವರೂಪವನ್ನು ತಿಳಿಸುವ ಲಕ್ಷಣವನ್ನೂ ನನಗಾಗಿ ಹೇಳು.

೨. ಸನಕನು ಹೇಳಿದನು—ಸಕಲ ಜಾತಿಯವರಿಗೂ ಬ್ರಾಹ್ಮಣನು ಮುಖ್ಯಗುರುವು. ಕೊಟ್ಟ ದಾನವು ಅನಂತ ಫಲಕ್ಕೆ ಸಾಧಕವಾಗಬೇಕೆಂಬ ಅಪೇಕ್ಷೆಯುಳ್ಳವನು ಬ್ರಾಹ್ಮಣನಿಗೆ ದಾನವನ್ನು ಕೊಡಬೇಕು.

೩. ಬ್ರಾಹ್ಮಣನು ಭಯಪಡದೇ ಎಲ್ಲರಿಂದಲೂ ದಾನವನ್ನು ತೆಗೆದುಕೊಳ್ಳಬಹುದು. ಕ್ಷತ್ರಿಯರು ಮತ್ತು ವೈಶ್ಯರು ಯಾವಾಗಲೂ ದಾನ ತೆಗೆದುಕೊಳ್ಳಬಾರದು.

ಷಂಢಸ್ಯ ಪುತ್ರಹೀನಸ್ಯ ದಂಭಾಚಾರರತಸ್ಯ ಚ ।
ಸ್ವಕರ್ಮತ್ಯಾಗಿನಶ್ಚಾಪಿ ದತ್ತಂ ಭವತಿ ನಿಷ್ಫಲಂ ॥ ೪ ॥

ಪರದಾರರತಸ್ಯಾಪಿ ಪರದ್ರವ್ಯಾಭಿಲಾಷಿಣಃ ।
ನಕ್ಷತ್ರಸೂಚಕಸ್ಯಾಪಿ ದತ್ತಂ ಭವತಿ ನಿಷ್ಫಲಂ ॥ ೫ ॥

ಅಸೂಯಾವಿಷ್ಟಮನಸಃ ಕೃತಘ್ನಸ್ಯ ಚ ಮಾಯಿನಃ ।
ಅಯಾಜ್ಯಯಾಜಕಸ್ಯಾಪಿ ದತ್ತಂ ಭವತಿ ನಿಷ್ಫಲಂ ॥ ೬ ॥

ನಿತ್ಯಂ ಯಾಚ್ಞಾ ಪರಸ್ಯಾಪಿ ಹಿಂಸಕಸ್ಯ ಖಲಸ್ಯ ಚ ।
ರಸವಿಕ್ರಯಿಣಶ್ಚೈವ ದತ್ತಂ ಭವತಿ ನಿಷ್ಫಲಂ ॥ ೭ ॥

ವೇದವಿಕ್ರಯಿಣಶ್ಚಾಪಿ ಸ್ಮೃತಿವಿಕ್ರಯಿಣಸ್ತಥಾ ।
ಧರ್ಮವಿಕ್ರಯಿಣೋ ವಿಪ್ರ ದತ್ತಂ ಭವತಿ ನಿಷ್ಫಲಂ ॥ ೮ ॥

---

೪. ನಪುಂಸಕನು, ಮಗನಿಲ್ಲದವನು, ಜಂಭಕ್ಕಾಗಿ ಸದಾಚಾರದಲ್ಲಿ ಆಸಕ್ತಿಯನ್ನು ತೋರಿಸುವವನು ಮತ್ತು ತನ್ನ ವರ್ಣಾಶ್ರಮವಿಹಿತಕರ್ಮಗಳನ್ನು ಬಿಟ್ಟಿರುವವನು ಇವರಿಗೆ ಕೊಟ್ಟುದು ನಿಷ್ಫಲವಾಗುತ್ತದೆ.

೫. ಪರಕೀಯರ ಹೆಂಡತಿಯರಲ್ಲಿ ಅನುರಾಗವನ್ನು ಇಟ್ಟಿರುವವನು ಇತರರ ಹಣಕ್ಕೆ ಆಶೆ ಪಡುವವನು ಮತ್ತು ನಕ್ಷತ್ರಸೂಚಕನು ಇವರುಗಳಿಗೆ ಕೊಟ್ಟುದು ನಿಷ್ಫಲವಾಗುತ್ತದೆ.

೬. ಹೊಟ್ಟೆಕಿಚ್ಚಿನಿಂದ ತುಂಬಿದ ಮನಸ್ಸುಳ್ಳವನು, ಉಪಕಾರವನ್ನು ಮರೆಯುವವನು, ಮೋಸಗಾರನು ಮತ್ತು ಯಾಗಾದಿ ವೈದಿಕ ಕರ್ಮಗಳನ್ನು ಮಾಡಲನರ್ಹರಿಗೆ ಅವನ್ನು ಮಾಡಿಸುವವನು (ಎಂದರೆ ಅಂತಹವರಿಗೆಲ್ಲಾ ಪುರೋಹಿತನು ಎಂದು ತಾತ್ಪರ್ಯ) ಇವರಿಗೆ ಕೊಟ್ಟುದು ನಿಷ್ಫಲ.

೭-೧೧. ಯಾವಾಗಲೂ ಭಿಕ್ಷೆಬೇಡುವವನು, ಬಾಧೆಪಡಿಸುವವನು, ದುಷ್ಟನು, ತುಪ್ಪ, ಎಣ್ಣೆ, ಮುಂತಾದ ರಸ ವಸ್ತುಗಳನ್ನು ಮಾರುವವನು, ವೇದವನ್ನು ಮಾರುವವನು (ದುಡ್ಡಿಗಾಗಿ ವೇದವನ್ನು ಹೇಳಿಕೊಡುವವನು) ಸ್ಮೃತಿಗಳನ್ನು ಮಾರುವವನು, ಧರ್ಮವನ್ನು ವಿಕ್ರಯಿಸುವವನು, ಸಂಗೀತದಿಂದ

ಗಾನೇನ ಜೀವಿಕಾ ಯಸ್ಯ ಯಸ್ಯ ಭಾರ್ಯಾ ಚ ಪುಂಶ್ಚಲೀ ।
ಪರೋಪತಾಪಿನಶ್ಚಾಪಿ ದತ್ತಂ ಭವತಿ ನಿಷ್ಫಲಂ ॥ ೯ ॥

ಅಸಿಜೀವೀ ಮಷೀಜೀವೀ ದೇವಲೋ ಗ್ರಾಮಯಾಜಕಃ ।
ಧಾವಕೋ ವಾ ಭವೇತ್ತೇಷಾಂ ದತ್ತಂ ಭವತಿ ನಿಷ್ಫಲಂ ॥ ೧೦ ॥

ಪಾಕಕರ್ತುಃ ಪರಸ್ಯಾರ್ಥೇ ಕವಯೋ ಗದಹಾರಿಣೇ ।
ಅಭಕ್ಷ್ಯಭಕ್ಷಕಸ್ಯಾಪಿ ದತ್ತಂ ಭವತಿ ನಿಷ್ಫಲಂ ॥ ೧೧ ॥

ಶೂದ್ರಾನ್ನಭೋಜನಶ್ಚೈವ ಶೂದ್ರಾಣಾಂ ಶವವಾಹಿನಃ ।
ಪೌಂಶ್ಚಲಾನ್ನಭುಜಶ್ಚಾಪಿ ದತ್ತಂ ಭವತಿ ನಿಷ್ಫಲಂ ॥ ೧೨ ॥

ನಾಮವಿಕ್ರಯಿಣೋ ವಿಷ್ಣೋಃ ಸಂಧ್ಯಾಕರ್ಮೋಜ್ಝಿತಸ್ಯ ಚ ।
ದುಷ್ಪ್ರತಿಗ್ರಹದಗ್ಧಸ್ಯ ದತ್ತಂ ಭವತಿ ನಿಷ್ಫಲಂ ॥ ೧೩ ॥

---

ಜೀವಿಸುವವನು ವ್ಯಭಿಚಾರಿಯಾದ ಹೆಂಡತಿಯನ್ನು ಪಡೆದಿರುವವನು, ಇತರರನ್ನು ದುಃಖಪಡಿಸುವವನು, ಕತ್ತಿಯಿಂದ ಜೀವಿಸುವವನು, ಬಣ್ಣದಿಂದ ಜೀವಿಸುವವನು, ದೇವರ ಪೂಜಾರಿ, ಗ್ರಾಮಪುರೋಹಿತ, ಬಟ್ಟೆಒಗೆಯುವವನು, ಇತರರಿಗೋಸ್ಕರ ಅಡಿಗೆ ಮಾಡುವವನು, ಕವಿ, ವೈದ್ಯ, ಮತ್ತು ನಿಷಿದ್ಧಾಹಾರವನ್ನು ತಿನ್ನುವವನು ಇವರುಗಳಿಗೆ ಕೊಟ್ಟ ದಾನವು ನಿಷ್ಫಲವಾಗುತ್ತದೆ.

೧೨-೧೭. ಶೂದ್ರರ ಅನ್ನವನ್ನು ತಿನ್ನುವವನು, ಶೂದ್ರರ ಹೆಣವನ್ನು ಹೊರುವವನು, ಸ್ವೈರಿಣಿಯು ಮಾಡಿದ ಅನ್ನ ತಿನ್ನುವವನು, ವಿಷ್ಣುನಾಮವನ್ನು ಮಾರುವವನು (ಅನ್ಯರಿಂದ ದ್ರವ್ಯ ತೆಗೆದುಕೊಂಡು ಅದರ ಫಲಕ್ಕಾಗಿ ವಿಷ್ಣುನಾಮಸ್ಮರಣೆಮಾಡುವವನು) ಸಂಧ್ಯಾವಂದನೆಯನ್ನು ಬಿಟ್ಟಿರುವವನು, ದುಷ್ಟರಿಂದ ದಾನ ತೆಗೆದುಕೊಂಡು ತೇಜಸ್ಸನ್ನು ಹಾಳುಮಾಡಿಕೊಂಡಿರುವವನು, ಹಗಲು ನಿದ್ರೆಮಾಡುವವನು, ಹಾಗೆಯೇ ಸಂಭೋಗ ಮಾಡುವವನು, ಸಂಧ್ಯಾಕಾಲದಲ್ಲಿ ಊಟಮಾಡುವವನು, ಮಹಾಪಾತಕಗಳನ್ನು ಮಾಡಿದವನು, ನಂಟರಿಂದ ತ್ಯಾಗಮಾಡಲ್ಪಟ್ಟಿರುವವನು, ಕುಂಡ (ಗಂಡ ಜೀವಿಸಿರುವಾಗ ಪರ

ದಿವಾಶಯನಶೀಲಸ್ಯ ತಥಾ ಮೈಥುನಕಾರಿಣಃ ।
ಸಂಧ್ಯಾಭೋಜಿನ ಏವಾಪಿ ದತ್ತಂ ಭವತಿ ನಿಷ್ಫಲಂ ॥ ೧೪ ॥

ಮಹಾಪಾತಕಯುಕ್ತಸ್ಯ ತ್ಯಕ್ತಸ್ಯ ಜ್ಞಾತಿಬಾಂಧವೈಃ ।
ಕುಂಡಸ್ಯ ಚಾಪಿ ಗೋಲಸ್ಯ ದತ್ತಂ ಭವತಿ ನಿಷ್ಫಲಂ ॥ ೧೫ ॥

ಪರಿವಿತ್ತೇಃ ಶಠಸ್ಯಾಪಿ ಪರಿವೇತ್ತುಃ ಪ್ರಮಾದಿನಃ ।
ಸ್ತ್ರೀಜಿತಸ್ಯಾತಿದುಷ್ಟಸ್ಯ ದತ್ತಂ ಭವತಿ ನಿಷ್ಫಲಂ ॥ ೧೬ ॥

ಮದ್ಯಮಾಂಸಾಶಿನಶ್ಚಾಪಿ ಸ್ತ್ರೀವಿಟಸ್ಯಾತಿಲೋಭಿನಃ ।
ಚೋರಸ್ಯ ಪಿಶುನಸ್ಯಾಪಿ ದತ್ತಂ ಭವತಿ ನಿಷ್ಫಲಂ ॥ ೧೭ ॥

ಯೇ ಕೇಚಿತ್ಪಾಪನಿರತಾ ನಿಂದಿತಾಸ್ಸುಜನೈಃ ಸದಾ ।
ನ ತೇಭ್ಯಃ ಪ್ರತಿಗೃಹ್ಣೀಯಾನ್ನ ಚ ದದ್ಯಾದ್ದ್ವಿಜೋತ್ತಮ ॥ ೧೮ ॥

---

ಪುರುಷನಿಂದ ಹುಟ್ಟಿದವನು), ಗೋಲಕ (ಗಂಡ ಸತ್ತಮೇಲೆ ವ್ಯಭಿಚಾರದಿಂದ ಹುಟ್ಟಿದವನು), ತಮ್ಮನು ಮದುವೆಮಾಡಿಕೊಂಡು ತಾನು ಮದುವೆ ಇಲ್ಲದಿರುವವನು, ಮೂರ್ಖನು, ಅಣ್ಣನು ಮದುವೆಮಾಡಿಕೊಳ್ಳದಿರುವಾಗ ಮದುವೆ ಮಾಡಿಕೊಂಡ ತಮ್ಮನು, ಆಲಸ್ಯವಂತನು, ಹೆಂಗಸರಿಗೆ ವಶನಾಗಿರುವವನು, ಅತ್ಯಂತ ದುಷ್ಟನು, ಮದ್ಯ ಮಾಂಸಗಳನ್ನು ಸೇವಿಸುವವನು, ವ್ಯಭಿಚಾರಿಯು, ಹೆಚ್ಚು ಲೋಭವುಳ್ಳವನು, ಕಳ್ಳನು ಮತ್ತು ಚಾಡಿ ಹೇಳುವವನು ಇವರುಗಳಿಗೆ ದಾನ ಕೊಟ್ಟರೆ ಅದು ನಿಷ್ಫಲವಾಗುತ್ತದೆ. ಇಂತಹವರು ದಾನಕ್ಕೆ ಪಾತ್ರರಲ್ಲವೆಂದು ಭಾವ.

೧೮. ಬ್ರಾಹ್ಮಣಶ್ರೇಷ್ಠನೇ! ನಿಷಿದ್ಧಕರ್ಮಗಳನ್ನೇ ಆಚರಿಸುತ್ತಿರುವವರು ಮತ್ತು ಯಾವಾಗಲೂ ಸಜ್ಜನರಿಂದ ನಿಂದಿಸಲ್ಪಟ್ಟವರು ಇವರುಗಳಿಂದ ದಾನವನ್ನು ಸ್ವೀಕರಿಸಬಾರದು. ಅಂತಹವರಿಗೆ ದಾನ ಕೊಡಲೂಬಾರದು.

ಸತ್ಕರ್ಮನಿರತಾಯಾಪಿ ದೇಯಂ ಯತ್ನೇನ ನಾರದ ।
ಯದ್ದಾನಂ ಶ್ರದ್ಧಯಾ ದತ್ತಂ ತಥಾ ವಿಷ್ಣುಸಮರ್ಪಣಂ ॥ ೧೯ ॥

ಯಾಚಿತಂ ವಾಽಪಿ ಪಾತ್ರೇಣ ಭವೇತ್ತದ್ದಾನಮುತ್ತಮಂ ।
ಪರಲೋಕಂ ಸಮುದ್ದಿಶ್ಯ ಹ್ಯೈಹಿಕಂ ವಾಽಪಿ ನಾರದ ॥ ೨೦ ॥

ಯದ್ದಾನಂ ದೀಯತೇ ಪಾತ್ರೇ ತತ್ಕಾಮ್ಯಂ ಮಧ್ಯಮಂ ಸ್ಮೃತಂ ।
ದಂಭೇನ ಚಾಪಿ ಹಿಂಸಾರ್ಥಂ ಪರಸ್ಯಾವಿಧಿನಾಽಪಿ ಚ ॥ ೨೧ ॥

ಕ್ರುದ್ಧೇನಾಶ್ರದ್ಧಯಾಽಪಾತ್ರೇ ತದ್ದಾನಮಧಮಂ ಸ್ಮೃತಂ ।
ಅಧಮಂ ಬಲಿತೋಷಾಯ ಮಧ್ಯಮಂ ಸ್ವಾರ್ಥಸಿದ್ಧಯೇ ॥ ೨೨ ॥

ಉತ್ತಮಂ ಹರಿಪ್ರೀತ್ಯರ್ಥಂ ಪ್ರಾಹುರ್ವೇದವಿದಾಂ ವರಾಃ ।
ದಾನಭೋಗವಿನಾಶಾಶ್ಚ ರಾಯಃ ಸ್ಯುರ್ಗತಯಸ್ತ್ರಿಧಾ ॥ ೨೩ ॥

---

೧೯-೨೦. ನಾರದನೇ ! ವಿಹಿತಕರ್ಮಗಳನ್ನು ಆಸಕ್ತಿಯಿಂದ ಆಚರಿಸುವವನಿಗೇ ಪ್ರಯತ್ನಪೂರ್ವಕವಾಗಿ ದಾನಮಾಡಬೇಕು. ಪಾತ್ರನು ಯಾಚಿಸಿದುದನ್ನು ಶ್ರದ್ಧೆಯಿಂದ ಕೊಟ್ಟು ಪ್ರತಿಫಲಾಪೇಕ್ಷೆಯಿಲ್ಲದೆ ಅದನ್ನು ವಿಷ್ಣುವಿಗೆ ಸಮರ್ಪಿಸಿದರೆ ಅಂತಹ ದಾನವು ಉತ್ತಮವಾದುದು.

೨೦-೨೧. ನಾರದನೇ ! ಪರಲೋಕದಲ್ಲಿ ಸದ್ಗತಿ ಅಥವಾ ಇಲ್ಲಿನ ಐಶ್ವರ್ಯ ಇವುಗಳನ್ನು ಸಂಪಾದಿಸುವುದಕ್ಕಾಗಿ ಪಾತ್ರನಲ್ಲಿ ಕೊಡುವ ದಾನಕ್ಕೆ ಕಾಮ್ಯವೆಂದು ಹೆಸರು. ಅದು ಮಧ್ಯಮ ದಾನವು.

೨೧-೨೩. ವಿಧಾನೋಕ್ತಕ್ರಮವನ್ನು ಬಿಟ್ಟು ಇತರರಿಗೆ ಬಾಧೆಯನ್ನು ಉಂಟುಮಾಡುವುದಕ್ಕಾಗಿ ಡಂಭ, ಕೋಪ, ಅನಾದರ ಇವುಗಳಿಂದ ಅಯೋಗ್ಯರಿಗೆ ಕೊಡುವ ದಾನವು ಅಧಮ. ಇಂತಹ ಅಧಮದಾನದಿಂದ ಬಲಿಗೆ ಸಂತೋಷವುಂಟಾಗುತ್ತದೆ. ಮಧ್ಯಮದಾನವು ಸ್ವಾರ್ಥಸಾಧಕವು. ಉತ್ತಮದಾನವು ಹರಿಪ್ರೀತಿಸಂಪಾದಕ ಎಂದು ವೇದಾರ್ಥಜ್ಞಾನಿಶ್ರೇಷ್ಠರು ಹೇಳಿದ್ದಾರೆ.

ಯನ್ನ ದದಾತಿ ನ ಭುಂಕ್ತೇ ತದ್ಧನಂ ನಾಶಕಾರಣಂ ।
ಧನಂ ಧರ್ಮಫಲಂ ವಿಪ್ರ ಧರ್ಮೋ ಮಾಧವತುಷ್ಟಿಕೃತ್ ॥ ೨೪ ॥

ತರವಃ ಕಿಂ ನ ಜೀವಂತಿ ತೇಽಪಿ ಲೋಕೇ ಪರಾರ್ಥಕಾಃ ।
ಯೇ ಚ ಮೂಲಫಲೈರ್ವೃಕ್ಷಾಃ ಪರಕಾರ್ಯಂ ಪ್ರಕುರ್ವತೇ ॥ ೨೫ ॥

ಮನುಷ್ಯಾ ಯದಿ ವಿಪ್ರಾಗ್ರ್ಯ ನ ಪರಾರ್ಥಾಸ್ತದಾ ಮೃತಾಃ ।
ಪರಕಾರ್ಯಂ ನ ಯೇ ಮರ್ತ್ಯಾಃ ಕಾಯೇನಾಪಿ ಧನೇನ ವಾ ॥ ೨೬ ॥

ಮನಸಾ ವಚಸಾ ವಾಽಪಿ ತೇ ಜ್ಞೇಯಾಃ ಪಾಪಕೃತ್ತಮಾಃ ।
ಅತ್ರೇತಿಹಾಸಂ ವಕ್ಷ್ಯಾಮಿ ಶೃಣು ನಾರದ ತತ್ತ್ವತಃ ॥ ೨೭ ॥

---

೨೩-೨೪. ದಾನ, ಭೋಗ (ತಾನು ಅನುಭವಿಸುವುದು), ನಾಶ (ಹಾಳಾಗುವುದು) ಎಂಬುದಾಗಿ ಹಣಕ್ಕೆ ಮೂರು ಮಾರ್ಗಗಳಿವೆ. ದಾನ ಕೊಡದ ಅಥವಾ ತಾನು ಅನುಭವಿಸದ ಹಣವು ಹಾಳಾಗುತ್ತದೆ.

೨೪-೨೫. ಧರ್ಮಕ್ಕೆ ಸಾಧನವಾದುದೇ ಹಣ. ಲಕ್ಷ್ಮೀಪತಿಯಾದ ಶ್ರೀಹರಿಗೆ ಸಂತೋಷವನ್ನುಂಟುಮಾಡುವುದೇ ಧರ್ಮ. ಗೆಡ್ಡೆ-ಗೆಣಸು ಮತ್ತು ಹಣ್ಣುಗಳಿಂದ ಪರರಿಗೆ ಉಪಕಾರ ಮಾಡುತ್ತಾ ಪರಾರ್ಥವಾಗಿಯೇ ನೆಲೆಸಿರುವ ವೃಕ್ಷಗಳು ಜೀವಿಸುವುದಿಲ್ಲವೇ ಏನು? ಎಂದರೆ ಉಪಕಾರವನ್ನೇ ಮಾಡುತ್ತಿರುವ ವೃಕ್ಷಗಳು ಧೀರ್ಘಕಾಲ ಬದುಕುವಂತೆ ಪರೋಪಕಾರ ನಿರತರು ದೀರ್ಘಕಾಲ ಬದುಕಿ ಶ್ರೇಯೋಭಾಗಿಗಳಾಗುತ್ತಾರೆಂದು ತಾತ್ಪರ್ಯ.

೨೬-೨೭. ಬ್ರಾಹ್ಮಣಶ್ರೇಷ್ಠನೇ! ಪರೋಪಕಾರಮಾಡದಿರುವ ಮನುಷ್ಯರು ಬದುಕಿದ್ದರೂ ಸತ್ತಂತೆಯೇ ಸರಿ. ದೇಹಶ್ರಮ, ಹಣ, ಮನಸ್ಸಿನಲ್ಲಾದರೂ ಇತರರಿಗೆ ಶ್ರೇಯಸ್ಸನ್ನು ಬಯಸುವುದು ಅಥವಾ ವಾಕ್ಕು ಇವುಗಳಿಂದ ಪರೋಪಕಾರ ಮಾಡದಿರುವ ಮನುಷ್ಯರು ಪಾಪಿಷ್ಠರು ಎಂದು ತಿಳಿಯಬೇಕು.

ಯತ್ರ ದಾನಾದಿಕಾನಾಂ ತು ಲಕ್ಷಣಂ ಪರಿಕೀರ್ತಿತಂ ।
ಗಂಗಾಮಾಹಾತ್ಮ್ಯಸಹಿತಂ ಸರ್ವಪಾಪಪ್ರಣಾಶನಂ ॥ ೨೮ ॥

ಭಗೀರಥಸ್ಯ ಧರ್ಮಸ್ಯ ಸಂವಾದಂ ಪುಣ್ಯಕಾರಣಂ ।
ಆಸೀದ್ಭಗೀರಥೋ ರಾಜಾ ಸಗರಾನ್ವಯಸಂಭವಃ ॥ ೨೯ ॥

ಶಶಾಸ ಪೃಥಿವೀಮೇತಾಂ ಸಪ್ತದ್ವೀಪಾಂ ಸಸಾಗರಾಂ ।
ಸರ್ವಧರ್ಮರತೋ ನಿತ್ಯಂ ಸತ್ಯಸಂಧಃ ಪ್ರತಾಪವಾನ್ ॥ ೩೦ ॥

ಕಂದರ್ಪಸದೃಶೋ ರೂಪೇ ಯಾಯಜೂಕೋ ವಿಚಕ್ಷಣಃ ।
ಪ್ರಾಲೇಯಾದ್ರಿಸಮಃ ಸ್ಥೈರ್ಯೇ ಧರ್ಮೇ ಧರ್ಮಸಮೋ ನೃಪಃ ॥ ೩೧ ॥

ಸರ್ವಲಕ್ಷಣಸಂಪನ್ನಃ ಸರ್ವಶಾಸ್ತ್ರಾರ್ಥಪಾರಗಃ ।
ಸರ್ವಸಂಪತ್ಸಮಾಯುಕ್ತಃ ಸರ್ವಾನಂದಕರೋ ಮುನೇ ॥ ೩೨ ॥

---

೨೭-೨೯. ನಾರದನೇ! ಈ ವಿಷಯದಲ್ಲಿ ಪುಣ್ಯಸಾಧನವೂ ಮತ್ತು ಭಗೀರಥ ಧರ್ಮರಾಜರುಗಳ ಸಂಭಾಷಣೆಯೂ ಆಗಿರುವ ಪೂರ್ವವೃತ್ತಾಂತವನ್ನು ಯಥಾವತ್ತಾಗಿ ಹೇಳುತ್ತೇನೆ ಕೇಳು. ಆ ಇತಿಹಾಸದಲ್ಲಿ ದಾನ, ಪಾತ್ರ ಮುಂತಾದುವುಗಳ ಲಕ್ಷಣ ಸಕಲ ಪಾಪಗಳಿಗೂ ಪರಿಹಾರಕವಾದ ಗಂಗೆಯ ಮಹಿಮೆ ಮುಂತಾದುವುಗಳು ಹೇಳಲ್ಪಟ್ಟಿವೆ.

೨೯-೩೦. ಸಗರಚಕ್ರವರ್ತಿಯ ವಂಶದಲ್ಲಿ ಹುಟ್ಟಿದ ಭಗೀರಥನೆಂಬ ರಾಜನು ಸಮುದ್ರಗಳಿಂದ ಸಹಿತವಾದ ಈ ಸಪ್ತದ್ವೀಪಾತ್ಮಕ ಪೃಥಿವಿಯನ್ನು ಆಳುತ್ತಿದ್ದನು.

೩೦-೩೩. ಅವನು ಸಕಲ ಧರ್ಮಗಳಲ್ಲಿಯೂ ಆಸಕ್ತನು. ಯಾವಾಗಲೂ ಸತ್ಯವನ್ನೇ ನುಡಿಯುವವನು, ಶೌರ್ಯವಂತನು, ಮನ್ಮಥನಂತೆ ಸುಂದರನು, ಯಾಗಗಳನ್ನು ಮಾಡುವವನು, ವಿವೇಚನಶೀಲನು, ಹಿಮಾಚಲದಂತೆ ಸ್ಥಿರನು, ಧರ್ಮರಾಜನಿಗೆ ಸಮಾನನಾದ ಧರ್ಮಿಷ್ಠನು, ಸಕಲ ಸಲ್ಲಕ್ಷಣ

**ಅತಿಥಿಪ್ರಿಯತರೋ ನಿತ್ಯಂ ವಾಸುದೇವಾರ್ಚನೇ ರತಃ ।**
**ಪರಾಕ್ರಮೀ ಗುಣನಿಧಿರ್ಮಿತ್ರಾಣಾಂ ಚ ಹಿತೇ ರತಃ ॥ ೩೩ ॥**

**ಏತಾದೃಶಂ ತಂ ರಾಜಾನಂ ಜ್ಞಾತ್ವಾ ಹೃಷ್ಟೋ ಭಗೀರಥಂ ।**
**ಧರ್ಮರಾಜೋ ಮಹಾಪ್ರಾಜ್ಞಃ ಕದಾಚಿದ್ದ್ರಷ್ಟುಮಾಗತಃ ॥ ೩೪ ॥**

**ಸಮಾಗತಂ ಧರ್ಮರಾಜಮರ್ಹಯಾಮಾಸ ಭೂಪತಿಃ ।**
**ಶಾಸ್ತ್ರದೃಷ್ಟೇನ ವಿಧಿನಾ ಧರ್ಮಃ ಪ್ರೀತ ಉವಾಚ ತಂ ॥ ೩೫ ॥**

**ಧರ್ಮರಾಜ ಉವಾಚ**

**ರಾಜನ್ ಧರ್ಮವಿದಾಂ ಶ್ರೇಷ್ಠ ಪ್ರಸಿದ್ಧೋಽಸಿ ಜಗತ್ತ್ರಯೇ ।**
**ಧರ್ಮರಾಜೋಽಥ ಕೀರ್ತಿಂ ತೇ ಶ್ರುತ್ವಾ ತ್ವಾಂ ದ್ರಷ್ಟುಮಾಗತಃ ॥ ೩೬ ॥**

---

ಗಳಿಂದ ಕೂಡಿರುವವನು, ಸಕಲ ಶಾಸ್ತ್ರಾರ್ಥಪಾರಂಗತನು, ಎಲ್ಲಾ ಸಂಪತ್ತುಗಳನ್ನೂ ಹೊಂದಿರುವವನು, ಎಲ್ಲರನ್ನೂ ಸಂತೋಷಪಡಿಸುವವನು, ಯಾವಾಗಲೂ ಅತಿಥಿ ಸತ್ಕಾರ ಮಾಡುವವನು, ಶ್ರೀಕೃಷ್ಣಪೂಜೆಯಲ್ಲಿ ನಿರತನು, ಪರಾಕ್ರಮಶಾಲಿಯು, ಸ್ನೇಹಿತರುಗಳಿಗೆ ಉಪಕಾರ ಮಾಡುವವನು, ಹೆಚ್ಚೇನು ಸಕಲ ಸುಗುಣಗಳಿಗೂ ಗಣಿಯಂತಿರುವವನೂ ಆಗಿದ್ದನು.

೩೪. ಭಗೀರಥರಾಜನು ಇಂತಹ ಗುಣಶಾಲಿಯಾಗಿರುವುದನ್ನು ತಿಳಿದು ಸಂತೋಷಪಟ್ಟು ಮಹಾಜ್ಞಾನಿಯಾದ ಧರ್ಮರಾಜನು ಒಂದಾನೊಂದು ಕಾಲದಲ್ಲಿ ಅವನನ್ನು ನೋಡುವುದಕ್ಕೆ ಬಂದನು.

೩೫. ಭಗೀರಥರಾಜನು ಧರ್ಮರಾಜನನ್ನು ಶಾಸ್ತ್ರೋಕ್ತಪ್ರಕಾರವಾಗಿ ಸತ್ಕರಿಸಿದನು. ಅದರಿಂದ ಸಂತುಷ್ಟನಾದ ಧರ್ಮರಾಜನು ಭಗೀರಥನನ್ನು ಕುರಿತು ಮಾತನಾಡಿದನು.

೩೬. ಧರ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ದೊರೆಯೇ! ನೀನು ಮೂರು ಲೋಕಗಳಲ್ಲಿಯೂ ಪ್ರಸಿದ್ಧನಾಗಿರುತ್ತೀಯೆ. ನಿನ್ನ ಕೀರ್ತಿಯನ್ನು ಕೇಳಿ ನಿನ್ನ ದರ್ಶನಮಾಡಲು ಧರ್ಮರಾಜನು ಬಂದಿರುವನು.

ಸನ್ಮಾರ್ಗನಿರತಂ ಸತ್ಯಂ ಸರ್ವಭೂತಹಿತೇ ರತಂ ।
ದ್ರಷ್ಟುಮಿಚ್ಛಂತಿ ವಿಬುಧಾಸ್ತ್ವದುತ್ಕೃಷ್ಟಗುಣಪ್ರಿಯಾಃ ॥ ೩೭ ॥

ಕೀರ್ತಿರ್ನೀತಿಶ್ಚ ಸಂಪತ್ತಿರ್ವರ್ತತೇ ಯತ್ರ ಭೂಪತೇ ।
ವಸಂತಿ ತತ್ರ ನಿಯತಂ ಗುಣಾಃ ಸಂತಶ್ಚ ದೇವತಾಃ ॥ ೩೮ ॥

ಅಹೋ ರಾಜನ್ ಮಹಾಭಾಗ ಶೋಭನಂ ಚರಿತಂ ತವ ।
ಸರ್ವಭೂತಹಿತತ್ವಾದಿ ಮಾದೃಶಾಮಪಿ ದುರ್ಲಭಂ ॥ ೩೯ ॥

ಇತ್ಯುಕ್ತವಂತಂ ಧರ್ಮಂ ಪ್ರಣಿಪತ್ಯ ಭಗೀರಥಃ ।
ಪ್ರೋವಾಚ ವಿನಯಾವಿಷ್ಟಃ ಸಂಹೃಷ್ಟಃ ಶ್ಲಕ್ಷ್ಣಯಾ ಗಿರಾ ॥ ೪೦ ॥

---

೩೭. ನಿನ್ನ ಉತ್ತಮಗುಣಗಳಲ್ಲಿ ವಿಶ್ವಾಸವುಳ್ಳವರಾಗಿ ಜ್ಞಾನಿಗಳು, ಸಾಧುಮಾರ್ಗದಲ್ಲಿಯೇ ನಡೆಯುವವನು, ಸತ್ಯಸಂಧನು, ಸರ್ವ ಪ್ರಾಣಿಗಳಿಗೂ ಹಿತವನ್ನೇ ಬಯಸುವವನೂ ಆಗಿರುವ ನಿನ್ನನ್ನು ನೋಡಲು ಇಚ್ಛಿಸುತ್ತಾರೆ.

೩೮. ರಾಜನೇ! ಕೀರ್ತಿ, ನೀತಿ, ಐಶ್ವರ್ಯ ಇವುಗಳಿರುವೆಡೆಯಲ್ಲಿ ಸದ್ಗುಣಗಳು ಮತ್ತು ದೇವತೆಗಳೂ ಸಹ ನಿಯತವಾಗಿ ವಾಸಿಸುತ್ತಾರೆ.

೩೯. ಧನ್ಯನಾದ ದೊರೆಯೇ! ನಿನ್ನ ಮಂಗಳಕರವಾದ ಚರಿತ್ರೆಯು ಅದ್ಭುತವು. ಸಕಲಪ್ರಾಣಿಗಳಿಗೂ ಹಿತವನ್ನು ಮಾಡುವುದೇ ಮೊದಲಾದ ನಿನ್ನ ಗುಣಗಳು ನಮ್ಮಂತಹವರಿಗೂ ಲಭಿಸತಕ್ಕುವಲ್ಲ.

೪೦. ಭಗೀರಥನು ಈರೀತಿಯಾಗಿ ಹೇಳಿದ ಧರ್ಮರಾಜನನ್ನು ನಮಸ್ಕರಿಸಿ ಸಂತೋಷಪಟ್ಟವನಾಗಿ ವಿನಯದಿಂದ ಸ್ನೇಹಪೂರಿತವಾದ ಮಾತುಗಳನ್ನಾಡಿದನು.

ಭಗೀರಥ ಉವಾಚ

ಭಗವನ್ಸರ್ವಧರ್ಮಜ್ಞ ಸಮದರ್ಶಿನ್ಸುರೇಶ್ವರ ।
ಕೃಪಯಾ ಪರಯಾऽऽವಿಷ್ಟೋ ಯತ್ಪೃಚ್ಛಾಮಿ ವದಸ್ವ ತತ್ ॥ ೪೧ ॥

ಧರ್ಮಾಃ ಕೀದೃಗ್ವಿಧಾಃ ಪ್ರೋಕ್ತಾಃ ಕೇ ಲೋಕಾ ಧರ್ಮಶಾಲಿನಾಂ ।
ಕಿಯತ್ಯೋ ಯಾತನಾಃ ಪ್ರೋಕ್ತಾಃ ಕೇಷಾಂ ತಾಃ ಪರಿಕೀರ್ತಿತಾಃ ॥ ೪೨ ॥

ತ್ವಯಾ ಸನ್ಮಾನನೀಯಾ ಯೇ ಶಾಸನೀಯಾಶ್ಚ ಯೇ ಯಥಾ ।
ತತ್ ಸರ್ವಂ ಮೇ ಮಹಾಭಾಗ ವಿಸ್ತರಾದ್ವಕ್ತುಮರ್ಹಸಿ ॥ ೪೩ ॥

ಧರ್ಮರಾಜ ಉವಾಚ

ಸಾಧು ಸಾಧು ಮಹಾಬುದ್ಧೇ ಮತಿಸ್ತೇ ವಿಮಲೋಜ್ವಲಾ ।
ಧರ್ಮಾಧರ್ಮಾನ್ಪ್ರವಕ್ಷ್ಯಾಮಿ ತತ್ತ್ವತಃ ಶೃಣು ಭಕ್ತಿತಃ ॥ ೪೪ ॥

ಧರ್ಮಾ ಬಹುವಿಧಾಃ ಪ್ರೋಕ್ತಾಃ ಪುಣ್ಯಲೋಕಪ್ರದಾಯಕಾಃ ।
ತಥೈವ ಯಾತನಾಃ ಪ್ರೋಕ್ತಾಃ ಅಸಂಖ್ಯಾ ಘೋರದರ್ಶನಾಃ ॥ ೪೫ ॥

---

೪೧. ಸಕಲ ಧರ್ಮಜ್ಞಾನಿಯು, ಅವರವರ ಯೋಗ್ಯತಾನುಗುಣವಾದ ದೃಷ್ಟಿಯುಳ್ಳವನು, ದೇವಸ್ವಾಮಿಯೂ ಆದ ಪೂಜ್ಯನೇ! ನಾನು ಕೇಳುವ ವಿಷಯವನ್ನು ದಯಮಾಡಿ ತಿಳಿಸು.

೪೨-೪೩. ಧರ್ಮವು ಎಂತಹುದು? ಎಷ್ಟುವಿಧ? ಪುಣ್ಯವಂತರಿಗೆ ಲಭಿಸುವ ಲೋಕಗಳಾವುವು? ನರಕಗಳು ಎಷ್ಟು? ಅವು ಯಾರಿಗೆ ಉಂಟಾಗುತ್ತವೆ? ನೀನು ಯಾರನ್ನು ಮರ್ಯಾದೆಯಿಂದ ಸತ್ಕರಿಸುವೆ? ಯಾರುಯಾರನ್ನು ಹೇಗೆ ಶಿಕ್ಷಿಸುವೆ? ಧನ್ಯನೇ! ಅವುಗಳೆಲ್ಲವನ್ನೂ ವಿಸ್ತಾರವಾಗಿ ನನಗೆ ತಿಳಿಯಹೇಳು.

೪೪. ಧರ್ಮರಾಜನು ಹೇಳಿದನು:—ಬುದ್ಧಿವಂತನಾದ ದೊರೆಯೇ! ಒಳ್ಳೆಯದು ಒಳ್ಳೆಯದು. ನಿನ್ನ ಬುದ್ಧಿಯು ನಿರ್ಮಲ ಮತ್ತು ಪ್ರಕಾಶಮಾನವಾದುದು. ಧರ್ಮ ಮತ್ತು ಅಧರ್ಮಗಳನ್ನು ಯಥಾವತ್ತಾಗಿ ಹೇಳುತ್ತೇನೆ.

೪೫. ಸ್ವರ್ಗಾದಿ ಪುಣ್ಯಲೋಕಗಳನ್ನು ಕೊಡುವ ಧರ್ಮಗಳು ನಾನಾ ವಿಧವಾಗಿ ಹೇಳಲ್ಪಟ್ಟಿವೆ. ಹಾಗೆಯೇ ನೋಡುವುದಕ್ಕೇ ಭಯಂಕರವಾದ ಯಾತನೆ (ನರಕ) ಗಳೂ ಸಹ ಅಸಂಖ್ಯಾತವಾಗಿವೆ.

ವಿಸ್ತರಾದ್ಗದಿತುಂ ನಾಲಮಪಿವರ್ಷಶತಾಯುತೈಃ ।
ತಸ್ಮಾತ್ಸಮಾಸತೋ ವಕ್ಷ್ಯೇ ಶ್ರುಣು ನಾನ್ಯಮನಾಃ ಪ್ರಭೋ ॥ ೪೬ ॥

ವೃತ್ತಿದಾನಂ ದ್ವಿಜಾನಾಂ ವೈ ಮಹಾಪುಣ್ಯಂ ಪ್ರಕೀರ್ತಿತಂ ।
ತಥೈವಾಧ್ಯಾತ್ಮವಿದುಷೋ ದತ್ತಂ ಭವತಿ ಚಾಕ್ಷಯಂ ॥ ೪೭ ॥

ಕುಟುಂಬಿನಂ ವಾ ಶಾಸ್ತ್ರಜ್ಞಂ ಶ್ರೋತ್ರಿಯಂ ವಾ ಗುಣಾನ್ವಿತಂ ।
ಯೋ ದತ್ವಾ ಸ್ಥಾಪಯೇದ್ವೃತ್ತಿಂ ತಸ್ಯ ಪುಣ್ಯಫಲಂ ಶ್ರುಣು ॥ ೪೮ ॥

ಮಾತೃತಃ ಪಿತೃತಶ್ಚೈವ ದ್ವಿಜಃ ಕೋಟಿಕುಲಾನ್ವಿತಃ ।
ನಿರ್ವಿಶ್ಯ ವಿಷ್ಣುಭವನಂ ತತ್ರೈವ ಪರಿಮುಚ್ಯತೇ ॥ ೪೯ ॥

ಗಣ್ಯಂತೇ ಪಾಂಸವೋ ಭೂಮೇರ್ಗಣ್ಯಂತೇ ವೃಷ್ಟಿಬಿಂದವಃ ।
ನ ಗಣ್ಯಂತೇ ವಿಧಾತ್ರಾಪಿ ಬ್ರಹ್ಮವೃತ್ತಿಫಲಾನಿ ವೈ ॥ ೫೦ ॥

---

೪೬. ಅವುಗಳನ್ನೆಲ್ಲಾ ವಿಸ್ತಾರವಾಗಿ ಹೇಳಲು ಲಕ್ಷಾಂತರ ವರ್ಷಗಳಾದರೂ ಸಾಲದು. ಆದುದರಿಂದ ಸಂಕ್ಷೇಪವಾಗಿ ಹೇಳುತ್ತೇನೆ. ಬೇರೆ ವಿಷಯಗಳಲ್ಲಿ ಮನಗೊಡದೇ ಸಾವಧಾನವಾಗಿ ಕೇಳು.

೪೭. ದ್ವಿಜರಿಗೆ ಭೂಮಿ ಮುಂತಾದ ವೃತ್ತಿ ದಾನವು ಮಹಾ ಪುಣ್ಯಕರವೆಂದು ಹೇಳಲ್ಪಟ್ಟಿದೆ. ಅದರಂತೆಯೇ ಆತ್ಮಜ್ಞಾನಿಗೆ ಕೊಟ್ಟದು ಅಕ್ಷಯವಾಗುತ್ತದೆ.

೪೮. ಕುಟುಂಬಿಯಾದ ಶಾಸ್ತ್ರಜ್ಞಾನಿಯು ಅಥವಾ ಸಕಲ ಗುಣಶಾಲಿಯಾದ ವೇದಾಧ್ಯಯನ ಸಂಪನ್ನನೂ ಆಗಿರುವವನಿಗೆ ವೃತ್ತಿಯನ್ನು ಕೊಟ್ಟು ನಿಲ್ಲಿಸಿದರೆ ಉಂಟಾಗುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೪೯. ವೃತ್ತಿ ದಾತೃವಾದ ದ್ವಿಜನು ಮಾತೃವಂಶ ಮತ್ತು ಪಿತೃವಂಶಗಳಲ್ಲಿ ಕೋಟಿಕುಲಗಳಿಂದ ಸಹಿತವಾಗಿ ವಿಷ್ಣುಲೋಕಕ್ಕೆ ಹೋಗಿ ಅಲ್ಲಿಯೇ ಮೋಕ್ಷಸುಖವನ್ನು ಅನುಭವಿಸಿಕೊಂಡಿರುತ್ತಾನೆ.

೫೦. ಭೂಮಿಯಲ್ಲಿರುವ ಧೂಳಿಗಳ ಕಣಗಳನ್ನು ಎಣಿಸಬಹುದು. ಮಳೆಯಹನಿಗಳನ್ನು ಎಣಿಸಬಹುದು. ಬ್ರಾಹ್ಮಣನಿಗೆ ವೃತ್ತಿದಾನಮಾಡಿದ ಫಲಗಳನ್ನು ಲೆಕ್ಕಿಸಲು ಚತುರ್ಮುಖನಿಗೂ ಸಾಧ್ಯವಾಗುವುದಿಲ್ಲ.

ಸಮಸ್ತದೇವತಾರೂಪೋ ಬ್ರಾಹ್ಮಣಃ ಪರಿಕೀರ್ತಿತಃ ।
ಜೀವನಂ ದದತಸ್ತಸ್ಯ ಕಃ ಪುಣ್ಯಂ ಗದಿತುಂ ಕ್ಷಮಃ ॥ ೫೧ ॥

ಯೋ ವಿಪ್ರಹಿತಕೃನ್ನಿತ್ಯಂ ಸ ಸರ್ವಾನ್ಕೃತವಾನ್ಮಖಾನ್ ।
ಸ ಸ್ನಾತಃ ಸರ್ವತೀರ್ಥೇಷು ತಪ್ತಂ ತೇನಾಖಿಲಂ ತಪಃ ॥ ೫೨ ॥

ಯೋ ದದಸ್ವೇತಿ ವಿಪ್ರಾಣಾಂ ಜೀವನಂ ಪ್ರೇರಯೇತ್ಪರಂ ।
ಸೋಽಪಿ ತತ್ಫಲಮಾಪ್ನೋತಿ ಕಿಮನ್ಯೈರ್ಬಹುಭಾಷಿತೈಃ ॥ ೫೩ ॥

ತಡಾಗಂ ಕಾರಯೇದ್ಯಸ್ತು ಸ್ವಯಮೇವಾಪರೇಣ ವಾ ।
ವಕ್ತುಂ ತತ್ಪುಣ್ಯಸಂಖ್ಯಾನಂ ನಾಲಂ ವರ್ಷಶತಾಯುಷಾ ॥ ೫೪ ॥

---

೫೧. ಬ್ರಾಹ್ಮಣನು ಸಕಲ ದೇವತೆಗಳ ಸನ್ನಿಧಾನಕ್ಕೂ ಪಾತ್ರನೆಂದು ಉಕ್ತವಾಗಿದೆ. ಅಂತಹ ಬ್ರಾಹ್ಮಣನಿಗೆ ಜೀವನೋಪಾಯವನ್ನು ಕಲ್ಪಿಸಿದವನ ಪುಣ್ಯಾತಿಶಯವನ್ನು ವರ್ಣಿಸಲು ಯಾರು ಸಮರ್ಥರಾದಾರು ?

೫೨. ಯಾವಾಗಲೂ ಬ್ರಾಹ್ಮಣನಿಗೆ ಅನುಕೂಲವನ್ನು ಮಾಡುವವನು ಸಕಲ ಯಜ್ಞಗಳನ್ನೂ ಮಾಡುವುದರಿಂದುಂಟಾಗುವ ಫಲವನ್ನೂ ಮತ್ತು ಸಕಲ ತೀರ್ಥಸ್ನಾನ ಎಲ್ಲಾ ತಪಸ್ಸು ಇವುಗಳ ಫಲವನ್ನೂ ಸಹ ಹೊಂದುತ್ತಾನೆ.

೫೩. ಬ್ರಾಹ್ಮಣರಿಗೆ ಜೀವನೋಪಾಯವನ್ನು ಕಲ್ಪಿಸಿಕೊಡಬೇಕೆಂದು ಇತರರಿಗೆ ಪ್ರೇರಿಸುವವನೂ ಸಹ ಆ ದಾನದ ಫಲಕ್ಕೆ ಭಾಗಿಯಾಗುತ್ತಾನೆ. ಹೆಚ್ಚಾಗಿ ಹೇಳಿದುದರಿಂದೇನು ?

೫೪. ಸ್ವಂತವಾಗಿ ಅಥವಾ ಇತರರಿಂದ ಕೆರೆಯನ್ನು ಕಟ್ಟಿಸುವವನು ಪುಣ್ಯರಾಶಿಯನ್ನು ಲೆಕ್ಕ ಮಾಡಿ ಹೇಳಲು ನೂರು ವರ್ಷ ಆಯುಸ್ಸೂ ಸಾಲದು.

ಏಕಶ್ಚೇದಧ್ವಗೋ ರಾಜನ್ ತಡಾಗಸ್ಯ ಜಲಂ ಪಿಬೇತ್ ।
ತತ್ಕರ್ತುಃ ಸರ್ವಪಾಪಾನಿ ನಶ್ಯಂತ್ಯೇವ ನ ಸಂಶಯಃ ॥ ೫೫ ॥

ಏಕಾಹಮಪಿ ಯಃ ಕುರ್ಯಾದ್ಭೂಮಿಸ್ಥಮುದಕಂ ನರಃ ।
ಸ ಮುಕ್ತಃ ಸರ್ವಪಾಪೇಭ್ಯಃ ಶತವರ್ಷಂ ವಸೇದ್ದಿವಿ ॥ ೫೬ ॥

ಕರ್ತುಂ ತಡಾಗಂ ಯೋ ಮರ್ತ್ಯಃ ಸಾಹ್ಯಕಃ ಶಕ್ತಿತೋ ಭವೇತ್ ।
ಸೋಽಪಿ ತತ್ಫಲಮಾಪ್ನೋತಿ ತದುಪಾಯಪ್ರದಶ್ಚ ಯಃ ॥ ೫೭ ॥

ಮೃದಂ ತಿಲಾರ್ಧಮಾತ್ರಾಂ ವಾ ತಡಾಗಾದ್ಯೋ ಬಹಿಃ ಕ್ಷಿಪೇತ್ ।
ತಿಷ್ಠತ್ಯಬ್ದಶತಂ ಸ್ವರ್ಗೇ ವಿಮುಕ್ತಃ ಪಾಪಕೋಟಿಭಿಃ ॥ ೫೮ ॥

ದೇವತಾ ಯಸ್ಯ ತುಷ್ಯಂತಿ ಗುರವೋಽಪಿ ನೃಪೋತ್ತಮ ।
ತಡಾಗಪುಣ್ಯಭಾಕ್ಸ ಸ್ಯಾದಿತ್ಯೇಷಾ ಶಾಶ್ವತೀ ಶ್ರುತಿಃ ॥ ೫೯ ॥

---

೫೫. ರಾಜನೇ! ಒಬ್ಬ ಪಥಿಕನು ಕೆರೆಯ ನೀರನ್ನು ಕುಡಿದರೆ ಅಂತಹ ಕೆರೆಯನ್ನು ಕಟ್ಟಿಸಿದವನ ಸಕಲ ಪಾಪಗಳೂ ನಿಜವಾಗಿಯೂ ನಾಶವಾಗುತ್ತವೆ. ಸಂದೇಹವಿಲ್ಲ.

೫೬. ಒಂದು ದಿನವಾದರೂ ಭೂಮಿಯಮೇಲೆ ನೀರು ನಿಲ್ಲುವಂತೆ ಮಾಡುವ ಮನುಷ್ಯನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ನೂರುವರ್ಷ ಕಾಲ ಸ್ವರ್ಗಲೋಕದಲ್ಲಿ ವಾಸಮಾಡುತ್ತಾನೆ.

೫೭. ಕೆರೆಯನ್ನು ಕಟ್ಟಿಸುವುದಕ್ಕೆ ದೇಹ ಪ್ರಯಾಸದಿಂದ ಸಹಾಯ ಮಾಡುವ ಮನುಷ್ಯನು ಮತ್ತು ಅದಕ್ಕೆ ಸಾಧನಗಳನ್ನು ಒದಗಿಸಿಕೊಟ್ಟವನೂ ಸಹ ಕೆರೆಕಟ್ಟಿಸಿದ ಫಲವನ್ನು ಹೊಂದುತ್ತಾನೆ.

೫೮. ಎಳ್ಳುಕಾಳಿನ ಅರ್ಧಭಾಗದಷ್ಟಾದರೂ ಕೆರೆಯೊಳಗಿನ ಮಣ್ಣನ್ನು ತೆಗೆದು ಹೊರಗೆ ಹಾಕುವವನು ಕೋಟ್ಯಂತರ ಪಾಪಗಳಿಂದ ಬಿಡುಗಡೆ ಹೊಂದಿ ನೂರುವರ್ಷಕಾಲ ಸ್ವರ್ಗಲೋಕದಲ್ಲಿ ಭೋಗಿಸುತ್ತಾನೆ.

೫೯. ರಾಜಶ್ರೇಷ್ಠನೇ! ದೇವತೆಗಳನ್ನು ಮತ್ತು ಗುರುಗಳನ್ನು ಪೂಜಾದಿಗಳಿಂದ ಸಂತೋಷಪಡಿಸುವವನು ಕೆರೆ ಕಟ್ಟಿಸಿದ ಪುಣ್ಯಕ್ಕೆ ಭಾಗಿಯಾಗುತ್ತಾನೆಂದು ಅನಾದಿಯಾದ ವೇದವು ಸಾರುತ್ತಿದೆ.

ಇತಿಹಾಸಂ ಪ್ರವಕ್ಷ್ಯಾಮಿ ತವಾತ್ರ ನೃಪಸತ್ತಮ ।
ಯಂ ಶ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೬೦ ॥

ಗೌಡದೇಶೇಽತಿವಿಖ್ಯಾತೋ ರಾಜಾಸೀದ್ವೀರಭದ್ರಕಃ ।
ಮಹಾಪ್ರತಾಪೀ ವಿದ್ವಾನ್ಸದಾ ವಿಪ್ರಪ್ರಪೂಜಕಃ ॥ ೬೧ ॥

ವೇದಶಾಸ್ತ್ರಕುಲಾಚಾರಯುಕ್ತೋ ಮಿತ್ರವಿವರ್ಧನಃ ।
ತಸ್ಯ ರಾಜ್ಞೀ ಮಹಾಭಾಗಾ ನಾಮ್ನಾ ಚಂಪಕಮಂಜರೀ ॥ ೬೨ ॥

ತಸ್ಯ ರಾಜ್ಞೋ ಮಹಾಮಾತ್ಯಾಃ ಕೃತ್ಯಾಕೃತ್ಯವಿಚಾರಣಾಃ ।
ಧರ್ಮಾಣಾಂ ಧರ್ಮಶಾಸ್ತ್ರೈಸ್ತು ಸದಾ ಕುರ್ವಂತಿ ನಿಶ್ಚಯಂ ॥ ೬೩ ॥

ಪ್ರಾಯಶ್ಚಿತ್ತಂ ಚಿಕಿತ್ಸಾಂ ಚ ಜ್ಯೋತಿಷಂ ಧರ್ಮನಿರ್ಣಯಂ ।
ವಿನಾ ಶಾಸ್ತ್ರೇಣ ಯೋ ಬ್ರೂಯಾತ್ತಮಾಹುಃ ಬ್ರಹ್ಮಘಾತಕಂ ॥ ೬೪ ॥

---

೬೦. ರಾಜೋತ್ತಮನೇ! ಈ ವಿಷಯದಲ್ಲಿ ನಿನಗೊಂದು ಇತಿಹಾಸವನ್ನು ಹೇಳುತ್ತೇನೆ. ಅದನ್ನು ಕೇಳುವುದರಿಂದ ಸಕಲ ಪಾಪಗಳೂ ಪರಿಹಾರವಾಗುತ್ತವೆ. ಸಂದೇಹವಿಲ್ಲ.

೬೧-೬೩. ಗೌಡ ದೇಶದಲ್ಲಿ ಅತ್ಯಂತ ಪ್ರಸಿದ್ಧನು, ಬಹು ಪ್ರತಾಪಶಾಲಿಯು, ವಿದ್ಯಾವಂತನು, ಯಾವಾಗಲೂ ಬ್ರಾಹ್ಮಣರನ್ನು ಸತ್ಕರಿಸುವವನು, ವೇದ ಶಾಸ್ತ್ರವಿಹಿತವಾದ ಕುಲಸಂಪ್ರದಾಯಾಗತಧರ್ಮ ನಿರತನು, ಸ್ನೇಹಿತರನ್ನು ಸಂತೋಷಪಡಿಸುವವನೂ ಆದ ವೀರಭದ್ರನೆಂಬ ರಾಜನಿದ್ದನು. ಅವನಿಗೆ ಸುಚರಿತಳಾದ ಚಂಪಕಮಂಜರಿ ಎಂಬ ರಾಣಿಯಿದ್ದಳು. ಆ ರಾಜನ ಮುಖ್ಯಮಂತ್ರಿಗಳು ಕೃತ್ಯ ಅಕೃತ್ಯ ವಿಚಾರಪರರಾಗಿ ಯಾವಾಗಲೂ ಧರ್ಮಶಾಸ್ತ್ರಗಳ ಆಧಾರದಿಂದ ಧರ್ಮಗಳನ್ನು ನಿರ್ಣಯಿಸುತ್ತಿದ್ದರು.

೬೪-೬೭. ಪ್ರಾಯಶ್ಚಿತ್ತ, ರೋಗಗಳಿಗೆ ಚಿಕಿತ್ಸೆ, ಜ್ಯೋತಿಷ್ಯ, ಧರ್ಮ ಮತ್ತು ಅಧರ್ಮ ಇವುಗಳ ವಿಷಯದಲ್ಲಿ ನಿರ್ಣಯವನ್ನು ಶಾಸ್ತ್ರದ ನೈಜವಾದ ಅರ್ಥವನ್ನು ತಿಳಿಯದೆ ನಿರಾಧಾರವಾಗಿ ಹೇಳುವವನು ಬ್ರಹ್ಮಹತ್ಯೆ ಮಾಡಿದ

**ಇತಿ ನಿಶ್ಚಿತ್ಯ ಮನಸಾ ಮನ್ವಾದೀರಿತಧರ್ಮಕಾನ್ ।**
**ಆಚಾರ್ಯೇಭ್ಯಃ ಸದಾ ಭೂಪಃ ಶೃಣೋತಿ ವಿಧಿಪೂರ್ವಕಂ ॥ ೬೫ ॥**

**ನ ಕೋಽಪ್ಯನ್ಯಾಯವರ್ತೀ ಚ ತಸ್ಯ ರಾಜ್ಯೇಽವರೋಽಪಿ ಚ ।**
**ಧರ್ಮೇಣ ಪಾಲ್ಯಮಾನಸ್ಯ ತಸ್ಯ ದೇಶಸ್ಯ ಭೂಪತೇಃ ॥ ೬೬ ॥**

**ಜಾತಂ ಸಮತ್ವಂ ಸ್ವರ್ಗಸ್ಯ ಸೌರಾಜ್ಯಸ್ಯ ಶುಭಾವಹಂ ।**
**ಸ ಚೈಕದಾ ತು ನೃಪತಿಃ ಮೃಗಯಾಯಾಂ ಮಹಾಮುನೇ ॥ ೬೭ ॥**

**ಮಂತ್ರ್ಯಾದಿಭಿಃ ಪರಿವೃತೋ ಬಭ್ರಾಮ ಮಧ್ಯಭಾಸ್ಕರಂ ।**
**ದೈವಾದಾಖೇಟಶೂನ್ಯಸ್ಯ ಹ್ಯತಿಶ್ರಾಂತಸ್ಯ ತತ್ರ ವೈ ॥ ೬೮ ॥**

**ನೃಪಸ್ಯ ತಸ್ಯ ಸಂಜಾತಂ ಸರಸೋ ದರ್ಶನಂ ನೃಪ ।**
**ತತಃ ಶುಷ್ಕಾಂ ತು ಸರಸೀಂ ದೃಷ್ಟ್ವಾ ತತ್ರ ವ್ಯಚಿಂತಯತ್ ॥ ೬೯ ॥**

---

ಪಾಪಕ್ಕೆ ಭಾಗಿಯಾಗುತ್ತಾನೆಂದು ಪ್ರಾಜ್ಞರು ಹೇಳುತ್ತಾರೆಂದು ಮನಸ್ಸಿನಲ್ಲಿ ನಿಶ್ಚಯಿಸಿ ದೊರೆಯು ಮನು ಮುಂತಾದವರ ಧರ್ಮಶಾಸ್ತ್ರ ಗ್ರಂಥಗಳನ್ನು ವಿಧಿವತ್ತಾಗಿ ಆಚಾರ್ಯರ ಮುಖದಿಂದ ಶ್ರವಣಮಾಡಿದನು. ಅವನ ರಾಜ್ಯದಲ್ಲಿ ಯಾರೂ ಅಧರ್ಮ ಮಾರ್ಗದಲ್ಲಿ ಪ್ರವರ್ತಿಸುತ್ತಿರಲಿಲ್ಲ. ಧರ್ಮದಿಂದ ಪಾಲಿಸಲ್ಪಡುತ್ತಿರುವ ಆ ರಾಜನ ದೇಶವು ಸ್ವರ್ಗಲೋಕಕ್ಕೆ ಸಮಾನವಾಗಿ ಮಂಗಳಕರವಾಗಿದ್ದಿತು.

೬೭-೭೦. ಒಂದಾನೊಂದು ಕಾಲದಲ್ಲಿ ಆ ದೊರೆಯು ಬೇಟೆಯಲ್ಲಿ ಆಸಕ್ತನಾಗಿ ಮಂತ್ರಿ ಮುಂತಾದ ಪರಿವಾರದೊಡನೆ ಹೆಗ್ಗಾಡಿನಲ್ಲಿ ಮಧ್ಯಾಹ್ನ ಸಮಯದಲ್ಲಿ ತಿರುಗುತ್ತಿದ್ದನು. ದುರದೃಷ್ಟದಿಂದ ಬೇಟೆಗೆ ಅವಕಾಶ ದೊರೆಯದೆ ಅಧಿಕವಾಗಿ ಬಳಲಿದ ಆ ದೊರೆಗೆ ಒಂದು ಸರೋವರವು ಕಂಡಿತು. ಒಣಗಿ ನೀರಿಲ್ಲದ ಆ ಸರೋವರವನ್ನು ನೋಡಿ ಎತ್ತರವಾದ ಭೂಮಿಯಲ್ಲಿ

ಕಿಮಿಯಂ ಸರಸೀ ಶೃಂಗೇ ಭುವಃ ಕೇನ ವಿನಿರ್ಮಿತಾ ।
ಕಥಂ ಜಲಂ ಭವೇದತ್ರ ಯೇನ ಜೀವೇದಯಂ ನೃಪಃ ॥ ೭೦ ॥

ತತೋ ಬುದ್ಧಿಃ ಸಮುಭವತ್ಖಾತೇ ತಸ್ಯಾ ನೃಪೋತ್ತಮಃ ।
ಹಸ್ತಮಾತ್ರಂ ತತೋ ಗರ್ತಂ ಖಾತ್ವಾ ತೋಯಮವಾಪ್ತವಾನ್ ॥ ೭೧ ॥

ತೇನ ತೋಯೇನ ಪೀತೇನ ರಾಜ್ಞಸ್ತೃಪ್ತಿರಜಾಯತ ।
ಮಂತ್ರಿಣಶ್ಚಾಪಿ ಭೂಮೀಶ ಬುದ್ಧಿಸಾಗರಸಂಜ್ಞಿನಃ ॥ ೭೨ ॥

ಸ ಬುದ್ಧಿಸಾಗರೋ ಭೂಪಂ ಪ್ರಾಹ ಧರ್ಮಾರ್ಥಕೋವಿದಃ ।
ರಾಜನ್ನಿಯಂ ಪುಷ್ಕರಿಣೀ ವರ್ಷಾಜಲವತೀ ಪುರಾ ॥ ೭೩ ॥

ಅಥೈನಾಂ ಬದ್ಧವಪ್ರಾಂ ಚ ಕರ್ತುಂ ಜಾತಾ ಮತಿರ್ಮಮ ।
ತದ್ಭವಾನ್ಮೋದತಾಂ ದೇವ ಆಜ್ಞಾಂ ದತ್ವಾ ಚ ಮೇಽನಘ ॥ ೭೪ ॥

---

ಇಂತಹ ಸರೋವರವನ್ನು ನಿರ್ಮಿಸಿದವರಾರು ? ನನಗೆ ಜೀವನಪ್ರದವಾದ ನೀರು ಇಲ್ಲಿ ಹೇಗೆ ಬಂದೀತು ? ಎಂಬುದಾಗಿ ಆಲೋಚಿಸಿದನು.

೭೧-೭೨. ತರುವಾಯ ರಾಜನಿಗೆ ಅದನ್ನು ಅಗೆಯಬೇಕೆಂಬ ಬುದ್ಧಿಯು ಹುಟ್ಟಿತು. ತಕ್ಷಣ ಅವನು ಒಂದು ಮೊಳ ಅಗೆಯುವುದರಲ್ಲಿಯೇ ನೀರು ಬಂದಿತು. ಆ ನೀರನ್ನು ಕುಡಿದು ರಾಜನು ಮತ್ತು ಬುದ್ಧಿಸಾಗರನೆಂಬ ಮಂತ್ರಿಯೂ ಸಹ ತೃಪ್ತರಾದರು.

೭೩-೭೪. ಧರ್ಮತತ್ವಜ್ಞಾನಿಯಾದ ಆ ಬುದ್ಧಿಸಾಗರನು ದೊರೆಯೇ ! ಈ ಸರೋವರದಲ್ಲಿ ಹಿಂದೆ ಮಳೆಯ ನೀರು ನಿಂತಿತ್ತು. ಆದುದರಿಂದ ಇದಕ್ಕೆ ಕಟ್ಟೆಯನ್ನು ಕಟ್ಟಿ ಯಾವಾಗಲೂ ನೀರಿರುವಂತೆ ಮಾಡಬೇಕೆಂಬ ಅಭಿಲಾಷೆ ಯುಂಟಾಗಿದೆ. ಪುಣ್ಯವಂತನೂ ಒಡೆಯನೂ ಆದ ನೀನು ಅಪ್ಪಣೆಕೊಟ್ಟು ಫಲಭಾಗಿಯಾಗಬೇಕೆಂದು ರಾಜನಿಗೆ ಹೇಳಿದನು.

ಇತಿ ಶ್ರುತ್ವಾ ವಚಸ್ತಸ್ಯ ಮಂತ್ರಿಣೋ ನೃಪಸತ್ತಮಃ ।
ಮುಮುದೇಽತಿತರಾಂ ಭೂಯಃ ಸ್ವಯಂ ಕರ್ತುಂ ಸಮುದ್ಯತಃ ॥ ೭೫ ॥

ತಮೇವ ಮಂತ್ರಿಣಂ ತತ್ರ ಯುಯೋಜ ಶುಭಕರ್ಮಣಿ ।
ತತೋ ರಾಜಾಜ್ಞಯಾ ಸೋಽಪಿ ಬುದ್ಧಿಸಾಗರಕೋ ಮುದಾ ॥ ೭೬ ॥

ಸರಸೀಂ ಸಾಗರಂ ಕರ್ತುಮುದ್ಯತಃ ಪುಣ್ಯಕೃತ್ತಮಃ ।
ಧನುಷಾಂ ಚೈವ ಪಂಚಾಶತ್ಸರ್ವತೋ ವಿಸ್ತೃತಾಯತಾಂ ॥ ೭೭ ॥

ಸರಸೀಂ ಬದ್ಧಸುಶಿಲಾಂ ಚಕಾರಾಗಾಧಶಂಬರಾಂ ।
ತಾಂ ಪಿನಿರ್ಮಾಯ ಸರಸೀಂ ರಾಜ್ಞೇ ಸರ್ವಂ ನ್ಯವೇದಯತ್ ॥ ೭೮ ॥

ತಸ್ಯಾಂತತಃ ಪ್ರಭೃತಿ ವೈ ಸರ್ವೇಽಪಿ ವನಚಾರಿಣಃ ।
ಪಾಂಥಾಃ ಪಿಪಾಸಿತಾ ಭೂಪ ಲಭಂತೇಽಸ್ಮ ಜಲಂ ಶುಭಂ ॥ ೭೯

---

೭೫. ರಾಜವರ್ಯನು ಆ ಮಂತ್ರಿಯು ಹೇಳಿದ ಮಾತನ್ನು ಕೇಳಿ ಬಹಳವಾಗಿ ಸಂತೋಷಪಟ್ಟನು. ತಾನೂ ಸಹ ಆ ಕೆಲಸ ಮಾಡಲು ಉದ್ಯುಕ್ತನಾದನು.

೭೬–೭೮. ಈ ಪುಣ್ಯಕರವಾದ ಸರೋವರ ಕಟ್ಟುವ ಕೆಲಸಕ್ಕೆ ದೊರೆಯು ಆ ಮಂತ್ರಿಯನ್ನೇ ನಿಯಮಿಸಿದನು. ಅನಂತರ ರಾಜನ ಅಪ್ಪಣೆಯಪ್ರಕಾರ ಅತಿಶಯ ಪುಣ್ಯವಂತನಾದ ಆ ಬುದ್ಧಿಸಾಗರನೂ ಸಹ ಸಂತೋಷದಿಂದ ಸರೋವರವನ್ನು ಸಮುದ್ರವಾಗಿ ಮಾಡಲುದ್ಯುಕ್ತನಾಗಿ ಅದನ್ನು ಸುತ್ತಲೂ ಐವತ್ತು ಧನುಸ್ಸುಗಳಷ್ಟು ವಿಸ್ತಾರವಾದ, ಒಳ್ಳೆಯ ಕಲ್ಲು ಕಟ್ಟಿರುವ, ಆಳವಾಗಿ ನೀರು ತುಂಬಿರುವ ಸರೋವರವನ್ನಾಗಿ ಮಾಡಿದನು. ಈರೀತಿ ಆ ಸರೋವರವನ್ನು ನಿರ್ಮಾಣಮಾಡಿ ಸಕಲವನ್ನೂ ರಾಜನಿಗೆ ಹೇಳಿದನು.

೭೯. ದೊರೆಯೇ! ಆಗಿನಿಂದ ಆ ಸರೋವರದಲ್ಲಿ ಕಾಡಿನಲ್ಲಿ ಸಂಚರಿಸುವ, ಬಾಯಾರಿಕೆಯುಳ್ಳ ಪಥಿಕರೆಲ್ಲರೂ ಒಳ್ಳೆಯ ನೀರನ್ನು ತೆಗೆದುಕೊಳ್ಳುತ್ತಿದ್ದಾರೆ.

ಕದಾಚಿತ್ಸ್ವಾಯುಷಶ್ಶಾಂತೇ ಸ ಮಂತ್ರೀ ಬುದ್ಧಿಸಾಗರಃ ।
ಪ್ರಮೃತೋ ಗತವಾನ್ಲೋಕಂ ಲೋಕಶಾಸ್ತುರ್ಮಮ ಪ್ರಭೋ ॥ ೮೦ ॥

ತದರ್ಥಂ ತು ಮಯಾ ಪೃಷ್ಟೋ ಧರ್ಮೋ ಧರ್ಮಲಿಪಿಂಕರಃ ।
ಚಿತ್ರಗುಪ್ತಸ್ತು ತತ್ಕರ್ಮ ಮಹ್ಯಂ ಸರ್ವಂ ನ್ಯವೇದಯತ್ ॥ ೮೧ ॥

ಉಪದೇಷ್ಟಾ ಸ್ವಯಂ ಚಾಸೌ ಧರ್ಮಕಾರ್ಯಸ್ಯ ಭೂಪತೇಃ ।
ತಸ್ಮಾದ್ಧರ್ಮವಿಮಾನಂ ತು ಸಮಾರೋಢುಮಿಹಾರ್ಹತಿ ॥ ೮೨ ॥

ಇತ್ಯುಕ್ತೇ ಚಿತ್ರಗುಪ್ತೇನ ಸಮಾಜ್ಞಪ್ತೋ ಮಯಾ ನೃಪ ।
ವಿಮಾನಂ ಧರ್ಮ ಸಂಜ್ಞಂ ತು ಆರೋಢುಂ ಬುದ್ಧಿಸಾಗರಃ ॥ ೮೩ ॥

ಅಥ ಕಾಲಾಂತರೇ ರಾಜನ್ ಸ ರಾಜಾ ವೀರಭದ್ರಕಃ ।
ಮೃತೋ ಗತೋ ಮಮ ಸ್ಥಾನಂ ನಮಶ್ಚಕ್ರೇ ಮುದಾನ್ವಿತಃ ॥ ೮೪ ॥

---

೮೦. ದೊರೆಯೇ! ಮಂತ್ರಿಯಾದ ಬುದ್ಧಿಸಾಗರನು ತನ್ನ ಆಯುಸ್ಸು ಮುಗಿದಮೇಲೆ ಮೃತನಾಗಿ ಜಗತ್ತಿಗೆ ಶಾಸಕನಾದ ನನ್ನ ಲೋಕಕ್ಕೆ ಬಂದನು.

೮೧. ನಾನು ಧರ್ಮಲೇಖಕನಾದ ಚಿತ್ರಗುಪ್ತನನ್ನು ಅವನು ಮಾಡಿರುವ ಧರ್ಮವೇನೆಂದು ಕೇಳಲು ಅವನು, ಮಂತ್ರಿಯು ಮಾಡಿದ ಕರ್ಮಗಳನ್ನೆಲ್ಲಾ ನನಗೆ ತಿಳಿಸಿದನು.

೮೨-೮೩. ಈ ಬುದ್ಧಿಸಾಗರನು ರಾಜನಿಗೆ ಧರ್ಮಕಾರ್ಯಗಳನ್ನು ಉಪದೇಶಿಸಿ ಮಾಡಿಸಿರುವುದು ಮಾತ್ರವಲ್ಲದೇ ಸ್ವಂತವಾಗಿಯೂ ಧರ್ಮಕೆಲಸ ಮಾಡಿರುತ್ತಾನಾದುದರಿಂದ ಧರ್ಮವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗಲು ಅರ್ಹನಾಗಿರುತ್ತಾನೆ ಎಂಬುದಾಗಿ ಚಿತ್ರಗುಪ್ತನು ಹೇಳಿದಮೇಲೆ ನಾನು ಧರ್ಮವೆಂಬ ವಿಮಾನವನ್ನು ಹತ್ತಲು ಬುದ್ಧಿಸಾಗರನಿಗೆ ಅಪ್ಪಣೆ ಕೊಟ್ಟೆನು.

೮೪-೮೫. ರಾಜನೇ! ಅನಂತರ ಬೇರೆ ಸಮಯದಲ್ಲಿ ವೀರಭದ್ರ ರಾಜನು ಮೃತನಾಗಿ ನನ್ನ ಬಳಿಗೆ ಬಂದು ಸಂತೋಷದಿಂದ ನಮಸ್ಕಾರ ಮಾಡಿ

ಮಯಾತು ತತ್ರ ತಸ್ಯಾಪಿ ಪೃಷ್ಟಂ ಕರ್ಮಾಖಿಲಂ ನೃಪ ।
ಕಥಿತಂ ಚಿತ್ರಗುಪ್ತೇನ ಧರ್ಮಂ ಸರಸಿಸಂಭವಂ ॥ ೮೫ ॥

ತಥಾ ಸಮ್ಯಜ್ಞಯಾ ರಾಜಾ ಬೋಧಿತೋಽಭೂದ್ಯಥಾ ಶೃಣು ।
ಅದಿತ್ಯಕಾಯಾಂ ಭೂಪಾಲ ಸೈಕತಸ್ಯ ಗಿರೇಃ ಪುರಾ ॥ ೮೬ ॥

ಲಾವಕೇನಾಮುನಾ ಚಂಚ್ವಾ ಖಾತಂ ದ್ವ್ಯಂಗುಲಮಂಬುನಿ ।
ತತಃ ಕಾಲಾಂತರೇ ತೇನ ವರಾಹೇಣ ನೃಪೋತ್ತಮ ॥ ೮೭ ॥

ಖನಿತಂ ಹಸ್ತಮಾತ್ರಂ ತು ಜಲಂ ತುಂಡೇನ ಚಾತ್ಮನಃ ।
ತತೋಽನ್ಯದಾ ವರಾಹಸ್ಸ ಹಸ್ತಯುಗ್ಮಮಿತಃ ಕೃತಃ ॥ ೮೮ ॥

ಖಾತೋ ಜಲೇ ಮಹಾರಾಜ ಜಲಂ ಮಾಸದ್ವಯಂ ಸ್ಥಿತಂ ।
ಪೀತಂ ಕ್ಷುದ್ರೈರ್ವನಚರೈಸ್ಸತ್ತ್ವೈಸ್ತೃಷ್ಣಾಸಮಾಕುಲೈಃ ॥ ೮೯ ॥

---

ದನು. ನಾನಾದರೋ ಚಿತ್ರಗುಪ್ತನನ್ನು ಅವನ ಕರ್ಮಗಳ ವಿಷಯದಲ್ಲಿ ಪ್ರಶ್ನೆ ಮಾಡಿದೆನು. ಅವನು ಸರೋವರನಿರ್ಮಾಣದಿಂದ ಉಂಟಾದ ಧರ್ಮವನ್ನು ಹೇಳಿದನು.

೮೬-೮೯. ಆಗ ನಾನು ರಾಜನಿಗೆ ತಿಳಿಸಿದ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಭೂಪತಿಯೇ! ಪೂರ್ವದಲ್ಲಿ ಸೈಕತ (ಮರಳು) ಬೆಟ್ಟದ ಮೇಲಿರುವ ಭೂಮಿಯಲ್ಲಿ ಈ ಲಾವಿಗೇಹಕ್ಕಿಯು ತನ್ನ ಕೊಕ್ಕಿನಿಂದ ನೀರು ನಿಲ್ಲುವಂತೆ ಎರಡು ಅಂಗುಲದಷ್ಟು ಹಳ್ಳಮಾಡಿತು. ತರುವಾಯ ಆ ಹಂದಿಯು ತನ್ನ ಮುಖದಿಂದ ಒಂದು ಮೊಳದಷ್ಟು ಅಗೆದು ನೀರನ್ನು ಹೆಚ್ಚಿಸಿತು. ಆಮೇಲೆ ಮತ್ತೊಂದು ಕಾಲದಲ್ಲಿ ಆ ಹಂದಿಯು ಎರಡು ಹಸ್ತದಷ್ಟು ಅಗೆಯಿತು. ಅದರಿಂದ ಎರಡು ತಿಂಗಳುಗಳ ಕಾಲ ನೀರು ನಿಂತಿತು. ಬಾಯಾರಿಕೆಯಿಂದ ಬಳಲಿದ, ಕಾಡಿನಲ್ಲಿ ಸಂಚರಿಸುತ್ತಿದ್ದ ಪ್ರಾಣಿಗಳೆಲ್ಲವೂ ಆ ನೀರನ್ನು ಕುಡಿಯುತ್ತಿದ್ದುವು.

ತತೋ ವರ್ಷತ್ರಯಾಂತೇ ತು ಗಜೇನಾನೇನ ಸುವ್ರತ ।
ಹಸ್ತತ್ರಯಮಿತಃ ಖಾತಃ ಕೃತಸ್ತತ್ರಾಧಿಕಂ ಜಲಂ ॥ ೯೦ ॥

ಮಾಸತ್ರಯೇ ಸ್ಥಿತಂ ತಚ್ಚ ಪಯೋಜೀವೈರ್ವನೇಚರೈಃ ।
ಭವಾಂಸ್ತತ್ರ ಸಮಾಯಾತೋ ಜಲಶೋಷಾದನಂತರಂ ॥ ೯೧ ॥

ಮಾಸೇ ತತ್ರ ತು ಸಂಪ್ರಾಪ್ತಂ ಹಸ್ತಂ ಖಾತ್ವಾ ಜಲಂ ನೃಪ ।
ತತಸ್ತಸ್ಯೋಪದೇಶೇನ ಮಂತ್ರಿಣೋ ನೃಪತೇ ತ್ವಯಾ ॥ ೯೨ ॥

ಪಂಚಾಶದ್ಧನುರುತ್ಖಾತಂ ಜಾತಂ ತತ್ರ ಮಹಾಜಲಂ ।
ಪುನಃ ಶಿಲಾಭಿಸ್ಸುದೃಢಂ ಬದ್ಧಂ ಜಾತಂ ಮಹತ್ಸರಃ ॥ ೯೩ ॥

ವೃಕ್ಷಾಶ್ಚಾರೋಪಿತಾಸ್ತತ್ರ ಸರ್ವಲೋಕೋಪಕಾರಿಣಃ ।
ತೇನ ಸ್ವಸ್ವೇನ ಪುಣ್ಯೇನ ಪಂಚೈತೇ ಜಗತೀಪತೇ ॥ ೯೪ ॥

ವಿಮಾನಂ ಧರ್ಮ್ಯಮಾರೂಢಾಸ್ತ್ವಮಪ್ಯೇನಂ ಸಮಾರುಹ ।
ಇತಿ ವಾಕ್ಯಂ ಸಮಾಕರ್ಣ್ಯ ಮಮ ರಾಜಾ ಸ ಭೂಮಿಪಃ ॥ ೯೫ ॥

---

೯೦–೯೩. ತರುವಾಯ ಮೂರು ವರ್ಷಗಳಾದ ಮೇಲೆ ಈ ಆನೆಯು ಮೂರು ಹಸ್ತದಷ್ಟು ಅಗೆದು ಹೇರಳವಾಗಿ ನೀರನ್ನುಂಟುಮಾಡಿತು. ಆ ನೀರು ಜಲಚರಜಂತುಗಳು ವನಮೃಗಗಳು ಇವುಗಳಿಗೆ ಆಧಾರವಾಗಿ ಮೂರು ತಿಂಗಳು ಗಳ ಕಾಲವಿತ್ತು. ಆ ನೀರು ಒಣಗಿಹೋದ ಮೇಲೆ ಒಂದು ತಿಂಗಳಲ್ಲಿ ನೀನು ಅಲ್ಲಿಗೆ ಬಂದು ಹಸ್ತದಷ್ಟು ಆಳ ಅಗೆದು ಅದರಲ್ಲಿ ಬಂದ ಜಲವನ್ನು ಪಾನಮಾಡಿ ಮಂತ್ರಿಯ ಉಪದೇಶದಿಂದ ಐವತ್ತು ಧನುಸ್ಸುಗಳಷ್ಟು ಆಳಮಾಡಿ ಮಹಾಜಲ ವನ್ನುಂಟುಮಾಡಿ ಗಟ್ಟಿಯಾಗಿ ಕಲ್ಲು ಕಟ್ಟಿಸಿದುದರಿಂದ ಅದು ದೊಡ್ಡ ಸರೋವರ ವಾಯಿತು.

೯೪-೯೬. ಆ ಸರೋವರದ ಸುತ್ತಮುತ್ತಲೂ ಎಲ್ಲರಿಗೂ ಫಲ, ಪುಷ್ಪ ಛಾಯಾದಿಗಳಿಂದ ಉಪಕಾರಮಾಡುವ ಗಿಡಗಳು ಬೆಳಸಲ್ಪಟ್ಟುವು. ರಾಜನೇ! ತಮ್ಮತಮ್ಮ ಪುಣ್ಯದಿಂದ ಈ ಐದು ಜನರು ಧರ್ಮದಿಂದ ಲಭಿಸುವ ಈ ವಿಮಾನ ದಲ್ಲಿ ಕುಳಿತಿರುವರು. ನೀನೂ ಸಹ ಈ ವಿಮಾನವನ್ನು ಹತ್ತು ಎಂದು ನಾನು

ಆರುರೋಹ ವಿಮಾನಂ ತತ್ಸಷ್ಠೋ ರಾಜಾ ಸ ಮುಕ್ತಿಭಾಕ್ ।
ಇತಿ ತೇ ಸರ್ವಮಾಖ್ಯಾತಂ ತಡಾಗಜನಿತಂ ಫಲಂ ॥ ೯೬ ॥

ಶ್ರುತ್ವೈತನ್ಮುಚ್ಯತೇ ಪಾಪಾದಾಜನ್ಮಮರಣಾಂತಿಕಾತ್ ।
ಯೋ ನರಃ ಶ್ರದ್ಧಯಾ ಯುಕ್ತೋ ವ್ಯಾಖ್ಯಾತಂ ಶ್ರುಣುಯಾತ್ಪಠೇತ್ ॥೯೭
ಸೋಽಪ್ಯಾಪ್ನೋತ್ಯಖಿಲಂ ಪುಣ್ಯಂ ಸರೋನಿರ್ಮಾಣ ಸಂಭವಂ ॥ ೯೮ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ಧರ್ಮಾಖ್ಯಾನೇ ದ್ವಾದಶೋಽಧ್ಯಾಯಃ

---

ಹೇಳಿದ ಮಾತನ್ನು ಕೇಳಿ ಆ ರ್‍ಆಜನು ವಿಮಾನವನ್ನು ಹತ್ತಿ ಆರನೆಯವನಾದ ಅವನೂ ಸಹ ಮೋಕ್ಷಕ್ಕೆ ಹೋದನು. ಈ ಪ್ರಕಾರ ಕೆರೆ ಕಟ್ಟಿಸುವುದರಿಂದ ಆಗುವ ಪ್ರಯೋಜನವನ್ನೆಲ್ಲಾ ನಿನಗೆ ಹೇಳಿರುತ್ತೇನೆ.

೯೭-೯೮. ಇದನ್ನು ಶ್ರವಣ ಮಾಡಿದರೆ ಹುಟ್ಟಿದಾಗಿನಿಂದ ಸಾಯುವವರೆಗೆ ಮಾಡಿದ ಪಾಪಗಳೆಲ್ಲವೂ ಹೋಗುತ್ತವೆ. ವಿಶ್ವಾಸಪೂರ್ವಕವಾಗಿ ಈ ಕಥೆಯನ್ನು ಕೇಳುವವನು ಮತ್ತು ಹೇಳುವವನೂ ಸಹ ಸರೋವರ ನಿರ್ಮಾಣದಿಂದ ಬರುವ ಸಕಲ ಪುಣ್ಯಕ್ಕೂ ಭಾಗಿಯಾಗುತ್ತಾನೆ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮ ಪಾದದಲ್ಲಿ ಧರ್ಮಕಥನ ಪ್ರಕರಣದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



## ಕಥಾಸಾರಾಂಶ

ಈ ಅಧ್ಯಾಯದ ಆದಿಯಲ್ಲಿ ನಾರದನು ದಾನ ಮತ್ತು ಅದನ್ನು ಯಾರಿಗೆ ಕೊಡಬೇಕೆಂಬ ಎರಡು ವಿಷಯಗಳನ್ನು ಪ್ರಶ್ನೆಮಾಡಿದನು. ಅದಕ್ಕೆ ಉತ್ತರವಾಗಿ ಸನಕನು ದಾನಸ್ವರೂಪ ಅದರ ಪ್ರಭೇದವನ್ನೂ ವಿವರಿಸಿ ಪಾತ್ರ ಎಂದರೆ ದಾನವನ್ನು ತೆಗೆದುಕೊಳ್ಳುವವನು ಎಂತಹವನಾಗಿರಬೇಕೆಂಬುದನ್ನು ವಿಸ್ತಾರವಾಗಿ ನಿರೂಪಿಸಿರುವನು. ತರುವಾಯ ದಾನ, ಪಾತ್ರ, ಮುಂತಾದ ವಿಷಯಗಳನ್ನೊಳಗೊಂಡ ಭಗೀರಥಧರ್ಮರಾಜಸಂವಾದರೂಪವಾದ ಇತಿಹಾಸವು ಹೇಳಲ್ಪಟ್ಟಿದೆ. ಅದರಲ್ಲಿ ಗೊಂಡಾರಣ್ಯದಲ್ಲಿ ಕೆರೆಯನ್ನು ಕಟ್ಟಿಸಿ ಮಹಾಪುಣ್ಯವನ್ನು ಸಂಪಾದಿಸಿದ ವೀರಭದ್ರರಾಜನ ಚರಿತ್ರೆಯು ಕೆರೆ ಕಟ್ಟಿಸುವುದರಿಂದಾಗುವ ಫಲವಿಶೇಷ ಮುಂತಾದುವುಗಳು ಅಡಕವಾಗಿವೆ. ಇಲ್ಲಿ ಉಕ್ತವಾಗಿರುವ ಚರಿತ್ರೆಯನ್ನು ಶ್ರವಣಪಠನ ಮಾಡುವವರಿಗೆ ಮುಕ್ತಿಪರ್ಯಂತವಾದ ಮಹಾಫಲಗಳು ಲಭಿಸುತ್ತವೆ ಎಂದು ಹೇಳಿ ಅಧ್ಯಾಯವು ಕೊನೆಗೊಂಡಿದೆ.

---

# ತ್ರಯೋದಶೋಽಧ್ಯಾಯಃ

ಧರ್ಮರಾಜ ಉವಾಚ

ದೇವತಾಯತನಂ ಯಸ್ತು ಕುರುತೇ ಕಾರಯತ್ಯಪಿ ।
ಶಿವಸ್ಯಾಪಿ ಹರೇರ್ವಾಪಿ ತಸ್ಯ ಪುಣ್ಯಫಲಂ ಶ್ರುಣು ॥ ೧ ॥

ಮಾತೃತಃ ಪಿತೃತಶ್ಚೈವ ಲಕ್ಷಕೋಟಿಕುಲಾನ್ವಿತಃ ।
ಕಲ್ಪತ್ರಯಂ ವಿಷ್ಣುಪದೇ ಸ್ಥಿತ್ವಾ ತತ್ರೈವ ಮುಚ್ಯತೇ ॥ ೨ ॥

ಮೃದೈವ ಕುರುತೇ ಯಸ್ತು ದೇವತಾಯತನಂ ನರಃ ।
ಯಾವತ್ಪುಣ್ಯಂ ಭವೇತ್ತಸ್ಯ ತನ್ಮೇ ನಿಗದತಃ ಶ್ರುಣು ॥ ೩ ॥

ದಿವ್ಯದೇಹಧರೋ ಭೂತ್ವಾ ವಿಮಾನವರಮಾಸ್ಥಿತಃ ।
ಕಲ್ಪತ್ರಯಂ ವಿಷ್ಣುಪದೇ ಸ್ಥಿತ್ವಾ ಬ್ರಹ್ಮಪುರಂ ವ್ರಜೇತ್ ॥ ೪ ॥

---

## ಹದಿಮೂರನೆಯ ಅಧ್ಯಾಯವು

೧. ಧರ್ಮರಾಜನು ಹೇಳಿದನು—ಶಿವ ಅಥವಾ ವಿಷ್ಣುವಿನ ದೇವಾಲಯವನ್ನು ಕಟ್ಟಿಸುವವನು ಅಥವಾ ಕಟ್ಟಿಸಲು ಪ್ರೇರಿಸುವವನು ಇವರಿಗೆ ಬರುವ ಪುಣ್ಯಫಲವನ್ನು ವಿವರಿಸುತ್ತೇನೆ ಕೇಳು.

೨. ಅಂತಹವನು ತಾಯಿ ಮತ್ತು ತಂದೆಯ ಪರಂಪರೆಯಲ್ಲಿ ಲಕ್ಷಕೋಟಿ ಕುಲಸಹಿತನಾಗಿ ಮೂರು ಕಲ್ಪ ಪರ್ಯಂತವಾಗಿ ವಿಷ್ಣುಲೋಕದಲ್ಲಿ ಸುಖದಿಂದಿದ್ದು ಅಲ್ಲಿಯೇ ಮುಕ್ತನಾಗುತ್ತಾನೆ.

೩. ಮಣ್ಣಿನಿಂದ ದೇವಾಲಯವನ್ನು ಕಟ್ಟಿಸುವವನಿಗೆ ಬರುವ ಪುಣ್ಯವನ್ನು ವಿವರಿಸುತ್ತೇನೆ ಕೇಳು.

೪. ಮಣ್ಣಿನಿಂದಲೇ ದೇವಾಲಯವನ್ನು ಕಟ್ಟಿಸುವವನು ದಿವ್ಯ ಶರೀರವನ್ನು ಧರಿಸಿ ಉತ್ಕೃಷ್ಟವಾದ ವಿಮಾನದಲ್ಲಿ ಕುಳಿತು ಮೂರು ಕಲ್ಪಗಳ ಕಾಲ ವಿಷ್ಣುಲೋಕದಲ್ಲಿದ್ದು ಬ್ರಹ್ಮಲೋಕಕ್ಕೆ ಹೋಗುತ್ತಾನೆ.

ಕಲ್ಪದ್ವಯಂ ಸ್ಥಿತಸ್ತತ್ರ ಪುನಃ ಕಲ್ಪಂ ವಸೇದ್ದಿವಿ ।
ತತಸ್ತು ಯೋಗಿನಾಮೇವ ಕುಲೇ ಜಾತೋ ಮುದಾನ್ವಿತಃ ॥ ೫ ॥

ವೈಷ್ಣವಂ ಯೋಗಮಾಸ್ಥಾಯ ಮುಕ್ತಿಂ ವ್ರಜತಿ ಶಾಶ್ವತೀಂ ।
ದಾರುಭಿಃ ಕುರುತೇ ಯಸ್ತು ತಸ್ಯಸ್ಯಾದ್ದ್ವಿಗುಣಂ ಫಲಂ ॥ ೬ ॥

ತ್ರಿಗುಣಂ ಚೇಷ್ಟಕಾಭಿಸ್ತು ಶಿಲಾಭಿಸ್ತು ಚತುರ್ಗುಣಂ ।
ಸ್ಫಟಿಕಾಭಿಃ ಶಿಲಾಭಿಸ್ತು ಜ್ಞೇಯಂ ದಶಗುಣೋತ್ತರಂ ॥ ೭ ॥

ತಾಮ್ರೈಃ ಶತಗುಣಂ ಜ್ಞೇಯಂ ಹೇಮ್ನಾ ಕೋಟಿಗುಣಂ ಭವೇತ್ ।
ದೇವಾಲಯಂ ತಡಾಗಂ ವಾ ಗ್ರಾಮಂ ವಾ ಪಾಲಯೇತ್ತು ಯಃ ॥ ೮ ॥

ಕರ್ತುಃ ಶತಗುಣಂ ತಸ್ಯ ಪುಣ್ಯಂ ಭವತಿ ಭೂಪತೇ ।
ದೇವಾಲಯಸ್ಯ ಶುಶ್ರೂಷಾಂ ಲೇಪಸೇಚನಮಂಡನೈಃ ॥ ೯ ॥

---

೫-೬. ಅಲ್ಲಿ ಎರಡು ಕಲ್ಪಗಳಿದ್ದು ನಂತರ ಅಂತರಿಕ್ಷಲೋಕದಲ್ಲಿ ಒಂದು ಕಲ್ಪ ವಾಸಿಸುತ್ತಾನೆ. ಅನಂತರ ಯೋಗಿಗಳ ವಂಶದಲ್ಲಿ ಜನ್ಮವಂ ತಾಳಿ ಸಂತೋಷದಿಂದ ಕೂಡಿ ವಿಷ್ಣುಭಕ್ತಿಯೆಂಬ ಉಪಾಯವನ್ನಾಶ್ರಯಿಸಿ ಶಾಶ್ವತ ವಾದ ಮುಕ್ತಿಗೆ ಹೋಗುತ್ತಾನೆ.

೬-೮. ಮರದಿಂದ ದೇವಾಲಯವನ್ನು ಕಟ್ಟಿಸುವವನಿಗೆ ಮಣ್ಣಿನ ದೇವಾಲಯದ ಫಲಕ್ಕಿಂತ ಎರಡರಷ್ಟು, ಇಟ್ಟಿಗೆಯಿಂದ ಕಟ್ಟಿಸಿದರೆ ಮೂರ ರಷ್ಟು, ಕಲ್ಲಿನಿಂದ ಕಟ್ಟಿಸಿದರೆ ನಾಲ್ಕರಷ್ಟು, ಸ್ಫಟಿಕಶಿಲೆಗಳಿಂದ ಕಟ್ಟಿಸಿದರೆ ಹತ್ತರಷ್ಟು, ತಾಮ್ರದಿಂದ ಕಟ್ಟಿಸಿದರೆ ನೂರರಷ್ಟು, ಭಂಗಾರದಿಂದ ಕಟ್ಟಿಸಿದರೆ ಕೋಟಿಯಷ್ಟು ಹೆಚ್ಚುಹೆಚ್ಚಾಗಿ ಫಲವು ಲಭಿಸುತ್ತವೆ.

೮-೯. ದೊರೆಯೇ ! ದೇವಸ್ಥಾನ, ಕೆರೆ, ಹಳ್ಳಿ ಇವುಗಳನ್ನುರಕ್ಷಿಸುವವ ನಿಗೆ ನಿರ್ಮಾಣಮಾಡಿದವನ ಪುಣ್ಯಕ್ಕಿಂತಲೂ ನೂರರಷ್ಟು ಹೆಚ್ಚು ಪುಣ್ಯ ಬರುತ್ತದೆ.

ಕುರ್ಯಾದ್ಯಃ ಸತತಂ ಭಕ್ತ್ಯಾ ತಸ್ಯ ಪುಣ್ಯಮನಂತಕಂ ।
ಚೋದನಾವಶತೋ ಯೇಽಪಿ ಪುಣ್ಯಕರ್ಮಪ್ರವರ್ತಿತಾಃ ॥ ೧೦ ॥

ತೇ ಗಚ್ಛಂತಿ ಪರಂಧಾಮ ಶಾಶ್ವತಂ ವೈಷ್ಣವಂ ಧ್ರುವಂ ।
ತಡಾಗಾರ್ಧಫಲಂ ರಾಜನ್ಕಾಸಾರೇ ಪರಿಕೀರ್ತಿತಂ ॥ ೧೧ ॥

ಕೂಪೇ ಪಾದಫಲಂ ಜ್ಞೇಯಂ ವಾಪ್ಯಾಂ ಪದ್ಮಾಕರೋನ್ಮಿತಂ ।
ವಾಪೀಶತಗುಣಂ ಪ್ರೋಕ್ತಂ ಕುಲ್ಯಾಯಾಂ ಭೂಪತೇ ಫಲಂ ॥ ೧೨ ॥

ದೃಷದ್ಭಿಸ್ತು ಧನೀ ಕುರ್ಯಾನ್ಮೃದಾ ನಿಷ್ಕಿಂಚನೋ ಜನಃ ।
ತಯೋಃ ಫಲಂ ಸಮಾನಂ ಸ್ಯಾದಿತ್ಯಾಹ ಕಮಲೋದ್ಭವಃ ॥ ೧೩ ॥

---

೯-೧೦. ಯಾವಾಗಲೂ ಭಕ್ತಿಪೂರ್ವಕವಾಗಿ ದೇವಾಲಯಕ್ಕೆ ಸುಣ್ಣ ಬಣ್ಣ ಮುಂತಾದುವುಗಳನ್ನು ಹಚ್ಚುವುದು, ಸಾರಿಸುವುದು, ಅಲಂಕರಿಸುವುದೇ ಮುಂತಾದ ದೇವಸ್ಥಾನಸೇವೆಯನ್ನು ಮಾಡುವವರಿಗೆ ಅನಂತಪುಣ್ಯವು ಲಭಿಸುತ್ತದೆ.

೧೦-೧೧. ಪರರ ಪ್ರೇರಣೆಯಿಂದಲಾದರೂ ಪುಣ್ಯ ಕರ್ಮಗಳಲ್ಲಿ ಪ್ರವರ್ತಿಸುವವರು ನಿಜವಾಗಿಯೂ ಶಾಶ್ವತವಾದ ವಿಷ್ಣುವಿನ ಪರಂಧಾಮ ಎಂದರೆ ವೈಕುಂಠಲೋಕಕ್ಕೆ ಹೋಗುತ್ತಾರೆ.

೧೧-೧೨. ದೊರೆಯೇ! ಕೊಳವನ್ನು ಕಟ್ಟಿಸಿದರೆ ಕೆರೆ ಕಟ್ಟಿಸುವುದರ ಫಲದಲ್ಲಿ ಅರ್ಧ ಪುಣ್ಯವೂ, ಸೇದುವ ಬಾವಿಯನ್ನು ಮಾಡಿಸಿದರೆ ಅದರಲ್ಲಿ ಕಾಲು ಭಾಗ ಫಲವೂ, ಕಲ್ಯಾಣೀ ಕೊಳವನ್ನು ನಿರ್ಮಿಸಿದರೆ ಕೆರೆ ಕಟ್ಟಿಸಿದಷ್ಟು ಫಲವೂ ಕಾಲುವೆಯನ್ನು ನಿರ್ಮಾಣಮಾಡಿದರೆ ಕಲ್ಯಾಣೀಕೊಳದ ನೂರರಷ್ಟು ಫಲವೂ ಬರುತ್ತದೆ.

೧೩. ಧನಿಕನು ಕಲ್ಲಿನಿಂದಲೂ ಬಡವನು ಮಣ್ಣಿನಿಂದಲೂ ದೇವಾಲಯಮುಂತಾದುವುಗಳನ್ನು ಕಟ್ಟಿಸಿದರೆ ಅವರಿಬ್ಬರಿಗೂ ಸಮಾನವಾದ ಫಲವು ದೊರೆಯುತ್ತದೆ ಎಂದು ಬ್ರಹ್ಮನು ಹೇಳಿರುವನು.

ದದ್ಯಾದ್ಧನಾಢ್ಯೋ ನಗರಂ ಹಸ್ತಮಾತ್ರಾಮಕಿಂಚನಃ ।
ಭುವಂ ತಯೋಃ ಸಮಫಲಂ ಪ್ರಾಹುರ್ವೇದವಿದೋ ಜನಾಃ ॥ ೧೪ ॥

ಧನಾಢ್ಯಃ ಕುರುತೇ ಯಸ್ತು ತಡಾಗಂ ಫಲಸಾಧನಂ ।
ದರಿದ್ರಃ ಕುರುತೇ ಕೂಪಂ ಸಮಂ ಪುಣ್ಯಂ ಪ್ರಕೀರ್ತಿತಂ ॥ ೧೫ ॥

ಆರಾಮಂ ಕಾರಯೇದ್ಯಸ್ತು ಬಹುಜಂತೂಪಕಾರಕಂ ।
ಸ ಯಾತಿ ಬ್ರಹ್ಮಭುವನಂ ಕುಲತ್ರಯಸಮನ್ವಿತಃ ॥ ೧೬ ॥

ಧೇನುರ್ವಾ ಬ್ರಾಹ್ಮಣೋ ವಾsಪಿ ಯೋ ವಾ ಕೋ ವಾsಪಿ ಭೂಪತೇ ।
ಕ್ಷಣಾರ್ಧಂ ತಸ್ಯ ಛಾಯಾಯಾಂ ತಿಷ್ಠನ್ಸ್ವರ್ಗಂ ನಯತ್ಯಮುಂ ॥ ೧೭ ॥

ಆರಾಮಕಾರಕಾ ರಾಜನ್ದೇವತಾಗೃಹಕಾರಿಣಃ ।
ತಡಾಗಗ್ರಾಮಕರ್ತಾರಃ ಪೂಜ್ಯಂತೇ ಹರಿಣಾ ಸಹ ॥ ೧೮ ॥

---

೧೪. ಗ್ರಾಮವನ್ನೇ ದಾನಮಾಡುವ ಧನಿಕನಿಗೂ ಒಂದು ಮೊಳದಷ್ಟು ಭೂಮಿಯನ್ನು ದಾನಮಾಡುವ ಬಡವನಿಗೂ ಸಮಾನವಾದ ಫಲ ಬರುತ್ತದೆ ಎಂದು ವೇದಾರ್ಥಜ್ಞಾನಿಗಳಾದ ಜನರು ಹೇಳಿರುತ್ತಾರೆ.

೧೫. ಫಲವತ್ತಾದ ಕೆರೆಯನ್ನು ಕಟ್ಟಿಸುವ ಧನಿಕನಿಗೂ ಸೇದುವ ಬಾವಿಯನ್ನು ತೋಡಿಸುವ ಬಡವನಿಗೂ ಸಮಾನಪುಣ್ಯವೆಂದು ಉಕ್ತವಾಗಿದೆ.

೧೬. ಅನೇಕ ಪ್ರಾಣಿಗಳಿಗೆ ಅನುಕೂಲವಾಗಿರುವ ತೋಟವನ್ನು ಮಾಡಿಸುವವನು ಮೂರು ಕುಲಸಹಿತವಾಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

೧೭. ರಾಜನೇ! ಹಸು ಅಥವಾ ಬ್ರಾಹ್ಮಣ ಅಥವಾ ಯಾವ ಪ್ರಾಣಿಯಾದರೂ ಸರಿಯೇ ವೃಕ್ಷಛಾಯೆಯಲ್ಲಿ ನಿಂತು ವಿಶ್ರಮಿಸಿಕೊಂಡರೆ ಆ ವೃಕ್ಷವನ್ನು ಬೆಳೆಸಿದವನಿಗೆ ಸ್ವರ್ಗಪ್ರಾಪ್ತಿಯಾಗುತ್ತದೆ.

೧೮. ತೋಟವನ್ನು ನಿರ್ಮಾಣಮಾಡಿರುವವರು, ದೇವಸ್ಥಾನ ಕಟ್ಟಿಸಿರುವವರು ಮತ್ತು ಕೆರೆ ಗ್ರಾಮಗಳನ್ನು ನಿರ್ಮಾಣ ಮಾಡಿರುವವರೂ ಸಹ ಹರಿಸನ್ನಿಧಾನಕ್ಕೆ ಪಾತ್ರರಾಗಿ ಪೂಜಿಸಲ್ಪಡುತ್ತಾರೆ.

**ಸರ್ವಲೋಕೋಪಕಾರಾರ್ಥಂ ಪುಷ್ಪಾರಾಮಂ ಜನೇಶ್ವರ ।**
**ಕುರ್ವತೇ ದೇವತಾರ್ಥಂ ತೇಷಾಂ ಪುಣ್ಯಫಲಂ ಶ್ರುಣು ॥ ೧೯ ॥**

**ತತ್ರ ಯಾವಂತಿ ಪರ್ಣಾನಿ ಕುಸುಮಾನಿ ಭವಂತಿ ಚ ।**
**ತಾವದ್ವರ್ಷಾಣಿ ನಾಕಸ್ಥೋ ಮೋದತೇ ಕುಲಕೋಟಿಭಿಃ ॥ ೨೦ ॥**

**ಪ್ರಾಕಾರಕಾರಿಣಸ್ತಸ್ಯ ಕಂಟಕಾವರಣಪ್ರದಾಃ ।**
**ಪ್ರಯಾಂತಿ ಬ್ರಹ್ಮಣಃ ಸ್ಥಾನಂ ಯುಗಾನಾಮೇಕಸಪ್ತತಿಂ ॥ ೨೧ ॥**

**ತುಲಸೀರೋಪಣಂ ಯೇ ತು ಕುರ್ವತೇ ಮನುಜೇಶ್ವರ ।**
**ತೇಷಾಂ ಪುಣ್ಯಫಲಂ ರಾಜನ್ ವದತೋ ಮೇ ನಿಶಾಮಯ ॥ ೨೨ ॥**

**ಸಪ್ತಕೋಟಿಕುಲೈರ್ಯುಕ್ತೋ ಮಾತೃತಃ ಪಿತೃತಸ್ತಥಾ ।**
**ವಸೇತ್ಕಲ್ಪಶತಂ ಸಾಗ್ರಂ ನಾರಾಯಣಪದೇ ನೃಪ ॥ ೨೩ ॥**

---

೧೯. ದೊರೆಯೇ! ಸಕಲ ಜನೋಪಕಾರಕ್ಕಾಗಿ ಅಥವಾ ದೇವರ ಪೂಜೆಗಾಗಿ ಹೂವಿನ ತೋಟವನ್ನು ಮಾಡುವವರಿಗೆ ಬರುವ ಫಲವನ್ನು ಹೇಳುತ್ತೇನೆ ಕೇಳು.

೨೦. ಆ ಹೂವಿನ ತೋಟದಲ್ಲಿ ಎಷ್ಟು ಎಲೆಗಳು ಮತ್ತು ಹೂವು ಬೆಳೆಯುತ್ತವೆಯೋ ಆ ತೋಟಕರ್ತನು ಅಷ್ಟು ವರ್ಷಗಳಕಾಲ ಕೋಟಿಕುಲಗಳಿಂದ ಸಹಿತನಾಗಿ ಸ್ವರ್ಗಲೋಕದಲ್ಲಿ ಸುಖಪಡುತ್ತಾನೆ.

೨೧. ಅಂತಹ ಪುಷ್ಪವನಕ್ಕೆ ಸುತ್ತಲೂ ಗೋಡೆ ಅಥವಾ ಮುಳ್ಳುಬೇಲಿಯನ್ನಾಗಲೀ ಹಾಕಿಸುವವರು ಇಪ್ಪತ್ತೊಂದು ಯುಗಗಳ ಕಾಲ ಬ್ರಹ್ಮಲೋಕದಲ್ಲಿ ವಾಸವಾಗಿರುತ್ತಾರೆ.

೨೨. ರಾಜನೇ! ತುಳಸೀಗಿಡಗಳನ್ನು ಬೆಳೆಸುವವರಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

೨೩. ಅಂತಹವನು ತಾಯಿ ಮತ್ತು ತಂದೆಯ ಪರಂಪರೆಯಲ್ಲಿ ಏಳು ಕೋಟಿ ಕುಲಗಳಿಂದ ಸಹಿತನಾಗಿ ನೂರುಕಲ್ಪಗಳವರೆಗೆ ವಿಷ್ಣುಲೋಕದಲ್ಲಿ ಸುಖವಾಗಿ ಇರುತ್ತಾನೆ.

ಊರ್ಧ್ವಪುಂಡ್ರಧರೋ ಯಸ್ತು ತುಲಸೀಮೂಲಮೃತ್ಸ್ನಯಾ ।
ಗೋಪಿಕಾಚಂದನೇನಾಪಿ ಚಿತ್ರಕೂಟಮೃದಾಽಪಿ ವಾ ॥ ೨೪ ॥

ಗಂಗಾಮೃತ್ತಿಕಯಾ ಚೈವ ತಸ್ಯ ಪುಣ್ಯಫಲಂ ಶೃಣು ।
ವಿಮಾನವರಮಾರೂಢೋ ಗಂಧರ್ವಾಪ್ಸರಸಾಂ ಗಣೈಃ ॥ ೨೫ ॥

ಸಂಗೀಯಮಾನಚರಿತೋ ಮೋದತೇ ವಿಷ್ಣುಮಂದಿರೇ ।
ತೃಣಾನಿ ತುಲಸೀಮೂಲಾದ್ಯಾವಂತ್ಯಪಹೃತಾನಿ ವೈ ॥ ೨೬ ॥

ತಾವಂತಿ ಬ್ರಹ್ಮಹತ್ಯಾನಿ ಛಿನತ್ತ್ಯೇವ ನ ಸಂಶಯಃ ।
ತುಲಸ್ಯಾಂ ಸೇಚಯೇದ್ಯಸ್ತು ಜಲಂ ಚುಲುಕಮಾತ್ರಕಂ ॥ ೨೭ ॥

ಕ್ಷೀರೋದಶಾಯಿನಾ ಸಾರ್ಧಂ ವಸತ್ಯಾಚಂದ್ರತಾರಕಂ ।
ದದಾತಿ ಬ್ರಾಹ್ಮಣಾನಾಂ ಯಸ್ತುಲಸೀಕೋಮಲಂ ದಲಂ ॥ ೨೮ ॥

---

೨೪-೨೬. ತುಲಸೀಮೂಲಮೃತ್ತಿಕೆ, ಗೋಪಿಚಂದನ ಅಥವಾ ಚಿತ್ರಕೂಟಪರ್ವತದ ಮಣ್ಣು ಅಥವಾ ಗಂಗೆಯ ಮೃತ್ತಿಕೆ ಇವುಗಳಿಂದ ಊರ್ಧ್ವಪುಂಡ್ರವನ್ನು ಧರಿಸುವವನು ಉತ್ತಮ ವಿಮಾನದಲ್ಲಿ ಕುಳಿತು ಗಂಧರ್ವರು ಮತ್ತು ಅಪ್ಸರಸ್ತ್ರೀಯರು ಇವರುಗಳಿಂದ ಹೊಗಳಿಸಿಕೊಳ್ಳಲ್ಪಟ್ಟ ಚರಿತ್ರೆಯುಳ್ಳವನಾಗಿ ವಿಷ್ಣುಲೋಕದಲ್ಲಿ ಸುಖಪಡುತ್ತಾನೆ. ಇದೇ ಊರ್ಧ್ವಪುಂಡ್ರಧಾರಣದ ಫಲವು.

೨೬-೨೭. ತುಲಸೀಗಿಡದ ಪಾತಿಯಲ್ಲಿ ಬೆಳೆದಿದ್ದ ಹುಲ್ಲುಗಳನ್ನು (ಕಳೆ) ಎಷ್ಟು ಕೀಳುತ್ತಾನೆಯೋ ಅವನು ಅಷ್ಟು ಬ್ರಹ್ಮಹತ್ಯೆಗಳನ್ನು ನಿಜವಾಗಿಯೂ ಪರಿಹರಿಸಿಕೊಂಡಂತೆಯೇ ಸರಿ. ಸಂಶಯವಿಲ್ಲ.

೨೭-೨೮. ತುಲಸಿಯ ಗಿಡಕ್ಕೆ ಹನಿಮಾತ್ರವಾದರೂ ನೀರನ್ನು ಹಾಕುವವನು ಕ್ಷೀರಸಮುದ್ರಶಾಯಿಯಾದ ವಿಷ್ಣುವಿನೊಡನೆ ಶಾಶ್ವತವಾಗಿ ವಾಸಿಸುತ್ತಾನೆ.

ಸ ಯಾತಿ ಬ್ರಹ್ಮಸದನೇ ಕುಲತ್ರಿತಯಸಂಯುತಃ ।
ಸಾಲಗ್ರಾಮೋಽರ್ಚಯೇದ್ಯಸ್ತು ತುಲಸ್ಯಾಸ್ತು ದಲಾನಿ ಚ ॥ ೨೯ ॥

ಸ ವಸೇದ್ವಿಷ್ಣುಭವನೇ ಯಾವದಾಭೂತಸಂಪ್ಲವಂ ।
ಕಂಟಾಕಾವರಣಂ ಯಸ್ತು ಪ್ರಾಕಾರಂ ವಾಽಪಿ ಕಾರಯೇತ್ ॥ ೩೦ ॥

ಸೋಽಪ್ಯೇಕವಿಂಶತಿಕುಲೈರ್ಮೋದತೇ ವಿಷ್ಣುಮಂದಿರೇ ।
ಯೋಽರ್ಚಯೇದ್ಧರಿಪಾದಾಬ್ಜಂ ತುಲಸ್ಯಾಃ ಕೋಮಲೈರ್ದಲೈಃ ॥ ೩೧ ॥

ನ ತಸ್ಯ ಪುನರಾವೃತ್ತಿರ್ವಿಷ್ಣುಲೋಕಾನ್ನರೇಶ್ವರ ।
ದ್ವಾದಶ್ಯಾಂ ಪೌರ್ಣಮಾಸ್ಯಾಂ ಯಃ ಕ್ಷೀರೇಣ ಸ್ನಾಪಯೇದ್ಧರಿಂ ॥ ೩೨ ॥

ಕುಲಾಯುತಯುತಃ ಸೋಽಪಿ ಮೋದತೇ ವೈಷ್ಣವೇ ಪದೇ ।
ಪ್ರಸ್ಥಮಾತ್ರೇಣ ಪಯಸಾ ಯಃ ಸ್ನಾಪಯತಿ ಕೇಶವಂ ॥ ೩೩ ॥

---

೨೮-೨೯. ಬ್ರಾಹ್ಮಣರಿಗೆ ಕೋಮಲವಾದ ತುಳಸೀದಳವನ್ನು ದಾನ ಮಾಡುವವನು ಮೂರುಕುಲಸಹಿತವಾಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

೨೯-೩೦. ಸಾಲಗ್ರಾಮುವನ್ನು ತುಲಸೀದಳದಿಂದ ಪೂಜಿಸುವವನು ಪ್ರಳಯಪರ್ಯಂತವಾಗಿ ವಿಷ್ಣುಲೋಕದಲ್ಲಿ ವಾಸಿಸುತ್ತಾನೆ.

೩೦-೩೧. ತುಳಸಿಯ ಗಿಡಕ್ಕೆ ಸುತ್ತಲೂ ಮುಳ್ಳಿನ ಬೇಲಿ ಅಥವಾ ಗೋಡೆಯನ್ನು ಹಾಕಿಸುವವನು ಇಪ್ಪತ್ತೊಂದು ಕುಲಗಳ ಸಹಿತನಾಗಿ ವಿಷ್ಣು ಭವನದಲ್ಲಿ ಸುಖಪಡುತ್ತಾನೆ.

೩೧-೩೨. ದೊರೆಯೇ! ಮನೋಹರವಾದ ತುಲಸೀದಳಗಳಿಂದ ಶ್ರೀ ಹರಿಯ ಪಾದಕಮಲವನ್ನು ಪೂಜಿಸುವವನಿಗೆ ವಿಷ್ಣುಲೋಕದಲ್ಲಿ ಶಾಶ್ವತಸುಖವು ದೊರೆಯುತ್ತದೆ. ಅಂತಹವನಿಗೆ ಪುನಃ ಸಂಸಾರಬಾಧೆಯುಂಟಾಗುವುದಿಲ್ಲ.

೩೨-೩೩. ದ್ವಾದಶೀ ಅಥವಾ ಪೂರ್ಣಿಮಾ ದಿನಗಳಲ್ಲಿ ಶ್ರೀಹರಿಗೆ ಕ್ಷೀರಾಭಿಷೇಕ ಮಾಡಿಸುವವನು ಹತ್ತುಸಾವಿರ ಕುಲಗಳಿಂದ ಸಹಿತನಾಗಿ ವಿಷ್ಣು ಲೋಕದಲ್ಲಿ ಸುಖಪಡುತ್ತಾನೆ.

ಕುಲಾಯುತಯುತಃ ಸೋಽಪಿ ವಿಷ್ಣೋಃ ಸಾರೂಪ್ಯಮಾಪ್ನುಯಾತ್ ।
ಘೃತಪ್ರಸ್ಥೇನ ಯೋ ವಿಷ್ಣುಂ ದ್ವಾದಶ್ಯಾಂ ಸ್ನಾಪಯೇನ್ನರಃ ॥ ೩೪ ॥

ಕುಲಕೋಟಿಯುತೋ ರಾಜನ್ಸಾಯುಜ್ಯಂ ಲಭತೇ ಹರೇಃ ।
ಪಂಚಾಮೃತೇನ ಯಃ ಸ್ನಾನಮೇಕಾದಶ್ಯಾಂ ತು ಕಾರಯೇತ್ ॥ ೩೫ ॥

ವಿಷ್ಣೋಃ ಸಾಯುಜ್ಯತಾ ತಸ್ಯ ಭವೇತ್ಕುಲಶತಾಯುತೈಃ ।
ಏಕಾದಶ್ಯಾಂ ಪೂರ್ಣಮಾಸ್ಯಾಂ ದ್ವಾದಶ್ಯಾಂ ವಾ ನೃಪೋತ್ತಮ ॥ ೩೬ ॥

ನಾರಿಕೇಳೋದಕೈರ್ವಿಷ್ಣುಂ ಸ್ನಾಪಯೇತ್ತತ್ಫಲಂ ಶ್ರುಣು ।
ದಶಜನ್ಮಾರ್ಜಿತೈಃ ಪಾಪೈರ್ವಿಮುಕ್ತೋ ನೃಪಸತ್ತಮ ॥ ೩೭ ॥

ಶತದ್ವಯಕುಲೈರ್ಯುಕ್ತೋ ಮೋದತೇ ವಿಷ್ಣುನಾ ಸಹ ।
ಇಕ್ಷುತೋಯೇನ ದೇವೇಶಂ ಯಃ ಸ್ನಾಪಯತಿ ಭೂಪತೇ ॥ ೩೮ ॥

---

೩೩-೩೪. ಒಂದು ಬಳ್ಳ ಹಾಲಿನಿಂದ ಕೇಶವನಿಗೆ ಅಭಿಷೇಕ ಮಾಡಿಸುವವನು ಹತ್ತುಸಾವಿರ ಕುಲಗಳೊಡನೆ ವಿಷ್ಣುಸಾರೂಪ್ಯವೆಂಬ ಮುಕ್ತಿಯನ್ನು ಹೊಂದುತ್ತಾನೆ.

೩೪-೩೫. ದ್ವಾದಶಿಯ ದಿವಸ ಒಂದು ಬಳ್ಳ ತುಪ್ಪದಿಂದ ವಿಷ್ಣುವಿಗೆ ಅಭಿಷೇಕ ಮಾಡಿಸುವ ಮನುಷ್ಯನು ಒಂದು ಕೋಟಿ ಕುಲಗಳಿಂದ ಸಹಿತನಾಗಿ ಶ್ರೀ ಹರಿಯಸಾಯುಜ್ಯವೆಂಬ ಮುಕ್ತಿಯನ್ನು ಹೊಂದುತ್ತಾನೆ.

೩೫.೩೬. ಏಕಾದಶಿಯದಿವಸ ಪಂಚಾಮೃತಾಭಿಷೇಕ ಮಾಡಿಸುವವನು ಲಕ್ಷಕುಲಗಳಿಂದ ಯುಕ್ತನಾಗಿ ವಿಷ್ಣುಸಾಯುಜ್ಯಕ್ಕೆ ಭಾಗಿಯಾಗುತ್ತಾನೆ.

೩೬-೩೭. ರಾಜಶ್ರೇಷ್ಠನೇ ! ಏಕಾದಶೀ ಪೂರ್ಣಿಮಾ ಅಥವಾ ದ್ವಾದಶೀ ದಿನಗಳಲ್ಲಿ ಎಳನೀರಿನಿಂದ ವಿಷ್ಣುವಿಗೆ ಅಭಿಷೇಕಮಾಡಿಸುವವರಿಗೆ ಬರುವ ಪುಣ್ಯಫಲವನ್ನು ಕೇಳು.

೩೭-೩೮. ಅಂತಹವನು ಹತ್ತು ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿಕೊಂಡು ಇನ್ನೂರು ಕುಲಗಳ ಸಹಿತವಾಗಿ ಶ್ರೀ ವಿಷ್ಣುವಿನ ಸನ್ನಿಧಿಯಲ್ಲಿ ಸುಖಭಾಗಿಯಾಗುತ್ತಾನೆ.

ಕೇಶವಂ ಲಕ್ಷಪಿತೃಭಿಃ ಸಾರ್ಧಂ ವಿಷ್ಣುಪದಂ ವ್ರಜೇತ್ ।
ಪುಷ್ಪೋದಕೇನ ಗೋವಿಂದಂ ತಥಾ ಗಂಧೋದಕೇನ ಚ ॥ ೩೯ ॥

ಸ್ನಾಪಯಿತ್ವಾ ಹರಿಂ ಭಕ್ತ್ಯಾ ವೈಷ್ಣವಂ ಪದಮಾಪ್ನುಯಾತ್ ।
ಜಲೇನ ವಸ್ತ್ರಪೂತೇನ ಯಃ ಸ್ನಾಪಯತಿ ಮಾಧವಂ ॥ ೪೦ ॥

ಸರ್ವಪಾಪವಿನಿರ್ಮುಕ್ತೋ ವಿಷ್ಣುನಾ ಸಹ ಮೋದತೇ ।
ಕ್ಷೀರಾದ್ಯೈಃ ಸ್ನಾಪಯೇದ್ಯಸ್ತು ರವಿಸಂಕ್ರಮಣೇ ಹರಿಂ ॥ ೪೧ ॥

ಸ ವಸೇದ್ವಿಷ್ಣುಸದನೇ ತ್ರಿಸಪ್ತಪುರುಷೈಃ ಸಹ ।
ಶುಕ್ಲಪಕ್ಷೇ ಚತುರ್ದಶ್ಯಾಮಷ್ಟಮ್ಯಾಂ ಪೂರ್ಣಿಮಾದಿನೇ ॥ ೪೨ ॥

ಏಕಾದಶ್ಯಾಂ ಭಾನುವಾರೇ ದ್ವಾದಶ್ಯಾಂ ಪಂಚಮೀತಿಥೌ ।
ಸೋಮಸೂರ್ಯೋಪರಾಗೇ ಚ ಮನ್ವಾದಿಷು ಯುಗಾದಿಷು ॥ ೪೩ ॥

---

೩೮-೩೯. ಭೂಪತಿಯೇ! ಕಬ್ಬಿನ ಹಾಲಿನಿಂದ ದೇವಸ್ವಾಮಿಯಾದ ವಿಷ್ಣುವಿಗೆ ಅಭಿಷೇಕ ಮಾಡಿಸುವವನು ಒಂದು ಲಕ್ಷ ಪಿತೃಗಳ ಸಹಿತನಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ.

೩೯-೪೦. ಪುಷ್ಪರಸದಿಂದ ಅಥವಾ ಗಂಧೋದಕದಿಂದ ವೇದವೇದ್ಯನಾದ ಶ್ರೀಹರಿಗೆ ಅಭಿಷೇಕಮಾಡುವವನಿಗೆ ವಿಷ್ಣುಲೋಕವು ದೊರೆಯುತ್ತದೆ.

೪೦-೪೧. ಪರಿಶುದ್ಧವಾದ ಬಟ್ಟೆಯಲ್ಲಿ ಶೋಧಿಸಿದ ನೀರಿನಿಂದ ಲಕ್ಷ್ಮೀಪತಿಯಾದ ಶ್ರೀಹರಿಗೆ ಅಭಿಷೇಕಮಾಡಿಸುವವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಿ ವಿಷ್ಣುವಿನ ಅನುಗ್ರಹದಿಂದ ಸುಖಪಡುತ್ತಾನೆ.

೪೧-೪೨. ಸಂಕ್ರಮಣಪರ್ವಕಾಲದಲ್ಲಿ ಹಾಲು ಮುಂತಾದುವುಗಳಿಂದ ಶ್ರೀಹರಿಗೆ ಅಭಿಷೇಕ ಮಾಡಿಸುವವನು ಇಪ್ಪತ್ತೊಂದು ಪಿತೃಗಳ ಸಂಗಡ ವಿಷ್ಣುಲೋಕದಲ್ಲಿ ಸುಖವಾಗಿ ವಾಸಿಸುತ್ತಾನೆ.

೪೨-೪೭. ಶುಕ್ಲಪಕ್ಷದ ಚತುರ್ದಶೀ, ಅಷ್ಟಮೀ, ಪೂರ್ಣಿಮಾದಿನ, ಏಕಾದಶೀ, ಭಾನುವಾರ, ದ್ವಾದಶೀ, ಪಂಚಮೀ, ಚಂದ್ರಸೂರ್ಯಗ್ರಹಣಗಳು, ಮನ್ವಾದಿಗಳು, ಯುಗಾದಿಗಳು, ಅರ್ಧೋದಯ (ಅಮಾವಾಸ್ಯೆ, ಭಾನುವಾರ

**ಅರ್ಧೋದಯೇ ಚ ಸೂರ್ಯಸ್ಯ ಪುಷ್ಯಾರ್ಕೇ ರೋಹಿಣೀಬುಧೇ ।**
**ತಥೈವ ಶನಿರೋಹಿಣ್ಯಾಂ ಭೌಮಾಽಶ್ವಿನ್ಯಾಂ ತಥೈವ ಚ ॥ ೪೪ ॥**

**ಶನ್ಯಾಂ ಭೃಗುಮ್ಮೃಗೇ ಚೈವ ಭೃಗುರೇವತಿಸಂಗಮೇ ।**
**ತಥಾ ಬುಧಾನುರಾಧಾಯಾಂ ಶ್ರವಣಾರ್ಕೇ ತಥೈವ ಚ ॥ ೪೫ ॥**

**ತಥಾ ಚ ಸೋಮಶ್ರವಣೇ ಹಸ್ತಯುಕ್ತೇ ಬೃಹಸ್ಪತೌ ।**
**ಬುಧಾಷ್ಟಮ್ಯಾಂ ಬುಧಾಷಾಢೇ ಪುಣ್ಯೇ ಚಾನ್ಯೇ ದಿನೇ ತಥಾ ॥ ೪೬ ॥**

**ಸ್ನಾಪಯೇತ್ಪಯಸಾ ವಿಷ್ಣುಂ ಶಾಂತಿಮಾನ್ನಿಯತಃ ಶುಚಿಃ ।**
**ಘೃತೇನ ಮಧುನಾ ವಾಽಪಿ ದಧ್ನಾ ವಾ ತತ್ಫಲಂ ಶ್ರುಣು ॥ ೪೭ ॥**

**ಸರ್ವಯಜ್ಞಫಲಂ ಪ್ರಾಪ್ಯ ಸರ್ವಪಾಪವಿವರ್ಜಿತಃ ।**
**ವಸೇದ್ವಿಷ್ಣುಪುರೇ ಸಾರ್ಧಂ ತ್ರಿಸಪ್ತಪುರುಷೈರ್ನೃಪ ॥ ೪೮ ॥**

---

ವ್ಯತೀಪಾತ ಮತ್ತು ಶ್ರವಣನಕ್ಷತ್ರಗಳು ಸೇರಿರುವ ದಿನಕ್ಕೆ ಅರ್ಧೋದಯವೆಂದು ಹೆಸರು) ಪುಷ್ಯನಕ್ಷತ್ರಯುಕ್ತ ಭಾನುವಾರ, ರೋಹಿಣೀನಕ್ಷತ್ರಸಹಿತವಾದ ಬುಧ ವಾರ ಶನಿವಾರಗಳು, ಅಶ್ವಿನೀನಕ್ಷತ್ರ ಸಹಿತವಾದ ಮಂಗಳವಾರ ಶನಿವಾರಗಳು, ಮೃಗಶಿರನಕ್ಷತ್ರವುಳ್ಳ ಶುಕ್ರವಾರ, ಶುಕ್ರವಾರ ರೇವತಿಗಳ ಸಂಗಮದಿನ, ಬುಧ ವಾರಯುಕ್ತವಾದ ಅನೂರಾಧಾನಕ್ಷತ್ರ, ಶ್ರವಣನಕ್ಷತ್ರಯುತವಾದ ಭಾನುಸೋಮ ವಾರಗಳು, ಹಸ್ತನಕ್ಷತ್ರಸಹಿತ ಗುರುವಾರ, ಬುಧವಾರ ಸಹಿತವಾದ ಅಷ್ಟಮೀತಿಥಿ, ಬುಧವಾರಯುಕ್ತವಾದ ಆಷಾಢನಕ್ಷತ್ರಯೋಗವಿರುವ ದಿನ ಮತ್ತು ಇತರ ಪುಣ್ಯ ದಿನಗಳಲ್ಲಿಯೂ ಸಹ ಶಾಂತಿಸಂಪನ್ನನಾದ ಪರಿಶುದ್ಧಮನುಷ್ಯನು ನಿಯಮ ಪೂರ್ವಕವಾಗಿ ವಿಷ್ಣುದೇವನನ್ನು ಹಾಲು, ತುಪ್ಪ, ಜೇನುತುಪ್ಪ ಅಥವಾ ಮೊಸರು ಇವುಗಳಿಂದ ಅಭಿಷೇಕಮಾಡಿಸುವವನಿಗುಂಟಾಗುವ ಫಲವನ್ನು ಹೇಳು ವೆನು ಕೇಳು.

೪೮. ದೊರೆಯೇ! ಅಂತಹವನು ಸಕಲ ಯಜ್ಞಗಳ ಫಲವನ್ನು ಹೊಂದಿ ಸಕಲ ಪಾಪರಹಿತನಾಗಿ ಇಪ್ಪತ್ತೊಂದು ಪಿತೃಗಳೊಂದಿಗೆ ವಿಷ್ಣುಭವನ ದಲ್ಲಿ ವಾಸಿಸುವನು.

ತತ್ರೈವ ಜ್ಞಾನಮಾಸಾದ್ಯ ಯೋಗಿನಾಮಪಿ ದುರ್ಲಭಂ ।
ಮೋಕ್ಷಮಾಪ್ನೋತಿ ನೃಪತೇ ಪುನರಾವೃತ್ತಿದುರ್ಲಭಂ ॥ ೪೯ ॥

ಕೃಷ್ಣಪಕ್ಷೇ ಚತುರ್ದಶ್ಯಾಂ ಸೋಮವಾರೇ ಚ ಭೂಪತೇ ।
ಶಿವಂ ಸಂಸ್ನಾಪ್ಯ ದುಗ್ಧೇನ ಶಿವಸಾಯುಜ್ಯಮಾಪ್ನುಯಾತ್ ॥ ೫೦ ॥

ನಾರಿಕೇಳೋದಕೇನಾಪಿ ಶಿವಂ ಸಂಸ್ನಾಪ್ಯ ಭಕ್ತಿತಃ ।
ಅಷ್ಟಮ್ಯಾಮಿಂದುವಾರೇ ವಾ ಶಿವಸಾಯುಜ್ಯಮಾಪ್ನುಯಾತ್ ॥ ೫೧ ॥

ಶುಕ್ಲಪಕ್ಷೇ ಚತುರ್ದಶ್ಯಾಮಷ್ಟಮ್ಯಾಂ ವಾsಪಿ ಭೂಪತೇ ।
ಘೃತೇನ ಮಧುನಾ ಸ್ನಾಪ್ಯ ಶಿವಂ ತತ್ಸಮತಾಂ ವ್ರಜೇತ್ ॥ ೫೨ ॥

ತಿಲತೈಲೇನ ಸಂಸ್ನಾಪ್ಯ ವಿಷ್ಣುಂ ವಾ ಶಿವಮೇವ ಚ ।
ಸ ಯಾತಿ ತತ್ತತ್ಸಾರೂಪ್ಯಂ ಪಿತೃಭಿಃ ಸಹ ಸಪ್ತಭಿಃ ॥ ೫೩ ॥

---

೪೯. ಅಲ್ಲಿಯೇ ಯೋಗಿಗಳಿಗೂ ಹೊಂದಲಶಕ್ಯವಾದ ಜ್ಞಾನವನ್ನು ಹೊಂದಿ ಪುನರಾವೃತ್ತಿರಹಿತವಾದ ಮೋಕ್ಷವನ್ನು ಹೊಂದುತ್ತಾನೆ.

೫೦. ರಾಜನೇ! ಸೋಮವಾರ ಸಹಿತವಾದ ಕೃಷ್ಣಪಕ್ಷಚತುರ್ದಶೀ ದಿನದಲ್ಲಿ ಹಾಲಿನಿಂದ ರುದ್ರದೇವನಿಗೆ ಅಭಿಷೇಕ ಮಾಡಿದರೆ ಶಿವಸಾಯುಜ್ಯವು ಬರುತ್ತದೆ.

೫೧. ಅಷ್ಟಮಿ ಅಥವಾ ಸೋಮವಾರದ ದಿನ ಎಳನೀರಿನಿಂದ ರುದ್ರನಿಗೆ ಭಕ್ತಿಪೂರ್ವಕವಾಗಿ ಅಭಿಷೇಕ ಮಾಡಿದರೆ ಶಿವಸಾಯುಜ್ಯವು ದೊರೆಯುತ್ತದೆ.

೫೨. ಶುಕ್ಲಪಕ್ಷದ ಚತುರ್ದಶೀ ಅಥವಾ ಅಷ್ಟಮಿ ದಿನದಲ್ಲಿ ರುದ್ರನಿಗೆ ತುಪ್ಪ ಅಥವಾ ಜೇನುತುಪ್ಪಗಳಿಂದ ಅಭಿಷೇಕಮಾಡಿದರೆ ಶಿವಸಾಯುಜ್ಯ ಪದವಿಯು ಲಭಿಸುತ್ತದೆ.

೫೩. ವಿಷ್ಣು ಅಥವಾ ಶಿವನಿಗೆ ಎಳ್ಳೆಣ್ಣೆಯಿಂದ ಸ್ನಾನಮಾಡಿಸಿದರೆ ಅವರವರ ಭಕ್ತರು ಆಯಾಯಾ ದೇವತೆಗಳ ಸಾರೂಪ್ಯವನ್ನು ಏಳು ಪಿತೃಗಳ ಸಹಿತವಾಗಿ ಹೊಂದುತ್ತಾರೆ.

ಶಿವಮಿಕ್ಷುರಸೇನಾಪಿ ಯಃ ಸ್ನಾಪಯತಿ ಭಕ್ತಿತಃ ।
ಶಿವಲೋಕೇ ವಸೇತ್ಕಲ್ಪಂ ಸ ಸಪ್ತಪುರುಷೈಃ ಸಹ ॥ ೫೪ ॥

ಘೃತೇನ ಸ್ನಾಪಯೇಲ್ಲಿಂಗಮುತ್ಥಾನೇ ದ್ವಾದಶೀದಿನೇ ।
ಕ್ಷೀರೇಣ ವಾ ಮಹಾಭಾಗ ತತ್ಫಲಂ ಶೃಣು ಮದ್ಗಿರಾ ॥ ೫೫ ॥

ಜನ್ಮಾಯುತಕೃತೈಃ ಪಾಪೈರ್ವಿಮುಕ್ತೋ ಮನುಜೋ ನೃಪ ।
ಕುಲಕೋಟಿಸಮಾಯುಕ್ತಃ ಶಿವಸಾಯುಜ್ಯಮಾಪ್ನುಯಾತ್ ॥ ೫೬ ॥

ಸಂಪೂಜ್ಯ ಗಂಧಕುಸುಮೈಃ ವಿಷ್ಣುಂ ವಿಷ್ಣುತಿಥೌ ನೃಪ ।
ಜನ್ಮಾಯುತಾರ್ಜಿತೈಃ ಪಾಪೈರ್ಮುಕ್ತೋ ವ್ರಜತಿ ತತ್ಪದಂ ॥ ೫೭ ॥

ಪದ್ಮಪುಷ್ಪೇಣ ಯೋ ವಿಷ್ಣುಂ ಶಿವಂ ವಾ ಪೂಜಯೇನ್ನರಃ ।
ಸ ಯಾತಿ ವಿಷ್ಣುಭವನಂ ಕುಲಕೋಟಿಸಮನ್ವಿತಃ ॥ ೫೮ ॥

---

೫೪. ಕಬ್ಬಿನಹಾಲಿನಿಂದ ಭಕ್ತಿಪೂರ್ವಕವಾಗಿ ಶಿವನಿಗೆ ಅಭಿಷೇಕ ಮಾಡುವವನು ಏಳು ಪಿತೃಗಳ ಸಹಿತನಾಗಿ ಶಿವಲೋಕದಲ್ಲಿ ವಾಸಿಸುವನು.

೫೫. ಉತ್ಥಾನದ್ವಾದಶೀ ದಿನದಲ್ಲಿ ತುಪ್ಪ ಅಥವಾ ಹಾಲಿನಿಂದ ಶಿವನಿಗೆ ಅಭಿಷೇಕಮಾಡುವುದರ ಫಲವನ್ನು ಹೇಳುತ್ತೇನೆ ಕೇಳು.

೫೬. ದೊರೆಯೇ ! ಅಂತಹವನು ಹತ್ತುಸಾವಿರ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಪರಿಹರಿಸಿಕೊಂಡು ಕೋಟಿಕುಲಸಹಿತನಾಗಿ ಶಿವಸಾಯುಜ್ಯವನ್ನು ಹೊಂದುತ್ತಾನೆ.

೫೭. ವಿಷ್ಣುತಿಥಿ ಎಂದರೆ ಏಕಾದಶ್ಯಾದಿಗಳಲ್ಲಿ ಗಂಧ ಪುಷ್ಪಗಳಿಂದ ವಿಷ್ಣುವನ್ನು ಪೂಜಿಸಿದರೆ ಅವನು ಹತ್ತುಸಾವಿರಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಕಳೆದುಕೊಂಡು ವಿಷ್ಣುಲೋಕಕ್ಕೆ ಹೋಗುತ್ತಾನೆ.

೫೮. ಕಮಲಪುಷ್ಪಗಳಿಂದ ವಿಷ್ಣು ಅಥವಾ ಶಿವನನ್ನು ಪೂಜಿಸುವವನು ಕೋಟಿಕುಲಸಹಿತನಾಗಿ ವಿಷ್ಣುಮಂದಿರಕ್ಕೆ ಹೋಗುತ್ತಾನೆ.

ಹರಿಂ ಚ ಕೇತಕೀಪುಷ್ಪೈಃ ಶಿವಂ ಧತ್ತೂರಜೈರ್ನಿಶಿ ।
ಸಂಪೂಜ್ಯ ಪಾಪನಿರ್ಮುಕ್ತೋ ವಸೇದ್ವಿಷ್ಣುಪುರೇ ಯುಗಂ ॥ ೫೯ ॥

ಹರಿಂ ತು ಚಾಂಪಕೈಃ ಪುಷ್ಪೈರರ್ಕಪುಷ್ಪೈಶ್ಚ ಶಂಕರಂ ।
ಸಮಭ್ಯರ್ಚ್ಯ ಮಹಾರಾಜ ತತ್ತತ್ಸಾಲೋಕ್ಯತಾಮಿಯಾತ್ ॥ ೬೦ ॥

ಶಂಕರಸ್ಯಾಥವಾ ವಿಷ್ಣೋರ್ಘೃತಯುಕ್ತಂ ಚ ಗುಗ್ಗುಲಂ ।
ದತ್ವಾ ಧೂಪಂ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೬೧ ॥

ತಿಲತೈಲಾನ್ವಿತಂ ದೀಪಂ ವಿಷ್ಣೋರ್ವಾ ಶಂಕರಸ್ಯ ವಾ ।
ದತ್ವಾ ನರಃ ಸರ್ವಕಾಮಾನ್ಸಂಪ್ರಾಪ್ನೋತಿ ನೃಪೋತ್ತಮ ॥ ೬೨ ॥

ಘೃತೇನ ದೀಪಂ ಯೋ ದದ್ಯಾತ್ ಶಂಕರಾಯಾಥ ವಿಷ್ಣವೇ ।
ಸ ಮುಕ್ತಃ ಸರ್ವಪಾಪೇಭ್ಯೋ ಗಂಗಾಸ್ನಾನಫಲಂ ಲಭೇತ್ ॥ ೬೩ ॥

---

೫೯. ಕೇತಕೀ ಹೂವಿನಿಂದ ವಿಷ್ಣುವನ್ನೂ, ರಾತ್ರಿಕಾಲದಲ್ಲಿ ದತ್ತೂರಿ ಹೂವಿನಿಂದ ಶಿವನನ್ನೂ ಪೂಜಿಸಿದರೆ ಪಾಪ ಪರಿಹಾರವಾಗಿ ಒಂದು ಯುಗ ಪರ್ಯಂತವಾಗಿ ವಿಷ್ಣುಲೋಕದಲ್ಲಿ ವಾಸವು ಲಭಿಸುತ್ತದೆ.

೬೦. ಸಂಪಿಗೆ ಹೂವಿನಿಂದ ಹರಿಯನ್ನೂ, ಎಕ್ಕದಹೂವಿನಿಂದ ಶಿವನನ್ನೂ ಪೂಜಿಸಿದರೆ ಆಯಾಯಾ ದೇವತೆಗಳ ಭಕ್ತರಿಗೆ ಅವರವರ ಸಾಲೋಕ್ಯವು ಲಭಿಸುತ್ತದೆ.

೬೧. ರುದ್ರ ಅಥವಾ ವಿಷ್ಣುವಿಗೆ ತುಪ್ಪದಿಂದ ಸಹಿತವಾದ ಗುಗ್ಗುಲ ಧೂಪವನ್ನು ಸಮರ್ಪಿಸುವ ಮನುಷ್ಯನು ಸಕಲ ಪಾಪವಿಮೋಚನೆಯನ್ನು ಹೊಂದುತ್ತಾನೆ.

೬೨. ರಾಜಶ್ರೇಷ್ಠನೇ! ವಿಷ್ಣು ಅಥವಾ ಶಂಕರನ ಸನ್ನಿಧಿಯಲ್ಲಿ ಎಳ್ಳೆಣ್ಣೆಯ ದೀಪವನ್ನು ಹಚ್ಚಿದರೆ ಸಕಲ ಇಷ್ಟಾರ್ಥಗಳೂ ದೊರೆಯುತ್ತವೆ.

೬೩. ರುದ್ರ ಅಥವಾ ಹರಿಗೆ ತುಪ್ಪದ ದೀಪವನ್ನು ಹಚ್ಚುವವನು ಸಕಲ ಪಾಪಗಳನ್ನೂ ಹೋಗಲಾಡಿಸಿಕೊಂಡು ಗಂಗಾನದಿಯಲ್ಲಿ ಸ್ನಾನಮಾಡಿದ ಫಲವನ್ನು ಹೊಂದುತ್ತಾನೆ.

ಗ್ರಾಮ್ಯೇನ ವಾSಪಿ ರಾಜನ್ನ ನ್ಯೇನ ವಾ ಪುನಃ ।
ದೀಪಂ ದತ್ವಾ ಮಹಾವಿಷ್ಣೋಃ ಶಿವಸ್ಯಾಪಿ ಫಲಂ ಶ್ರುಣು ॥ ೬೪ ॥

ಸರ್ವಪಾಪವಿನಿರ್ಮುಕ್ತಃ ಸರ್ವೈಶ್ವರ್ಯಸಮನ್ವಿತಃ ।
ತತ್ತತ್ಸಾಲೋಕ್ಯಮಾಪ್ನೋತಿ ತ್ರಿಃಸಪ್ತಪುರುಷಾನ್ವಿತಃ ॥ ೬೫ ॥

ಯದ್ಯದಿಷ್ಟತಮಂ ಭೋಜ್ಯಂ ತತ್ತದೀಶಾಯ ವಿಷ್ಣವೇ ।
ದತ್ವಾ ತತ್ತತ್ಪದಂ ಯಾತಿ ಚತ್ವಾರಿಂಶತ್ಕುಲಾನ್ವಿತಃ ॥ ೬೬ ॥

ಯದ್ಯದಿಷ್ಟತಮಂ ವಸ್ತು ತತ್ತದ್ವಿಪ್ರಾಯ ದಾಪಯೇತ್ ।
ಸ ಯಾತಿ ವಿಷ್ಣುಭವನಂ ಪುನರಾವೃತ್ತಿದುರ್ಲಭಂ ॥ ೬೭ ॥

ಭ್ರೂಣಹಾ ಸ್ವರ್ಣದಾನೇನ ಶುದ್ಧೋ ಭವತಿ ಭೂಪತೇ ।
ಅನ್ನತೋಯಸಮಂ ದಾನಂ ನ ಭೂತಂ ನ ಭವಿಷ್ಯತಿ ॥ ೬೮ ॥

---

೬೪. ರಾಜನೇ! ಹುಚ್ಚೆಳ್ಳೆಣ್ಣೆ ಅಥವಾ ಅಚ್ಚೆಳ್ಳೆಣ್ಣೆ ಅಥವಾ ಬೇರೆ ಎಣ್ಣೆ ಇವುಗಳಲ್ಲಿ ಯಾವುದಾದರೊಂದರ ದೀಪವನ್ನು ಮಹಾವಿಷ್ಣು ಅಥವಾ ಶಿವನ ಸನ್ನಿಧಿಯಲ್ಲಿ ಹಚ್ಚುವವರಿಗೆ ಬರುವ ಫಲವನ್ನು ಹೇಳುತ್ತೇನೆ ಕೇಳು.

೬೫. ಅಂತಹವನು ಸಕಲ ಪಾಪಗಳನ್ನೂ ಹೋಗಲಾಡಿಸಿಕೊಂಡು ಸಕಲ ಸಂಪತ್ತುಗಳಿಂದ ಕೂಡಿ ಇಪ್ಪತ್ತೊಂದು ಕುಲದೊಂದಿಗೆ ಆಯಾಯ ದೇವತೆಗಳ ಸಾರೂಪ್ಯವನ್ನು ಹೊಂದುವನು.

೬೬. ಪ್ರಿಯತಮವಾದ ಆಹಾರವಸ್ತುವನ್ನು ಈಶ್ವರ ಅಥವಾ ವಿಷ್ಣುವಿಗೆ ಕೊಟ್ಟರೆ ನಲವತ್ತು ಕುಲಗಳ ಸಹಿತವಾಗಿ ಆಯಾಯಾ ದೇವತೆಗಳ ಲೋಕಕ್ಕೆ ಹೋಗುತ್ತಾನೆ.

೬೭. ಅತ್ಯಂತ ಇಷ್ಟವಾದ ಪದಾರ್ಥವನ್ನು ಬ್ರಾಹ್ಮಣನಿಗೆ ದಾನ ಮಾಡುವವನು ಪುನಃ ಸಂಸಾರಕ್ಕೆ ಹಿಂದಿರುಗಿಸದಿರುವ ವಿಷ್ಣುಲೋಕಕ್ಕೆ ಹೋಗಿ ಸುಖವಾಗಿರುತ್ತಾನೆ.

೬೮. ರಾಜನೇ ? ಗರ್ಭದಲ್ಲಿರುವ ಶಿಶುವನ್ನು ಸಂಹರಿಸಿದ ಮಹಾಪಾತಕಿಯೂ ಸಹ ಭಂಗಾರದಾನಮಾಡುವುದರಿಂದ ಶುದ್ಧನಾಗುತ್ತಾನೆ. ಅನ್ನೋ

ಅನ್ನದಃ ಪ್ರಾಣದಃ ಪ್ರೋಕ್ತಃ ಪ್ರಾಣದಶ್ಚಾಪಿ ಸರ್ವದಃ ।
ಸರ್ವದಾನಫಲಂ ಯಸ್ಮಾದನ್ನದಸ್ಯ ನೃಪೋತ್ತಮ ॥ ೬೯ ॥

ಅನ್ನದೋ ಬ್ರಹ್ಮಸದನಂ ಯಾತಿ ವಂಶಾಯುತಾನ್ವಿತಃ ।
ನ ತಸ್ಯ ಪುನರಾವೃತ್ತಿರಿತಿ ಶಾಸ್ತ್ರೇಷು ನಿಶ್ಚಿತಂ ॥ ೭೦ ॥

ಸದ್ಯಸ್ತುಷ್ಟಿಕರಂ ಜ್ಞೇಯಂ ಜಲದಾನಂ ಯತೋಽಧಿಕಂ ।
ಅನ್ನದಾನಾನ್ನೃಪಶ್ರೇಷ್ಠ ನಿರ್ದಿಷ್ಟಂ ಬ್ರಹ್ಮವಾದಿಭಿಃ ॥ ೭೧ ॥

ಮಹಾಪಾತಕಯುಕ್ತೋವಾ ಯುಕ್ತೋ ವಾಽಪ್ಯುಪಪಾತಕೈಃ ।
ಜಲದೋ ಮುಚ್ಯತೇ ತೇಭ್ಯ ಇತ್ಯಾಹ ಕಮಲೋದ್ಭವಃ ॥ ೭೨ ॥

---

ದಕದಾನಕ್ಕೆ ಸಮಾನವಾದ ದಾನವು ಹಿಂದೆ ಇರಲಿಲ್ಲ, ಮುಂದೆಯೂ ಇರುವುದಿಲ್ಲ.

೬೯. ರಾಜೋತ್ತಮನೇ! ಅನ್ನದಾನ ಮಾಡುವವನಿಗೆ ಸಕಲ ದಾನಗಳ ಫಲವೂ ಬರುವುದರಿಂದ ಅನ್ನದಾನಮಾಡುವವನು ಪ್ರಾಣದಾನಿಯು, ಮುಖ್ಯವಾದ ಪ್ರಾಣವನ್ನೇ ದಾನಮಾಡಿದವನು ಸಕಲವನ್ನೂ ದಾನಮಾಡಿದವನೆಂದು ಉಕ್ತವಾಗಿದೆ.

೭೦. ಅನ್ನದಾನ ಮಾಡಿದವನು ಹತ್ತುಸಾವಿರ ಕುಲಗಳಿಂದ ಸಹಿತನಾಗಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಅವನಿಗೆ ಪುನಃ ಸಂಸಾರಬಂಧನವುಂಟಾಗುವುದಿಲ್ಲವೆಂದು ಶಾಸ್ತ್ರಗಳಲ್ಲಿ ನಿರ್ಣಯಿಸಲ್ಪಟ್ಟಿದೆ.

೭೧. ಉದಕದಾನವು ತಕ್ಷಣದಲ್ಲಿಯೇ ತೃಪ್ತಿಯನ್ನುಂಟುಮಾಡುವುದರಿಂದ ಅದು ಅನ್ನದಾನಕ್ಕಿಂತಲೂ ಹೆಚ್ಚಾದುದೆಂದು ಬ್ರಹ್ಮಜ್ಞಾನಿಗಳಿಂದ ನಿರೂಪಿಸಲ್ಪಟ್ಟದೆ.

೭೨. ಮಹಾಪಾತಕ ಅಥವಾ ಉಪಪಾತಕ (ಸಾಮಾನ್ಯಪಾಪ) ಗಳನ್ನು ಮಾಡಿರುವವನೂ ಸಹ ಉದಕದಾನಮಾಡಿದರೆ ಆ ಪಾಪವೆಲ್ಲವೂ ಪರಿಹಾರವಾಗುತ್ತದೆಂಬುದಾಗಿ ಬ್ರಹ್ಮನು ಹೇಳುತ್ತಾನೆ.

ಶರೀರಮನ್ನಜಂ ಪ್ರಾಹುಃ ಪ್ರಾಣಮನ್ನಂ ಪ್ರಚಕ್ಷತೇ ।
ತಸ್ಮಾದನ್ನಪ್ರದೋ ಜ್ಞೇಯಃ ಪ್ರಾಣದಃ ಪೃಥಿವೀಪತೇ ॥ ೭೩ ॥

ಸದ್ಯಸ್ತುಷ್ಟಿಕರಂ ದಾನಂ ಸರ್ವಕಾಮಫಲಪ್ರದಂ ।
ತಸ್ಮಾದನ್ನಸಮಂ ದಾನಂ ನಾಸ್ತಿ ಭೂಪಾಲ ಭೂತಲೇ ॥ ೭೪ ॥

ಅನ್ನದಸ್ಯ ಕುಲೇ ಜಾತಾ ಆಸಹಸ್ರಂ ನೃಪೋತ್ತಮ ।
ನರಕಂ ತೇ ನ ಪಶ್ಯಂತಿ ತಸ್ಮಾದನ್ನಪ್ರದೋ ವರಃ ॥ ೭೫ ॥

ಪಾದಾಭ್ಯಂಗಂ ಭಕ್ತಿಯುಕ್ತೋ ಯೋಽತಿಥೇಃ ಕುರುತೇ ನರಃ ।
ಸ ಸ್ನಾತಃ ಸರ್ವತೀರ್ಥೇಷು ಗಂಗಾಸ್ನಾನಪುರಸ್ಸರಂ ॥ ೭೬ ॥

ತೈಲಾಭ್ಯಂಗಂ ಮಹಾರಾಜ ಬ್ರಾಹ್ಮಣಾನಾಂ ಕರೋತಿ ಯಃ ।
ಸ ಸ್ನಾತೋಽಬ್ದಶತಂ ಸಾಗ್ರಂ ಗಂಗಾಯಾಂ ನಾತ್ರ ಸಂಶಯಃ ॥ ೭೭ ॥

---

೭೩. ಶರೀರವು ಅನ್ನದಿಂದ ಹುಟ್ಟುತ್ತದೆಂದೂ ಅನ್ನವೇ ಪ್ರಾಣವೆಂತಲೂ ಜ್ಞಾನಿಗಳು ಹೇಳಿರುವುದರಿಂದ ದೊರೆಯೇ! ಅನ್ನದಾನಿಯೇ ಪ್ರಾಣದಾನಿ ಎಂದು ತಿಳಿಯಬೇಕು.

೭೪. ತಕ್ಷಣದಲ್ಲಿಯೇ ತೃಪ್ತಿಯನ್ನುಂಟುಮಾಡುವುದೂ ಮತ್ತು ಸಕಲ ಇಷ್ಟಾರ್ಥಪ್ರದವೂ ಆಗಿರುವುದರಿಂದ ಎಲೈ ರಾಜನೇ ಈ ಭೂಲೋಕದಲ್ಲಿ ಅನ್ನದಾನಕ್ಕೆ ಸಮಾನವಾದ ಇನ್ನೊಂದು ದಾನವಿಲ್ಲ.

೭೫. ರಾಜಶ್ರೇಷ್ಠನೇ! ಅನ್ನದಾನಿಗಳ ವಂಶಪರಂಪರೆಯಲ್ಲಿ ಸಾವಿರ ಪರ್ಯಂತವಾದ ಜನರು ನರಕವನ್ನು ನೋಡುವುದಿಲ್ಲವಾದ ಕಾರಣ ಅನ್ನದಾನಿಯು ಶ್ರೇಷ್ಠನು.

೭೬. ಮಹಾರಾಜನೇ! ಅತಿಥಿಗೆ ಭಕ್ತಿಯಿಂದ ಪಾದಾಭ್ಯಂಗವನ್ನು ಮಾಡಿಸುವವನಿಗೆ ಗಂಗೆಯೇ ಮುಂತಾದ ಸಕಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವು ಲಭಿಸುತ್ತದೆ.

೭೭. ಬ್ರಾಹ್ಮಣರಿಗೆ ತೈಲಾಭ್ಯಂಗ ಮಾಡಿಸುವವನಿಗೆ (ಎರೆಯುವವನಿಗೆ) ಒಂದುನೂರುವರ್ಷಗಳ ಕಾಲ ಗಂಗೆಯಲ್ಲಿ ಸ್ನಾನಮಾಡಿದ ಪುಣ್ಯವು ಬರುತ್ತದೆ. ಸಂದೇಹವಿಲ್ಲ.

ರೋಗಿತಾನ್ಬ್ರಾಹ್ಮಣಾನ್ಯಸ್ತು ಪ್ರೇಮ್ಣಾ ರಕ್ಷತಿ ರಕ್ಷಕೇ ।
ಸ ಕೋಟಿಕುಲಸಂಯುಕ್ತೋ ವಸೇದ್ಬ್ರಹ್ಮಪುರೇ ಯುಗಂ ॥ ೭೮ ॥

ಯೋ ರಕ್ಷೇತ್ಪೃಥಿವೀಪಾಲ ಏಕಂ ವಾ ರೋಗಿಣಂ ನರಂ ।
ತಸ್ಯ ವಿಷ್ಣುಃ ಪ್ರಸನ್ನಾತ್ಮಾ ಸರ್ವಾನ್ಕಾಮಾನ್ಪ್ರಯಚ್ಛತಿ ॥ ೭೯ ॥

ಮನಸಾ ಕರ್ಮಣಾ ವಾಚಾ ಯೋ ರಕ್ಷೇದಾಮಯಾನ್ವಿತಂ ।
ಸರ್ವಾನ್ಕಾಮಾನವಾಪ್ನೋತಿ ಸರ್ವಪಾಪವಿವರ್ಜಿತಃ ॥ ೮೦ ॥

ಯೋ ದದಾತಿ ಮಹೀಪಾಲ ನಿವಾಸಂ ಬ್ರಾಹ್ಮಣಾಯ ವೈ ।
ತಸ್ಯ ಪ್ರಸನ್ನೋ ದೇವೇಶಃ ಸ್ವಲೋಕಂ ಸಂಪ್ರಯಚ್ಛತಿ ॥ ೮೧ ॥

ಬ್ರಾಹ್ಮಣಾಯ ಬ್ರಹ್ಮವಿದೇ ಯೋ ದದ್ಯಾದ್ಗಾಂ ಪಯಸ್ವಿನೀಂ ।
ಸ ಯಾತಿ ಬ್ರಹ್ಮಸದನಮನ್ಯೇಷಾಮತಿದುರ್ಲಭಂ ॥ ೮೨ ॥

---

೭೮. ಕ್ಷಿತಿಪಾಲನೇ ! ಕಾಯಿಲೆಯಾಗಿ ನರಳುತ್ತಿರುವ ಬ್ರಾಹ್ಮಣರನ್ನು ವಿಶ್ವಾಸದಿಂದ ಕಾಪಾಡುವವನು ಒಂದುಕೋಟಿಕುಲಸಹಿತವಾಗಿ ಒಂದು ಯುಗ ಪರ್ಯಂತ ಬ್ರಹ್ಮಲೋಕದಲ್ಲಿ ವಾಸಿಸುತ್ತಾನೆ.

೭೯. ಭೂಮಿಪಾಲನೇ ! ರೋಗದಿಂದ ನರಳುತ್ತಿರುವ ಒಬ್ಬ ಮನುಷ್ಯನನ್ನಾದರೂ ಕಾಪಾಡಿದರೆ ಅಂತಹವನಿಗೆ ವಿಷ್ಣುವು ಪ್ರಸನ್ನನಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತಾನೆ.

೮೦. ಮಾನಸಿಕವಾಗಿಯೂ, ಕ್ರಿಯೆಯಿಂದಲೂ, ಉಪಚಾರೋಕ್ತಿಗಳಿಂದಲೂ ಸಹ ಕಾಯಿಲೆಯಾಗಿರುವವನನ್ನು ರಕ್ಷಿಸುವವನು ಸಕಲ ಪಾಪಗಳನ್ನೂ ಹೋಗಲಾಡಿಸಿಕೊಂಡು ಸಕಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.

೮೧. ಭೂಪಾಲನೇ ! ಬ್ರಾಹ್ಮಣನಿಗೆ ಮನೆಯನ್ನು ದಾನಮಾಡುವವನಿಗೆ ದೇವಸ್ವಾಮಿಯಾದ ವಿಷ್ಣುವು ಪ್ರಸನ್ನನಾಗಿ ತನ್ನ ಲೋಕದಲ್ಲಿ ಸುಖನಿವಾಸವನ್ನು ಕೊಡುತ್ತಾನೆ.

೮೨. ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಿಗೆ ಹಾಲುಕರೆಯುವ ಹಸುವನ್ನು ದಾನಮಾಡುವವನು ಇತರರಿಂದ ಸಂಪಾದಿಸಲಶಕ್ಯವಾದ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

ಅನ್ಯೇಭ್ಯಃ ಪ್ರತಿಗೃಹ್ಯಾಪಿ ಯೋ ದದ್ಯಾದ್ಗಾಂ ಪಯಸ್ವಿನೀಂ।
ತಸ್ಯ ಪುಣ್ಯಫಲಂ ವಕ್ತುಂ ನಾಹಂ ಶಕ್ತೋಽಸ್ಮಿ ಪಂಡಿತ ॥ ೮೩ ॥

ಕಪಿಲಾಂ ವೇದವಿದುಷೇ ಯೋ ದದಾತಿ ಪಯಸ್ವಿನೀಂ ।
ಸ ಏವ ರುದ್ರೋ ಭೂಪಾಲ ಸರ್ವಪಾಪವಿವರ್ಜಿತಃ ॥ ೮೪ ॥

ವಿಪ್ರಾಯ ವೇದವಿದುಷೇ ದದಾತ್ಯುಭಯತೋ ಮುಖೀಂ ।
ಯಸ್ತಸ್ಯ ಪುಣ್ಯಂ ಸಂಖ್ಯಾತುಂ ನ ಶಕ್ತೋಽಬ್ದಶತೈರಪಿ ॥ ೮೫ ॥

ತಸ್ಯ ಪುಣ್ಯಫಲಂ ರಾಜನ್ಶ್ರುಣು ವಕ್ಷ್ಯಾಮಿ ತತ್ವತಃ ।
ಏಕತಃ ಕ್ರತವಃ ಸರ್ವೇ ಸಮಗ್ರವರದಕ್ಷಿಣಾಃ ॥ ೮೬ ॥

ಏಕತೋ ಭಯಭೀತಸ್ಯ ಪ್ರಾಣಿನಃ ಪ್ರಾಣರಕ್ಷಣಂ ।
ಸಂರಕ್ಷತಿ ಮಹೀಪಾಲ ಯೋ ವಿಪ್ರಂ ಭಯವಿಹ್ವಲಂ ॥ ೮೭ ॥

---

೮೩. ಜ್ಞಾನಿಯೇ! ಸ್ವಂತವಾಗಿ ಹಸುವನ್ನು ಕೊಡಲು ಶಕ್ತಿಯಿಲ್ಲದವನು ಇತರರಿಂದ ದಾನ ತೆಗೆದುಕೊಂಡಾದರೂ ಹಾಲು ಕರೆಯುವ ಗೋವನ್ನು ದಾನಮಾಡಿದರೆ ಅವನಿಗೆ ಬರುವ ಪುಣ್ಯಫಲವನ್ನು ಹೇಳಲು ನಾನು ಸಮರ್ಥನಲ್ಲ.

೮೪. ವೇದಾರ್ಥಜ್ಞಾನಿಯಾದ ಬ್ರಾಹ್ಮಣನಿಗೆ ಹಾಲು ಕರೆಯುವ ಕಪಿಲಗೋವನ್ನು ದಾನಮಾಡುವವನು ವಿಶೇಷವಾಗಿ ಈಶ್ವರಾನುಗ್ರಹಕ್ಕೆ ಪಾತ್ರನಾಗಿ ಸಕಲಪಾಪಗಳನ್ನೂ ಹೋಗಲಾಡಿಸಿಕೊಳ್ಳುವನು.

೮೫. ವೇದಾರ್ಥಜ್ಞಾನಿಯಾದ ಬ್ರಾಹ್ಮಣನಿಗೆ ಉಭಯತೋಮುಖ ಗೋವನ್ನು ದಾನಮಾಡುವವನ ಪುಣ್ಯವನ್ನು ಗಣಿಸಲು ನೂರಾರುವರ್ಷಗಳಾದಾಗ್ಯೂ ಸಾಧ್ಯವಾಗುವುದಿಲ್ಲ.

೮೬–೮೭. ರಾಜನೇ! ಅಂತಹ ದಾನಿಯ ಪುಣ್ಯಫಲವನ್ನು ಯಥಾವತ್ತಾಗಿ ಹೇಳುತ್ತೇನೆ ಕೇಳು. ಸರ್ವಸ್ವವನ್ನೂ ದಕ್ಷಿಣೆಕೊಟ್ಟು ಸಕಲ ಯಾಗಗಳನ್ನೂ ಒಟ್ಟಿಗೆ ಮಾಡುವುದರಿಂದ ಮತ್ತು ಭಯಪಟ್ಟಿರುವ ಪ್ರಾಣಿಗಳಿಗೆ

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ವಸ್ತ್ರದೋ ರುದ್ರಭವನಂ ಕನ್ಯಾದೋ ಬ್ರಹ್ಮಣಃ ಪದಂ ॥ ೮೮ ॥

ಹೇಮದೋ ವಿಷ್ಣುಭವನಂ ಪ್ರಯಾತಿ ಸ್ವಕುಲಾನ್ವಿತಃ ।
ಯಸ್ತು ಕನ್ಯಾಮಲಂಕೃತ್ಯ ದದಾತ್ಯಧ್ಯಾತ್ಮವೇದಿನೇ ॥ ೮೯ ॥

ಶತವಂಶಸಮಾಯುಕ್ತಃ ಸ ವ್ರಜೇದ್ಬ್ರಹ್ಮಣಃ ಪದಂ ।
ಕಾರ್ತಿಕ್ಯಾಂ ಪೌರ್ಣಮಾಸ್ಯಾಂ ವಾ ಆಷಾಢ್ಯಾಂ ವಾಽಪಿ ಭೂಪತೇ ॥ ೯೦ ॥

ವೃಷಭಂ ಶಿವತುಷ್ಟ್ಯರ್ಥಂ ಉತ್ಸೃಜೇತ್ತತ್ಫಲಂ ಶ್ರುಣು ।
ಸಪ್ತಜನ್ಮಾರ್ಜಿತೈಃ ಪಾಪೈರ್ವಿಮುಕ್ತೋ ರುದ್ರರೂಪಭಾಕ್ ॥ ೯೧ ॥

---

ಭಯಪರಿಹಾರಮಾಡಿ ಪ್ರಾಣರಕ್ಷಣೆಯನ್ನು ಮಾಡುವುದರಿಂದಲೂ ಸಹ ಉಂಟಾಗತಕ್ಕ ಪುಣ್ಯಫಲವು ಅಂತಹ ಗೋದಾನ ಮಾಡುವವನಿಗೆ ಲಭಿಸುತ್ತದೆ.

೮೭-೮೮. ಭೀತಿಯಿಂದ ವ್ಯಗ್ರಚಿತ್ತನಾಗಿ ನಡುಗುತ್ತಿರುವ ಬ್ರಾಹ್ಮಣನನ್ನು ಸಂರಕ್ಷಿಸುವವನು ಎಲ್ಲಾ ಯಜ್ಞಗಳಲ್ಲಿಯೂ ದೀಕ್ಷೆಯನ್ನು ವಹಿಸಿ ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಪಡೆಯುತ್ತಾನೆ.

೮೮-೮೯. ಬಟ್ಟೆಯನ್ನು ದಾನಮಾಡುವವನು ಶಿವಲೋಕವನ್ನೂ ಕನ್ಯಾದಾನಿಯು ಬ್ರಹ್ಮಲೋಕವನ್ನೂ ಭಂಗಾರದಾನಮಾಡುವವನು ವಿಷ್ಣುಲೋಕವನ್ನೂ ತನ್ನ ವಂಶಪರಂಪರೆಯ ಸಹಿತವಾಗಿ ಹೊಂದುತ್ತಾನೆ.

೮೯-೯೦. ವೇದಾಂತತತ್ತ್ವಜ್ಞಾನಿಗೆ ಸಾಲಂಕೃತಕನ್ಯಾದಾನವನ್ನು ಮಾಡುವವನು ನೂರು ಕುಲಗಳಿಂದ ಕೂಡಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ.

೯೦-೯೧. ರಾಜನೇ! ಕಾರ್ತಿಕ ಮಾಸದ ಪೂರ್ಣಿಮೆ ಅಥವಾ ಆಷಾಢಮಾಸದ ಪೂರ್ಣಿಮೆಯ ದಿವಸ ಶಿವಪ್ರೀತ್ಯರ್ಥವಾಗಿ ಗೂಳಿಯನ್ನು ಬಿಡುವುದರ ಫಲವನ್ನು ಹೇಳುತ್ತೇನೆ ಕೇಳು.

ಕುಲಸಪ್ತತಿಸಂಯುಕ್ತೋ ರುದ್ರೇಣ ಸಹ ಮೋದತೇ ।
ಶಿವಲಿಂಗಾಂಕಿತಂ ಕೃತ್ವಾ ಮಹಿಷಂ ಯಃ ಸಮುತ್ಸೃಜೇತ್ ॥ ೯೨ ॥

ನ ತಸ್ಯ ಯಾತನಾಲೋಕದರ್ಶನಂ ಭವತಿ ಪ್ರಭೋ ।
ತಾಂಬೂಲದಾನಂ ಯಃ ಕುರ್ಯಾಚ್ಛಕ್ತಿತೋ ನೃಪಸತ್ತಮ ॥ ೯೩ ॥

ತಸ್ಯ ವಿಷ್ಣುಃ ಪ್ರಸನ್ನಾತ್ಮಾ ದದಾತ್ಯಾಯುರ್ಯಶಃ ಶ್ರಿಯಂ ।
ಕ್ಷೀರದೋ ಘೃತದಶ್ಚೈವ ಮಧುದೋ ದಧಿದಸ್ತಥಾ ॥ ೯೪ ॥

ದಿವ್ಯಾಬ್ದಾಯುತಪರ್ಯಂತಂ ಸ್ವರ್ಗಲೋಕೇ ಮಹೀಯತೇ ।
ಪ್ರಯಾತಿ ಬ್ರಹ್ಮಸದನಮಿಕ್ಷುದಾತಾ ನೃಪೋತ್ತಮ ॥ ೯೫ ॥

---

೯೧-೯೨. ಅಂತಹವನು ಏಳು ಜನ್ಮಗಳಲ್ಲಿ ಸಂಪಾದಿಸಿದ ಪಾಪವನ್ನು ಕಳೆದುಕೊಂಡು ರುದ್ರನಿಗೆ ಸಮಾನವಾದ ರೂಪವನ್ನು ಧರಿಸಿಕೊಂಡು ರುದ್ರದೇವರ ಅನುಗ್ರಹದಿಂದ ಎಪ್ಪತ್ತು ಕುಲಗಳೊಡನೆ ಸುಖವನ್ನು ಅನುಭವಿಸುತ್ತಾನೆ.

೯೨-೯೩. ಶಿವಲಿಂಗಾಕಾರವಾಗಿ ಬರೆಹಾಕಿ ಕೋಣವನ್ನು ಬಿಡುವವನಿಗೆ ದುಃಖಲೋಕವಾದ ನರಕದ ದರ್ಶನವೇ ಆಗುವುದಿಲ್ಲ.

೯೩-೯೪. ರಾಜಶ್ರೇಷ್ಠನೇ! ತನ್ನ ಐಶ್ವರ್ಯಕ್ಕನುಸಾರವಾಗಿ ತಾಂಬೂಲವನ್ನು ದಾನಮಾಡುವವನಿಗೆ ವಿಷ್ಣುವು ಪ್ರಸನ್ನನಾಗಿ ಆಯುಷ್ಯ ಕೀರ್ತಿ ಸಂಪತ್ತು ಇವುಗಳನ್ನು ಕೊಡುತ್ತಾನೆ.

೯೪-೯೫. ಹಾಲು, ತುಪ್ಪ, ಜೇನುತುಪ್ಪ, ಮೊಸರು ಇವುಗಳನ್ನು ದಾನಮಾಡುವವನು ಹತ್ತುಸಾವಿರ ದೇವಮಾನ ವರ್ಷಗಳ ಪರ್ಯಂತವಾಗಿ ಸ್ವರ್ಗಲೋಕದಲ್ಲಿ ಸುಖಾನುಭವ ಮಾಡುತ್ತಾನೆ. ರಾಜಶ್ರೇಷ್ಠನೇ! ಕಬ್ಬನ್ನು ದಾನಕೊಡುವವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ.

**ಗಂಧದಃ ಪುಣ್ಯಫಲದಃ ಪ್ರಯಾತಿ ಬ್ರಹ್ಮಣಃ ಪದಂ ।**
**ಗುಡೇಕ್ಷುರಸದಶ್ಚೈವ ಪ್ರಯಾತಿ ಕ್ಷೀರಸಾಗರಂ ॥ ೯೬ ॥**

**ಸತತಂ ಜಲದೋ ಯಾತಿ ಸೂರ್ಯಲೋಕಮನುತ್ತಮಂ ।**
**ವಿದ್ಯಾದಾನೇನ ಸಾಯುಜ್ಯಂ ಮಾಧವಸ್ಯ ವ್ರಜೇನ್ನರಃ ॥ ೯೭ ॥**

**ವಿದ್ಯಾದಾನಂ ಮಹೀದಾನಂ ಗೋದಾನಂ ಚೋತ್ತಮೋತ್ತಮಂ ।**
**ನರಕಾದುದ್ಧರಂತ್ಯೇವ ವಿದ್ಯಾದಾನಂ ತತೋಽಧಿಕಂ ॥ ೯೮ ॥**

**ಸರ್ವೇಷಾಮಪಿ ದಾನಾನಾಂ ವಿದ್ಯಾದಾನಂ ವಿಶಿಷ್ಯತೇ ।**
**ವಿದ್ಯಾದಾನೇನ ಸಾಯುಜ್ಯಂ ಮಾಧವಸ್ಯ ವ್ರಜೇನ್ನರಃ ॥ ೯೯ ॥**

**ನರಸ್ತ್ವಿಂಧನದಾನೇನ ಮುಚ್ಯತೇ ಹ್ಯುಪಪಾತಕೈಃ ।**
**ಸಾಲಗ್ರಾಮಶಿಲಾ ದಾನಂ ಮಹಾದಾನಂ ಪ್ರಕೀರ್ತಿತಂ ॥ ೧೦೦ ॥**

---

೯೬. ಗಂಧ ಮತ್ತು ಪುಣ್ಯಫಲ ಇವುಗಳನ್ನು ದಾನಮಾಡುವವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಬೆಲ್ಲ ಕಬ್ಬಿನಹಾಲು ಇವುಗಳನ್ನು ಕೊಡುವವನು ಕ್ಷೀರಸಾಗರದಲ್ಲಿ ಸುಖನಿವಾಸಿಯಾಗುತ್ತಾನೆ.

೯೭. ಯಾವಾಗಲೂ ನೀರುಕೊಡುವವನು ಶ್ರೇಷ್ಠವಾದ ಸೂರ್ಯಲೋಕವನ್ನು ಹೊಂದುತ್ತಾನೆ. ಮನುಷ್ಯನು ವಿದ್ಯಾದಾನಮಾಡುವುದರಿಂದ ಶ್ರೀಹರಿಯ ಸಾಯುಜ್ಯಭಾಗಿಯಾಗುತ್ತಾನೆ.

೯೮. ವಿದ್ಯಾದಾನ ಗೋದಾನ ಭೂದಾನ ಇವು ಉತ್ತಮೋತ್ತಮವು. ಇವುಗಳನ್ನು ಮಾಡುವವನಿಗೆ ನರಕವಾಗುವುದಿಲ್ಲ. ಅದರಲ್ಲಿಯೂ ವಿದ್ಯಾದಾನವು ಅಧಿಕವು.

೯೯. ಸಕಲ ದಾನಗಳಲ್ಲಿಯೂ ವಿದ್ಯಾದಾನವು ಶ್ರೇಷ್ಠ. ವಿದ್ಯಾದಾನ ಮಾಡುವ ಮನುಷ್ಯನಿಗೆ ಲಕ್ಷ್ಮೀಪತಿಯ ಸಾಯುಜ್ಯಪದವಿಯು ದೊರೆಯುತ್ತದೆ.

೧೦೦. ಕಟ್ಟಿಗೆಯನ್ನು ದಾನಮಾಡುವ ಮನುಷ್ಯನಿಗೆ ಉಪಪಾತಕಗಳು ನಾಶವಾಗುತ್ತವೆ. ಸಾಲಗ್ರಾಮದಾನವು ಮಹಾದಾನವೆಂದು ಜ್ಞಾನಿಗಳಿಂದ ನಿರೂಪಿಸಲ್ಪಟ್ಟಿದೆ.

ಯದ್ದತ್ವಾ ಮೋಕ್ಷಮಾಪ್ನೋತಿ ಲಿಂಗದಾನಂ ತಥಾ ಸ್ಮೃತಂ ।
ಬ್ರಹ್ಮಾಂಡಕೋಟಿದಾನೇನ ಯತ್ಫಲಂ ಲಭತೇ ನರಃ ॥ ೧೦೧ ॥

ತತ್ಫಲಂ ಸಮವಾಪ್ನೋತಿ ಲಿಂಗದಾನಾನ್ನ ಸಂಶಯಃ ।
ಸಾಲಗ್ರಾಮಶಿಲಾದಾನೇ ತತೋಽಪಿ ದ್ವಿಗುಣಂ ಫಲಂ ॥ ೧೦೨ ॥

ಸಾಲಗ್ರಾಮಶಿಲಾರೂಪೀ ವಿಷ್ಣುರೇವೇತಿ ನಿಶ್ಚಯಃ ।
ಯೋ ದದಾತಿ ನರೋ ದೀಪಂ ಗೃಹೇಷು ಮಹತಾಂ ಪ್ರಭೋ ॥ ೧೦೩ ॥

ಗಂಗಾಸ್ನಾನಫಲಂ ತಸ್ಯ ನಿಶ್ಚಿತಂ ನೃಪ ಜಾಯತೇ ।
ರತ್ನಾನ್ವಿತಸುವರ್ಣಸ್ಯ ಪ್ರದಾನೇನ ನೃಪೋತ್ತಮ ॥ ೧೦೪ ॥

ಪರಮಂ ಮೋಕ್ಷಮಾಪ್ನೋತಿ ಮಹಾದಾನಂ ಯತಃ ಸ್ಮೃತಂ ।
ನರೋ ಮಾಣಿಕ್ಯದಾನೇನ ಪರಂ ಮೋಕ್ಷಮವಾಪ್ನುಯಾತ್ ॥ ೧೦೫ ॥

---

೧೦೧-೧೦೨. ಆ ಸಾಲಗ್ರಾಮದಾನದಿಂದ ಮೋಕ್ಷವು ಲಭಿಸುತ್ತದೆ. ಅಂತೆಯೇ ಲಿಂಗದಾನವೂ ದೊಡ್ಡದೆಂದು ಹೇಳಿದೆ. ಕೋಟಿ ಬ್ರಹ್ಮಾಂಡದಾನದಿಂದ ಬರುವ ಫಲವು ಲಿಂಗದಾನ ಮಾಡುವ ಮನುಷ್ಯನಿಗೆ ಬರುತ್ತದೆ. ಸಂದೇಹವಿಲ್ಲ.

೧೦೨-೧೦೩. ಸಾಲಗ್ರಾಮ ದಾನಮಾಡಿದರೆ ಲಿಂಗದಾನದ ಎರಡರಷ್ಟು ಫಲವು ದೊರೆಯುತ್ತದೆ. ಸಾಲಗ್ರಾಮದಲ್ಲಿ ವಿಷ್ಣುವಿನ ವಿಶೇಷ ಸನ್ನಿಧಾನವಿರುವುದರಿಂದ ಅದು ವಿಷ್ಣುವೇ ಎಂಬುದಾಗಿ ನಿಶ್ಚಯಿಸಿರುತ್ತಾರೆ.

೧೦೩-೧೦೫. ದೊರೆಯೇ! ದೊಡ್ಡವರ ಮನೆಗೆ ದೀಪದಾನಮಾಡಿದರೆ ಅವನಿಗೆ ನಿಜವಾಗಿಯೂ ಗಂಗಾಸ್ನಾನ ಫಲವುಂಟಾಗುತ್ತದೆ. ಮಹಾದಾನವಾದ ರತ್ನಸಹಿತ ಸುವರ್ಣದಾನದಿಂದ ಉತ್ತಮ ಮೋಕ್ಷವು ಲಭಿಸುತ್ತದೆ. ಮಾಣಿಕ್ಯವನ್ನು ದಾನಮಾಡುವುದರಿಂದಲೂ ಮನುಷ್ಯನು ಮೋಕ್ಷವನ್ನು ಪಡೆಯುತ್ತಾನೆ.

**ಧ್ರುವಲೋಕಮವಾಪ್ನೋತಿ ವಜ್ರದಾನೇನ ಮಾನವಃ ।**
**ಸ್ವರ್ಗಂ ವಿದ್ರುಮದಾನೇನ ರುದ್ರಲೋಕಮವಾಪ್ನುಯಾತ್ ॥ ೧೦೬ ॥**

**ಪ್ರಯಾತಿ ಯಾನದಾನೇನ ಮುಕ್ತಾದಾನೇನ ಚೈಂದವಂ ।**
**ವೈಡೂರ್ಯದೋ ರುದ್ರಲೋಕಂ ಪುಷ್ಪರಾಗಪ್ರದಸ್ತಥಾ ॥ ೧೦೭ ॥**

**ಅಲಂಕಾರಪ್ರದಾನೇನ ಸರ್ವತ್ರ ಸುಖಮಶ್ನುತೇ ।**
**ಅಶ್ವದೋ ಹ್ಯಶ್ವಸಾನ್ನಿಧ್ಯಂ ಚಿರಂ ವ್ರಜತಿ ಭೂಮಿಪ ॥ ೧೦೮ ॥**

**ಗಜದಾನೇನ ಮಹತಾ ಸರ್ವಾನ್ಕಾಮಾನವಾಪ್ನುಯಾತ್ ।**
**ಪ್ರಯಾತಿ ಯಾನದಾನೇನ ಸ್ವರ್ಗಂ ಸ್ವರ್ಯಾನಮಾಸ್ಥಿತಃ ॥ ೧೦೯ ॥**

**ಮಹಿಷೀದೋ ಜಯತ್ಯೇವ ಹ್ಯಪಮೃತ್ಯುಂ ನ ಸಂಶಯಃ ।**
**ಗವಾಂ ತೃಣಪ್ರದಾನೇನ ರುದ್ರಲೋಕಮವಾಪ್ನುಯಾತ್ ॥ ೧೧೦ ॥**

---

೧೦೬-೧೦೭. ಮನುಷ್ಯನು ವಜ್ರದಾನಮಾಡುವುದರಿಂದ ಧ್ರುವಲೋಕವನ್ನೂ ಹವಳದಾನಮಾಡುವುದರಿಂದ ಸ್ವರ್ಗಲೋಕವನ್ನೂ ಹೊಂದುತ್ತಾನೆ. ಬಂಡಿ ಮುಂತಾದ ವಾಹನಗಳನ್ನು ದಾನಮಾಡುವುದರಿಂದ ರುದ್ರಲೋಕವನ್ನೂ, ಮುತ್ತು ದಾನಮಾಡುವುದರಿಂದ ಚಂದ್ರಲೋಕವನ್ನೂ, ವೈಡೂರ್ಯ ಮತ್ತು ಪುಷ್ಪರಾಗಗಳ ದಾನಮಾಡುವುದರಿಂದ ಕೈಲಾಸವನ್ನೂ ಹೊಂದುವನು.

೧೦೮. ಅಲಂಕಾರ (ಆಭರಣ) ದಾನದಿಂದ ಎಲ್ಲಾ ಸ್ಥಳಗಳಲ್ಲಿ ಸುಖವನ್ನೂ, ಕುದುರೆದಾನದಿಂದ ಕುದುರೆಯನ್ನೂ ಬಹುಕಾಲ ಅನುಭವಿಸುವನು.

೧೦೯. ಮಹತ್ತಾದ ಆನೆಯ ದಾನದಿಂದ ಸಕಲ ಇಷ್ಟಾರ್ಥಗಳನ್ನೂ ಪಲ್ಲಕ್ಕಿ ಮುಂತಾದವುಗಳ ದಾನದಿಂದ ವಿಮಾನಾರೂಢನಾಗಿ ಸ್ವರ್ಗಲೋಕವನ್ನೂ ಪಡೆಯುವನು.

೧೧೦. ಎಮ್ಮೆಯ ದಾನದಿಂದ ಅಪಮೃತ್ಯು ಪರಿಹಾರವನ್ನೂ, ಗೋಗ್ರಾಸ (ಹಸುಗಳಿಗೆ ಹುಲ್ಲು ಮುಂತಾದವು) ದಾನದಿಂದ ಕೈಲಾಸವನ್ನೂ ಹೊಂದುವನು.

ವಾರುಣಂ ಲೋಕಮಾಪ್ನೋತಿ ಮಹೀಶ ಲವಣಪ್ರದಃ ।
ಸ್ವಾಶ್ರಮಾಚಾರನಿರತಾಃ ಸರ್ವಭೂತಹಿತೇ ರತಾಃ ॥ ೧೧೧ ॥

ಅದಾಂಭಿಕಾಃ ಗತಾಸೂಯಾಃ ಪ್ರಯಾಂತಿ ಬ್ರಹ್ಮಣಃ ಪದಂ ।
ಪರೋಪದೇಶನಿರತಾ ವೀತರಾಗಾ ವಿಮತ್ಸರಾಃ ॥ ೧೧೨ ॥

ಹರಿಪಾದಾರ್ಚನರತಾಃ ಪ್ರಯಾಂತಿ ಸದನಂ ಹರೇಃ ।
ಸತ್ಸಂಗಾಹ್ಲಾದನಿರತಾಃ ಸತ್ಕರ್ಮಸು ಸದೋದ್ಯತಾಃ ॥ ೧೧೩ ॥

ಪರಾಪವಾದವಿಮುಖಾ ಪ್ರಯಾಂತಿ ಹರಿಮಂದಿರಂ ।
ನಿತ್ಯಂ ಹಿತಕರಾ ಯೇ ತು ಬ್ರಾಹ್ಮಣೇಷು ಚ ಗೋಷು ಚ ॥ ೧೧೪ ॥

ಪರಸ್ತ್ರೀಸಂಗವಿಮುಖಾ ನ ಪಶ್ಯಂತಿ ಯಮಾಲಯಂ ।
ಜಿತೇಂದ್ರಿಯಾಃ ಜಿತಾಹಾರಾ ಗೋಷು ಕ್ಷಾಂತಾಃ ಸುಶೀಲಿನಃ ॥ ೧೧೫ ॥

---

೧೧೧-೧೧೨. ಉಪ್ಪುದಾನ ಮಾಡುವವರು ವರುಣಲೋಕವನ್ನೂ, ವರ್ಣಾಶ್ರಮವಿಹಿತಧರ್ಮಾನುಷ್ಠಾನಪರರು, ಸರ್ವ ಪ್ರಾಣಿಗಳಿಗೂ ಉಪಕಾರ ಮಾಡುವುದರಲ್ಲಿ ಆಸಕ್ತರೂ, ಜಂಭವಿಲ್ಲದವರು ಮತ್ತು ಹೊಟ್ಟೆಕಿಚ್ಚಿಲ್ಲದವರೂ ಸಹ ಬ್ರಹ್ಮಲೋಕವನ್ನೂ ಹೊಂದುತ್ತಾರೆ.

೧೧೨-೧೧೩. ಪರರಿಗೆ ತತ್ತ್ವೋಪದೇಶಮಾಡುತ್ತಿರುವವರು, ರಾಗ ದ್ವೇಷಾದಿಗಳಿಲ್ಲದಿರುವವರು, ಶ್ರೀಹರಿಯ ಚರಣಕಮಲಗಳನ್ನು ಪೂಜಿಸುವುದ ರಲ್ಲಿ ಆಸಕ್ತಿಯುಳ್ಳವರೂ ಸಹ ಹರಿಮಂದಿರಕ್ಕೆ ಹೋಗುತ್ತಾರೆ.

೧೧೩-೧೧೪. ಸಜ್ಜನ ಸಹವಾಸದಿಂದ ಸಂತೋಷಿಸುವವರು, ಯಾವಾಗಲೂ ಸತ್ಕರ್ಮಾನುಷ್ಠಾನದಲ್ಲಿ ಉದ್ಯುಕ್ತರು ಮತ್ತು ಇತರರಮೇಲೆ ಅಪವಾದವನ್ನು ಹೊರಿಸದಿರುವವರೂ ಸಹ ವಿಷ್ಣುವಿನ ವೈಕುಂಠಾದಿಲೋಕಕ್ಕೆ ಹೋಗಿ ಸುಖವನ್ನು ಅನುಭವಿಸುತ್ತಾರೆ.

೧೧೪-೧೧೫. ಗೋಬ್ರಾಹ್ಮಣರಿಗೆ ಸರ್ವದಾ ಅನುಕೂಲಮಾಡುವವರು, ಪರಸ್ತ್ರೀಸಂಗವನ್ನು ದೂರಮಾಡಿರುವವರೂ ಸಹ ಯಮಾಲಯವನ್ನು (ನರಕ) ನೋಡುವುದೇ ಇಲ್ಲ.

ಬ್ರಾಹ್ಮಣೇಷು ಕ್ಷಮಾಶೀಲಾಃ ಪ್ರಯಾಂತಿ ಭವನಂ ಹರೇಃ ।
ಅಗ್ನಿಶುಶ್ರೂಷವಶ್ಚೈವ ಗುರುಶುಶ್ರೂಷಕಾಸ್ತಥಾ ॥ ೧೧೬ ॥

ಪತಿಶುಶ್ರೂಷಣರತಾ ನ ವೈ ಸಂಸೃತಿಭಾಗಿನಃ ।
ಸದಾ ದೇವಾರ್ಚನರತಾ ಹರಿನಾಮಪರಾಯಣಾಃ ॥ ೧೧೭ ॥

ಪ್ರತಿಗ್ರಹನಿವೃತ್ತಾಶ್ಚ ಪ್ರಯಾಂತಿ ಪರಮಂ ಪದಂ ।
ಅನಾಥಂ ವಿಪ್ರಕುಣಪಂ ಯೇ ದಹೇಯುರ್ನೃಪೋತ್ತಮ ॥ ೧೧೮ ॥

ಅಶ್ವಮೇಧಸಹಸ್ರಾಣಾಂ ಫಲಮಶ್ನುವತೇ ಸದಾ ।
ಪತ್ರೈಃ ಪುಷ್ಪೈಃ ಫಲೈರ್ವಾಽಪಿ ಜಲೈರ್ವಾ ಮನುಜೇಶ್ವರ ॥ ೧೧೯ ॥

ಪೂಜಯಾ ರಹಿತಂ ಲಿಂಗಂ ಅರ್ಚಯೇತ್ತತ್ಫಲಂ ಶ್ರುಣು ।
ಅಪ್ಸರೋಗಣಗಂಧರ್ವೈಃ ಸ್ತೂಯಮಾನೋ ವಿಮಾನಗಃ ॥ ೧೨೦ ॥

---

೧೧೫-೧೧೬. ಇಂದ್ರಿಯವನ್ನು ನಿಗ್ರಹಿಸಿದವರು, ಕ್ಲುಪ್ತವಾದ ಆಹಾರವನ್ನು ಸ್ವೀಕರಿಸುವವರು, ಗೋವುಗಳ ವಿಷಯದಲ್ಲಿ ಕ್ಷಮೆಯುಳ್ಳವರು, ಒಳ್ಳೆಯ ನಡತೆಪರರು, ಬ್ರಾಹ್ಮಣರಲ್ಲಿ ಕ್ಷಮೆಯುಳ್ಳವರೂ ಸಹ ಶ್ರೀಹರಿಯ ಮಂದಿರಕ್ಕೆ ಹೋಗಿ ಸುಖಭಾಗಿಗಳಾಗುವರು.

೧೧೬-೧೧೭. ಅಗ್ನಿ, ಗುರು ಮತ್ತು ಪತಿಗಳ ಸೇವೆಯಲ್ಲಿ ಆಸಕ್ತರಾಗಿರುವವರು ಸಂಸಾರಬಂಧಕ್ಕೀಡಾಗುವುದಿಲ್ಲ.

೧೧೭-೧೧೮. ಯಾವಾಗಲೂ ದೇವರಪೂಜೆಯಲ್ಲಿ ನಿರತರೂ, ಹರಿನಾಮಸಂಕೀರ್ತನಪರರು ಮತ್ತು ದಾನವನ್ನು ಸ್ವೀಕರಿಸದಿರುವವರೂ ಉತ್ತಮಸ್ಥಾನ (ವೈಕುಂಠ) ವನ್ನು ಪಡೆಯುತ್ತಾರೆ.

೧೧೮-೧೧೯. ರಾಜನೇ! ದಿಕ್ಕಿಲ್ಲದ ಬ್ರಾಹ್ಮಣಶವವನ್ನು ಸುಡುವವರು ಸಾವಿರಾರು ಅಶ್ವಮೇಧಯಾಗಗಳ ಫಲವನ್ನು ಭೋಗಿಸುತ್ತಾರೆ.

೧೧೯-೧೨೦. ರಾಜನೇ! ಪೂಜೆಯಿಲ್ಲದೆ ಖಿಲವಾಗಿದ್ದ ಲಿಂಗವನ್ನು ಪತ್ರೆ ಹೂವು ಹಣ್ಣು ಅಥವಾ ನೀರು ಇವುಗಳಿಂದ ಪೂಜೆಮಾಡುವುದರ ಫಲವನ್ನು ಹೇಳುತ್ತೇನೆ. ಕೇಳು.

ಪ್ರಯಾತಿ ಶಿವಸಾನ್ನಿಧ್ಯಮಿತ್ಯಾಹ ಕಮಲೋದ್ಭವಃ ।
ಚುಲುಕೋದಕಮಾತ್ರೇಣ ಲಿಂಗಂ ಸಂಸ್ನಾಪ್ಯ ಭೂಮಿಪ ॥ ೧೨೧ ॥

ಲಕ್ಷಾಶ್ವಮೇಧಜಂ ಪುಣ್ಯಂ ಸಂಪ್ರಾಪ್ನೋತಿ ನ ಸಂಶಯಃ ।
ಪೂಜಯಾ ರಹಿತಂ ಲಿಂಗಂ ಕುಸುಮೈರ್ಯೋಽರ್ಚಯೇತ್ಸುಧೀಃ ॥ ೧೨೨ ॥

ಅಶ್ವಮೇಧಾಯುತಫಲಂ ಭವೇತ್ತಸ್ಯ ಜನೇಶ್ವರ ।
ಭಕ್ಷ್ಯೈರ್ಭೋಜ್ಯೈಃ ಫಲೈರ್ವಾಽಪಿ ಶೂನ್ಯಂ ಲಿಂಗಂ ಪ್ರಪೂಜ್ಯ ಚ ॥೧೨೩॥

ಶಿವಸಾಯುಜ್ಯಮಾಪ್ನೋತಿ ಪುನರಾವೃತ್ತಿವರ್ಜಿತಂ ।
ಪೂಜಯಾ ರಹಿತಂ ವಿಷ್ಣುಂ ಯೋಽರ್ಚಯೇದರ್ಕವಂಶಜ ॥ ೧೨೪ ॥

ಜಲೇನಾಪಿ ಸಮಾಲೋಕ್ಯಂ ವಿಷ್ಣೋರ್ಯಾತಿ ನರೋತ್ತಮ ।
ದೇವತಾಯತನೇ ಯಸ್ತು ಕುರ್ಯಾತ್ಸಂಮಾರ್ಜನಂ ಸುಧೀಃ ॥ ೧೨೫ ॥

---

೧೨೦-೧೨೧. ಅಂತಹವನು ಅಪ್ಸರಸ್ತ್ರೀಯರು ಮತ್ತು ಗಂಧರ್ವರುಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತಾ ವಿಮಾನಾರೂಢನಾಗಿ ಈಶ್ವರಸನ್ನಿಧಿಗೆ ಹೋಗುತ್ತಾನೆ ಎಂದು ಚತುರ್ಮುಖನು ಹೇಳಿರುವನು.

೧೨೧-೧೨೨. ದೊರೆಯೇ! ಸ್ವಲ್ಪನೀರಿನಿಂದ ಲಿಂಗಕ್ಕೆ ಅಭಿಷೇಕಮಾಡಿದರೆ ಒಂದು ಲಕ್ಷ ಅಶ್ವಮೇಧಯಾಗಗಳಿಗೆ ಸಮಾನವಾದ ಪುಣ್ಯವು ನಿಜವಾಗಿಯೂ ದೊರೆಯುತ್ತದೆ. ಸಂದೇಹವಿಲ್ಲ.

೧೨೨-೧೨೪. ಪೂಜೆಯಿಲ್ಲದಿರುವ ಲಿಂಗವನ್ನು ಹೂವಿನಿಂದ ಪೂಜಿಸುವವನಿಗೆ ಹತ್ತುಸಾವಿರ ಅಶ್ವಮೇಧಯಜ್ಞಗಳ ಫಲವು ಲಭಿಸುತ್ತದೆ. ಭಕ್ಷ್ಯಭೋಜ್ಯ ಮತ್ತು ಹಣ್ಣು ಇವುಗಳಿಂದ ಶೂನ್ಯವಾಗಿರುವ ಲಿಂಗವನ್ನು ಪೂಜಿಸುವುದರಿಂದ ಪುನರಾವೃತ್ತಿರಹಿತವಾದ ಶಿವಸಾಯುಜ್ಯವುಂಟಾಗುತ್ತದೆ.

೧೨೪-೧೨೫. ಸೂರ್ಯಕುಲೋತ್ಪನ್ನನಾದ ರಾಜನೇ! ಪೂಜೆಯಿಲ್ಲದಿರುವ ವಿಷ್ಣುವನ್ನು ಉದಕದಿಂದಲಾದರೂ ಅಭಿಷೇಕಮಾಡಿ ಪೂಜಿಸುವವನಿಗೆ ವಿಷ್ಣುಸಾಲೋಕ್ಯವೆಂಬ ಮುಕ್ತಿಯು ಲಭಿಸುತ್ತದೆ.

ಯಾವತ್ಪಾಂಸುಯುಗಾವಾಸಂ ವೈಷ್ಣವೇ ಮಂದಿರೇ ಲಭೇತ್ ।
ಶೀರ್ಣಂ ಸ್ಫಟಿಕಲಿಂಗಂ ತು ಯಃ ಸಂದಧ್ಯಾನ್ನೃಪೋತ್ತಮ ॥ ೧೨೬ ॥

ಶತಜನ್ಮಾರ್ಜಿತೈಃ ಪಾಪೈರ್ಮುಚ್ಯತೇ ಸ ತು ಮಾನವಃ ।
ಯಸ್ತು ದೇವಾಲಯೇ ರಾಜನ್ನಪಿ ಗೋಚರ್ಮಮಾತ್ರಕಂ ॥ ೧೨೭ ॥

ಜಲೇನ ಸಿಂಚೇದ್ಭೂಭಾಗಂ ಸೋಽಪಿ ಸ್ವರ್ಗಂ ಲಭೇನ್ನರಃ ।
ಗಂಧೋದಕೇನ ಯಃ ಸಿಂಚೇದ್ದೇವತಾಯತನೇ ಭುವಂ ॥ ೧೨೮ ॥

ಯಾವತ್ಕಣಾನುಕಲ್ಪಂ ತು ಹರಿಸಾರೂಪ್ಯಮಶ್ನುತೇ ।
ಮೃದಾ ಧಾತುವಿಕಾರೈರ್ವಾ ಯೋ ಲಿಂಪೇದ್ದೇವತಾಗೃಹಂ ॥ ೧೨೯ ॥

ಸಕೋಟಿಕುಲಮುದ್ಧೃತ್ಯ ಯಾತಿ ಸಾಮ್ಯಂ ಮಧುದ್ವಿಷಃ ।
ಶಿಲಾಚೂರ್ಣೇನ ಯೋ ಮರ್ತ್ಯೋ ದೇವತಾಯತನೇ ನೃಪ ॥ ೧೩೦ ॥

---

೧೨೫-೧೨೬. ದೇವಸ್ಥಾನನಲ್ಲಿ ಕಸಗುಡಿಸುವುದರಿಂದ ಜ್ಞಾನಿಯಾದವನಿಗೆ ಕಸದಲ್ಲಿ ಸೇರಿರುವ ಧೂಳಿಯ ಕಣಗಳಿಗೆ ಸಮಾನವಾದಷ್ಟು ಯುಗಗಳ ಕಾಲ ವಿಷ್ಣುಭವನದಲ್ಲಿ ವಾಸವು ದೊರೆಯುತ್ತದೆ.

೧೨೬-೧೨೭. ರಾಜೋತ್ತಮನೇ! ಶೀಳಿದ ಸ್ಫಟಿಕಲಿಂಗವನ್ನು ಕೂಡಿಸಿ ಗಟ್ಟಿಮಾಡುವ ಮನುಷ್ಯನಿಗೆ ನೂರು ಜನ್ಮಗಳಲ್ಲಿ ಮಾಡಿದ ಪಾಪಗಳು ಹೋಗುತ್ತವೆ.

೧೨೭-೧೨೮. ದೇವಾಲಯದಲ್ಲಿ ಗೋಚರ್ಮದಷ್ಟು ಅಗಲ ಭೂಮಿಯನ್ನಾದರೂ ನೀರಿನಿಂದ ತೊಳೆಯುವ ಮನುಷ್ಯನೂ ಸಹ ಸ್ವರ್ಗಕ್ಕೆ ಹೋಗುತ್ತಾನೆ.

೧೨೮-೧೨೯. ಸುಗಂಧಸಹಿತವಾದ ನೀರಿನಿಂದ ದೇವಾಲಯದಲ್ಲಿ ನೆಲವನ್ನು ಸಾರಿಸುವವನು ಆ ನೀರಿನಿಂದ ನೆನೆಯುವ ಧೂಳಿಯಕಣಗಳಷ್ಟು ಕಲ್ಪ ಪರ್ಯಂತವಾಗಿ ಹರಿಸಾರೂಪ್ಯವನ್ನು ಅನುಭವಿಸುತ್ತಾನೆ.

೧೨೯-೧೩೦. ಮಣ್ಣು ಅಥವಾ ಸುಣ್ಣ ಮುಂತಾದುವುಗಳಿಂದ ದೇವಾಲಯಕ್ಕೆ ಲೇಪನೆ (ಮೆತ್ತನೆ) ಮಾಡಿಸುವವನು ಕೋಟಿಕುಲಗಳನ್ನು ಉದ್ಧಾರ ಮಾಡಿ ಶ್ರೀಕೃಷ್ಣನ ಸಾಮ್ಯವನ್ನು ಪಡೆಯುತ್ತಾನೆ.

**ಕರೋತಿ ಸ್ವಸ್ತಿಕಾದೀನಿ ತಸ್ಯ ಪುಣ್ಯಮನಂತಕಂ ।**
**ಯಃ ಕುರ್ಯಾದ್ದೀಪರಚನಾಂ ದೇವತಾಯತನೇ ನೃಪ ॥ ೧೩೦ ॥**

**ತಸ್ಯ ಪುಣ್ಯಂ ಪ್ರಸಂಖ್ಯಾತುಂ ನೋತ್ಸಹೇಽಬ್ದಶತೈರಪಿ ।**
**ಅಖಂಡದೀಪಂ ಯಃ ಕುರ್ಯಾದ್ವಿಷ್ಣೋರ್ವಾ ಶಂಕರಸ್ಯ ಚ ॥ ೧೩೨ ॥**

**ಕ್ಷಣೇ ಕ್ಷಣೇಽಶ್ವಮೇಧಸ್ಯ ಫಲಂ ತಸ್ಯ ನ ದುರ್ಲಭಂ ।**
**ಅರ್ಚಿತಂ ಶಂಕರಂ ದೃಷ್ಟ್ವಾ ವಿಷ್ಣುಂ ವಾಽಪಿ ನಮೇತ್ತು ಯಃ ॥ ೧೩೩ ॥**

**ಸ ವಿಷ್ಣುಭವನಂ ಪ್ರಾಪ್ಯ ಮೋದತೇ ಚ ಯುಗಾಯುತಂ ।**
**ದೇವ್ಯಾಃ ಪ್ರದಕ್ಷಿಣಾಮೇಕಾಂ ಸಪ್ತ ಸೂರ್ಯಸ್ಯ ಭೂಮಿಪ ॥ ೧೩೪ ॥**

**ತಿಸ್ರೋ ವಿನಾಯಕಸ್ಯಾಪಿ ಚತಸ್ರೋ ವಿಷ್ಣುಮಂದಿರೇ ।**
**ಕೃತ್ವಾ ತತ್ತದ್ಗೃಹಂ ಪ್ರಾಪ್ಯ ಮೋದತೇ ಯುಗಲಕ್ಷಕಂ ॥ ೧೩೫ ॥**

---

೧೩೦–೧೩೧. ಕಲ್ಲು ರಂಗವಲ್ಲಿಯಿಂದ ದೇವಾಲಯದಲ್ಲಿ ಸ್ವಸ್ತಿಕಾಮುಂತಾದ ಹಸೆಗಳನ್ನು ಬರೆದು ಅಲಂಕರಿಸುವವನು ಅನಂತ ಪುಣ್ಯವನ್ನು ಪಡೆಯುತ್ತಾನೆ.

೧೩೧-೧೩೩. ದೊರೆಯೇ! ದೇವಾಲಯದಲ್ಲಿ ದೀಪ ಹಚ್ಚುವವನ ಪುಣ್ಯವನ್ನು ಲೆಕ್ಕಿಸಲು ನೂರಾರು ವರ್ಷಗಳಾದರೂ ಸಾಧ್ಯವಾಗಲಾರದು. ವಿಷ್ಣು ಅಥವಾ ಶಂಕರನಿಗೆ ನಂದಾದೀಪವನ್ನು ಇಡುವವನು ಪ್ರತಿಯೊಂದು ಕ್ಷಣದಲ್ಲಿಯೂ ಅಶ್ವಮೇಧಯಜ್ಞದ ಫಲವನ್ನು ಪಡೆಯುತ್ತಾನೆ.

೧೩೩-೧೩೪. ಪೂಜಿತನಾದ ಶಂಕರ ಅಥವಾ ವಿಷ್ಣುವನ್ನು ಸಂದರ್ಶಿಸಿ ತತ್ತದ್ಯೋಗ್ಯವಾಗಿ ನಮಸ್ಕಾರಾದಿಗಳನ್ನು ಮಾಡುವವನು ವಿಷ್ಣುಲೋಕಕ್ಕೆ ಹೋಗಿ ಹತ್ತುಸಾವಿರ ಯುಗಪರ್ಯಂತವಾಗಿ ಭೋಗಿಸುತ್ತಾನೆ.

೧೩೪-೧೩೫. ಭೂಪಾಲನೇ! ದೇವಿಗೆ ಒಂದು ಪ್ರದಕ್ಷಿಣೆಯನ್ನೂ, ಸೂರ್ಯನಿಗೆ ಏಳು ಪ್ರದಕ್ಷಿಣೆಗಳನ್ನೂ, ವಿಘ್ನೇಶ್ವರನಿಗೆ ಮೂರು ಪ್ರದಕ್ಷಿಣೆಯನ್ನೂ, ವಿಷ್ಣು ದೇವಾಲಯದಲ್ಲಿ ನಾಲ್ಕು ಪ್ರದಕ್ಷಿಣೆಗಳನ್ನೂ ಮಾಡುವವನು

**ಯೋ ವಿಷ್ಣೋರ್ಭಕ್ತಿಭಾವೇನ ತಥೈವ ಗೋದ್ವಿಜಸ್ಯ ಚ ।**
**ಪ್ರದಕ್ಷಿಣಾಂ ಚರೇತ್ತಸ್ಯ ಹ್ಯಶ್ವಮೇಧಃ ಪದೇ ಪದೇ ॥ ೧೩೬ ॥**

**ಕಾಶ್ಯಾಂ ಮಾಹೇಶ್ವರಂ ಲಿಂಗಂ ಸಂಪೂಜ್ಯ ಪ್ರಣಮೇತ್ತು ಯಃ ।**
**ನ ತಸ್ಯ ವಿದ್ಯತೇ ಕೃತ್ಯಂ ಸಂಸೃತಿರ್ನೈವ ಜಾಯತೇ ॥ ೧೩೭ ॥**

**ಶಿವಂ ಪ್ರದಕ್ಷಿಣಂ ಕೃತ್ವಾ ಸವ್ಯಾಽಸವ್ಯ ವಿಧಾನತಃ ।**
**ನರೋ ನ ಚ್ಯವತೇ ಸ್ವರ್ಗಾಚ್ಛಂಕರಸ್ಯ ಪ್ರಸಾದತಃ ॥ ೧೩೮ ॥**

**ಸ್ತುತ್ವಾ ಸ್ತೋತ್ರೈರ್ಜಗನ್ನಾಥಂ ನಾರಾಯಣಮನಾಮಯಂ ।**
**ಸರ್ವಾನ್ಕಾಮಾನವಾಪ್ನೋತಿ ಮನಸಾ ಯದ್ಯದಿಚ್ಛತಿ ॥ ೧೩೯ ॥**

---

ಆಯಾಯಾ ದೇವತೆಗಳ ಸ್ಥಾನದಲ್ಲಿ ಲಕ್ಷಯುಗ ಪರ್ಯಂತವಾಗಿ ಸುಖವಾಗಿರುತ್ತಾನೆ.

೧೩೬. ಭಕ್ತಿಯಿಂದ ವಿಷ್ಣು, ಗೋವು, ದ್ವಿಜ, ಇವರುಗಳ ಪ್ರದಕ್ಷಿಣೆಯನ್ನು ಮಾಡುವವನು ಹೆಜ್ಜೆಹೆಜ್ಜೆಗೆ ಅಶ್ವಮೇಧಯಜ್ಞದ ಫಲವನ್ನು ಹೊಂದುತ್ತಾನೆ.

೧೩೭. ಕಾಶೀಕ್ಷೇತ್ರದಲ್ಲಿ ಮಹೇಶ್ವರಲಿಂಗವನ್ನು ಯೋಗ್ಯರೀತಿಯಿಂದ ಪೂಜಿಸಿ ನಮಸ್ಕರಿಸುವವನಿಗೆ ಇನ್ನ್ಯಾವ ಕರ್ತವ್ಯವೂ ಇರುವುದಿಲ್ಲ. ಅದರಿಂದಲೇ ಸಂಸಾರ ನಿವೃತ್ತಿಯಾಗುತ್ತದೆ.

೧೩೮. ಸವ್ಯಾಸವ್ಯವಿಧಾನದಿಂದ ಈಶ್ವರನನ್ನು ಪ್ರದಕ್ಷಿಣೆ ಮಾಡುವವನು ಅವನ ಅನುಗ್ರಹದಿಂದ ಚ್ಯುತಿಯಿಲ್ಲದೇ ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸುತ್ತಿರುತ್ತಾನೆ. ಸವ್ಯಾಸವ್ಯವಿಧಾನವೆಂದರೆ:—ದೇವಸ್ಥಾನದ ಪ್ರಾಕಾರದಲ್ಲಿ ಎಡಭಾಗದಿಂದ ಅರ್ಧಕ್ಕೆ ಹೋಗಿ ಹಿಂತಿರುಗಿ ಬಲಭಾಗದಿಂದ ಸುತ್ತಿಕೊಂಡು ಅಲ್ಲಿಯವರೆಗೆ ಹೋಗಿಬರುವುದು.

೧೩೯. ಜಗದೊಡೆಯನೂ ನಿರ್ದೋಷನೂ ಆದ ನಾರಾಯಣನನ್ನು ಸ್ತೋತ್ರಗಳಿಂದ ಹೊಗಳುವವನಿಗೆ ಮನೋಭೀಷ್ಟಗಳೆಲ್ಲವೂ ಸಿದ್ಧಿಸುತ್ತವೆ.

ದೇವತಾಯತನೇ ಯಸ್ತು ಭಕ್ತಿಯುಕ್ತಃ ಪ್ರನೃತ್ಯತಿ ।
ಗಾಯತೇ ವಾ ಸ ಭೂಪಾಲ ಸುಗೀತಾನಿ ಚ ಮುಕ್ತಿಭಾಕ್ ॥ ೧೪೦ ॥

ಯೇ ತು ವಾದ್ಯಂ ಪ್ರಕುರ್ವಂತಿ ದೇವತಾಯತನೇ ನರಾಃ ।
ತೇ ಹಂಸಯಾನಮಾರೂಢಾ ವ್ರಜಂತಿ ಬ್ರಹ್ಮಣಃ ಪದಂ ॥ ೧೪೧ ॥

ಕರತಾಲಂ ಪ್ರಕುರ್ವಂತಿ ದೇವತಾಯತನೇ ತು ಯೇ ।
ತೇ ಸರ್ವಪಾಪನಿರ್ಮುಕ್ತಾಃ ವಿಮಾನಸ್ಥಾ ಯುಗಾಯುತಂ ॥ ೧೪೨ ॥

ದೇವತಾಯತನೇ ಯೇ ತು ಘಂಟಾನಾದಂ ಪ್ರಕುರ್ವತೇ ।
ತೇಷಾಂ ಪುಣ್ಯಂ ನಿಗದಿತುಂ ನ ಸಮರ್ಥಃ ಶಿವಸ್ಸ್ವಯಂ ॥ ೧೪೩ ॥

ಭೇರೀಮೃದಂಗಪಟಹಮುರಜೈಶ್ಚ ಸಡಿಂಡಿಮೈಃ ।
ಸಂಪ್ರೀಣಯಂತಿ ದೇವೇಶಂ ತೇಷಾಂ ಪುಣ್ಯಫಲಂ ಶ್ರುಣು ॥ ೧೪೪ ॥

---

೧೪೦. ಭಕ್ತಿಯಿಂದ ದೇವಾಲಯದಲ್ಲಿ ನರ್ತನಮಾಡುವವನು ಮತ್ತು ಒಳ್ಳೆಯ ಗೀತೆಗಳನ್ನು ಹಾಡುವವನೂ ಸಹ ಮುಕ್ತನಾಗುತ್ತಾನೆ.

೧೪೧. ದೇವಸ್ಥಾನದಲ್ಲಿ ವಾದ್ಯಮಾಡುವ ಮನುಷ್ಯರು ಹಂಸವಾಹನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ಹೋಗುತ್ತಾರೆ.

೧೪೨. ದೇವಾಲಯದಲ್ಲಿ ಚಪ್ಪಾಳೆ ಹೊಡೆಯುವವರು ಸಕಲ ಪಾಪಗಳಿಂದ ವಿಮೋಚಿತರಾಗಿ ಹತ್ತುಸಾವಿರ ಯುಗಗಳವರೆಗೆ ವಿಮಾನದಲ್ಲಿ ಸುಖಿಸುತ್ತಾರೆ.

೧೪೩. ದೇವಾಲಯದಲ್ಲಿ ಘಂಟೆ ಬಾರಿಸುವವರ ಪುಣ್ಯವನ್ನು ನಿರೂಪಿಸಲು ಶಿವನೂ ಸಹ ಅಸಮರ್ಥನು ಎಂದರೆ ಅಂತಹವರ ಪುಣ್ಯವು ಅಧಿಕವೆಂದು ತಾತ್ಪರ್ಯ.

೧೪೪. ನಗಾರಿ, ಮೃದಂಗ, ತಮಟೆ, ಮದ್ದಳೆ, ಢಿಮುಕಿ ಇವುಗಳಿಂದ ದೇವನಾಥನನ್ನು ಸಂತೋಷಪಡಿಸುವವರಿಗೆ ಬರುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು.

ದೇವಸ್ತ್ರೀಗಣಸಂಯುಕ್ತಾ ಸರ್ವಕರ್ಮಸಮನ್ವಿತಾಃ ।
ಸ್ವರ್ಗಲೋಕಮನುಪ್ರಾಪ್ಯ ಮೋದಂತೇ ಕಲ್ಪಪಂಚಕಂ ॥ ೧೪೫ ॥

ದೇವತಾಮಂದಿರೇ ಕುರ್ವನ್ನರಃ ಶಂಖರವಂ ನೃಪ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುನಾ ಸಹ ಮೋದತೇ ॥ ೧೪೬ ॥

ತಾಲಕಾಂಸ್ಯಾದಿನಿನದಂ ಕುರ್ವನ್ವಿಷ್ಣುಗೃಹೇ ನರಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಮವಾಪ್ನುಯಾತ್ ॥ ೧೪೭ ॥

ಯೋ ದೇವಃ ಸರ್ವದೃಗ್ವಿಷ್ಣುರ್ಜ್ಞಾನರೂಪೀ ನಿರಂಜನಃ ।
ಸರ್ವಧರ್ಮಫಲಂ ಪೂರ್ಣಂ ಸಂತುಷ್ಟಃ ಪ್ರದದಾತಿ ಚ ॥ ೧೪೮ ॥

ಯಸ್ಯ ಸ್ಮರಣಮಾತ್ರೇಣ ದೇವದೇವಸ್ಯ ಚಕ್ರಿಣಃ ।
ಸಫಲಾನಿ ಭವಂತ್ಯೇವ ಸರ್ವಕರ್ಮಾಣಿ ಭೂಪತೇ ॥ ೧೪೯ ॥

---

೧೪೫. ಅವರು ನೂರಾರು ದೇವಸ್ತ್ರೀಯರೊಡನೆ ಸಕಲವ್ಯಾಪಾರಯುಕ್ತರಾಗಿ ಸ್ವರ್ಗಲೋಕಕ್ಕೆ ಹೋಗಿ ಐದು ಕಲ್ಪಪರ್ಯಂತವಾಗಿ ಸುಖಿಸುತ್ತಾರೆ.

೧೪೬. ದೇವರಮನೆಯಲ್ಲಿ ಶಂಖಧ್ವನಿಯನ್ನು ಮಾಡುವ ಮನುಷ್ಯನು ವಿಷ್ಣುವಿನ ಅನುಗ್ರಹದಿಂದ ಸಕಲ ಪಾಪಗಳನ್ನೂ ಕಳೆದುಕೊಂಡು ಸುಖಪಡುತ್ತಾನೆ

೧೪೭. ವಿಷ್ಣುವಿನ ದೇವಾಲಯದಲ್ಲಿ ತಾಳ ಜಾಗಟೆಗಳನ್ನು ಬಾರಿಸುವವನು ಸಕಲ ಪಾಪಗಳನ್ನೂ ಕಳೆದುಕೊಂಡು ವಿಷ್ಣು ಲೋಕವನ್ನು ಹೊಂದುತ್ತಾನೆ.

೧೪೮-೧೫೦. ಸರ್ವಜ್ಞನೂ, ಜ್ಞಾನಸ್ವರೂಪನೂ, ದೋಷರಹಿತನೂ ಆದ ಯಾವ ವಿಷ್ಣುದೇವನು ಸಂತುಷ್ಟನಾಗಿ ಸಕಲಧರ್ಮಗಳಿಗೂ ಫಲವನ್ನು ಸಂಪೂರ್ಣವಾಗಿ ಕೊಡುವನೋ, ರಾಜನೇ ! ದೇವೋತ್ತಮನು, ಚಕ್ರಧಾರಿಯೂ ಆದ ಯಾವ ಶ್ರೀಹರಿಯನ್ನು ಸ್ಮರಿಸುವ ಮಾತ್ರದಿಂದ ಎಲ್ಲಾ ಕರ್ಮಗಳೂ ಸಫಲವಾಗುತ್ತವೆಯೋ, ಜಗದೊಡೆಯನು ಮತ್ತು ಸಕಲ ಕರ್ಮಗಳಿಗೂ ಫಲಪ್ರದನೂ

**ಪರಮಾತ್ಮಾ ಜಗನ್ನಾಥಃ ಸರ್ವಕರ್ಮಫಲಪ್ರದಃ ।**
**ಸತ್ಕರ್ಮ ಕರ್ತೃಭಿರ್ನಿತ್ಯಂ ಸ್ಮೃತಃ ಸರ್ವಾರ್ತಿನಾಶನಃ**
**ತಮುದ್ದಿಶ್ಯ ಕೃತಂ ಯಚ್ಚ ತದಾನಂತ್ಯಾಯ ಕಲ್ಪತೇ । ॥ ೧೫೦ ॥**

**ಧರ್ಮಶ್ಚ ವಿಷ್ಣುಃ ಸಕಲಾನಿ ವಿಷ್ಣುಃ ।**
**ಕರ್ಮಾಣಿ ವಿಷ್ಣುಶ್ಚ ಫಲಾನಿ ಭೋಕ್ತಾ ॥ ೧೫೧ ॥**

**ಕಾರ್ಯಂ ಚ ವಿಷ್ಣುಃ ಕರಣಾನಿ ವಿಷ್ಣುಃ ।**
**ಅಸ್ಮಾನ್ನ ಕಿಂಚಿದ್ವ್ಯತಿರಿಕ್ತಮಸ್ತಿ ॥ ೧೫೨ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ**
**ಪ್ರಥಮಪಾದೇ ಧರ್ಮಾನುಕಥನಂ ನಾಮ**
**ತ್ರಯೋದಶೋಽಧ್ಯಾಯಃ**

---

ಆದ ಯಾವ ಪರಮಾತ್ಮನು ಸ್ಮರಣೆಮಾತ್ರದಿಂದ ಸತ್ಕರ್ಮಾನುಷ್ಠಾನ ಮಾಡುವವರಿಗೆ ದುಃಖಪರಿಹಾರ ಮಾಡುತ್ತಾನೆಯೋ ಅಂತಹ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಲ್ಪಟ್ಟ ಕರ್ಮವು ಅಪರಿಮಿತಫಲಕ್ಕೆ ಸಾಧಕವಾಗುತ್ತದೆ.

೧೫೧-೧೫೨. ಧರ್ಮ, ಕರ್ಮ, ಫಲ ಮುಂತಾದ ಸಕಲವೂ ವಿಷ್ಣುವಿನ ಅಧೀನವು. ಅವನೇ ಸರ್ವಸಾರಭೋಕ್ತನು. ವಿಷ್ಣುವಿಗೆ ಅಧೀನವಾಗದಿರುವ ಬೇರೊಂದು ಸ್ವತಂತ್ರ ವಸ್ತುವಿಲ್ಲ. ಎಂದರೆ ವಿಷ್ಣು ಒಬ್ಬನೇ ಸ್ವತಂತ್ರನು. ಇತರ ಪ್ರಪಂಚವೆಲ್ಲವೂ ಅವನ ಅಧೀನವಾಗಿ ಪರತಂತ್ರವಾಗಿದೆ ಎಂದು ತಾತ್ಪರ್ಯ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ ಧರ್ಮಕಥನವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯವು "ದೇವಾಲಯವನ್ನು ಕಟ್ಟಿಸುವವರಿಗೆ ಬರುವ ಪುಣ್ಯ ಫಲವನ್ನು ಹೇಳುತ್ತೇನೆ ಕೇಳು" ಎಂಬ ಧರ್ಮರಾಜನ ಮಾತಿನಿಂದ ಆರಂಭಿಸಲ್ಪಟ್ಟಿದೆ. ದೇವಾಲಯ ಕೆರೆ ತುಳಸೀವನ ಮುಂತಾದುವುಗಳ ನಿರ್ಮಾಣದಿಂದಾಗುವ ಫಲವನ್ನು ವಿಸ್ತಾರವಾಗಿ ನಿರೂಪಿಸಿದೆ. ಊರ್ಧ್ವಪುಂಡ್ರಧಾರಣೆಯ ವಿಷಯವನ್ನೂ ಅದರ ಫಲ ಮುಂತಾದುವನ್ನೂ ವಿವರಿಸಿ ದೇವರಿಗೆ ಕ್ಷೀರಾದಿಗಳಿಂದ ಅಭಿಷೇಕ ಮಾಡುವುದರ ಪ್ರಾಶಸ್ತ್ಯ ಮತ್ತು ಫಲಗಳನ್ನು ವಿಶದಪಡಿಸಿದೆ. ತರುವಾಯ ಗೋವು ಮುಂತಾದವುಗಳನ್ನು ದಾನಮಾಡಿದರೆ ಉಂಟಾಗುವ ಫಲವನ್ನು ವಿಸ್ತಾರವಾಗಿ ಹೇಳಿ ದೇವಸ್ಥಾನಗಳ ಜೀರ್ಣೋದ್ಧಾರದ ಮಹಾಫಲಗಳನ್ನೂ, ವಿದ್ಯಾದಾನ ಗೋದಾನಗಳ ವಿಶೇಷ ಮಹಿಮೆ ಮುಂತಾದುವುಗಳನ್ನೂ ನಿರೂಪಿಸಿ, ಶಾಸ್ತ್ರೋಕ್ತವಾದ ಸಕಲ ಧರ್ಮಗಳನ್ನು ನಿರೂಪಿಸಲು ಯಾರಿಗೂ ಸಾಧ್ಯವಿಲ್ಲ, ಸಂಗ್ರಹವಾಗಿ ಹೇಳಿರುತ್ತೇನೆಂದು ತಿಳಿಸಿ, ಮುಖ್ಯವಾಗಿ ಸಕಲ ಧರ್ಮಗಳನ್ನೂ ವಿಷ್ಣುಭಕ್ತಿಪೂರ್ವಕವಾಗಿ ಆಚರಿಸಬೇಕು. ವಿಷ್ಣು ಸೇವೆಯೇ ಸರ್ವಕರ್ಮಫಲಪ್ರದವು, ವಿಷ್ಣುವೇ ಸಕಲ ಸಾರಭೋಕ್ತನು, ಸ್ವತಂತ್ರನು, ಜಗತ್ತೆಲ್ಲವೂ ಪರತಂತ್ರವು, ವಿಷ್ಣು ಹೊರತು ಮತ್ತೊಂದು ಸ್ವತಂತ್ರವಸ್ತುವಿಲ್ಲ. ಆದುದರಿಂದ ವಿಷ್ಣುಪ್ರೀತ್ಯರ್ಥವಾಗಿ ಸಕಲ ಕರ್ಮಗಳನ್ನೂ ಆಚರಿಸಬೇಕೆಂಬ ಅಭಿಪ್ರಾಯವನ್ನಾವಿಷ್ಕರಿಸಿ ಕೊನೆಗೊಂಡಿದೆ.

---

# ಚತುರ್ದಶೋಽಧ್ಯಾಯಃ

---

ಧರ್ಮರಾಜ ಉವಾಚ

ಶ್ರುತಿಸ್ಮೃತ್ಯುದಿತಂ ಧರ್ಮಂ ವರ್ಣಾನಾಮಾನುಪೂರ್ವಶಃ ।
ಪ್ರಬ್ರವೀಮಿ ನೃಪಶ್ರೇಷ್ಠ ತಂ ಶೃಣುಷ್ವ ಸಮಾಹಿತಃ ॥ ೧ ॥

ಯೋ ಭುಂಜಾನೋಽಶುಚಿಂ ವಾಽಪಿ ಚಂಡಾಲಂ ಪತಿತಂ ಸ್ಪೃಶೇತ್ ।
ಕ್ರೋಧಾದಜ್ಞಾನತೋ ವಾಽಪಿ ತಸ್ಯ ವಕ್ಷ್ಯಾಮಿ ನಿಷ್ಕೃತಿಂ ॥ ೨ ॥

ತ್ರಿರಾತ್ರಂ ವಾಽಥ ಷಡ್ರಾತ್ರಂ ಯಥಾಸಂಖ್ಯಂ ಸಮಾಚರೇತ್ ।
ಸ್ನಾನಂ ತ್ರಿಷವಣಂ ವಿಪ್ರ ಪಂಚಗವ್ಯೇನ ಶುದ್ಧ್ಯತಿ ॥ ೩ ॥

---

## ಹದಿನಾಲ್ಕನೆಯ ಅಧ್ಯಾಯವು

೧. ಧರ್ಮರಾಜನು ಹೇಳಿದನು:—ರಾಜೋತ್ತಮನೇ ! ವೇದ ಮತ್ತು ಸ್ಮೃತಿಗ್ರಂಥಗಳಲ್ಲಿ ಹೇಳಿರುವ ಜಾತಿಧರ್ಮಗಳನ್ನು ಕ್ರಮವಾಗಿ ಹೇಳುತ್ತೇನೆ ಸಮಾಧಾನಚಿತ್ತದಿಂದ ಕೇಳು.

೨. ಊಟಮಾಡುತ್ತಿರುವಾಗ ಅಶುದ್ಧಮನುಷ್ಯನು ಪಂಚಮ, ಪತಿತ (ಉತ್ತಮಜಾತಿಯಲ್ಲಿ ಹುಟ್ಟಿ ದುಷ್ಕೃತ್ಯಗಳನ್ನು ಮಾಡಿರುವವನು) ಇವರುಗಳನ್ನು ಕೋಪದಿಂದ ಅಥವಾ ತಿಳಿಯದೆಯಾದರೂ ಮುಟ್ಟಿದರೆ ಅಶುದ್ಧನಾಗುವನು. ಅಂತಹವನಿಗೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ.

೩. ಬ್ರಾಹ್ಮಣನೇ ! ಅಂತಹವನು ಕ್ರಮವಾಗಿ ಮೂರು ದಿವಸ ಅಥವಾ ಆರುದಿವಸ ತ್ರಿಕಾಲಸ್ನಾನ ಮತ್ತು ಪಂಚಗವ್ಯಪ್ರಾಶನೆಗಳಿಂದ ಪರಿಶುದ್ಧನಾಗುತ್ತಾನೆ.

ಭುಂಜಾನಸ್ಯ ತು ವಿಪ್ರಸ್ಯ ಕದಾಚಿತ್ಸ್ರವತೇ ಗುದಂ ।
ಉಚ್ಛಿಷ್ಟತ್ವೇಽಶುಚಿತ್ವೇ ಚ ತಸ್ಯ ಶುದ್ಧಿಂ ವದಾಮಿ ತೇ ॥ ೪ ॥

ಪೂರ್ವಂ ಕೃತ್ವಾ ದ್ವಿಜಃ ಶೌಚಂ ಪಶ್ಚಾದಾಪ ಉಪಸ್ಪೃಶೇತ್ ।
ಅಹೋರಾತ್ರೋಽಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ॥ ೫ ॥

ನಿಗರನ್ಯದಿ ಮೇಹೇತ ಭುಕ್ತ್ವಾ ವಾ ಮೇಹನೇ ಕೃತೇ ।
ಅಹೋರಾತ್ರೋಷಿತೋ ಭೂತ್ವಾ ಜುಹುಯಾತ್ಸರ್ಪಿಷಾಽನಲಂ ॥ ೬ ॥

ಯದಾ ಭೋಜನಕಾಲೇ ಸ್ಯಾದಶುಚಿರ್ಬ್ರಾಹ್ಮಣಃ ಕ್ವಚಿತ್ ।
ಭೂಮೌ ನಿಧಾಯ ತಂ ಗ್ರಾಸಂ ಸ್ನಾತ್ವಾ ಶುದ್ಧಿಮವಾಪ್ನುಯಾತ್ ॥ ೭ ॥

ಭಕ್ಷಯಿತ್ವಾ ತು ತದ್ಗ್ರಾಸಮುಪವಾಸೇನ ಶುಧ್ಯತಿ ।
ಅಶಿತ್ವಾ ಚೈವ ತತ್ಸರ್ವಂ ತ್ರಿರಾತ್ರಮಶುಚಿರ್ಭವೇತ್ ॥ ೮ ॥

---

೪. ಊಟಮಾಡುತ್ತಿರುವಾಗ ಬ್ರಾಹ್ಮಣನಿಗೆ ಒಂದುವೇಳೆ ಮಲವು ಸ್ರವಿಸಿದರೆ ಅದರಿಂದುಂಟಾಗುವ ಅಶುದ್ಧಿಯನ್ನು ನಿವಾರಿಸುವ ಪ್ರಾಯಶ್ಚಿತ್ತವನ್ನು ನಿನಗೆ ಹೇಳುತ್ತೇನೆ.

೫. ಅಂತಹವನು ಬಹಿರ್ದೇಶಕ್ಕೆ ಹೋಗಿ ಸಂಪೂರ್ಣವಾಗಿ ಮಲವಿಸರ್ಜನೆಮಾಡಿ ತೊಳೆದುಕೊಂಡು ಒಂದುದಿನ ಉಪವಾಸವನ್ನು ಮಾಡಿ ಪಂಚಗವ್ಯವನ್ನು ಕುಡಿದರೆ ಶುದ್ಧನಾಗುವನು.

೬. ಆಹಾರವನ್ನು ತಿನ್ನುತ್ತಿರುವಾಗ ಅಥವಾ ಊಟವಾದಮೇಲೆ ರೇತಸ್ಸು ಸ್ರವಿಸಿದರೆ ಒಂದು ದಿನ ಉಪವಾಸಮಾಡಿ ತುಪ್ಪದಿಂದ ಬೆಂಕಿಯಲ್ಲಿ ಹೋಮ ಮಾಡಬೇಕು.

೭. ಬ್ರಾಹ್ಮಣನು ಭೋಜನಮಾಡುವ ಕಾಲದಲ್ಲಿ ಮೈಲಿಗೆಯುಂಟಾದರೆ ಕೈಯಲ್ಲಿ ತೆಗೆದುಕೊಂಡಿದ್ದ ತುತ್ತನ್ನು ಹಾಗೆಯೇ ನೆಲದಲ್ಲಿಟ್ಟು ಸ್ನಾನಮಾಡಿದರೆ ಶುದ್ಧನಾಗುತ್ತಾನೆ.

೮. ಕೈಯಲ್ಲಿ ತೆಗೆದುಕೊಂಡಿದ್ದ ಆಹಾರವನ್ನು ಹಾಗೆಯೇ ತಿಂದರೆ ಉಪವಾಸಮಾಡಿ ಶುದ್ಧಿಯನ್ನು ಪಡೆಯಬೇಕು. ಎಲೆಯಲ್ಲಿದ್ದುದನ್ನೆಲ್ಲಾ ತಿಂದರೆ ಮೂರು ದಿನಗಳು ಅಶುದ್ಧನಾಗಿರುತ್ತಾನೆ.

ಅಶ್ನತಶ್ಚೇದ್ವಮಿಃ ಸ್ಯಾದ್ವೈ ಹ್ಯಸ್ವಸ್ಥಸ್ತ್ರಿಶತಂ ಜಪೇತ್ ।
ಸ್ವಸ್ಥಸ್ತ್ರೀಣಿ ಸಹಸ್ರಾಣಿ ಗಾಯತ್ರ್ಯಾಃ ಶೋಧನಂ ಪರಂ ॥ ೯ ॥

ಚಂಡಾಲ್ಯೈಃ ಶ್ವಪಚೈಃ ಸ್ಪೃಷ್ಟೋ ವಿಣ್ಮೂತ್ರೇ ಚ ಕೃತೇ ದ್ವಿಜಃ ॥ ೧೦ ॥

ತ್ರಿಃ ಶೌಚಂ ತು ಪ್ರಕುರ್ವೀತ ಭುಕ್ತೋಚ್ಛಿಷ್ಟಃ ಷಡಾಚರೇತ್ ।
ಉದಕ್ಯಾಂ ಸೂತಿಕಾಂ ವಾಽಪಿ ಸ್ಪೃಶೇದಂತ್ಯಜೋ ಯದಿ ॥ ೧೧ ॥

ತ್ರಿರಾತ್ರೇಣ ವಿಶುದ್ಧಿಃ ಸ್ಯಾದಿತಿ ಶಾತಾತಪೋಽಬ್ರವೀತ್ ।
ರಜಸ್ವಲಾ ತು ಸಂಸ್ಪೃಷ್ಟ್ವಾ ಶ್ವಭಿರ್ಮಾತಂಗವಾಯಸೈಃ ॥ ೧೨ ॥

ನಿರಾಹಾರಾಽಶುಚಿಸ್ತಿಷ್ಠೇತ್ಕಾಲೇ ಸ್ನಾನೇನ ಶುದ್ಧ್ಯತಿ ।
ರಜಸ್ವಲೇ ಯದಾ ನಾರ್ಯಾವನ್ಯೋನ್ಯಂ ಸ್ಪೃಶತಃ ಕ್ವಚಿತ್ ॥ ೧೩ ॥

---

೯. ಊಟಮಾಡುವ ಕಾಲದಲ್ಲಿ ವಾಂತಿಯಾದರೆ ಅವನು ರೋಗಿಯಾಗಿದ್ದಲ್ಲಿ ಗಾಯತ್ರೀ ಮಂತ್ರವನ್ನು ಮುನ್ನೂರಾವರ್ತಿ ಜಪಿಸಬೇಕು. ರೋಗವಿಲ್ಲದೆ ಸ್ವಸ್ಥನಾಗಿದ್ದರೆ ಮೂರುಸಾವಿರ ಸಾರಿ ಗಾಯತ್ರೀ ಮಂತ್ರ ಜಪಿಸಿ ಶುದ್ಧಿಯನ್ನು ಪಡೆಯಬೇಕು.

೧೦. ಶ್ವಪಚರಾದ ಪಂಚಮಜಾತಿಯವರನ್ನು ಮುಟ್ಟಿ ದ್ವಿಜನು ಮಲಮೂತ್ರ ವಿಸರ್ಜನೆಮಾಡಿದರೆ ಮೂರಾವರ್ತಿ ಮೃತ್ತಿಕಾಶೌಚಮಾಡಬೇಕು. ಎಂಜಲುಕೈಯಿಂದ ಅಂತ್ಯಜಸ್ಪರ್ಶಾದಿಗಳಾದರೆ ಆರಾವರ್ತಿ ಮೃತ್ತಿಕಾಶೌಚವನ್ನಾಚರಿಸಬೇಕು.

೧೧-೧೨. ರಜಸ್ವಲೆಯಾದ, ಅಥವಾ ಪ್ರಸವಿಸಿದ ಸ್ತ್ರೀಯನ್ನು ಹೊಲೆಯನು ಮುಟ್ಟಿದರೆ ಮೂರುದಿನಗಳು ಕಳೆದರೆ ಶುದ್ಧಿಯಾಗುತ್ತದೆಂದು ಶಾತಾತಪ ಮುನಿಯು ಹೇಳಿರುವನು.

೧೨-೧೩. ಮುಟ್ಟಾದ ಹೆಂಗಸು, ನಾಯಿ, ಆನೆ, ಕಾಗೆ ಇವುಗಳನ್ನು ಮುಟ್ಟಿದರೆ ಅಶುಚಿಯಾಗಿರುವವರೆಗೂ ಉಪವಾಸವಿದ್ದು ವಿಹಿತಕಾಲ ಎಂದರೆ ನಾಲ್ಕನೆಯ ದಿನ ಸ್ನಾನಮಾಡಿ ಶುದ್ಧಿಯನ್ನು ಪಡೆಯಬೇಕು.

ಶುದ್ಧ್ಯೇತೇ ಬ್ರಹ್ಮಕೂರ್ಚೇನ ಬ್ರಹ್ಮಕೂರ್ಚೇನ ಚೋಪರಿ ।
ಉಚ್ಛಿಷ್ಟೇನ ಚ ಸಂಸ್ಪೃಷ್ಟೋ ಯೋ ಹಿ ಸ್ನಾನಂ ಸಮಾಚರೇತ್ ॥ ೧೪ ॥

ಋತೌ ತು ಗರ್ಭಂ ಶಂಕಿತ್ವಾ ಸ್ನಾನಂ ಮೈಥುನಿನಃ ಸ್ಮೃತಂ ।
ಅನೃತೌ ತು ಸ್ತ್ರಿಯಂ ಗತ್ವಾ ಶೌಚಂ ಮೂತ್ರಪುರೀಷವತ್ ॥ ೧೫ ॥

ಉಭಾವಪ್ಯಶುಚೀಸ್ಯಾತಾಂ ದಂಪತೀ ಯಾಭಸಂಗತೌ ।
ಶಯನಾದುತ್ಥಿತಾ ನಾರೀ ಶುಚಿಃ ಸ್ಯಾದಶುಚಿಃ ಪುಮಾನ್ ॥ ೧೬ ॥

ಭರ್ತುಃ ಶರೀರಶುಶ್ರೂಷಾಂ ದೌರಾತ್ಮ್ಯಾದಪ್ರಕುರ್ವತೀ ।
ದಂಡ್ಯಾ ದ್ವಾದಶಕಂ ನಾರೀ ವರ್ಷಂ ತ್ಯಾಜ್ಯಾ ಧನಂ ವಿನಾ ॥ ೧೭ ॥

---

೧೩-೧೪. ಮುಟ್ಟಾದ ಹೆಂಗಸರು ಒಬ್ಬರನ್ನೊಬ್ಬರು ಮುಟ್ಟಿದರೆ ಬ್ರಹ್ಮಕೂರ್ಚವೆಂಬ ವ್ರತವನ್ನು ಮಾಡಿ ಶುದ್ಧರಾಗಬೇಕು. ಸ್ನಾನಾನಂತರವೂ ಇಬ್ಬರೂ ಬ್ರಹ್ಮಕೂರ್ಚವ್ರತವನ್ನು ಆಚರಿಸಬೇಕು. ಮೈಲಿಗೆಯವನನ್ನು ಮುಟ್ಟಿದವನು ಸ್ನಾನ ಮಾಡಬೇಕು.

೧೫. ಋತುಕಾಲದಲ್ಲಿ ಸ್ತ್ರೀಸಂಭೋಗ ಮಾಡುವವನಿಗೆ ಗರ್ಭಧಾರಣೆಯಾಯಿತೆಂಬ ಸಂದೇಹವುಂಟಾದರೆ ಸ್ನಾನಮಾಡಬೇಕು. ಋತುಕಾಲವಲ್ಲದೆ ಇತರ ಸಮಯದಲ್ಲಿ ಸ್ತ್ರೀ ಸಂಭೋಗ ಮಾಡಿದರೆ ಮಲಮೂತ್ರವಿಸರ್ಜನೆ ಮಾಡಿದಾಗ ಆಚರಿಸುವಂತೆ ಮೃತ್ತಿಕಾಶೌಚಾದಿಗಳನ್ನು ಆಚರಿಸಬೇಕು.

೧೬. ಸಂಭೋಗ ಕಾಲದಲ್ಲಿ ದಂಪತಿಗಳಿಬ್ಬರೂ ಅಶುದ್ಧರಾಗುತ್ತಾರೆ. ಹಾಸಿಗೆಯಿಂದ ಎದ್ದಮೇಲೆ ಸ್ತ್ರೀಯು ಶುದ್ಧಳು, ಪುರುಷನು ಅಶುದ್ಧನೂ ಆಗುತ್ತಾರೆ.

೧೭. ದುಷ್ಟತನದಿಂದ ಗಂಡನ ಸೇವೆಯನ್ನು ಮಾಡದಿರುವ ಹೆಂಗಸು ಶಿಕ್ಷಾರ್ಹಳು. ಅಂತಹವಳನ್ನು ಹಣ ಕೊಡದೇ ಹನ್ನೆರಡು ವರ್ಷಗಳ ಕಾಲ ತ್ಯಜಿಸಬೇಕು.

ತ್ಯಜತೋ ಪತಿತಾನ್ಬಂಧೂನ್ದಂಡ್ಯಾನುತ್ತಮಸಾಹಸಂ ।
ಪಿತಾ ಹಿ ಪತಿತಃ ಕಾಮಂ ನ ತು ಮಾತಾ ಕದಾಚನ ॥ ೧೮ ॥

ಆತ್ಮಾನಂ ಘಾತಯೇದ್ಯಸ್ತು ರಜ್ಜ್ವಾದಿಭಿರುಪಕ್ರಮೈಃ ।
ಮೃತೇಽಮೇಧ್ಯೇನ ಲೇಪ್ತವ್ಯೋ ಜೀವತೋ ದ್ವಿಶತಂ ದಮಃ ॥ ೧೯ ॥

ದಂಡ್ಯಾಸ್ತತ್ಪುತ್ರಮಿತ್ರಾಣಿ ಪ್ರತ್ಯೇಕಂ ಪಾಣಿಕಂ ದಮಂ ।
ಪ್ರಾಯಶ್ಚಿತ್ತಂ ತತಃ ಕುರ್ಯುರ್ಯಥಾಶಾಸ್ತ್ರಪ್ರಚೋದಿತಂ ॥ ೨೦ ॥

ಜಲಾಗ್ನ್ಯುದ್ಬಂಧನಭ್ರಷ್ಟಾಃ ಪ್ರವ್ರಜ್ಯಾ ನಾಶಕಚ್ಯುತಾಃ ।
ವಿಷಪ್ರಪತನಪ್ರಾಯಃ ಶಸ್ತ್ರಘಾತಹತಾಶ್ಚ ಯೇ ॥ ೨೧ ॥

---

೧೮. ದುಷ್ಕೃತ್ಯಗಳಿಂದ ಪಾಪಿಷ್ಠರು ಮತ್ತು ಶಿಕ್ಷೆಗೆ ಪಾತ್ರರೂ ಆದ ನಂಟರನ್ನು ಬಿಡುವವನ ಸಾಹಸವು ಉತ್ತಮ. ತಂದೆಯು ಸ್ವಚ್ಛಂದವಾಗಿ ಪಾಪಕರ್ಮಗಳನ್ನು ಮಾಡಿ ಪಾಪಿಷ್ಠನಾದರೆ ಅವನನ್ನೂ ಸಹ ಬಿಡಬೇಕು. ಎಂತಹ ಸಂದರ್ಭವೊದಗಿದಾಗ್ಯೂ ತಾಯಿಯನ್ನು ತ್ಯಾಗಮಾಡಬಾರದು.

೧೯. ಹಗ್ಗ ಮುಂತಾದುವುಗಳಿಂದ ಕುತ್ತಿಗೆಗೆ ಉರುಳು ಹಾಕಿಕೊಂಡು ಆತ್ಮಹತ್ಯೆಯನ್ನು ಮಾಡಲುದ್ಯುಕ್ತನಾದವನು ಆದರಿಂದ ಸತ್ತರೆ ಅವನ ಶರೀರಕ್ಕೆ ಅಮೇಧ್ಯ (ಹೇಲು) ಮೆತ್ತಬೇಕು. ಸಾಯದೆ ಬದುಕಿದರೆ ಅಂತಹವನಿಗೆ ಇನ್ನೂರು ಏಟುಗಳನ್ನು ಹೊಡೆಯಬೇಕು.

೨೦. ಅಂತಹವನ ಮಕ್ಕಳು, ಸ್ನೇಹಿತರು ಇವರಿಗೂ ಸಹ ಪ್ರತ್ಯೇಕವಾಗಿ ಕೈಶಿಕ್ಷೆಯನ್ನು ಮಾಡಬೇಕು. ಅನಂತರ ಶಾಸ್ತ್ರೋಕ್ತಪ್ರಕಾರ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕು.

೨೧-೨೨. ಆತ್ಮಹತ್ಯೆಗಾಗಿ ನೀರಿನಲ್ಲಿ ಬಿದ್ದು, ಅಥವಾ ಬೆಂಕಿ, ಇಲ್ಲವೇ ನೇಣು ಇವುಗಳನ್ನು ಹಾಕಿಕೊಂಡಾಗ್ಯೂ ಸಾಯದೇ ಇರುವವರು, ಸನ್ಯಾಸಾಶ್ರಮವನ್ನು ಸ್ವೀಕರಿಸಿ ದುರ್ನಡತೆಗಳಿಂದ ಅದನ್ನು ಕಳೆದುಕೊಂಡಿರುವವರು, ವಿಷ ತೆಗೆದುಕೊಂಡು, ಅಥವಾ ಎಲ್ಲವನ್ನೂ ಬಿಟ್ಟು ಉಪವಾಸದಿಂದ, ಇಲ್ಲವೇ

**ನ ಚೈತೇ ಪ್ರತ್ಯವಸಿತಾಃ ಸರ್ವಲೋಕಬಹಿಷ್ಕೃತಾಃ ।**
**ಚಾಂದ್ರಾಯಣೇನ ಶುದ್ಧ್ಯಂತಿ ತಪ್ತಕೃಚ್ಛ್ರದ್ವಯೇನ ವಾ ॥ ೨೨ ॥**

**ಖಡ್ಗಾದಿಭಿಶ್ಚ್ಯುತಶ್ಚೈವ ವೃಕ್ಷಶೈಲನಿಪಾತನೈಃ ।**
**ಚಾಂದ್ರಾಯಣಾಭ್ಯಾಂ ಶುದ್ಧ್ಯೇತ ದತ್ವಾ ಧೇನುಂ ತಥಾ ವೃಷಂ ॥ ೨೩ ॥**

**ಶ್ವಸೃಗಾಲಪ್ಲವಂಗಾದ್ಯೈರ್ಮಾನುಷಶ್ಚ ರತಿಂ ವಿನಾ ।**
**ಸ್ಪೃಷ್ಟಃ ಸ್ನಾತ್ವಾ ಶುಚಿಃ ಸದ್ಯೋ ದಿವಾ ಸಂಧ್ಯಾಸು ರಾತ್ರಿಷು ॥ ೨೪ ॥**

---

ಶಸ್ತ್ರಘಾತದಿಂದ ಸಾಯಲೆತ್ನಿಸಿದವರೂ ಸಹ ಭೋಜನಕ್ಕೆ ಪಾತ್ರರಲ್ಲ. ಮತ್ತು ಅವರು ಎಲ್ಲರಿಂದಲೂ ಬಹಿಷ್ಕೃತರಾಗುವರು. ಅಂತಹವರು ಚಾಂದ್ರಾಯಣ ವ್ರತವನ್ನು ಅಥವಾ ಎರಡು ತಪ್ತಕೃಚ್ಛ್ರಗಳನ್ನು ಆಚರಿಸಿದರೆ ಶುದ್ಧರಾಗುತ್ತಾರೆ. (ತಪ್ತಕೃಚ್ಛ್ರವೆಂದರೆ—ತ್ರ್ಯಹಮುಷ್ಣಾಃ ಪಿಬೇದಾಪಃ ತ್ರ್ಯಹಮುಷ್ಣಂ ಘೃತಂ ಪಿಬೇತ್ । ತ್ರ್ಯಹಮುಷ್ಣಂ ಪಯಃ ಪೀತ್ವಾ ವಾಯುಭಕ್ಷೋ ದಿನತ್ರಯಂ ॥ ಎಂಬ ವಚನಾನುಸಾರವಾಗಿ ಮೂರು ದಿವಸ ಬಿಸಿ ನೀರು, ಮೂರುದಿನ ಕಾಯಿಸಿ ಬಿಸಿಯಾಗಿರುವ ತುಪ್ಪ ಮಾತ್ರ, ಮೂರು ದಿವಸ ಕಾಯಿಸಿ ಬಿಸಿಯಾಗಿರುವ ಹಾಲು ಮಾತ್ರ ಈ ಪ್ರಕಾರ ಒಂಭತ್ತು ದಿವಸಗಳು ಆಹಾರವನ್ನು ಸೇವಿಸಿ ತರುವಾಯ ಮೂರು ದಿವಸಗಳು ಕೇವಲ ವಾಯು ಸೇವನೆಯಿಂದ ಉಪವಾಸಮಾಡುವ ವ್ರತವು.)

೨೩. ಕತ್ತಿ ಮುಂತಾದುವುಗಳಿಂದ ತಿವಿದುಕೊಂಡು ಅಥವಾ ಮರ ಬೆಟ್ಟಗಳಿಂದ ಬಿದ್ದು ಸಾಯಬೇಕೆಂದು ಪ್ರಯತ್ನಿಸಿ ಸಾಯದಿರುವವನು ಎರಡು ಚಾಂದ್ರಾಯಣವ್ರತವನ್ನು ಮಾಡಿದರೆ ಶುದ್ದನಾಗುವನು.

೨೪. ನಾಯಿ, ನರಿ, ಕಪಿ ಮುಂತಾದ ಪ್ರಾಣಿಗಳನ್ನು ಆಟದ ಸಮಯವಲ್ಲದೇ ಇತರ ಕಾಲಗಳಲ್ಲಿ ಮುಟ್ಟಿದ ಮನುಷ್ಯನು ಹಗಲು, ಸಂಧ್ಯಾಕಾಲ ಅಥವಾ ರಾತ್ರಿ ಯಾವ ಸಮಯದಲ್ಲಿಯಾದರೂ ತಕ್ಷಣ ಸ್ನಾನಮಾಡಿ ಶುದ್ಧಿಯನ್ನು ಪಡೆಯಬೇಕು.

ಅಜ್ಞಾನಾದ್ವಾ ತು ಯೋ ಭುಕ್ತ್ವಾ ಚಾಂಡಾಲಾನ್ನಂ ಕಥಂಚನ ।
ಗೋಮೂತ್ರಯಾವಕಾಹಾರೋ ಮಾಸಾರ್ಧೇನ ವಿಶುಧ್ಯತಿ ॥ ೨೫ ॥

ಗೋಬ್ರಾಹ್ಮಣಗೃಹಂ ದಗ್ಧ್ವಾ ಮೃತಶ್ಚೋದ್ಬಂಧನಾದಿನಾ ।
ಪಾಶಂ ಛಿತ್ವಾ ತಥಾ ತಸ್ಯ ಕೃಚ್ಛ್ರಮೇಕಂ ಚರೇದ್ದ್ವಿಜಃ ॥ ೨೬ ॥

ಚಂಡಾಲಪುಲ್ಕಸಾನಾಂ ಚ ಭುಕ್ತ್ವಾ ದತ್ವಾ ಚ ಯೋಷಿತಂ ।
ಕೃಚ್ಛ್ರಾರ್ಧಮಾಚರೇದ್ಜ್ಞಾನಾದಜ್ಞಾನಾದ್ಯೆಂದವದ್ವಯಂ ॥ ೨೭ ॥

ಗೋಪಾಲಕಾನ್ನಭೋಕ್ತ್ರೂಣಾಂ ತನ್ನಾರೀಗಾಮಿನಾಂ ತಥಾ ।
ಅಗಮ್ಯಾಗಮನೇ ವಿಪ್ರೋ ಮದ್ಯಗೋಮಾಂಸಭಕ್ಷಣೇ ॥ ೨೮ ॥

ತಪ್ತಕೃಚ್ಛ್ರ ಪರಿಕ್ಷಿಪ್ತೋ ಮೌರ್ವೀ ಹೋಮೇನ ಶುಧ್ಯತಿ ।
ಮಹಾಪಾತಕಕರ್ತಾರಶ್ಚತ್ವಾರೋಽಥ ವಿಶೇಷತಃ ॥ ೨೯ ॥

---

೨೫. ತಿಳಿಯದೇ ಅಥವಾ ಕಾರಣಾಂತರದಿಂದಲಾದರೂ ಚಂಡಾಲರು ಮುಟ್ಟಿದ ಅನ್ನವನ್ನು ತಿಂದವನು ಹದಿನೈದು ದಿನಗಳು ಗೋಮೂತ್ರ (ಗಂಜಲ) ವನ್ನು ಕುಡಿಯುತ್ತಾ, ಅಲಸಂದಿಕಾಳನ್ನು ಮಾತ್ರ ತಿಂದು ಶುದ್ಧಿಯನ್ನು ಪಡೆಯಬೇಕು.

೨೬. ಗೋವು ಮತ್ತು ಬ್ರಾಹ್ಮಣರ ವಾಸಗೃಹವನ್ನು ಸುಟ್ಟು ನೇಣು ಹಾಕಿಕೊಂಡು ಮೃತನಾದರೆ ಹಗ್ಗವನ್ನು ಕತ್ತರಿಸಿ ಅವನಿಗೆ ಹಾಗೆಯೇ ಒಂದು ಕೃಚ್ಛ್ರವನ್ನು ಮಾಡಿಸಬೇಕು.

೨೭. ಚಂಡಾಲ, ಪುಲ್ಕಸ ಮುಂತಾದ ಕೀಳುಜಾತಿಯ ಹೆಂಗಸರನ್ನು ಜ್ಞಾನಪೂರ್ವಕವಾಗಿ ಹಿಂಸಿಸಿ, ಭೋಗಿಸುವವನು ಕೃಚ್ಛ್ರಾರ್ಧವೆಂಬ ಆರು ದಿನಗಳು ಮಾಡತಕ್ಕ ವ್ರತವನ್ನು ಆಚರಿಸಬೇಕು. ಅಜ್ಞಾನದಿಂದ ಅಂತಹ ಕೆಲಸಮಾಡುವವನು ಎರಡಾವರ್ತಿ ಚಾಂದ್ರಾಯಣವ್ರತವನ್ನು ಮಾಡಬೇಕು.

೨೮-೨೯. ಗೋಪಾಲಕರ ಮನೆಯಲ್ಲಿ ಊಟಮಾಡುವವರು ಮತ್ತು ಗೋಪಾಲ ಸ್ತ್ರೀಸಂಭೋಗಮಾಡುವವರೂ ಸಹ ಚಾಂದ್ರಾಯಣದ್ವಯವನ್ನಾ ಚರಿಸಿ ಶುದ್ಧರಾಗಬೇಕು, ಬ್ರಾಹ್ಮಣನು ಅಗಮ್ಯಾಗಮನ, ಮದ್ಯಪಾನ ಮತ್ತು

**ಅಗ್ನಿಂ ಪ್ರವಿಶ್ಯ ಶುಧ್ಯಂತಿ ಸ್ಥಿತ್ವಾ ವಾ ಮಹತಿ ಕ್ರತೌ ।**
**ರಹಸ್ಯ ಕರಣೋऽಪ್ಯೇವಂ ಮಾಸಮಪ್ಯಸ್ಯ ಪೂರುಷಃ ॥ ೩೦ ॥**

**ಅಘಾಮರ್ಷಣಸೂಕ್ತಂ ವಾ ಶುಧ್ಯೇದಂತರ್ಜಲೇ ಜಪನ್ ।**
**ರಜಕಶ್ಚರ್ಮಕಾರಶ್ಚ ನಟೋ ವರಡ ಏವ ಚ ॥ ೩೧ ॥**

**ಕೈವರ್ತಮೇದಿಭಿಲ್ಲಾಶ್ಚ ಸಪ್ತೈತೇ ಹ್ಯಂತ್ಯಜಾಃ ಸ್ಮೃತಾಃ ।**
**ಭುಕ್ತ್ವಾ ಚೈಷಾಂ ಸ್ತ್ರಿಯೋ ಗತ್ವಾ ಪೀತ್ವಾ ಯಃ ಪ್ರತಿಗೃಹ್ಯತೇ ॥ ೩೨ ॥**

**ಕೃಚ್ಛ್ರಾರ್ಧಮಾಚರೇದ್ಜ್ಞಾನಾದಜ್ಞಾನಾದೈಂದವದ್ವಯಂ ।**
**ಮಾತರಂ ಗುರುಪತ್ನೀಂ ಚ ದುಹಿತೃಭಗಿನೀಸ್ನುಷಾಃ ॥ ೩೩ ॥**

---

ಗೋಮಾಂಸಭಕ್ಷಣ ಇವುಗಳನ್ನಾಚರಿಸಿದರೆ ತಪ್ತಕೃಚ್ಛ್ರವೆಂಬ ವ್ರತವನ್ನಾಚರಿಸಿ ಮೌರ್ವೀ ಹೋಮಮಾಡಿ ಶುದ್ಧನಾಗಬೇಕು.

೨೯-೩೧. ಸ್ವರ್ಣಸ್ತೇಯ, ಸುರಾಪಾನ, ಬ್ರಹ್ಮಹತ್ಯೆ ಮುಂತಾದ ಮಹಾಪಾತಕಗಳನ್ನು ಮಾಡಿದವರು ಮಾತ್ರ ಅಗ್ನಿಪ್ರವೇಶದಿಂದಲೇ ಶುದ್ಧರಾಗುತ್ತಾರೆ. ಮಹಾಕ್ರತುಗಳನ್ನು ಮಾಡುತ್ತಿರುವಾಗ ರಹಸ್ಯವಾಗಿ ಪಾಪಕೃತ್ಯಗಳನ್ನು ಮಾಡುವ ಮನುಷ್ಯನು ನೀರಿನಲ್ಲಿ ನಿಂತು ಒಂದು ತಿಂಗಳು ಪರ್ಯಂತವಾಗಿ ಅಘಮರ್ಷಣಸೂಕ್ತವನ್ನು ಜಪಿಸಿದರೆ ಶುದ್ಧನಾಗುತ್ತಾನೆ.

೩೧-೩೩ ಅಗಸ, ಜೋಡು ಹೊಲಿಯುವವನು, ನಟ, ವರಡ ಎಂಬ ಅಂತ್ಯಜನು, ಬೆಸ್ತರವನು, ಮೇದಿ, ಭಿಲ್ಲ ಎಂಬ ಏಳು ಜಾತಿಯವರು ಅಂತ್ಯಜರೆಂದು ಉಕ್ತವಾಗಿದೆ. ಅಂತಹವರಲ್ಲಿ ಭೋಜನಮಾಡಿದರೆ ಅಥವಾ ನೀರು ಕುಡಿದರೆ ಅಥವಾ ಅವರ ಹೆಂಗಸರ ಸಂಭೋಗಮಾಡಿದರೆ ಅಥವಾ ಅವರಿಂದ ಏನಾದರೂ ದಾನವನ್ನು ತೆಗೆದುಕೊಂಡರೂ ಸಹ ಅದು ತಿಳಿದು ಆಚರಿಸಿದ್ದರೆ ಕೃಚ್ಛ್ರಾರ್ಧವೆಂಬ ವ್ರತವನ್ನೂ, ತಿಳಿಯದೇ ಮಾಡಿದ್ದರೆ ಚಾಂದ್ರಾಯಣದ್ವಯವನ್ನೂ ಮಾಡಿ ಶುದ್ಧನಾಗಬೇಕು.

**ಸಂಗಮ್ಯ ಪ್ರವಿಶೇದಗ್ನಿಂ ನಾನ್ಯಾ ಶುದ್ಧಿರ್ವಿಧೀಯತೇ ।**
**ರಾಜ್ಞೀಂ ಪ್ರವ್ರಜಿತಾಂ ಧಾತ್ರೀಂ ತಥಾ ವರ್ಣೋತ್ತಮಾಮಪಿ ॥ ೩೪ ॥**

**ಗತ್ವಾ ಕೃಚ್ಛ್ರದ್ವಯಂ ಕುರ್ಯಾತ್ಸಗೋತ್ರಾಮಭಿಗಮ್ಯ ಚ ।**
**ಅಮೂಷು ಪಿತೃಗೋತ್ರಾಸು ಮಾತೃಗೋತ್ರಗತಾಸು ಚ ॥ ೩೫ ॥**

**ಪರದಾರೇಷು ಸರ್ವೇಷು ಕೃಚ್ಛ್ರಾರ್ಧಂ ತಪನಂ ಚರೇತ್ ।**
**ವೇಶ್ಯಾಭಿಗಮನೇ ಪಾಪಂ ವ್ಯಪೋಹಂತಿ ದ್ವಿಜಾಸ್ತಥಾ ॥ ೩೬ ॥**

**ಪೀತ್ವಾ ಸಕೃತ್ಸುತಪ್ತಂ ಚ ಪಂಚರಾತ್ರಂ ಕುಶೋದಕಂ ।**
**ಗುರುತಲ್ಪಗತಃ ಕುರ್ಯಾದ್ಬ್ರಾಹ್ಮಣೋ ವಿಧಿವದ್ವ್ರತಂ ॥ ೩೭ ॥**

**ಗೋಘ್ನಸ್ಯ ಕೇಚಿದಿಚ್ಛಂತಿ ಕೇಚಿಚ್ಚೈವಾವಕೀರ್ಣಿನಃ ।**
**ದಂಡಾದೂರ್ಧ್ವಂ ಪ್ರಹಾರೇಣ ಯಸ್ತು ಗಾಂ ವಿನಿಪಾತಯೇತ್ ॥ ೩೮ ॥**

---

೩೩-೩೪. ತಾಯಿ, ಗುರುಪತ್ನಿ, ಮಗಳು, ಸಹೋದರಿ, ಸೊಸೆ ಇವರುಗಳ ಸಂಗಮಾಡಿದರೆ ಅಗ್ನಿಪ್ರವೇಶ ಹೊರತು ಬೇರೆ ಶುದ್ಧಿಯಿಲ್ಲ.

೩೪-೩೫. ರಾಣೀ, ಸನ್ಯಾಸಿನೀ, ದಾದಿ, ಮತ್ತು ಉತ್ತಮಜಾತಿ ಸ್ತ್ರೀ, ತನ್ನ ಗೋತ್ರದಲ್ಲಿ ಹುಟ್ಟಿದ ಹೆಂಗಸು ಇವರುಗಳ ಸಂಗಮಾಡಿದರೆ ಎರಡಾವರ್ತಿ ಕೃಚ್ಛ್ರವ್ರತವನ್ನಾಚರಿಸಬೇಕು.

೩೫-೩೬. ತಂದೆತಾಯಿಗಳ ಗೋತ್ರದಲ್ಲಿ ಹುಟ್ಟಿದ ಸ್ತ್ರೀಯರು ಅಥವಾ ಪರಸ್ತ್ರೀಯರ ಸಂಗಮಾಡಿದರೆ ಕೃಚ್ಛ್ರಾರ್ಧವ್ರತ ಮತ್ತು ತಪನವ್ರತ ಇವುಗಳನ್ನಾಚರಿಸಬೇಕು. ವೇಶ್ಯೆಯ ಸಂಬಂಧದಿಂದ ಬರುವಪಾಪವನ್ನು ದ್ವಿಜರು ಕೃಚ್ಛ್ರಾರ್ಧತಪನ ವ್ರತಗಳನ್ನಾಚರಿಸುವುದರಿಂದ ಕಳೆದುಕೊಳ್ಳುವರು.

೩೭. ಗುರುಪತ್ನೀಸಂಗಮಾಡಿದ ಬ್ರಾಹ್ಮಣನಿಗೆ, ಹೆಚ್ಚಾಗಿ ಕಾಯಿಸಿ ಕುದಿಯುತ್ತಿರುವ ಕುಶೋದಕವನ್ನು ಕುಡಿದು ಐದುದಿನಗಳು ವಿಧಾನೋಕ್ತ ಪ್ರಕಾರ ವ್ರತವನ್ನು ಮಾಡುವುದೇ ಪ್ರಾಯಶ್ಚಿತ್ತವು.

೩೮-೩೯. ಗೋಹತ್ಯೆ ಮಾಡಿದವನಿಗೂ ಇದೇ ಪ್ರಾಯಶ್ಚಿತ್ತವೆಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಬ್ರಹ್ಮಚರ್ಯವ್ರತವನ್ನು ಕಳೆದುಕೊಂಡು

**ದ್ವಿಗುಣಂ ಗೋವ್ರತಂ ತಸ್ಯ ಪ್ರಾಯಶ್ಚಿತ್ತಂ ವಿಶೋಧಯೇತ್ ।**
**ಅಂಗುಷ್ಠಮಾತ್ರಸ್ಥೂಲಸ್ತು ಬಾಹುಮಾತ್ರಪ್ರಮಾಣಕಃ ॥ ೩೯ ॥**

**ಸಾರ್ದ್ರಕಶ್ಚ ಪಲಾಶಶ್ಚ ಗೋದಂಡಃ ಪರಿಕೀರ್ತಿತಃ ।**
**ಗವಾಂ ನಿಪಾತನೇ ಚೈವ ಗರ್ಭೋಽಪಿ ಸಂಭವೇದ್ಯದಿ ॥ ೪೦ ॥**

**ಏಕೈಕಶಶ್ಚರೇತ್ಕೃಚ್ಛ್ರಂ ಏಷಾ ಗೋಘ್ನಸ್ಯ ನಿಷ್ಕೃತಿಃ ।**
**ಬಂಧನೇ ರೋಧನೇ ಚೈವ ಪೋಷಣೇ ವಾ ಗವಾಂ ರುಜಾಂ ॥ ೪೧ ॥**

**ಸಂಪದ್ಯತೇ ಚೇನ್ಮರಣಂ ನಿಮಿತ್ತೇನೈವ ಲಿಪ್ಯತೇ ।**
**ಮೂರ್ಛಿತಃ ಪತಿತೋ ವಾಽಪಿ ದಂಡೇನಾಭಿಹತಸ್ತತಃ ॥ ೪೨ ॥**

**ಉತ್ಥಾಯ ಷಟ್ಪದಂ ಗಚ್ಛೇತ್ಸಪ್ತ ಪಂಚ ದಶಾಪಿ ವಾ ।**
**ಗ್ರಾಸಂ ವಾ ಯದಿ ಗೃಹ್ಣೀಯಾತ್ತೋಯಂ ವಾಽಪಿ ಪಿಬೇದ್ಯದಿ ॥ ೪೩ ॥**

---

ಇರುವವನಿಗೂ ಇದೇ ಪ್ರಾಯಶ್ಚಿತ್ತವೆಂದು ಹೇಳುವರು. ದಂಡವನ್ನು ಎತ್ತಿ ಹೊಡೆದು ಗೋವನ್ನು ಕೆಳಗೆ ಬೀಳಿಸುವವನು ಎರಡಾವರ್ತಿ ಗೋವ್ರತವನ್ನು ಮಾಡಿ ಪ್ರಾಯಶ್ಚಿತ್ತದಿಂದ ಶುದ್ಧಿಯನ್ನು ಪಡೆಯಬೇಕು.

೩೯–೪೦. ಹೆಬ್ಬೆಟ್ಟಿನಷ್ಟು ದಪ್ಪವೂ ಎರಡು ಮೊಳ ಉದ್ದವೂ ಇರುವ ಹಸಿಯದಾದ ಮುತ್ತುಗದ ಕೋಲಿಗೆ ಗೋದಂಡವೆಂದು ಹೆಸರು.

೪೦-೪೧. ಗೋವನ್ನು ಹೊಡೆದು ಕೆಳಗೆ ಬೀಳಿಸುವಾಗ ಅದು ಗರ್ಭ ಧರಿಸಿದ್ದಲ್ಲಿ ಗೋಹನನ ಗರ್ಭಹನನಗಳಿಗೆ ಪ್ರತ್ಯೇಕವಾಗಿ ಒಂದೊಂದಕ್ಕೂ ಒಂದೊಂದು ಕೃಚ್ಛ್ರವನ್ನಾಚರಿಸಬೇಕು. ಇದೇ ಗೋಹನನ ಮಾಡಿದವನಿಗೆ ಪ್ರಾಯಶ್ಚಿತ್ತವು.

೪೧-೪೨. ರೋಗಗ್ರಸ್ತವಾದ ಗೋವುಗಳನ್ನು ಕಟ್ಟುವಾಗ ಅಥವಾ ಒಂದೆಡೆಯಲ್ಲಿ ತಡೆದಾಗ ಇಲ್ಲವೇ ಪೋಷಿಸುವಾಗ ಆ ಕಾರಣದಿಂದಲೇ ಅದು ಸತ್ತರೆ ಬಂಧನಾದಿಕರ್ತನು ಗೋಹತ್ಯೆಯ ಪಾಪಕ್ಕೆ ಭಾಗಿಯಾಗುತ್ತಾನೆ.

೪೨-೪೪. ಕಟ್ಟಿಗೆಯ ಏಟಿನಿಂದ ಮೂರ್ಛೆಹೊಂದಿಬಿದ್ದ ಗೋವು ತರುವಾಯ ಎದ್ದು, ಐದು, ಆರು, ಏಳು, ಅಥವಾ ಹತ್ತು ಹೆಜ್ಜೆ ನಡೆದರೆ, ಅಥವಾ

ಸರ್ವವ್ಯಾಧಿಪ್ರನಷ್ಟಾನಾಂ ಪ್ರಾಯಶ್ಚಿತ್ತಂ ನ ವಿದ್ಯತೇ ।
ಕಾಷ್ಠಲೋಷ್ಟಾಶ್ಮಭಿರ್ಗಾವಃ ಶಸ್ತ್ರೈರ್ವಾನಿಹತಾ ಯದಿ ॥ ೪೪ ॥

ಪ್ರಾಯಶ್ಚಿತ್ತಂ ಸ್ಮೃತಂ ತತ್ರ ಶಸ್ತ್ರೇ ಶಸ್ತ್ರೇ ನಿಗದ್ಯತೇ ।
ಕಾಷ್ಠೇ ಸಾಂತಪನಂ ಪ್ರೋಕ್ತಂ ಪ್ರಾಜಾಪತ್ಯಂ ತು ಲೋಷ್ಟಕೇ ॥ ೪೫ ॥

ತಪ್ತಕೃಚ್ಛ್ರಂ ತು ಪಾಷಾಣೇ ಶಸ್ತ್ರೇ ಚಾಪ್ಯತಿಕೃಚ್ಛ್ರಕಂ ।
ಔಷಧಂ ಸ್ನೇಹಮಾಹಾರಂ ದದ್ಯಾದ್ಗೋಬ್ರಾಹ್ಮಣೇಷು ಚ ॥ ೪೬ ॥

ದೀಯಮಾನೇ ವಿಪತ್ತಿಃ ಸ್ಯಾತ್ಪ್ರಾಯಶ್ಚಿತ್ತಂ ತದಾ ನ ಹಿ ।
ತೈಲಭೇಷಜಪಾನೇ ಚ ಭೇಷಜಾನಾಂ ಚ ಭಕ್ಷಣೇ ॥ ೪೭ ॥

---

ಆಹಾರವನ್ನು ಸೇವಿಸಿದರೆ, ಇಲ್ಲವೇ ನೀರನ್ನಾದರೂ ಕುಡಿವರೆ ಹೊಡೆದವನಿಗೆ ಪ್ರಾಯಶ್ಚಿತ್ತವಿಲ್ಲ ಮತ್ತು ರೋಗ ಬಂದು ಗೋವು ಮೃತವಾದರೂ ಯಜಮಾನನಿಗೆ ಪ್ರಾಯಶ್ಚಿತ್ತ ಮಾಡಬೇಕಾದ್ದಿಲ್ಲ ಎಂದರೆ ಅಂತಹ ಸಂದರ್ಭಗಳಲ್ಲಿ ಗೋವಿನ ಮರಣದಿಂದ ಪಾಪವುಂಟಾಗುವುದಿಲ್ಲವೆಂದು ತಾತ್ಪರ್ಯ.

೪೪-೪೫. ಇಟ್ಟಿಗೆ, ಮಣ್ಣುಹೆಂಟೆ ಅಥವಾ ಕಲ್ಲು ಇವುಗಳಿಂದ ಹೊಡೆದು ಅಥವಾ ಶಸ್ತ್ರಗಳಿಂದಾಗಲೀ ಗೋವನ್ನು ಕೊಂದರೆ ಒಂದೊಂದಕ್ಕೂ ಪ್ರಾಯಶ್ಚಿತ್ತವು ಶಾಸ್ತ್ರದಲ್ಲಿ ಉಕ್ತವಾಗಿದೆ.

೪೫-೪೬. ಕಾಷ್ಠದಿಂದ ಗೋವನ್ನು ಹೊಡೆದು ಕೊಂದರೆ ಕೃಚ್ಛ್ರವ್ರತವನ್ನಾಚರಿಸಬೇಕು. ಮಣ್ಣುಹೆಂಟೆಯಿಂದ ಹೊಡೆದು ಕೊಂದರೆ ಪ್ರಾಜಾಪತ್ಯವ್ರತವನ್ನು ಮಾಡಬೇಕು. ಕಲ್ಲಿನಿಂದ ಹೊಡೆದರೆ ತಪ್ತಕೃಚ್ಛ್ರವನ್ನಾಚರಿಸಬೇಕು. ಶಸ್ತ್ರಘಾತದಿಂದ ಗೋವು ಸತ್ತರೆ ಕರ್ತನು ಅತಿಕೃಚ್ಛ್ರವ್ರತವನ್ನಾಚರಿಸಬೇಕು. ಇವೇ ಸಂದರ್ಭೋಚಿತಪ್ರಾಯಶ್ಚಿತ್ತಗಳು.

೪೬-೪೭. ಗೋವು ಮತ್ತು ಬ್ರಾಹ್ಮಣರಿಗೆ ಔಷದಾರ್ಥವಾಗಿ ತೈಲ ಆಹಾರಗಳನ್ನು ಕೊಡಬೇಕು. ಹಾಗೆ ಕೊಡುವಾಗ ಆ ಗೋಬ್ರಾಹ್ಮಣರಿಗೆ ವಿಪತ್ತು ಸಂಭವಿಸಿದರೆ ಅದರಿಂದ ಕೊಟ್ಟವನಿಗೆ ಪ್ರಾಯಶ್ಚಿತ್ತವಿಲ್ಲ.

**ನಿಶಲ್ಯಕರಣೇ ಚೈವ ಪ್ರಾಯಶ್ಚಿತ್ತಂ ನ ವಿದ್ಯತೇ ।**
**ವತ್ಸಾನಾಂ ಕಂಠಬಂಧೇನ ಕ್ರಿಯಯಾ ಭೇಷಜೇನ ತು　　　　॥ ೪೮ ॥**

**ಸಾಯಂ ಸಂಗೋಪನಾರ್ಥಂ ಚ ನ ದೋಷೋ ರೋಷಬಂಧಯೋಃ ।**
**ಪಾದೇ ಚೈವಾಸ್ಯ ರೋಮಾಣಿ ದ್ವಿಪಾದೇ ಶ್ಮಶ್ರುಕೇವಲಂ　　　　॥ ೪೯ ॥**

**ತ್ರಿಪಾದೇ ತು ಶಿಖಾವರ್ಜಂ ಮೂಲೇ ಸರ್ವಂ ಸಮಾಚರೇತ್ ।**
**ಸರ್ವಾನ್ಕೇಶಾನ್ಸಮುದ್ಧೃತ್ಯ ಛೇದಯೇದಂಗುಲದ್ವಯಂ　　　　॥ ೫೦ ॥**

---

೪೭-೪೮. ಔಷಧರೂಪವಾದ ತೈಲವನ್ನು ಕುಡಿಯುವಾಗ, ಅಥವಾ ಔಷಧಾಹಾರವನ್ನು ತಿನ್ನುವಾಗ, ಗಂಟಲಿನಲ್ಲಿ ಸಿಕ್ಕಿಬಿದ್ದಿದ್ದ ಕಡ್ಡಿ ಮುಂತಾದುವನ್ನು ತೆಗೆಯುವಾಗ ವಿಪತ್ತು ಸಂಭವಿಸಿದರೂ ಕರ್ತೃವಿಗೆ ಪ್ರಾಯಶ್ಚಿತ್ತವಿಲ್ಲ. (ಎಂದರೆ ಪಾಪ ಬರುವುದಿಲ್ಲವೆಂದು ತಾತ್ಪರ್ಯ).

೪೮-೪೯. ವೈದ್ಯರು ಕರುಗಳಿಗೆ ಮಾಡುವ ಕಂಠಬಂಧನವ್ಯಾಪಾರದಿಂದ, ರಕ್ಷಣೆಗಾಗಿ ಗೋವನ್ನು ಸಾಯಂಕಾಲ ಕಟ್ಟುವುದರಿಂದ ಅಥವಾ ಒಂದು ಸ್ಥಳದಲ್ಲಿ ಕೂಡುವುದರಿಂದಲಾದರೂ ಕರ್ತೃವಿಗೆ ಪಾಪ ಬರುವುದಿಲ್ಲ.

೪೯-೫೦. ಉಕ್ತಪ್ರಾಯಶ್ಚಿತ್ತಗಳಿಗೆ ಅಂಗವಾದ ಕ್ಷೌರಕರ್ಮದಲ್ಲಿ ಪುರುಷರು ಅನುಸರಿಸಬೇಕಾದ ವಿಧಾನವಿಶೇಷಗಳನ್ನು ಈ ಶ್ಲೋಕಗಳಲ್ಲಿ ಹೇಳಿದೆ:— ಗೋವಧ ಪ್ರಾಯಶ್ಚಿತ್ತದಲ್ಲಿ ಕಾಲುಭಾಗವನ್ನು ಪ್ರಾಯಶ್ಚಿತ್ತವಾಗಿ ವಿಧಿಸಿದ್ದರೆ ಅದರ ಅಂಗವಾಗಿ ಕುತ್ತಿಗೆಯ ಕೆಳಗಿನ ಅಂಗಗಳಲ್ಲಿರುವ ರೋಮಗಳನ್ನು ಮಾತ್ರ ಕ್ಷೌರಮಾಡಿಸಬೇಕು. ಅರ್ಧ ಪ್ರಾಯಶ್ಚಿತ್ತವನ್ನು ಮಾಡಬೇಕಾದ ಸಂದರ್ಭದಲ್ಲಿ ತಲೆಯಮೇಲಿನ ಕೂದಲನ್ನು ಬಿಟ್ಟು ಶ್ಮಶ್ರು (ಮೀಸೆ) ಮತ್ತು ಅಂಗರೋಮವೆಲ್ಲವನ್ನೂ, ಮುಕ್ಕಾಲು ಭಾಗ ಪ್ರಾಶ್ಚಿತ್ತಮಾಡುವಾಗ ಶಿಖೆಯ ಹೊರತು ಉಳಿದುದೆಲ್ಲವನ್ನೂ ಕ್ಷೌರಮಾಡಿಸಬೇಕು. ಮೂಲವನ್ನೇ ಆಚರಿಸುವಾಗ ಸರ್ವವನ್ನೂ ಆಚರಿಸಬೇಕು. ಸುವಾಸಿನಿಯರಾದ ಸ್ತ್ರೀಯರಿಗೆ ಕ್ಷೌರವಿಲ್ಲ. ಆದರೆ ಇಂತಹ ಪ್ರಾಯಶ್ಚಿತ್ತವು ಪ್ರಸಕ್ತವಾದಾಗ ಕೂದಲನ್ನು ಒಟ್ಟುಗೂಡಿಸಿ ಎರಡು ಅಂಗುಲ ಮಾತ್ರ ಅದನ್ನು ಕತ್ತರಿಸಬೇಕು.

ಏವಮೇವ ತು ನಾರೀಣಾಂ ಮುಂಡನಂ ಶಿರಸಃ ಸ್ಮೃತಂ ।
ನ ಸ್ತ್ರಿಯಾ ವಪನಂ ಕಾರ್ಯಂ ನ ಚ ವೀರಾಸನಂ ಸ್ಮೃತಂ ॥ ೫೧ ॥

ನ ಚ ಗೋಷ್ಠೇ ನಿವಾಸೋಽಸ್ತಿ ನ ಗಚ್ಛಂತೀಮನುವ್ರಜೇತ್ ।
ರಾಜಾ ವಾ ರಾಜಪುತ್ರೋ ವಾ ಬ್ರಾಹ್ಮಣೋ ವಾ ಬಹುಶ್ರುತಃ ॥ ೫೨ ॥

ಅಕೃತ್ವಾ ವಪನಂ ತೇಷಾಂ ಪ್ರಾಯಶ್ಚಿತ್ತಂ ವಿನಿರ್ದಿಶೇತ್ ।
ಕೇಶಾನಾಂ ರಕ್ಷಣಾರ್ಥಂ ಚ ದ್ವಿಗುಣಂ ವ್ರತಮಾದಿಶೇತ್ ॥ ೫೩ ॥

ದ್ವಿಗುಣೇ ತು ವ್ರತೇ ಚೀರ್ಣೇ ದ್ವಿಗುಣಾ ವ್ರತದಕ್ಷಿಣಾ ।
ಪಾಪಂ ನ ಕ್ಷೀಯತೇ ಹಂತುರ್ದಾತಾ ಚ ನರಕಂ ವ್ರಜೇತ್ ॥ ೫೪ ॥

ಅಶ್ರೌತಸ್ಮಾರ್ತವಿಹಿತಂ ಪ್ರಾಯಶ್ಚಿತ್ತಂ ವದಂತಿ ಯೇ । ॥ ೫೫ ॥

ತಾನ್ಧರ್ಮವಿಘ್ನಕರ್ತೄಂಶ್ಚ ರಾಜಾ ದಂಡೇನ ಪೀಡಯೇತ್ ।
ನ ಚೈತಾನ್ಪೀಡಯೇದ್ರಾಜಾ ಕಥಂಚಿತ್ಕಾಮಮೋಹಿತಃ ॥ ೫೬ ॥

---

೫೧. ಹೆಂಗಸರಿಗೆ ಶಿರೋಮುಂಡನವೂ ಸಹ ಇದೇರೀತಿಯಾಗಿ ಮಾಡಲ್ಪಡತಕ್ಕದ್ದೆಂದು ಶಾಸ್ತ್ರದಲ್ಲಿ ಹೇಳಿದೆ. ಸ್ತ್ರೀಯರಿಗೆ ಕ್ಷೌರ ಮತ್ತು ವೀರಾಸನದಿಂದ ಕೂಡುವುದೂ ಸಹ ನಿಷಿದ್ಧವು.

೫೨-೫೪. ಹಸು ಕಟ್ಟುವ ಸ್ಥಳದಲ್ಲಿ ವಾಸಮಾಡಬಾರದು. ಹೋಗುತ್ತಿರುವ ಹೆಂಗಸನ್ನು ಹಿಂಬಾಲಿಸಿ ಹೋಗಬಾರದು. ರಾಜ, ರಾಜಕುಮಾರ ಮತ್ತು ವೇದಾಧ್ಯಯನಸಂಪನ್ನನಾದ ಬ್ರಾಹ್ಮಣ ಇವರಿಗೆ ಕ್ಷೌರವನ್ನು ವಿಧಿಸದೇ ಪ್ರಾಯಶ್ಚಿತ್ತವನ್ನು ಹೇಳಬೇಕು. ಅಂತಹವರಿಗೆ ಕೂದಲು ಸಂರಕ್ಷಣೆಗಾಗಿ ಎರಡರಷ್ಟು ವ್ರತವನ್ನು ಪ್ರಾಯಶ್ಚಿತ್ತವಾಗಿ ವಿಧಿಸಬೇಕು. ಅವರು ದ್ವಿಗುಣಿತವಾಗಿ ವ್ರತವನ್ನು ಮಾಡುವಾಗ ದಕ್ಷಿಣೆಯನ್ನೂ ಸಹ ಎರಡರಷ್ಟು ಕೊಡಬೇಕು.

೫೫-೫೬. ಹನನಮಾಡುವವನಿಗೆ ಪಾಪವು ಹೋಗುವುದಿಲ್ಲ. ಅನುಭವಿಸಿಯೇತೀರಬೇಕು. ಹನನಕ್ಕಾಗಿ ಗೋವನ್ನು ಕೊಡುವವನು ನರಕಕ್ಕೆ ಹೋಗುತ್ತಾನೆ. ಶ್ರುತಿಸ್ಮೃತಿಗಳಲ್ಲಿ ಹೇಳದಿರುವ ಎಂದರೆ ವಿರುದ್ಧವಾದ ಪ್ರಾಯಶ್ಚಿತ್ತವನ್ನು ಹೇಳುವವರು ಮತ್ತು ಧರ್ಮಕ್ಕೆ ವಿಘ್ನಮಾಡುವವರು ಇವರನ್ನು ರಾಜನು ಶಿಕ್ಷಿಸಬೇಕು.

ತತ್ಪಾಪಂ ಶತಧಾ ಭೂತ್ವಾ ತಮೇವ ಪರಿಸರ್ಪತಿ ।
ಪ್ರಾಯಶ್ಚಿತ್ತೇ ತತಶ್ಚೀರ್ಣೇ ಕುರ್ಯಾದ್ಬ್ರಾಹ್ಮಣಭೋಜನಂ ॥ ೫೭ ॥

ವಿಂಶತಿರ್ಗಾ ವೃಷಂ ಚೈಕಂ ದದ್ಯಾತ್ತೇಷಾಂ ಚ ದಕ್ಷಿಣಾಂ ।
ಕ್ರಿಮಿಭಿಸ್ತೃಣಸಂಭೂತೈರ್ಮಕ್ಷಿಕಾದಿನಿಪಾತಿತೈಃ ॥ ೫೮ ॥

ಕೃಚ್ಛ್ರಾರ್ಧಂ ಸ ಪ್ರಕುರ್ವೀತ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಂ ।
ಪ್ರಾಯಶ್ಚಿತ್ತಂ ಚ ಕೃತ್ವಾ ವೈ ಭೋಜಯಿತ್ವಾ ದ್ವಿಜೋತ್ತಮಾನ್ ॥ ೫೯

ಸುವರ್ಣಮಾಷಕಂ ದದ್ಯಾತ್ತತಃ ಶುದ್ಧಿರ್ವಿಧೀಯತೇ ।
ಚಾಂಡಾಲಶ್ವಪಚೈಃ ಸ್ಪೃಷ್ಟೇ ನಿಶಿಸ್ನಾನಂ ವಿಧೀಯತೇ ॥ ೬೦ ॥

ನ ವಸೇತ್ತತ್ರ ರಾತ್ರೌ ತು ಸದ್ಯಃ ಸ್ನಾನೇನ ಶುಧ್ಯತಿ ।
ವಸೇದಥ ಯದಾ ರಾತ್ರಾವಜ್ಞಾನಾದವಿಚಕ್ಷಣಃ ॥ ೬೧ ॥

---

೫೬-೫೭. ಒಂದುವೇಳೆ ರಾಜನು ಕಾಮಾದಿಗಳಲ್ಲಿ ಪ್ರಸಕ್ತನಾಗಿ ಮೋಹದಿಂದ ಅಂತಹವರನ್ನು ಶಿಕ್ಷಿಸದಿದ್ದರೆ ಅವರ ಪಾಪವು ಹತ್ತರಷ್ಟಾಗಿ ರಾಜನಿಗೆ ಸುತ್ತಿಕೊಳ್ಳುತ್ತದೆ.

೫೭-೫೮. ಅದಕ್ಕಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಇಪ್ಪತ್ತು ಗೋವುಗಳನ್ನೂ ಮತ್ತು ಒಂದು ಎತ್ತನ್ನೂ ಸಹ ದಕ್ಷಿಣೆ ಸಹಿತವಾಗಿ ಕೊಟ್ಟು ಪ್ರಾಯಶ್ಚಿತ್ತಮಾಡಿಕೊಳ್ಳಬೇಕು.

೫೮-೫೯. ತೃಣದಲ್ಲಿ ಹುಟ್ಟುವ ಕ್ರಿಮಿಗಳು ಮತ್ತು ನೊಣ ಮುಂತಾದವುಗಳನ್ನು ನಾಶಪಡಿಸಿದರೆ ಕೃಚ್ಛ್ರಾರ್ಧವ್ರತವನ್ನಾಚರಿಸಿ, ತನ್ನ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಡಬೇಕು.

೫೯-೬೦. ಪ್ರಾಯಶ್ಚಿತ್ತಮಾಡಿಕೊಂಡು ಉತ್ತಮ ಬ್ರಾಹ್ಮಣರಿಗೆ ಭೋಜನಮಾಡಿಸಿ, ಐದುಗುಂಜಿಯ ತೂಕ ಬಂಗಾರವನ್ನು ದಾನಮಾಡಿ ಶುದ್ಧನಾಗಬೇಕು ಎಂದು ವಿಹಿತವಾಗಿದೆ.

೬೦-೬೧. ಚಂಡಾಲರು ಮತ್ತು ನಾಯಿಯ ಮಾಂಸ ತಿನ್ನುವ ನೀಚ ಜಾತಿಯವರು ಇವರುಗಳನ್ನು ಮುಟ್ಟಿದರೆ ರಾತ್ರಿಕಾಲವಾದರೂ ಆಗಲೇ ಸ್ನಾನ ಮಾಡಬೇಕು. ಅಲ್ಲಿ ರಾತ್ರಿ ವಾಸಮಾಡಬಾರದು. ತಕ್ಷಣ ಸ್ನಾನಮಾಡಿದರೆ ಶುದ್ಧನಾಗುತ್ತಾನೆ.

ತದಾ ತಸ್ಯ ತು ತತ್ಪಾಪಂ ಶತಧಾ ಪರಿವರ್ತತೇ ।
ಉದ್ಗಚ್ಛಂತಿ ಚ ನಕ್ಷತ್ರಾಣ್ಯುಪರಿಷ್ಟಾಚ್ಚ ಯೇ ಗ್ರಹಾಃ ॥ ೬೨ ॥

ಸಂಸ್ಪೃಷ್ಟೇ ರಶ್ಮಿಭಿಸ್ತೇಷಾಂ ಉದಕಸ್ನಾನಮಾಚರೇತ್ ।
ಯಾಶ್ಚಾಂತರ್ಜಲವಲ್ಮೀಕಮೂಷಿಕೋಷರವರ್ತ್ಮಸು ॥ ೬೩ ॥

ಸ್ಮಶಾನೇ ಶೌಚದೇಶೇ ಚ ನ ಗ್ರಾಹ್ಯಾಃ ಸಪ್ತಮೃತ್ತಿಕಾಃ ।
ಇಷ್ಟಾಪೂರ್ತಂ ತು ಕರ್ತವ್ಯಂ ಬ್ರಾಹ್ಮಣೇನ ಪ್ರಯತ್ನತಃ ॥ ೬೪ ॥

ಇಷ್ಟೇನ ಲಭತೇ ಸ್ವರ್ಗಂ ಮೋಕ್ಷಂ ಪೂರ್ತೇನ ಚಾಪ್ನುಯಾತ್ ।
ವಿತ್ತಾಪೇಕ್ಷಂ ಭವೇದಿಷ್ಟಂ ತಡಾಗಂ ಪೂರ್ತಮುಚ್ಯತೇ ॥ ೬೫ ॥

ಆರಾಮಶ್ಚ ವಿಶೇಷೇಣ ದೇವದ್ರೋಣ್ಯಸ್ತಥೈವಚ ।
ವಾಪೀಕೂಪತಡಾಗಾನಿ ದೇವತಾಯತನಾನಿ ಚ ॥ ೬೬ ॥

---

೬೧-೬೨. ತಿಳಿಯದೇ ಅವಿವೇಕಿಯು ರಾತ್ರಿ ಅಲ್ಲಿಯೇ ವಾಸಮಾಡಿದರೆ ಅವನ ಪಾಪವು ನೂರರಷ್ಟು ಹೆಚ್ಚಾಗುತ್ತದೆ. ಅಂತಹವರು ನಕ್ಷತ್ರಗಳು ಮುಳುಗಿದಮೇಲೆ ಗ್ರಹಗಳು ಮೇಲಕ್ಕೆ ಬಂದು ಸೂರ್ಯರಶ್ಮಿ ಸಂಬಂಧವಾದಾಗ ಎಂದರೆ ಮಧ್ಯಾಹ್ನ ಕಾಲದಲ್ಲಿ ನೀರಿನಲ್ಲಿ ಅವಗಾಹನಸ್ನಾನ ಮಾಡಬೇಕು.

೬೩-೬೪. ನೀರಿನ ಒಳಭಾಗ, ಹುತ್ತ, ಇಲಿಯಬಿಲ, ದಾರಿ, ಸ್ಮಶಾನ ಮತ್ತು ಪಾಯಖಾನೆಗೆ ಹೋದ ಸ್ಥಳಗಳಲ್ಲಿರುವ ಮಣ್ಣನ್ನು ಶೌಚಾದಿಗಳಿಗೆ ತೆಗೆದುಕೊಳ್ಳಬಾರದು.

೬೪-೬೬. ಬ್ರಾಹ್ಮಣನು ಪ್ರಯತ್ನಪೂರ್ವಕವಾಗಿ ಇಷ್ಟಾಪೂರ್ತವನ್ನಾಚರಿಸಬೇಕು. ಇಷ್ಟದಿಂದ ಸ್ವರ್ಗವೂ, ಪೂರ್ತದಿಂದ ಮೋಕ್ಷವೂ ಲಭಿಸುತ್ತದೆ. ದ್ರವ್ಯಾಪೇಕ್ಷೆಯಿಂದ ಮಾಡುವ ಕರ್ಮವು ಇಷ್ಟವೆನಿಸುವುದು. ಕೆರೆ, ತೋಟ ವಿಶೇಷವಾಗಿ ದೇವದ್ರೋಣಿ, ಸರೋವರ, ಬಾವಿ ಮತ್ತು ದೇವಾಲಯಗಳು ಪೂರ್ತವೆನಿಸುವುವು.

ಪತಿತಾನ್ಯುದ್ಧರೇದ್ಯಸ್ತು ಸಪುಣ್ಯಫಲಮಶ್ನುತೇ ।
ಶುಕ್ಲಾಯಾ ಆಹರೇನ್ಮೂತ್ರಂ ಕೃಷ್ಣಾಯಾ ಗೋಃ ಶಕೃತ್ತಥಾ ॥ ೬೭ ॥

ತಾಮ್ರಾಯಾಶ್ಚ ಪಯೋ ಗ್ರಾಹ್ಯಂ ಶ್ವೇತಾಯಾಶ್ಚ ದಧಿ ಸ್ಮೃತಂ ।
ಕಪಿಲಾಯಾ ಘೃತಂ ಗ್ರಾಹ್ಯಂ ಮಹಾಪಾತಕನಾಶನಂ ॥ ೬೮ ॥

ಕುಶೈಸ್ತೀರ್ಥನದೀತೋಯೈಃ ಸರ್ವದ್ರವ್ಯಂ ಪೃಥಕ್ ಪೃಥಕ್ ।
ಆಹೃತ್ಯ ಪ್ರಣವೇನೈವ ಉತ್ಥಾಪ್ಯ ಪ್ರಣವೇನ ಚ ॥ ೬೯ ॥

ಪ್ರಣವೇನ ಸಮಾಲೋಡ್ಯ ಪ್ರಣವೇನೈವ ಸಂಪಿಬೇತ್ ।
ಪಾಲಾಶೇ ಮಧ್ಯಮೇ ಪರ್ಣೇ ಭಾಂಡೇ ತಾಮ್ರಮಯೇ ಶುಭೇ ॥ ೭೦ ॥

ಪಿಬೇತ್ಪುಷ್ಕರಪರ್ಣೇ ವಾ ಮೃಣ್ಮಯೇ ವಾ ಕುಶೋದಕಂ ।
ಸೂತಕೇ ತು ಸಮುತ್ಪನ್ನೇ ದ್ವಿತೀಯೇ ಸಮುಪಸ್ಥಿತೇ ॥ ೭೧ ॥

---

೬೭-೬೮. ದುರಾಚಾರಗಳಿಂದ ಪತಿತರಾದವರನ್ನುದ್ಧರಿಸುವವನು, ಪುಣ್ಯಭಾಗಿಯಾಗುವನು. ಬಿಳಿಯ ಗೋವಿನ ಮೂತ್ರ (ಗಂಜಲ) ಕರಿಯಗೋವಿನ ಸಗಣಿ, ತಾಮ್ರವರ್ಣದ ಹಸುವಿನ ಹಾಲು, ಶ್ವೇತಗೋವಿನ ಮೊಸರು, ಕಪಿಲ ಗೋವಿನ ತುಪ್ಪ ಇವುಗಳು ಅತ್ಯುತ್ತಮವಾದುವು. ಈ ಐದನ್ನು ಸೇರಿಸಿದರೆ ಅದು ಪಂಚಗವ್ಯವೆಂದು ಕರೆಯಲ್ಪಟ್ಟು ಮಹಾಪಾತಕಗನ್ನೂ ಸಹ ನಾಶ ಮಾಡುವ ಪವಿತ್ರ ವಸ್ತುವಾಗುತ್ತದೆ.

೬೯-೭೧. ಪುಣ್ಯನದಿಗಳ ಉದಕ, ದರ್ಭೆ ಇವುಗಳನ್ನು ಪ್ರತ್ಯೇಕ ವಾಗಿ ಪ್ರಣವ ಮಂತ್ರದಿಂದ ಅಭಿಮಂತ್ರಿಸಿ, ಅದೇ ಮಂತ್ರದಿಂದ ಅವು ಗಳೆಲ್ಲವನ್ನೂ ಕಲಸಿ ಪ್ರಣವಮಂತ್ರದಿಂದಲೇ ಪ್ರಾಶನ ಮಾಡಬೇಕು. ಇಂತಹ ಉದಕಕ್ಕೆ ಕುಶೋದಕವೆಂದು ಹೆಸರು. ಇದನ್ನು ಮುತ್ತಗದ ಎಲೆಯ ದೊನ್ನೆ ಅಥವಾ ತಾಮ್ರದ ಪಾತ್ರೆ ಅಥವಾ ಕಮಲಪತ್ರನಿರ್ಮಿತಪಾತ್ರೆ ಅಥವಾ ಮಣ್ಣಿನ ಗಡಿಗೆ ಇವುಗಳಲ್ಲಿ ತೆಗೆದುಕೊಂಡು ಕುಡಿಯಬೇಕು.

ದ್ವಿತೀಯೋ ನಾಸ್ತಿ ದೋಷಸ್ತು ಪ್ರಥಮೇನೈವ ಶುದ್ಧ್ಯತಿ ।
ಜಾತೇನ ಶುಧ್ಯತೇ ಜಾತಂ ಮೃತೇನ ಮೃತಕಂ ತಥಾ ॥ ೬೨ ॥

ರಜಸ್ಸಂಸ್ರವಣೇ ಮಾಸೇ ತ್ರೀಣ್ಯಹಾನಿ ವಿನಿರ್ದಿಶೇತ್ ।
ರಾತ್ರಿಭಿರ್ಮಾಸತುಲ್ಯಾಭೀರಜಸ್ಸ್ರಾವೇ ವಿಶುದ್ಧ್ಯತಿ ॥ ೬೩ ॥

ರಜಸ್ಯುಪರತೇ ಸಾಧ್ವೀ ಸ್ನಾನೇನ ಸ್ತ್ರೀ ರಜಸ್ವಲಾ ।
ಸ್ವಗೋತ್ರಾದ್ಭ್ರಶ್ಯತೇ ನಾರೀ ವಿವಾಹಾತ್ಸಪ್ತಮೇ ಪದೇ ॥ ೬೪ ॥

ಸ್ವಾಮಿಗೋತ್ರೇಣ ಕರ್ತವ್ಯಾ ತಸ್ಯಾಃ ಪಿಂಡೋದಕಕ್ರಿಯಾಃ ।
ಉದ್ದೇಶ್ಯಂ ಪಿಂಡದಾನೇ ಸ್ಯಾತ್ಪಿಂಡೇ ಪಿಂಡೇ ದ್ವಿನಾಮತಃ ॥ ೬೫ ॥

---

೬೧-೬೨. ಒಬ್ಬ ಜ್ಞಾತಿಯು ಸತ್ತು ಸೂತಕಬಂದಿರುವಾಗ ಮಧ್ಯದಲ್ಲಿ ಇನ್ನೊಂದು ಸೂತಕ ಬಂದರೆ ಎರಡನೆಯ ಸೂತಕವು ದೋಷವಲ್ಲ. ಮೊದಲನೆಯ ಸೂತಕವನ್ನು ಕಳೆದುಕೊಳ್ಳುವುದರಿಂದಲೇ ಪರಿಶುದ್ಧನಾಗುತ್ತಾನೆ. ಜಾತಾಶೌಚವೆಂದರೆ ವೃದ್ಧಿ (ಪುರುಡು) ಅದು ಸಂಭವಿಸಿರುವಾಗ ಮತ್ತೊಂದು ಬಂದರೆ ಎರಡನೆಯದನ್ನು ಆಚರಿಸಬೇಕಾದ್ದಿಲ್ಲ. ಮೊದಲನೆಯದನ್ನು ಪರಿಹರಿಸಿಕೊಳ್ಳುವುದರಿಂದಲೇ ಶುದ್ಧನಾಗುವನು.

೬೩-೬೪. ತಿಂಗಳಿಗೊಂದಾವರ್ತಿ ಸ್ತ್ರೀಯರು ರಜಸ್ಸು ಸುರಿಯುವ ಸಮಯದಲ್ಲಿ (ಮುಟ್ಟಾದಾಗ) ಮೂರುದಿನಗಳು ಅಶುದ್ಧರು. ಮಾಸಸಮಾನವಾದ ಮೂರುರಾತ್ರಿ ರಜಸ್ಸು ಸ್ರವಿಸಿ ನಿಂತಮೇಲೆ ಮುಟ್ಟಾದ ಹೆಂಗಸು ಸ್ನಾನ ಮಾಡಿ ಶುದ್ಧಿಯನ್ನು ಪಡೆಯಬೇಕು.

೬೪-೬೫. ಹೆಂಗಸು ವಿವಾಹವಾಗಿ ಸಪ್ತಪದಿಯಾದನಂತರ ತನ್ನ ಜನಕ ಗೋತ್ರದಿಂದ ಬಿಡುಗಡೆಯನ್ನು ಹೊಂದುತ್ತಾಳೆ. ತರುವಾಯ ಅವಳಿಗೆ ಪತಿಯ ಗೋತ್ರದಿಂದಲೇ ಶ್ರಾದ್ಧಾದಿಗಳನ್ನು ಮಾಡಬೇಕು.

ಷಣ್ಣಾಂ ದೇಯಾಸ್ತ್ರಯಃ ಪಿಂಡಾ ಏವಂ ದಾತಾ ನ ಮುಹ್ಯತಿ ।
ಸ್ವೇನ ಭರ್ತ್ರಾ ಸಹಸ್ರಾಬ್ದಂ ಮಾತಾ ಭೋಕ್ತ್ರೀ ಸುದೈವತಂ ॥ ೭೬ ॥
ಪಿತಾಮಹ್ಯಪಿ ಸ್ವೇನೈವ ಸ್ವೇನೈವ ಪ್ರಪಿತಾಮಹೀ ॥ ೭೭ ॥

ವರ್ಷೇ ವರ್ಷೇ ತು ಕುರ್ವೀತ ಮತಾಪಿತ್ರೋಸ್ತು ಸತ್ಕೃತಿಂ ।
ಅದೈವಂ ಭೋಜಯೇಚ್ಛ್ರಾದ್ಧಂ ಪಿಂಡಮೇಕಂ ತು ನಿರ್ವಪೇತ್ ॥ ೭೮ ॥

ನಿತ್ಯಂ ನೈಮಿತ್ತಿಕಂ ಕಾಮ್ಯಂ ವೃದ್ಧಿಶ್ರಾದ್ಧಮಥಾಪರಂ ।
ಪಾರ್ವಣಂ ಚೇತಿ ವಿಜ್ಞೇಯಂ ಶ್ರಾದ್ಧಂ ಪಂಚವಿಧಂ ಬುಧೈಃ ॥ ೭೯ ॥

ಗ್ರಹೋಪರಾಗೇ ಸಂಕ್ರಾಂತೌ ಪರ್ವೋತ್ಸವಮಹಾಲಯೇ ।
ನಿರ್ವಪೇತ್ರೀನ್ನರಃ ಪಿಂಡಾನೇಕಮೇವ ಮೃತೇಽಹನಿ ॥ ೮೦ ॥

---

೭೫-೭೬. ಪಿಂಡಹಾಕುವಾಗ ಪ್ರತಿಯೊಂದು ಪಿಂಡದಲ್ಲಿಯೂ ಎರಡು ನಾಮಗಳಿಂದ ನಿರ್ದೇಶಿಸಿ, ಆರಕ್ಕೆ ಮೂರು ಪಿಂಡಗಳನ್ನು ಹಾಕಬೇಕು. ಈ ರೀತಿಯಾಗಿ ಪಿಂಡಪ್ರದಾನಮಾಡುವವನಿಗೆ ಮೋಹವುಂಟಾಗುವುದಿಲ್ಲ.

೭೬-೭೭. ತಾಯಿ, ಪಿತಾಮಹಿ (ತಂದೆಯ ತಾಯಿ), ಪ್ರಪಿತಾಮಹಿ (ತಾತನ ತಾಯಿ) ಇವರು ತಮ್ಮ ತಮ್ಮ ಗಂಡಂದಿರೊಡನೆ ಸಾವಿರವರ್ಷ ಪರ್ಯಂತವಾಗಿ ಮಕ್ಕಳಿಂದ ದತ್ತವಾದ ಪಿಂಡಾದಿಗಳನ್ನು ಭೋಗಿಸುವ ದೇವತೆಗಳು.

೭೮. ತಾಯಿ, ತಂದೆಗಳಿಗೆ ಪ್ರತಿವರ್ಷದಲ್ಲಿಯೂ ಸತ್ತದಿನದಲ್ಲಿ ಶ್ರಾದ್ಧಮಾಡಿ ಸತ್ಕರಿಸಬೇಕು. ದೈವವರ್ಜಿತವಾಗಿ ಶ್ರಾದ್ಧಭೋಜನ ಮಾಡಿಸಿ ಒಂದು ಪಿಂಡವನ್ನು ಹಾಕಬೇಕು.

೭೯. ಶ್ರಾದ್ಧವು ನಿತ್ಯ, ನೈಮಿತ್ತಿಕ, ಕಾಮ್ಯ, ವೃದ್ಧಿಶ್ರಾದ್ಧ, ಮತ್ತು ಪಾರ್ವಣಶ್ರಾದ್ಧವೆಂಬುದಾಗಿ ಐದುವಿಧವೆಂದು ತಿಳಿಯಬೇಕು.

೮೦. ಗ್ರಹಣ, ಸಂಕ್ರಮಣ, ಪರ್ವ, ಉತ್ಸವ, ಮಹಾಲಯ ಇವುಗಳಲ್ಲಿ ಮನುಷ್ಯನು ಮೂರು ಪಿಂಡಗಳನ್ನೂ ಮೃತದಿನದಲ್ಲಿ ಒಂದೇ ಪಿಂಡವನ್ನೂ ಕೊಡಬೇಕು.

ಅನೂಢಾ ನ ಪೃಥಕ್ಕನ್ಯಾ ಪಿಂಡೇ ಗೋತ್ರೇ ಚ ಸೂತಕೇ ।
ಪಾಣಿಗ್ರಹಣಮಂತ್ರಾಭ್ಯಾಂ ಸ್ವಗೋತ್ರಾದ್ಭ್ರಶ್ಯತೇ ತತಃ ॥ ೮೧ ॥

ಯೇನ ಯೇನ ತು ವರ್ಣೇನ ಯಾ ಕನ್ಯಾ ಪರಿಣೀಯತೇ ।
ತತ್ಸಮಂ ಸೂತಕಂ ಯಾತಿ ತಥಾ ಪಿಂಡೋದಕೇಽಪಿ ಚ ॥ ೮೨ ॥

ವಿವಾಹೇ ಚೈವ ಸಂವೃತ್ತೇ ಚತುರ್ಥೇಽಹನಿ ರಾತ್ರಿಷು ।
ಏಕತ್ವಂ ಸಾ ವ್ರಜೇದ್ಭರ್ತುಃ ಪಿಂಡೇ ಗೋತ್ರೇ ಚ ಸೂತಕೇ ॥ ೮೩ ॥

ಪ್ರಥಮೇಽಹ್ನಿ ದ್ವಿತೀಯೇ ವಾ ತೃತೀಯೇ ವಾ ಚತುರ್ಥಕೇ ।
ಅಸ್ಥಿಸಂಚಯನಂ ಕಾರ್ಯಂ ಬಂಧುಭಿರ್ಹಿತಬುದ್ಧಿಭಿಃ ॥ ೮೪ ॥

ಚತುರ್ಥೇ ಪಂಚಮೇ ಚೈವ ಸಪ್ತಮೇ ನವಮೇ ತಥಾ ।
ಅಸ್ಥಿಸಂಚಯನಂ ಪ್ರೋಕ್ತಂ ವರ್ಣಾನಾಮನುಪೂರ್ವಶಃ ॥ ೮೫ ॥

---

೮೧. ಪಿಂಡದಾನ, ಗೋತ್ರೋಚ್ಚಾರಣ, ಸೂತಕಾನುಷ್ಠಾನ ಇವುಗಳಲ್ಲಿ ಅವಿವಾಹಿತಳಾದ ಕನ್ಯೆಯನ್ನು ಬೇರೆಯಾಗಿ ಗಣಿಸಕೂಡದು, ಪಾಣಿಗ್ರಹಣ ಮತ್ತು ಮಂತ್ರಗಳಿಂದ ವಿವಾಹವಾದಮೇಲೆ ಕನ್ಯೆಯು ತನ್ನ ಗೋತ್ರದಿಂದ ಬಿಡುಗಡೆಯನ್ನು ಹೊಂದುತ್ತಾಳೆ.

೮೨. ಕನ್ಯೆಯು ತಾನು ವಿವಾಹವಮಾಡಿಕೊಳ್ಳುವ ಗಂಡನ ಜಾತಿಗನು ಸಾರವಾಗಿ ಗಂಡನಿಗೆ ಸಮವಾಗಿ ಸೂತಕವನ್ನು ಅನುಷ್ಠಾನಮಾಡಬೇಕು. ಹಾಗೆಯೇ ಪಿಂಡೋದಕದಲ್ಲಿಯೂ ಸಹ ಗಂಡನಿಗೆ ಸಮಭಾಗಿಯಾಗಬೇಕು.

೮೩. ವಿವಾಹವಾದಮೇಲೆ ನಾಲ್ಕನೆಯ ದಿನದ ರಾತ್ರಿ ಕನ್ಯೆಯು ಪಿಂಡ, ಗೋತ್ರ ಸೂತಕ ಇವುಗಳಲ್ಲಿ ಗಂಡನಿಗೆ ಸಮನಾಗುತ್ತಾಳೆ.

೮೪. ಮರಣವಾದಮೇಲೆ ಒಂದು, ಎರಡು, ಮೂರು, ಅಥವಾ ನಾಲ್ಕನೆಯ ದಿನಗಳ ಪೈಕಿ ಯಾವುದಾದರೊಂದು ದಿನ ಹಿತೈಷಿಗಳಾದ ಬಂಧುಗಳು ಮೃತನ ಅಸ್ಥಿಸಂಚಯನವೆಂಬ ಸಂಸ್ಕಾರಮಾಡಬೇಕು.

೮೫. ಬ್ರಾಹ್ಮಣನಿಗೆ ನಾಲ್ಕನೆಯ ದಿನದಲ್ಲಿ, ಕ್ಷತ್ರಿಯನಿಗೆ ಐದನೆಯ ದಿನದಲ್ಲಿ, ವೈಶ್ಯನಿಗೆ ಏಳನೆಯ ದಿನವಲ್ಲಿ, ಶೂದ್ರನಿಗೆ ಒಂಭತ್ತನೆಯ ದಿನದಲ್ಲಿಯೂ ಅಸ್ಥಿಸಂಚಯನವು ಶಾಸ್ತ್ರವಿಹಿತವಾಗಿದೆ

ಏಕಾದಶಾಹೇ ಪ್ರೇತಸ್ಯ ಯಸ್ಯ ಚೋತ್ಸೃಜ್ಯತೇ ವೃಷಃ ।
ಮುಚ್ಯತೇ ಪ್ರೇತಲೋಕಾತ್ಸ್ವರ್ಗಲೋಕೇ ಮಹೀಯತೇ ॥ ೮೬ ॥

ನಾಭಿಮಾತ್ರೇ ಜಲೇ ಸ್ಥಿತ್ವಾ ಹೃದಯೇನ ತು ಚಿಂತಯೇತ್ ।
ಆಗಚ್ಛಂತು ಮೇ ಪಿತರೋ ಗೃಹ್ಣಂತ್ವೇತಾಞ್ಜಲಾಂಜಲೀನ್ ॥ ೮೭ ॥

ಹಸ್ತೌ ಕೃತ್ವಾ ತು ಸಂಯುಕ್ತೌ ಪೂರಯಿತ್ವಾ ಜಲೇನ ಚ ।
ಗೋಶೃಂಗಮಾತ್ರಮುದ್ಧೃತ್ಯ ಜಲಮಧ್ಯೇ ವಿನಿಕ್ಷಿಪೇತ್ ॥ ೮೮ ॥

ಆಕಾಶೇ ಚ ಕ್ಷಿಪೇದ್ವಾರಿ ವಾರಿಸ್ಥೋ ದಕ್ಷಿಣಾಮುಖಃ ।
ಪಿತೄಣಾಂ ಸ್ಥಾನಮಾಕಾಶಂ ದಕ್ಷಿಣಾದಿಕ್ತಥೈವ ಚ ॥ ೮೯ ॥

ಆಪೋ ದೇವಗಣಾಃ ಪ್ರೋಕ್ತಾ ಆಪಃ ಪಿತೃಗಣಾಸ್ತಥಾ ।
ತಸ್ಮಾದಸ್ಮ ಜಲಂ ದೇಯಂ ಪಿತೄಣಾಂ ಹಿತಮಿಚ್ಛತಾ ॥ ೯೦ ॥

ದಿವಾ ಸೂರ್ಯಾಂಶುಸಂತಪ್ತಂ ರಾತ್ರೌ ನಕ್ಷತ್ರಮಾರುತೈಃ ।
ಮಧ್ಯಯೋರಪ್ಯುಭಾಭ್ಯಾಂ ಚ ಪವಿತ್ರಂ ಸರ್ವದಾ ಜಲಂ ॥ ೯೧ ॥

---

೮೬. ಮೃತನಾದ ಹನ್ನೊಂದನೆಯ ದಿನ ವೃಷೋತ್ಸರ್ಗವನ್ನು ಮಾಡಿದರೆ ಮೃತಜೀವನು ಪಿತೃಲೋಕದಿಂದ ಮುಕ್ತನಾಗಿ ಸ್ವರ್ಗಲೋಕದಲ್ಲಿ ಪುಣ್ಯಭಾಗಿಯಾಗುತ್ತಾನೆ.

೮೭–೮೯. ಹೊಕ್ಕಳಿನವರೆಗಿರುವ ನೀರಿನಲ್ಲಿ ದಕ್ಷಿಣಾಭಿಮುಖವಾಗಿ ನಿಂತು, ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು "ಪಿತೃಗಳಿರಾ! ನೀವು ಇಲ್ಲಿಗೆ ಬಂದು ಈ ಜಲಾಂಜಲಿಗಳನ್ನು ಸ್ವೀಕರಿಸಬೇಕು." ಎಂದು ಮನಃಪೂರ್ವಕವಾಗಿ ಚಿಂತಿಸಿ ಗೋವಿನ ಕೊಂಬಿನಷ್ಟು ಎತ್ತರಕ್ಕೆ ಬೊಗಸೆಯನ್ನೆತ್ತಿ ಜಲಮಧ್ಯದಲ್ಲಿ ಬೀಳುವಂತೆ ನೀರನ್ನು ಮೇಲಕ್ಕೆರಚಬೇಕು.

೮೯-೯೦. ಆಕಾಶ ಮತ್ತು ದಕ್ಷಿಣದಿಕ್ಕು ಇವೆರಡೂ ಪಿತೃಗಳ ಆಶ್ರಯಸ್ಥಾನವು. ದೇವತೆಗಳು ಮತ್ತು ಪಿತೃಗಳು ನೀರಿನಲ್ಲಿ ಸನ್ನಿಹಿತರಾಗಿರುತ್ತಾರೆ. ಆದುದರಿಂದ ಪಿತೃಗಳಿಗೆ ಹಿತೈಷಿಯಾದವನು ಅವರಿಗೆ ಜಲಾಂಜಲಿಯನ್ನು ಉಕ್ತರೀತಿಯಿಂದ ಕೊಡಬೇಕು.

೯೧. ಹಗಲು ಸೂರ್ಯನಕಿರಣಗಳಿಂದ, ರಾತ್ರಿ ನಕ್ಷತ್ರ, ವಾಯುಗಳಿಂದ

**ಸ್ವಭಾವಯುಕ್ತಮವ್ಯಕ್ತಮಮೇಧ್ಯೇನ ಸದಾ ಶುಚಿಃ ।**
**ಭಾಂಡಸ್ಥಂ ಧರಣೀಸ್ಥಂ ವಾ ಪವಿತ್ರಂ ಸರ್ವದಾ ಜಲಂ ॥ ೯೨ ॥**

**ದೇವತಾನಾಂ ಪಿತೄಣಾಂ ಚ ಜಲಂ ದದ್ಯಾಜ್ಜಲಾಂಜಲೀನ್ ।**
**ಅಸಂಸ್ಕೃತಪ್ರಮೀತಾನಾಂ ಸ್ಥಲೇ ದದ್ಯಾದ್ವಿಚಕ್ಷಣಃ ॥ ೯೩ ॥**

**ಶ್ರಾದ್ಧೇ ಹವನಕಾಲೇ ಚ ದದ್ಯಾದೇಕೇನ ಪಾಣಿನಾ ।**
**ಉಭಾಭ್ಯಾಂ ತರ್ಪಣೇ ದದ್ಯಾದೇಷ ಧರ್ಮೋ ವ್ಯವಸ್ಥಿತಃ ॥ ೯೪ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಧರ್ಮಶಾಂತಿನಿರ್ದೇಶೋ ನಾಮ ಚತುರ್ದಶೋಽಧ್ಯಾಯಃ**

---

ಮಧ್ಯಕಾಲದಲ್ಲಿ ಎರಡರಿಂದಲೂ ಸಹ ತಪಿಸಲ್ಪಟ್ಟ ಜಲವು ಸ್ವಾಭಾವಿಕವಾಗಿ ಯಾವಾಗಲೂ ಪವಿತ್ರವಾಗಿಯೇ ಇರುತ್ತದೆ.

೯೨. ಸ್ಫುಟವಾಗಿ ಗೋಚರವಾಗದಂತೆ ಅವ್ಯಕ್ತವಾಗಿ ಅಪವಿತ್ರವಸ್ತು ಸಂಬಂಧವಾದಾಗ್ಯೂ ಸ್ವಾಭಾವಿಕವಾಗಿ ಜಲವು ಸರ್ವದಾ ಶುದ್ಧವು. ಪಾತ್ರೆಯಲ್ಲಿ ಅಥವಾ ಭೂಮಿಯಲ್ಲಿರುವ ನೀರು ಸದಾ ಪವಿತ್ರವು-

೯೩. ದೇವತೆಗಳು, ಪಿತೃಗಳು, ಸಂಸ್ಕಾರಹೀನರಾಗಿ ಮೃತರಾದವರು ಇವರುಗಳಿಗೆ ವಿವೇಕಿಯು ಬೊಗಸೆಯಿಂದ ನೀರನ್ನು ಕೊಡಬೇಕು.

೯೪. ಶ್ರಾದ್ಧ, ಹೋಮಕಾಲ ಇವುಗಳಲ್ಲಿ ಒಂದೇ ಹಸ್ತದಿಂದಲೂ, ತರ್ಪಣಕಾಲದಲ್ಲಿ ಎರಡು ಹಸ್ತಗಳಿಂದಲೂ ಜಲಪ್ರದಾನ ಮಾಡಬೇಕೆಂಬುದು ಶಾಸ್ತ್ರನಿರ್ಣೀತವಾದ ಧರ್ಮವು.

ಇಂತು ನಾರದೀಯಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ ಧರ್ಮಶಾಂತಿಕಥನವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

## ಕಥಾಸಾರಾಂಶ

ಶ್ರುತಿ ಮತ್ತು ಸ್ಮೃತಿಗಳಲ್ಲಿ ಹೇಳಿರುವ ಪ್ರಕಾರ ನಾನಾವಿಧವಾದ ಪಾತಕಗಳು, ಅವುಗಳಿಗೆ ಪ್ರಾಯಶ್ಚಿತ್ತ, ಶ್ರಾದ್ಧಪ್ರಭೇದ, ಮರಣಾನಂತರ ಕರ್ತವ್ಯವಾದ ಕ್ರಿಯಾಕಲಾಪ ಮುಂತಾದುವುಗಳು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.

# ಪಂಚದಶೋऽಧ್ಯಾಯಃ

---

**ಧರ್ಮರಾಜ ಉವಾಚ**

ಪಾಪಭೇದಾನ್ಪ್ರವಕ್ಷ್ಯಾಮಿ ತಥಾ ಸ್ಥೂಲಾಶ್ಚ ಯಾತನಾಃ ।
ಶೃಣುಷ್ವ ಧೈರ್ಯಮಾಸ್ಥಾಯ ರೌದ್ರಾ ಹಿ ನರಕಾ ಯತಃ ॥ ೧ ॥

ಪಾಪಿನೋ ಯೇ ದುರಾತ್ಮಾನೋ ನರಕಾಗ್ನಿಷು ಸಂತತಮ್ ।
ಪಚ್ಯಂತೇ ಯೇಷು ತಾನ್ವಕ್ಷ್ಯೇ ಭಯಂಕರಫಲಪ್ರದಾನ್ ॥ ೨ ॥

ತಪನೋ ವಾಲುಕಾಕುಂಭೋ ಮಹಾರೌರವರೌರವೌ ।
ಕುಂಭೀಪಾಕೋ ನಿರುಚ್ಛ್ವಾಸಃ ಕಾಲಸೂತ್ರಃ ಪ್ರಮರ್ದನಃ ॥ ೩ ॥

ಅಸಿಪತ್ರವನಂ ಘೋರಂ ಲಾಲಾಭಕ್ಷೋ ಹಿಮೋತ್ಕಟಃ ।
ಮೂಷಾವಸ್ಥಾ ವಸಾಕೂಪಸ್ತಥಾ ವೈತರಣೀನದೀ ॥ ೪ ॥

---

## ಹದಿನೈದನೆಯ ಅಧ್ಯಾಯ

೧. ಧರ್ಮರಾಜನು ಮಾತನಾಡಿದನು;—ನಾನಾವಿಧ ಪಾಪಗಳನ್ನೂ ಅದರಿಂದಾಗುವ ಮಹತ್ತಾದ ದುಃಖಗಳನ್ನೂ ಸಹ ಹೇಳುತ್ತೇನೆ; ನರಕಯಾತನೆಗಳು ಭಯಂಕರಗಳಾದುದುರಿಂದ ಭಯಪಡದೇ ಧೈರ್ಯವಾಗಿ ಕೇಳು.

೨. ನೀಚರಾದ ಪಾಪಿಷ್ಠರು ಬೆಂಕಿಯಂತಿರುವ ಯಾವ ನರಕಗಳಲ್ಲಿ ದಹಿಸಲ್ಪಡುವರೋ ಅಂತಹ ಘೋರ ಫಲದಾಯಕಗಳಾದ ನರಕಗಳನ್ನೂ ಸಹ ಹೇಳುತ್ತೇನೆ.

೩–೪. ತಪನ, ವಾಲುಕಾಕುಂಭ, ಮಹಾರೌರವ, ರೌರವ, ಕುಂಭೀಪಾಕ, ನಿರುಚ್ಛ್ವಾಸ, ಕಾಲಸೂತ್ರ, ಪ್ರಮರ್ದನ ಅಥವಾ ಸಂಘಾತ, ಭಯಂಕರವಾದ ಅಸಿಪತ್ರವನ, ಲಾಲಾಭಕ್ಷ, ಹಿಮೋತ್ಕಟ, ಮೂಷಾವಸ್ಥಾ, ವಸಾಕೂಪ, ವೈತರಣೀನದಿ ಎಂಬಿವುಗಳು ನರಕಗಳು (ದುಃಖಭೋಗಸ್ಥಾನ).

ಶ್ವಭಕ್ಷ್ಯೋ ಮೂತ್ರಪಾನಂ ಚ ಪುರೀಷಹ್ರದ ಏವ ಚ ।
ತಪ್ತಶೂಲಂ ತಪ್ತಶಿಲಾ ಶಾಲ್ಮಲೀದ್ರುಮ ಏವ ಚ ॥ ೫ ॥

ತಥಾ ಶೋಣಿತಕೂಪಶ್ಚ ಘೋರಃ ಶೋಣಿತಭೋಜನಃ ।
ಸ್ವಮಾಂಸಭೋಜನಂ ಚೈವ ವಹ್ನಿಜ್ವಾಲಾನಿವೇಶನಂ ॥ ೬ ॥

ಶಿಲಾವೃಷ್ಟಿಃ ಶಸ್ತ್ರವೃಷ್ಟಿರ್ವಹ್ನಿವೃಷ್ಟಿಸ್ತಥೈವ ಚ ।
ಕ್ಷಾರೋದಕಂ ಚೋಷ್ಣತೋಯಂ ತಪ್ತಾಯಃಪಿಂಡಭಕ್ಷಣಂ ॥ ೭ ॥

ಅಧಃಶಿರಃ ಶೋಷಣಂ ಚ ಮರುತ್ಪ್ರಪತನಂ ತಥಾ ।
ತಥಾ ಪಾಷಾಣವರ್ಷಂ ಚ ಕೃಮಿಭೋಜನಮೇವ ಚ ॥ ೮ ॥

ಕ್ಷಾರೋದಪಾನಂ ಭ್ರಮಣಂ ತಥಾ ಕ್ರಕಚದಾರಣಂ ।
ಪುರೀಷಲೇಪನಂ ಚೈವ ಪುರೀಷಸ್ಯ ಚ ಭೋಜನಂ ॥ ೯ ॥

---

೫. ನರಕದಲ್ಲಿ ಅನುಭವಿಸುವ ಯಾತನಾಕ್ರಮಗಳನ್ನು ಬಹು ಶ್ಲೋಕಗಳಿಂದ ಹೇಳುತ್ತಾರೆ—ನಾಯಿಯನ್ನು ತಿನ್ನುವುದು, ಉಚ್ಚೆಕುಡಿಯುವುದು, ಅಮೇಧ್ಯದ ಗುಂಡಿಯಲ್ಲಿ ಬಿದ್ದು ನರಳುತ್ತಿರುವುದು, ಕಾಯಿಸಿದ ಶೂಲ, ಕಲ್ಲು ಮತ್ತು ಬೂರುಗದ ಮರ ಇವುಗಳ ಮೇಲೆ ಕುಳಿತುಕೊಳ್ಳುವುದು.

೬. ಭಯಂಕರವಾದ ರಕ್ತದ ಬಾವಿ, ರಕ್ತ ಕುಡಿಯುವುದು, ತನ್ನ ಮಾಂಸವನ್ನು ತಾನೇ ತಿನ್ನುವುದು, ಬೆಂಕಿಯ ಉರಿಯಲ್ಲಿ ಪ್ರವೇಶ.

೭. ಕಲ್ಲುಮಳೆ, ಶಸ್ತ್ರಮಳೆ, ಬೆಂಕಿಯಮಳೆ ಇವುಗಳನ್ನು ಸುರಿಸುವುದು ಉಪ್ಪುನೀರು, ಕುದಿಯುವ ನೀರು, ಕೆಂಪಗೆ ಕಾಯಿಸಿದ ಕಬ್ಬಿಣವನ್ನು ತಿನ್ನುವುದು.

೮. ತಲೆಯನ್ನು ಕೆಳಗೆ ಮಾಡಿ ಕಾಲನ್ನು ಮೇಲೆ ಮಾಡಿ ನಿಲ್ಲಿಸುವುದು, ಒಣಗಿಸುವುದು, ಬಿರುಗಾಳಿಯ ಹೊಡೆತ, ಮಳೆಯಂತೆ ಕಲ್ಲನ್ನು ಸುರಿಸುವುದು, ಕ್ರಿಮಿಗಳನ್ನೇ ತಿನ್ನುವುದು.

೯. ಉಪ್ಪುನೀರು ಕುಡಿಯುವುದು, ಸುತ್ತುತ್ತಿರುವುದು, ಗರಗಸದಿಂದ ಶರೀರವನ್ನು ಕೊಯ್ಯುವುದು, ಶರೀರಕ್ಕೆ ಅಮೇಧ್ಯವನ್ನು ಮೆತ್ತುವುದು, ಅಮೇಧ್ಯ ತಿನ್ನುವುದು.

**ರೇತಃಪಾನಂ ಮಹಾಘೋರಂ ಸರ್ವಸಂಧಿಷು ದಾಹನಂ ।**
**ಧೂಮಪಾನಂ ಪಾಶಬಂಧಂ ನಾನಾಶೂಲಾನುಲೇಪನಂ ॥ ೧೦ ॥**

**ಅಂಗಾರಶಯನಂ ಚೈವ ತಥಾ ಮುಸಲಮರ್ದನಂ ।**
**ಬಹೂನಿ ಕಾಷ್ಠಯಂತ್ರಾಣಿ ಕರ್ಷಣಂ ಛೇದನಂ ತಥಾ ॥ ೧೧ ॥**

**ಪತನೋತ್ಪತನಂ ಚೈವ ಗದಾದಂಡಾದಿಪೀಡನಂ ।**
**ಗಜದಂತಪ್ರಹರಣಂ ನಾನಾಸರ್ಪೈಶ್ಚ ದಂಶನಂ ॥ ೧೨ ॥**

**ಶೀತಾಂಬುಸೇಚನಂ ಚೈವ ನಾಸಾಯಾಂ ಚ ಮುಖೇ ತಥಾ ।**
**ಘೋರಕ್ಷಾರಾಂಬುಪಾನಂ ಚ ತಥಾ ಲವಣಭಕ್ಷಣಂ ॥ ೧೩ ॥**

**ಸ್ನಾಯುಛೇದಂ ಸ್ನಾಯುಬಂಧಮಸ್ಥಿಛೇದಂ ತಥೈವ ಚ ।**
**ಕ್ಷಾರಾಂಬುಪೂರ್ಣರಂಧ್ರಾಣಾಂ ಪ್ರವೇಶಂ ಮಾಂಸಭೋಜನಂ ॥ ೧೪ ॥**

---

೧೦. ವೀರ್ಯಪಾನ, ಅತಿಭಯಂಕರವಾಗಿ ಸಂಧಿಪ್ರದೇಶದಲ್ಲಿ ಸುಡುವುದು, ಹೊಗೆ ಕುಡಿಯುವುದು, ಹಗ್ಗದಿಂದ ಕಟ್ಟುವುದು, ಅನೇಕ ವಿಧವಾದ ಶೂಲಗಳಿಂದ ಚುಚ್ಚುವುದು.

೧೧. ಬೆಂಕಿಯಮೇಲೆ ಮಲಗಿಸುವುದು, ಒನಕೆಯಿಂದ ಕುಟ್ಟುವುದು, ನಾನಾವಿಧವಾದ ಕಾಷ್ಠಯಂತ್ರಗಳಿಂದ ಕೊತ್ತುವುದು, ಕಡಿಯುವುದು.

೧೨. ಬೀಳುವುದು, ಏಳುವುದು, ಗದೆಯಂತಿರುವ ಕಟ್ಟಿಗೆ ಮುಂತಾದವುಗಳಿಂದ ಹೊಡೆಯುವುದು, ಆನೆಯ ಹಲ್ಲಿನಿಂದ ಹೊಡೆಯುವುದು, ಬಹು ಸರ್ಪಗಳಿಂದ ಕಚ್ಚಿಸುವುದು.

೧೩. ತಣ್ಣೀರೆರಚುವುದು, ಮೂಗು, ಬಾಯಿ ಇವುಗಳಲ್ಲಿ ಉಪ್ಪುನೀರನ್ನು ಕುಡಿಸುವುದು, ಉಪ್ಪು ತಿನ್ನುವುದು.

೧೪. ಸಣ್ಣ ನರಗಳನ್ನು ಕತ್ತರಿಸುವುದು, ಬಂಧಿಸುವುದು, ಮೂಳೆಯನ್ನು ಕತ್ತರಿಸುವುದು, ಉಪ್ಪುನೀರಿನಿಂದ ತುಂಬಿರುವ ಬಾವಿಗಳಲ್ಲಿ ಮುಳುಗಿಸುವುದು, ಮಾಂಸಭೋಜನ.

ಪಿತ್ತಪಾನಂ ತಥಾ ಘೋರಂ ತಥೈವ ಶ್ಲೇಷ್ಮಭೋಜನಂ ।
ವೃಕ್ಷಾಗ್ರಾತ್ಪಾತನಂ ಚೈವ ಜಲಾಂತರ್ಮಜ್ಜನಂ ತಥಾ ॥ ೧೫ ॥

ಪಾಷಾಣಧಾರಣಂ ಚೈವ ಶಯನಂ ಕಂಟಕೋಪರಿ ।
ಪಿಪೀಲಿಕಾದಂಶನಂ ಚ ವೃಶ್ಚಿಕೈಶ್ಚಾಪಿ ಪೀಡನಂ ॥ ೧೬ ॥

ವ್ಯಾಘ್ರಪೀಡಾ ಶಿವಾಪೀಡಾ ತಥಾ ಮಹಿಷಪೀಡನಂ ।
ಕರ್ದಮೇ ಶಯನಂ ಚೈವ ದುರ್ಗಂಧಪರಿಪೂರಣಂ ॥ ೧೭ ॥

ಬಹುಶಶ್ಚಾರ್ಧಶಯನಂ ಮಹಾತಿಕ್ತನಿಷೇವಣಂ ।
ಅತ್ಯುಷ್ಣತೈಲಪಾನಂ ಚ ಮಹಾಕಟುನಿಷೇವಣಂ ॥ ೧೮ ॥

ಕಷಾಯೋದಕಪಾನಂ ಚ ತಪ್ತಪಾಷಾಣತಕ್ಷಣಂ ।
ಅತ್ಯುಷ್ಣಶೀತಸ್ನಾನಂ ಚ ತಥಾ ದಶನಶೀರ್ಣನಂ ॥ ೧೯ ॥

---

೧೫. ಭಯಂಕರ ಪಿತ್ತಪಾನ, ಶ್ಲೇಷ್ಮ ತಿನ್ನುವುದು, ಮರದ ಮೇಲ್ಭಾಗದಿಂದ ಬೀಳುವುದು, ಮತ್ತು ನೀರಿನೊಳಗೆ ಮುಳುಗುವುದು.

೧೬. ಕಲ್ಲು ಹೊರುವುದು, ಮುಳ್ಳಿನಮೇಲೆ ಮಲಗುವುದು, ಇರುವೆಗಳಿಂದ ಕಚ್ಚಿಸುವುದು, ಚೇಳುಗಳಿಂದ ಕಚ್ಚಿಸುವುದು-

೧೭. ಹುಲಿ, ನರಿ, ಎಮ್ಮೆ, ಇವುಗಳ ಬಾಧೆಯು, ಕೆಸರಿನಲ್ಲಿ ಮಲಗುವುದು, ದುರ್ಗಂಧ ತುಂಬುವುದು.

೧೮. ಪ್ರಾಯಶಃ ಅರ್ಧ ಮಲಗುವುದು, ಅತ್ಯಂತ ಕಹಿಯಾಗಿರುವುದನ್ನು ಸೇವಿಸುವುದು, ಕುದಿಯುವ ಎಣ್ಣೆಯನ್ನು ಕುಡಿಯುವುದು, ಬಹು ಖಾರ ತಿನ್ನುವುದು.

೧೯. ಒಗರುನೀರು ಕುಡಿಯುವುದು, ಕಾದಕಲ್ಲಿನಿಂದ ತಪಿಸುವುದು, ಅತಿತಣ್ಣಗೆ ಅಥವಾ ಬಹು ಬಿಸಿಯಾಗಿರುವ ನೀರಿನಿಂದ ಸ್ನಾನಮಾಡಿಸುವುದು, ನಾಲಿಗೆ ಸೀಳುವುದು.

ತಪ್ತಾಯಃಶಯನಂ ಚೈವ ಹ್ಯಯೋಭಾರಸ್ಯ ಬಂಧನಂ ।
ಏವಮಾದ್ಯಾ ಮಹಾಭಾಗ ಯಾತನಾಃ ಕೋಟಿಕೋಟಿಶಃ ॥ ೨೦ ॥

ಅಪಿ ವರ್ಷಸಹಸ್ರೇಣ ನಾಹಂ ನಿಗದಿತುಂ ಕ್ಷಮಃ ।
ಏತೇಷು ಯಸ್ಯ ಯತ್ಪಾಪಂ ಪಾಪಿನಃ ಕ್ಷಿತಿರಕ್ಷಕ ॥ ೨೧ ॥

ತತ್ಸರ್ವಂ ಸಂಪ್ರವಕ್ಷ್ಯಾಮಿ ತನ್ಮೇ ನಿಗದತಃಶ್ರುಣು ।
ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ॥ ೨೨ ॥

ಮಹಾಪಾತಕಿನಸ್ತ್ವೇತೇ ತತ್ಸಂಸರ್ಗೀ ಚ ಪಂಚಮಃ ।
ಪಂಕ್ತಿಭೇದೀ ವೃಥಾಪಾಕೀ ನಿತ್ಯಂ ಬ್ರಾಹ್ಮಣದೂಷಕಃ ॥ ೨೩ ॥

ಅದೇಶೀ ವೇದವಿಕ್ರೇತಾ ಪಂಚೈತೇ ಬ್ರಹ್ಮಘಾತಕಾಃ ।
ಬ್ರಾಹ್ಮಣಂ ಯಃ ಸಮಾಹೂಯ ದಾಸ್ಯಾಮೀತಿ ಧನಾದಿಕಂ ॥ ೨೪ ॥

---

೨೦. ಕಾದ ಕಬ್ಬಿಣದಮೇಲೆ ಮಲಗುವುದು, ಮತ್ತು ಭಾರವಾದ ಕಬ್ಬಿಣವನ್ನು ಬಂಧಿಸುವುದು ಮುಂತಾದ ಕೋಟ್ಯಂತರ ಯಾತನೆಗಳು ನರಕದಲ್ಲಿ ಸಂಭವಿಸುತ್ತವೆ.

೨೧-೨೨. ಸಾವಿರ ವರ್ಷಗಳಾದಾಗ್ಯೂ ನರಕ ಯಾತನೆಗಳನ್ನು ಸಂಪೂರ್ಣವಾಗಿ ಹೇಳಲು ನಾನು ಶಕ್ತನಲ್ಲ, ಭೂಪಾಲನೇ! ಉಕ್ತಯಾತನೆಗಳಲ್ಲಿ ಯಾವ ಯಾತನೆಯು ಯಾವ ಪಾಪಕ್ಕೆ ಶಿಕ್ಷೆಯು ಎಂಬುದನ್ನೆಲ್ಲಾ ಹೇಳುತ್ತೇನೆ ಕೇಳು.

೨೨-೨೩. ಬ್ರಾಹ್ಮಣನನ್ನು ಸಂಹರಿಸಿದವನು, ಮದ್ಯಪಾನಮಾಡಿದವನು, ಗುರುಪತ್ನೀಗಮನಮಾಡಿದವನು, ಬಂಗಾರಕದ್ದವನು, ಇವರ ಸಂಸರ್ಗ ಮಾಡುವವನು ಎಂಬ ಐವರು ಮಹಾಪಾತಕಿಗಳು.

೨೩-೨೪. ಬ್ರಹ್ಮಹತ್ಯೆಗೆ ಸಮವಾದ ಪಾಪಗಳನ್ನು ಹೇಳುತ್ತಾರೆ— ಪಂಕ್ತಿಭೇದ, ವ್ಯರ್ಥವಾದ ಪಾಕ (ದೇವರಿಗೆ ನಿವೇದನಮಾಡದೆ ಮತ್ತು ಅತಿಥಿ ಮುಂತಾದವರಿಗೆ ಕೊಡದೆ ಮಾಡಿದುದನ್ನೆಲ್ಲಾ ತಾನೇ ತಿನ್ನುವುದು), ಸರ್ವದಾ ಬ್ರಾಹ್ಮಣದೂಷಣೆ, ದೌತ್ಯ, ವೇದವಿಕ್ರಯಣ, ಇವುಗಳನ್ನು ಮಾಡುವವರು ಬ್ರಹ್ಮಘಾತಕರೆನಿಸುವರು.

ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ತಮಾಹುರ್ಬ್ರಹ್ಮಘಾತಿನಂ ।
ಸ್ನಾನಾರ್ಥಂ ಪೂಜನಾರ್ಥಂ ವಾ ಗಚ್ಛತೋ ಬ್ರಾಹ್ಮಣಸ್ಯ ಯಃ ॥ ೨೫ ॥

ಸಮಾಯಾತ್ಯಂತರಾಯತ್ವಂ ತಮಾಹುರ್ಬ್ರಹ್ಮಘಾತಿನಂ ।
ಪರನಿಂದಾಸು ನಿರತಶ್ಚಾತ್ಮೋತ್ಕರ್ಷರತಶ್ಚ ಯಃ ॥ ೨೬ ॥

ಅಸತ್ಯನಿರತಶ್ಚೈವ ಬ್ರಹ್ಮಹಾ ಪರಿಕೀರ್ತಿತಃ ।
ಅಧರ್ಮಸ್ಯಾನುಮಂತಾ ಚ ಬ್ರಹ್ಮಹಾ ಪರಿಕೀರ್ತಿತಃ ॥ ೨೭ ॥

ಅನ್ಯೋದ್ವೇಗರತಶ್ಚೈವ ಅನ್ಯೇಷಾಂ ದೋಷಸೂಚಕಃ ।
ದಂಭಾಚಾರರತಶ್ಚೈವ ಬ್ರಹ್ಮಹೇತ್ಯಭಿಧೀಯತೇ ॥ ೨೮ ॥

ನಿತ್ಯಂ ಪ್ರತಿಗ್ರಹರತಸ್ತಥಾ ಪ್ರಾಣಿವಧೇ ರತಃ ।
ಬ್ರಹ್ಮಹತ್ಯಾಸಮಂ ಪಾಪಮೇವಂ ಬಹುವಿಧಂ ನೃಪ ॥ ೨೯ ॥

---

೨೪-೨೫. ಹಣ ಮುಂತಾದುವನ್ನು ಕೊಡುವೆನೆಂದು ಆಶೆಹುಟ್ಟಿಸಿ ಬ್ರಾಹ್ಮಣನನ್ನು ಕರೆದು ಆಮೇಲೆ ಇಲ್ಲವೆಂದು ಹೇಳುವವನು ಬ್ರಹ್ಮಘಾತಕನು.

೨೫-೨೬. ಸ್ನಾನ ಅಥವಾ ಪೂಜೆಗಾಗಿ ಹೋಗುತ್ತಿರುವ ಬ್ರಾಹ್ಮಣನಿಗೆ ವಿಘ್ನವಾಗಿ ಬಂದವನು ಬ್ರಹ್ಮಘಾತಕನು.

೨೬-೨೭. ಇತರರ ದೂಷಣೆ, ತನ್ನ ಉತ್ಕರ್ಷ, ಅಸತ್ಯವಚನ ಇವುಗಳಲ್ಲಿ ಆಸಕ್ತರಾದವರು ಬ್ರಹ್ಮಘಾತಕರು. ಅಧರ್ಮವನ್ನು ಅನುಮೋದಿಸುವವನೂ ಬ್ರಹ್ಮಘಾತಕನು.

೨೮-೨೯. ಇತರರಿಗೆ ದುಃಖವನ್ನುಂಟುಮಾಡುವವನು, ಇತರರಲ್ಲಿ ದೋಷಗಳನ್ನು ಸೂಚಿಸುವವನು, ಡಂಭಾಚಾರ, ಪ್ರಾಣಿವಧೆ ಮತ್ತು ನಿತ್ಯದಲ್ಲಿಯೂ ಪ್ರತಿಗ್ರಹ ಇವುಗಳಲ್ಲಿ ಆಸಕ್ತಿಯುಳ್ಳವನೂ ಸಹ ಬ್ರಹ್ಮಘಾತಕನೆನಿಸುವನು. ದೊರೆಯೇ! ಈರೀತಿಯಾಗಿ ಬ್ರಹ್ಮಹತ್ಯೆಗೆ ಸಮವಾದ ಪಾಪಗಳು ಬಹುವಿಧವಾಗಿವೆ.

ಸುರಾಪಾನಸಮಂ ಪಾಪಂ ಪ್ರವಕ್ಷ್ಯಾಮಿ ಸಮಾಸತಃ ।
ಗಣಾನ್ನಭೋಜನಂ ಚೈವ ಗಣಿಕಾನಾಂ ನಿಷೇವಣಂ ॥ ೩೦ ॥

ಪತಿತಾನ್ನಾದನಂ ಚೈವ ಸುರಾಪಾನಸಮಂ ಸ್ಮೃತಂ ।
ಉಪಸನಾಪರಿತ್ಯಾಗೋ ದೇವಲಾನಾಂ ಚ ಭೋಜನಂ ॥ ೩೧ ॥

ಸುರಾಪಯೋಷಿತ್ಸಂಯೋಗಃ ಸುರಾಪಾನಸಮಃ ಸ್ಮೃತಃ ।
ಯಃ ಶೂದ್ರೇಣ ಸಮಾಹೂತೋ ಭೋಜನಂ ಕುರುತೇ ದ್ವಿಜಃ ॥ ೩೨ ॥

ಸುರಾಪೀ ಸಹಿ ವಿಜ್ಞೇಯಃ ಸರ್ವಧರ್ಮಬಹಿಷ್ಕೃತಃ ।
ಯಃ ಶೂದ್ರೇಣಾಭ್ಯನುಜ್ಞಾತಃ ಪ್ರೇಷ್ಯಕರ್ಮ ಕರೋತಿ ಚ ॥ ೩೩ ॥

ಸುರಾಪಾನಸಮಂ ಪಾಪಂ ಲಭತೇ ಸ ನರಾಧಮಃ ।
ಏವಂ ಬಹುವಿಧಂ ಪಾಪಂ ಸುರಾಪಾನಸಮಂ ಸ್ಮೃತಂ ॥ ೩೪ ॥

---

೩೦-೩೩. ಸುರಾಪಾನಕ್ಕೆ ಸಮವಾದ ಪಾಪವನ್ನು ಸಂಕ್ಷೇಪವಾಗಿ ಹೇಳುತ್ತೇನೆ—ಸಂಘಾನ್ನಭೋಜನ, ವೇಶ್ಯಾಸ್ತ್ರೀಯರಸೇವೆ, ಜಾತಿಭ್ರಷ್ಟನ ಮನೆಯಲ್ಲಿ ಊಟಮಾಡೋಣ, ವರ್ಣಾಶ್ರಮೋಚಿತವಾದ ಉಪಾಸನೆಯನ್ನು ಬಿಟ್ಟಿರುವುದು, ಪೂಜಾರಿಗೆ ಭೋಜನ ಮಾಡಿಸುವುದು, ಮದ್ಯಪಾನಮಾಡುವವನ ಹೆಂಡತಿಯ ಸಂಪರ್ಕಮಾಡುವುದು, ಶೂದ್ರನಿಂದ ಕರೆಸಿಕೊಂಡು ಬ್ರಾಹ್ಮಣನು ಭೋಜನ ಮಾಡುವುದು ಮತ್ತು ಶೂದ್ರನಿಂದ ಆಜ್ಞಪ್ತನಾಗಿ ಅವನ ಪರಿಚಾರಿಕೆ ಮಾಡುವುದು ಇವೆಲ್ಲವೂ ಮದ್ಯಪಾನಕ್ಕೆ ಸಮಾನವಾದ ಪಾಪ ಕೃತ್ಯಗಳು.

೩೪. ಇವುಗಳನ್ನು ಮಾಡುವವನು ಸುರಾಪಾನಕ್ಕೆ ಸಮವಾದ ಪಾಪಕ್ಕೆ ಭಾಗಿಯಾಗುತ್ತಾನೆ. ಈರೀತಿಯಾಗಿ ಸುರಾಪಾನಸಮವಾದ ಪಾಪವು ಬಹುವಿಧವಾಗಿ ಉಕ್ತವಾಗಿದೆ.

ಹೇಮಸ್ತೇಯಸಮಂ ಪಾಪಂ ಪ್ರವಕ್ಷ್ಯಾಮಿ ನಿಶಾಮಯ ।
ಕಂದಮೂಲಫಲಾನಾಂ ಚ ಕಸ್ತೂರೀ ಪಟ್ಟವಾಸಸಾಂ ॥ ೩೫ ॥

ಸದಾಸ್ತೇಯಂ ಚ ರತ್ನಾನಾಂ ಸ್ವರ್ಣಸ್ತೇಯಸಮಂ ಸ್ಮೃತಂ ।
ತಾಮ್ರಾಯಸ್ತ್ರಪುಕಾಂಸ್ಯಾನಾಮಾಜ್ಯಸ್ಯ ಮಧುನಸ್ತಥಾ ॥ ೩೬ ॥

ಸ್ತೇಯಂ ಸುಗಂಧದ್ರವ್ಯಾಣಾಂ ಸ್ವರ್ಣಸ್ತೇಯಸಮಂ ಸ್ಮೃತಂ ।
ಕ್ರಮುಕಸ್ಯಾಪಹರಣಮಂಭಸಾಂ ಚಂದನಸ್ಯ ಚ ॥ ೩೭ ॥

ಕರ್ಪೂರಸ್ಯಾಪಹರಣಂ ಸ್ವರ್ಣಸ್ತೇಯಸಮಂ ಸ್ಮೃತಂ ।
ಪಿತೃಯಜ್ಞಪರಿತ್ಯಾಗೋ ಧರ್ಮಕಾರ್ಯವಿಲೋಪನಂ ॥ ೩೮ ॥

ಯತೀನಾಂ ನಿಂದನಂ ಚೈವ ಸ್ವರ್ಣಸ್ತೇಯಸಮಂ ಸ್ಮೃತಂ ।
ಭಕ್ಷ್ಯಾಣಾಂ ಚಾಪಹರಣಂ ಧಾನ್ಯಾನಾಂ ಹರಣಂ ತಥಾ ॥ ೩೯ ॥

ರುದ್ರಾಕ್ಷಹರಣಂ ಚೈವ ಸ್ವರ್ಣಸ್ತೇಯಸಮಂ ಸ್ಮೃತಂ ।
ಭಗಿನೀಗಮನಂ ಚೈವ ಪುತ್ರಸ್ತ್ರೀಗಮನಂ ತಥಾ ॥ ೪೦ ॥

---

೩೫-೩೮. ಸುವರ್ಣವನ್ನು ಕದಿಯುವುದಕ್ಕೆ ಸಮವಾದ ಪಾಪಕೃತ್ಯವನ್ನು ಹೇಳುತ್ತೇನೆ ಕೇಳು. ಗಡ್ಡೆ, ಗೆಣಸು, ಹಣ್ಣು, ಕಸ್ತೂರಿ, ರೇಷ್ಮೆಬಟ್ಟೆ ರತ್ನಗಳು, ತಾಮ್ರ, ಕಬ್ಬಿಣ, ಸೀಸ, ಕಂಚು, ತುಪ್ಪ, ಜೇನುತುಪ್ಪ, ಸುಗಂಧ ದ್ರವ್ಯಗಳು, ಅಡಕೆ, ನೀರು, ಗಂಧ, ಕರ್ಪೂರ ಇವುಗಳನ್ನು ಕದಿಯುವುದು ಸ್ವರ್ಣಸ್ತೇಯಕ್ಕೆ ಸಮಾನವಾದ ಪಾಪಕೃತ್ಯವು.

೩೮-೪೦. ಪಿತೃ ಶ್ರಾದ್ಧಾದಿಗಳನ್ನು ಬಿಡುವುದು, ಧರ್ಮಕಾರ್ಯವನ್ನು ಹಾಳುಮಾಡುವುದು, ಯತಿದೂಷಣೆಮಾಡುವುದು ಇವೂ ಸ್ವರ್ಣಸ್ತೇಯ ಸಮಾನವು. ಭಕ್ಷ್ಯಗಳು, ಧಾನ್ಯ, ರುದ್ರಾಕ್ಷಿ ಇವುಗಳ ಅಪಹಾರವೂ ಸ್ವರ್ಣಸ್ತೇಯಕ್ಕೆ ಸಮಾನವೆಂದು ಹೇಳಲ್ಪಟ್ಟಿದೆ.

ರಜಸ್ವಲಾದಿಗಮನಂ ಗುರುತಲ್ಪಸಮಂ ಸ್ಮೃತಂ ।
ಹೀನಜಾತ್ಯಾಭಿಗಮನಂ ಮದ್ಯಪಸ್ತ್ರೀನಿಷೇವಣಂ ॥ ೪೧ ॥

ಪರಸ್ತ್ರೀಗಮನಂ ಚೈವ ಗುರುತಲ್ಪಸಮಂ ಸ್ಮೃತಂ ।
ಭ್ರಾತೃಸ್ತ್ರೀಗಮನಂ ಚೈವ ವಯಸ್ಯಸ್ತ್ರೀನಿಷೇವಣಂ ॥ ೪೨ ॥

ವಿಶ್ವಸ್ತಾಗಮನಂ ಚೈವ ಗುರುತಲ್ಪಸಮಂ ಸ್ಮೃತಂ ।
ಅಕಾಲೇ ಕರ್ಮಕರಣಂ ಪುತ್ರೀಗಮನಮೇವ ಚ ॥ ೪೩ ॥

ಧರ್ಮಲೋಪಃ ಶಾಸ್ತ್ರನಿಂದಾ ಗುರುತಲ್ಪಸಮಂ ಸ್ಮೃತಂ ।
ಇತ್ಯೇವಮಾದಯೋ ರಾಜನ್ಮಹಾಪಾತಕಸಂಜ್ಞಿತಾಃ ॥ ೪೪ ॥

ಏತೇಷ್ವೇಕತಮೇನಾಪಿ ಸಂಗಕೃತ್ತತ್ಸಮೋ ಭವೇತ್ ।
ಯಥಾಕಥಂಚಿತ್ಪಾಪಾನಾಮೇತೇಷಾಂ ಪರಮರ್ಷಿಭಿಃ ॥ ೪೫ ॥

ಶಾಂತೈಸ್ತು ನಿಷ್ಕೃತಿರ್ದೃಷ್ಟಾ ಪ್ರಾಯಶ್ಚಿತ್ತಾದಿಕಲ್ಪನೈಃ ।
ಬ್ರಹ್ಮಹತ್ಯಾದಿಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ॥ ೪೬ ॥

---

೪೦–೪೪. ತಂಗಿಯಸಂಗ, ಸೊಸೆಯಸಂಗ, ಮುಟ್ಟಾದವಳ ಸಂಬಂಧ, ಕೀಳುಜಾತಿಯ ಸ್ತ್ರೀಸಂಬಂಧ, ಮದ್ಯಪಾಯಿಯ ಸ್ತ್ರೀ ಸೇವನೆ, ಪರಸ್ತ್ರೀಸಂಗ, ಮುಂತಾದುವು ಗುರುಪತ್ನೀಗಮನಕ್ಕೆ ಸಮಾನವಾದುವು. ಸಹೋದರಪತ್ನೀ ಸಂಗ, ಮಿತ್ರಸ್ತ್ರಿಸೇವನೆ, ವಿಧವೆಯಸಂಗ, ನಿಷಿದ್ಧಕಾಲದಲ್ಲಿ ಸ್ತ್ರೀಸಂಭೋಗ, ಮಗಳಸಂಗ, ಧರ್ಮವನ್ನು ಹಾಳುಮಾಡುವುದು, ಶಾಸ್ತ್ರದೂಷಣೆ ಇವುಗಳೆಲ್ಲವೂ ಗುರುತಲ್ಪ ಸಮಾನವಾದ ದುಷ್ಕೃತ್ಯಗಳು. ಈರೀತಿ ಬಹು ಪಾಪಗಳು ಮಹಾ ಪಾಪಗಳೆಂದು ಪ್ರಸಿದ್ಧವಾಗಿವೆ.

೪೫-೪೬. ಉಕ್ತಮಹಾಪಾತಕಿಗಳಲ್ಲಿ ಒಬ್ಬನ ಸಹವಾಸಮಾಡಿದಾಗ್ಯೂ ಅವನು ಮಹಾಪಾತಕಿಗಳಿಗೆ ಸಮನಾಗುತ್ತಾನೆ. ಈ ಮಹಾಪಾಪಗಳಿಗೆ ಶಾಂತರಾದ ಮಹರ್ಷಿಗಳು ಪ್ರಾಯಶ್ಚಿತ್ತಾದಿಗಳನ್ನು ಕಲ್ಪಿಸಿ, ಹೇಗಾದರೂ ಪರಿಹಾರಮಾಡಿಕೊಳ್ಳುವ ಉಪಾಯವನ್ನು ತೋರಿಸಿರುತ್ತಾರೆ. ಆದರಿಂದ ಬ್ರಹ್ಮಹತ್ಯಾದಿ ಪಾಪಗಳನ್ನು ಹೇಗಾದರೂ ಪರಿಹರಿಸಿಕೊಳ್ಳಬಹುದು.

**ಸಮಸ್ತಪಾಪತುಲ್ಯಾನಿ ಮಹಾನರಕದಾನಿ ಚ ।**
**ಪ್ರಾಯಶ್ಚಿತ್ತವಿಹೀನಾನಿ ಪಾಪಾನಿ ಶ್ರುಣು ಭೂಪತೇ ॥ ೪೭ ॥**

**ಬ್ರಾಹ್ಮಣಂ ದ್ವೇಷ್ಟಿ ಯಸ್ತಸ್ಯ ನಿಷ್ಕೃತಿರ್ನಾಸ್ತಿ ಕುತ್ರಚಿತ್ ।**
**ವಿಶ್ವಸ್ತಘಾತಿನಶ್ಚೈವ ಕೃತಘ್ನಾನಾಂ ನರೇಶ್ವರ ॥ ೪೮ ॥**

**ಶೂದ್ರಸ್ತ್ರೀಸಂಗಿನಾಂ ಚೈವ ನಿಷ್ಕೃತಿರ್ನಾಸ್ತಿ ಕುತ್ರಚಿತ್ ।**
**ಶೂದ್ರಾನ್ನಪುಷ್ಟದೇಹಾನಾಂ ವೇದನಿಂದಾರತಾತ್ಮನಾಂ ॥ ೪೯ ॥**

**ಸತ್ಕಥಾನಿಂದಕಾನಾಂ ಚ ನೇಹಾಮುತ್ರ ಚ ನಿಷ್ಕೃತಿಃ ।**
**ಬೌದ್ಧಾಲಯಂ ವಿಶೇದ್ಯಸ್ತು ಮಹಾಪದ್ಯಪಿ ವೈ ದ್ವಿಜಃ ॥ ೫೦ ॥**

**ತಸ್ಯ ಕಿಂ ನಿಷ್ಕೃತಿರ್ದೃಷ್ಟಾ ಪ್ರಾಯಶ್ಚಿತ್ತಶತೈರಪಿ ।**
**ಬೌದ್ಧಾಃ ಪಾಷಂಡಿನಃ ಪ್ರೋಕ್ತಾ ಯತೋ ವೇದವಿನಿಂದಕಾಃ ॥ ೫೧ ॥**

---

೪೭. ದೊರೆಯೇ! ಕೇಳು. ಸಕಲ ಪಾಪಸಮಾನವಾದ, ಮಹಾನರಕದಾಯಕಗಳಾದ, ಪ್ರಾಯಶ್ಚಿತ್ತವೇ ಇಲ್ಲದ ಪಾಪಗಳಿವೆ. ಅವುಗಳನ್ನು ವಿವರಿಸುತ್ತೇನೆ.

೪೮-೫೦. ಪ್ರಜೇಶ್ವರನೇ! ಬ್ರಾಹ್ಮಣದ್ವೇಷಿಗೆ ಎಲ್ಲಿಯೂ ಪರಿಹಾರವಿಲ್ಲ. ವಿಶ್ವಾಸಘಾತಕ, ಕೃತಘ್ನ, ಶೂದ್ರಸ್ತ್ರೀ ಸಂಭೋಗ ಮಾಡಿದವನು, ಶೂದ್ರಾನ್ನತಿಂದು ಬೆಳೆದವನು, ವೇದದೂಷಣೆ ಮತ್ತು ಸತ್ಕಥೆಯ ನಿಂದೆಗಳಲ್ಲಿ ಆಸಕ್ತರು ಇವರುಗಳಿಗೆ ಇಹಪರಗಳಲ್ಲಿ ಪರಿಹಾರವಿಲ್ಲ. (ಅದರ ಫಲವನ್ನು ಅನುಭವಿಸಿಯೇ ತೀರಬೇಕು.)

೫೦–೫೧. ದ್ವಿಜನು ಮಹಾಕಷ್ಟಕಾಲದಲ್ಲಿಯೂ ಸಹ ಬೌದ್ಧಾಲಯಕ್ಕೆ ಹೋಗಬಾರದು. ಹೋಗುವವನಿಗೆ ನೂರಾರು ಪ್ರಾಯಶ್ಚಿತ್ತಗಳಿಂದಲೂ ಶುದ್ಧಿಯಾಗುವುದಿಲ್ಲ. ಬೌದ್ಧರು ವೇದವನ್ನು ನಿಂದಿಸುವುದರಿಂದ ಪಾಷಂಡಿಗಳೆಂದು ಉಕ್ತವಾಗಿದೆ.

ತಸ್ಮಾದ್ದ್ವಿಜಸ್ತಾನ್ನೇಕ್ಷೇತ ಯತಸ್ತೇ ಧರ್ಮಬಹಿಷ್ಕೃತಾಃ ।
ಜ್ಞಾನತೋಽಜ್ಞಾನತೋ ವಾಽಪಿ ದ್ವಿಜೋ ಬೌದ್ಧಾಲಯಂ ವಿಶೇತ್ ॥ ೫೨॥

ಜ್ಞಾತ್ವಾ ಚೇನ್ನಿಷ್ಕೃತಿರ್ನಾಸ್ತಿ ಶಾಸ್ತ್ರಾಣಾಮಿತಿ ನಿಶ್ಚಯಃ ।
ಏತೇಷಾಂ ಪಾಪಬಾಹುಲ್ಯಾನ್ನರಕಂ ಕೋಟಿಕಲ್ಪಕಂ ॥ ೫೩ ॥

ಪ್ರಾಯಶ್ಚಿತ್ತವಿಹೀನಾನಿ ಪ್ರೋಕ್ತಾನ್ಯನ್ಯಾನಿ ಚ ಪ್ರಭೋ ।
ಪಾಪಾನಿ ತೇಷಾಂ ನರಕಾನ್ಗದತೋ ಮೇ ನಿಶಾಮಯ ॥ ೫೪ ॥

ಮಹಾಪಾತಕಿನಸ್ತೇಷು ಪ್ರತ್ಯೇಕಂ ಯುಗವಾಸಿನಃ ।
ತದಂತೇ ಪೃಥಿವೀಮೇತ್ಯ ಸಪ್ತಜನ್ಮಸು ಗರ್ದಭಾಃ ॥ ೫೫ ॥

ತತಃ ಶ್ವಾನೋ ವಿಡ್ವರಾಹಾ ಭವೇಯುರ್ದಶಜನ್ಮಸು ।
ಆಶತಾಬ್ದಂ ವಿಟ್ಕ್ರಿಮಯಃ ಸರ್ಪಾ ದ್ವಾದಶಜನ್ಮಸು ॥ ೫೬ ॥

---

೫೨-೫೩. ಅವರು ವೈದಿಕಧರ್ಮಬಾಹ್ಯರಾದುದರಿಂದ ದ್ವಿಜರು ಅವರನ್ನು ನೋಡಬಾರದು. ದ್ವಿಜನು ತಿಳಿಯದೇ ಬೌದ್ಧಾಲಯಕ್ಕೆ ಹೋದರೆ ಪ್ರಾಯಶ್ಚಿತ್ತಗಳಿಂದ ಶುದ್ಧನಾಗಬಹುದು. ತಿಳಿದೂ ಹೋದವನಿಗೆ ಪ್ರಾಯಶ್ಚಿತ್ತವಿಲ್ಲವೆಂದು ಶಾಸ್ತ್ರನಿರ್ಣಯವು. ಈ ಪಾಪಕೃತ್ಯಮಾಡಿದವರಿಗೆ ಪಾಪವು ಬಹಳ ಹೆಚ್ಚಾದುದರಿಂದ ಕೋಟಿಕಲ್ಪದವರೆಗೂ ಅಂತಹವರು ನರಕವಾಸಮಾಡಿ ದುಃಖಭಾಗಿಗಳಾಗುತ್ತಾರೆ.

೫೪. ದೊರೆಯೇ! ಪ್ರಾಯಶ್ಚಿತ್ತವಿಲ್ಲದ ಪಾಪಕೃತ್ಯಗಳು ಇನ್ನೂ ಅನೇಕವಾಗಿ ಹೇಳಲ್ಪಟ್ಟಿವೆ. ಪಾಪಗಳಿಂದ ಉಂಟಾಗುವ ನರಕ ವಿಶೇಷಗಳನ್ನು ನಿರ್ದಿಷ್ಟವಾಗಿ ಹೇಳುತ್ತೇನೆ ಕೇಳು.

೫೫. ಮಹಾಪಾತಕಿಗಳು ಆ ನರಕಗಳಲ್ಲಿ ಒಂದೊಂದರಲ್ಲಿಯೂ ಒಂದೊಂದು ಯುಗ ವಾಸಮಾಡಿ, ಕೊನೆಯಲ್ಲಿ ಭೂಮಿಗೆ ಬಂದು ಏಳುಜನ್ಮಗಳಲ್ಲಿ ಕತ್ತೆಯಾಗಿ ಹುಟ್ಟುತ್ತಾರೆ.

೫೬-೫೭. ತರುವಾಯ ನಾಯಿಯಾಗಿ ಹತ್ತುಜನ್ಮವೂ, ಹಂದಿಯಾಗಿ ಹತ್ತು ಜನ್ಮವೂ, ಅನಂತರ ನೂರುವರ್ಷಪರ್ಯಂತವಾಗಿ ಅಮೇಧ್ಯದಲ್ಲಿರುವ

**ತತಃ ಸಹಸ್ರಜನ್ಮಾನಿ ಮೃಗಾದ್ಯಾಃ ಪಶವೋ ನೃಪ ।**
**ಶತಾಬ್ದಂ ಸ್ಥಾವರಾಶ್ಚೈವ ತದಂತೇ ಗೋಶರೀರಿಣಃ ॥ ೫೭ ॥**

**ತತಸ್ತು ಸಪ್ತಜನ್ಮಾನಿ ಚಂಡಾಲಾಃ ಪಾಪಕಾರಿಣಃ ।**
**ತತಃ ಷೋಡಶಜನ್ಮಾನಿ ಶೂದ್ರಾದ್ಯಾ ಹೀನಜಾತಯಃ ॥ ೫೮ ॥**

**ತತಸ್ತು ಜನ್ಮದ್ವಿತಯೇ ದರಿದ್ರಾ ವ್ಯಾಧಿಪೀಡಿತಾಃ ।**
**ಪ್ರತಿಗ್ರಹಪರಾ ನಿತ್ಯಂ ತತೋ ನಿರಯಗಾಃ ಪುನಃ ॥ ೫೯ ॥**

**ಅಸೂಯಾವಿಷ್ಟಮನಸಾಂ ರೌರವಂ ನರಕಂ ಸ್ಮೃತಂ ।**
**ತತ್ರ ಕಲ್ಪದ್ವಯಂ ಸ್ಥಿತ್ವಾ ಚಂಡಾಲಾಃ ಶತಜನ್ಮಸು ॥ ೬೦ ॥**

**ಮಾ ದದಸ್ವೇತಿ ಯೋ ಬ್ರೂಯಾದ್ಗವಾಗ್ನಿಬ್ರಾಹ್ಮಣೇಷು ಚ ॥ ೬೧ ॥**

---

ಕ್ರಿಮಿಗಳಾಗಿಯೂ, ಬಳಿಕ ಹನ್ನೆರಡು ಜನ್ಮಗಳಲ್ಲಿ ಸರ್ಪಗಳಾಗಿಯೂ ಆಮೇಲೆ ಸಾವಿರ ಜನ್ಮಗಳು ಮೃಗಾದಿ ಮತ್ತು ಪಶುಗಳಾಗಿಯೂ ನೂರು ವರುಷ ಸ್ಥಿರವಾದ ವೃಕ್ಷಾದಿಗಳಾಗಿಯೂ ಹುಟ್ಟಿ ಅನಂತರ ಗೋವಿನಶರೀರವನ್ನು ತಾಳುವರು.

೫೮. ಅನಂತರ ಏಳುಜನ್ಮಗಳಲ್ಲಿ ದುಷ್ಕೃತ್ಯಮಾಡುವ ಚಂಡಾಲರಾಗಿಯೂ ಆಮೇಲೆ ಹದಿನಾರುಜನ್ಮಗಳಲ್ಲಿ ಶೂದ್ರ ಮೊದಲಾದ ಕೀಳುಜಾತಿಯವರಾಗಿಯೂ ಹುಟ್ಟುವರು.

೫೯. ಬಳಿಕ ಬಡವರು, ರೋಗಗ್ರಸ್ತರು ಮತ್ತು ಬಿಕ್ಷುಕರೂ ಆಗಿ ಎರಡು ಜನ್ಮವನ್ನು ಅನುಭವಿಸಿ ಪುನಃ ನರಕಕ್ಕೆ ಹೋಗುವರು.

೬೦. ಮನಸ್ಸಿನಲ್ಲಿ ಹೊಟ್ಟೇಕಿಚ್ಚು ಪಡುವವರಿಗೆ ರೌರವವೆಂಬ ನರಕವಾಗುತ್ತದೆ. ಅಲ್ಲಿ ಎರಡು ಕಲ್ಪಗಳು ಇದ್ದು ಅನಂತರ ನೂರು ಚಂಡಾಲ ಜನ್ಮಗಳನ್ನು ಹೊಂದುತ್ತಾರೆ.

೬೧. ಗೋವು, ಅಗ್ನಿ, ಬ್ರಾಹ್ಮಣ ಇವರುಗಳಿಗೆ ಏನನ್ನೂ ಕೊಡಬಾರದೆಂದು ಹೇಳುವವನು ನಾಯಿಯಾಗಿ ನೂರುಜನ್ಮವನ್ನೆತ್ತಿ ನಂತರ ಚಂಡಾಲ ಜಾತಿಯಲ್ಲಿ ಹುಟ್ಟುತ್ತಾನೆ.

ಶುನಾಂ ಯೋನಿಶತಂ ಗತ್ವಾ ಚಂಡಾಲೇಷೂಪಜಾಯತೇ ।
ತತೋ ವಿಷ್ಠಾಕೃಮಿಶ್ಚೈವ ತತೋ ವ್ಯಾಘ್ರಸ್ತ್ರಿಜನ್ಮಸು ॥ ೬೨ ॥

ತದಂತೇ ನರಕಂ ಯಾತಿ ಯುಗಾನಾಮೇಕವಿಂಶತಿಂ ।
ಪರನಿಂದಾಪರಾ ಯೇ ಚ ಯೇ ಚ ನಿಷ್ಠುರಭಾಷಿಣಃ ॥ ೬೩ ॥

ದಾನಾನಾಂ ವಿಘ್ನಕರ್ತಾರಸ್ತೇಷಾಂ ಪಾಪಫಲಂ ಶೃಣು ।
ಮುಸಲೋಲೂಖಲಾಭ್ಯಾಂ ತು ಚೂರ್ಣ್ಯಂತೇ ತಸ್ಕರಾ ಭೃಶಂ ॥ ೬೪ ॥

ತದಂತೇ ತಪ್ತಪಾಷಾಣಗ್ರಹಣಂ ವತ್ಸರತ್ರಯಂ ।
ತತಶ್ಚ ಕಾಲಸೂತ್ರೇಣ ಭಿದ್ಯಂತೇ ಸಪ್ತವತ್ಸರಾನ್ ॥ ೬೫ ॥

ಶೋಷತಃ ಸ್ವಾನಿ ಕರ್ಮಾಣಿ ಪರದ್ರವ್ಯಾಪಹಾರತಃ ।
ಕ್ರಮೇಣ ತತ್ರ ಪಚ್ಯಂತೇ ನರಕಾಗ್ನಿಷು ಸಂತತಂ ॥ ೬೬ ॥

---

೬೨. ಅನಂತರ ಅಮೇಧ್ಯವಲ್ಲಿನ ಕ್ರಿಮಿಯಾಗಿ, ತರುವಾಯ ಮೂರು ಜನ್ಮಗಳಲ್ಲಿ ಹುಲಿಯಾಗಿ ಹುಟ್ಟಿ, ಕೊನೆಗೆ ಇಪ್ಪತ್ತೊಂದು ಯುಗಗಳಕಾಲ ನರಕದಲ್ಲಿ ಬಿದ್ದಿರುತ್ತಾನೆ.

೬೩-೬೪. ಪರದೂಷಣ ನಿರತರು, ನಿಷ್ಠುರವಾಗಿ ಮಾತನಾಡುವವರು ಮತ್ತು ದಾನಗಳಿಗೆ ವಿಘ್ನಕಾರಿಗಳು ಇವರುಗಳಿಗೆ ಸಂಭವಿಸುವ ಪಾಪಫಲವನ್ನು ಹೇಳುತ್ತೇನೆ, ಕೇಳು. ಅಂತಹ ಕಳ್ಳರನ್ನು ಒರಳಿನಲ್ಲಿ ಹಾಕಿ ಒನಕೆಯಿಂದ ಕುಟ್ಟಿ ಪುಡಿಮಾಡುತ್ತಾರೆ.

೬೫. ಅದರ ಪರ್ಯವಸಾನದಲ್ಲಿ ಮೂರುವರ್ಷಗಳಕಾಲ ಕಾಯಿಸಿದ ಕಲ್ಲನ್ನು ಹೊರಿಸುತ್ತಾರೆ. ತರುವಾಯ ಕಾಲಸೂತ್ರವೆಂಬ ನರಕದಲ್ಲಿ ಏಳು ವರ್ಷ ದಂಡಿಸುವರು.

೬೬. ಪರದ್ರವ್ಯವನ್ನು ಅಪಹರಿಸುವುದರಿಂದ ತಮ್ಮ ಕರ್ಮ (ಪುಣ್ಯ) ವನ್ನೆಲ್ಲಾ ನಾಶಪಡಿಸಿಕೊಂಡು ಕ್ರಮವಾಗಿ ನರಕವೆಂಬ ಬೆಂಕಿಗಳಲ್ಲಿ ದಹಿಸಲ್ಪಡುತ್ತಾರೆ.

ಪರಸ್ವಸೂಚಕಾನಾಂ ಚ ನರಕಂ ಶ್ರುಣು ದಾರುಣಂ ।
ಯಾವದ್ಯುಗಸಹಸ್ರಂ ತು ತಪ್ತಾಯಃಪಿಂಡಭಕ್ಷಣಂ ॥ ೬೭ ॥

ಸಂಪೀಡ್ಯತೇ ಚ ರಸನಾ ಸಂದಂಶೈರ್ಭೃಶದಾರುಣೈಃ ।
ನಿರುಚ್ಛ್ವಾಸೇ ಮಹಾಘೋರೇ ಕಲ್ಪಾರ್ಧಂ ನಿವಸಂತಿ ತೇ ॥ ೬೮ ॥

ಪರಸ್ತ್ರೀಲೋಲುಪಾನಾಂ ಚ ನರಕಂ ಕಥಯಾಮಿ ತೇ ।
ತಪ್ತತಾಮ್ರಸ್ತ್ರಿಯಸ್ತೇನ ಸುರೂಪಾಭರಣೈರ್ಯುತಾಃ ॥ ೬೯ ॥

ಯಾದೃಶೀಸ್ತಾದೃಶೀಸ್ತಾಶ್ಚ ರಮಂತೇ ಪ್ರಸಭಂ ಬಹು ।
ವಿದ್ರವಂತಂ ಭಯೇನಾಸಾಂ ಗೃಹ್ಣಂತಿ ಪ್ರಸಭಂ ಚ ತಂ ॥ ೭೦ ॥

---

೬೭. ಚಾಡಿ ಹೇಳುವವರಿಗಾಗುವ ಭಯಂಕರ ನರಕವನ್ನು ಹೇಳುತ್ತೇನೆ ಕೇಳು. ಸಾವಿರ ಯುಗಗಳವರೆಗೆ ಅಂತಹವರು ಕಾಯಿಸಿದ ಕಬ್ಬಿಣವನ್ನು ನುಂಗಬೇಕು.

೬೮. ಮತ್ತು ಅತ್ಯುಗ್ರವಾದ ಆಯುಧಗಳಿಂದ ಅವರ ನಾಲಿಗೆಯು ಕೀಳಲ್ಪಡುತ್ತದೆ. ಈರೀತಿಯಾಗಿ ಅವರು ಮಹಾಭಯಂಕರವಾದ ನಿರುಚ್ಛ್ವಾಸವೆಂಬ ನರಕದಲ್ಲಿ ಅರ್ಧಕಲ್ಪ ವಾಸಿಸುತ್ತಾರೆ.

೬೯-೭೦. ಪರಸ್ತ್ರೀಸಂಗ ಮಾಡಿದವರಿಗಾಗುವ ನರಕವನ್ನು ಹೇಳುತ್ತೇನೆ. ಪೂರ್ವದಲ್ಲಿ ಯಾವ ಸ್ತ್ರೀಯರ ಸಂಗವನ್ನು ಮಾಡಿದ್ದರೋ ಅದೇ ಆಕಾರವಾಗಿ ಮಾಡಿಸಿದ ತಾಮ್ರದ ಸ್ತ್ರೀ ವಿಗ್ರಹವನ್ನು ಕಾಯಿಸಿ, ಸೌಂದರ್ಯ ಮತ್ತು ಆಭರಣಗಳಿಂದ ಯುಕ್ತವಾದ ಆ ಸ್ತ್ರೀವಿಗ್ರಹದ ಸಂಗವನ್ನು ಬಲಾತ್ಕಾರದಿಂದ ಮಾಡಿಸುತ್ತಾರೆ.

೭೦. ಕಾಯಿಸಿದ ತಾಮ್ರಸ್ತ್ರೀಯರನ್ನು ನೋಡಿ ಭಯಪಟ್ಟು ಓಡಿಹೋದರೂ ಬಿಡದೆ ಆ ಪಾಪಿಗಳನ್ನು ಹಿಡಿದುಕೊಂಡು ಅವರ ಪಾಪಗಳನ್ನು ಹೇಳುತ್ತಾ ಕ್ರಮವಾಗಿ ನರಕಗಳಿಗೆ ಕರೆದುಕೊಂಡು ಹೋಗುತ್ತಾರೆ.

ಕಥಯಂತಶ್ಚ ತತ್ಕರ್ಮ ನಯಂತೇ ನರಕಾನ್ಕ್ರಮಾತ್ ।
ಅನ್ಯಂ ಭಜಂತೇ ಭೂಪಾಲ ಪತಿಂ ತ್ಯಕ್ತ್ವಾ ಚ ಯಾಃ ಸ್ತ್ರಿಯಃ ॥ ೭೧ ॥

ತಪ್ತಾಯಃಪುರುಷಾಸ್ತಾಸ್ತು ತಪ್ತಾಯಃಶಯನೇ ಬಲಾತ್ ।
ಪಾತಯಿತ್ವಾ ರಮಂತೇ ಚ ಬಹುಕಾಲಂ ಬಲಾನ್ವಿತಾಃ ॥ ೭೨ ॥

ತತಸ್ತ್ರೈಯೋರ್ಗೇಷಿತೋ ಮುಕ್ತಾ ಹುತಾಶನಸಮೋಲ್ಬಣಂ ।
ಅಯಸ್ತಂಭಂ ಸಮಾಶ್ಲಿಷ್ಯ ತಿಷ್ಠಂತ್ಯಬ್ಧಸಹಸ್ರಕಂ ॥ ೭೩ ॥

ತತಃ ಕ್ಷಾರೋದಕಸ್ನಾನಂ ಕ್ಷಾರೋದಕನಿಷೇವಣಂ ।
ತದಂತೇ ನರಕಾನ್ಸರ್ವಾನ್ಭುಂಜತೇಽಬ್ದಶತಂ ಶತಂ ॥ ೭೪ ॥

ಯೋ ಹಂತಿ ಬ್ರಾಹ್ಮಣಂ ಗಾಂ ಚ ಕ್ಷತ್ರಿಯಂ ಚ ನೃಪೋತ್ತಮಂ ।
ಸಚಾಪಿ ಯಾತನಾಃ ಸರ್ವಾ ಭುಂಕ್ತೇ ಕಲ್ಪೇಷು ಪಂಚಸು ॥ ೭೫ ॥

---

೭೧-೭೨. ದೊರೆಯೇ! ಪತಿಯನ್ನು ಬಿಟ್ಟು ಪರಪುರುಷನನ್ನು ಸೇವಿಸುವ ಸ್ತ್ರೀಯರನ್ನು ಕಾಯಿಸಿದ ಕಬ್ಬಿಣದಿಂದ ನಿರ್ಮಿತರಾದ ಪುರುಷರು ಬಲಾತ್ಕಾರವಾಗಿ ಕಾಯಿಸಿದ ಕಬ್ಬಿಣದಮೇಲೆ ಮಲಗಿಸಿ ಬಹುಕಾಲ ರಮಿಸುತ್ತಾರೆ.

೭೩. ಅವರಿಂದ ಬಿಡುಗಡೆಯಾದಮೇಲೆ ಆ ಸ್ತ್ರೀಯರು ಬೆಂಕಿಯಂತೆ ಉರಿಯುತ್ತಿರುವ ಕಬ್ಬಿಣದ ಕಂಬವನ್ನು ಆಲಿಂಗನೆಮಾಡಿಕೊಂಡು ಸಾವಿರ ವರ್ಷಕಾಲ ನಿಂತಿರಬೇಕು.

೭೪. ಅನಂತರ ಉಪ್ಪುನೀರಿನಲ್ಲಿ ಸ್ನಾನ ಮತ್ತು ಅದರ ಪಾನಗಳನ್ನು ಮಾಡಿ ಕೊನೆಗೆ ನೂರಾರು ವರ್ಷಗಳ ಕಾಲ ಎಲ್ಲಾ ನರಕಗಳನ್ನೂ ಅನುಭವಿಸಬೇಕು.

೭೫. ರಾಜೋತ್ತಮನೇ! ಬ್ರಾಹ್ಮಣ, ಗೋವು ಮತ್ತು ಕ್ಷತ್ರಿಯ ಇವರುಗಳನ್ನು ವಧೆಮಾಡುವವನು ಐದು ಕಲ್ಪಗಳ ಕಾಲ ಎಲ್ಲಾ ಯಾತನೆಗಳನ್ನೂ ಅನುಭವಿಸುತ್ತಾನೆ.

ಯಃ ಶ್ರುಣೋತಿ ಮಹನ್ನಿಂದಾಂ ಸಾದರಂ ತತ್ಫಲಂ ಶ್ರುಣು ।
ತೇಷಾಂ ಕರ್ಣೇಷು ಪಾತ್ಯಂತೇ ತಪ್ತಾಯಃಕೀಲಸಂಚಯಾಃ ॥ ೭೬ ॥

ತತಶ್ಚ ತೇಷು ಛಿದ್ರೇಷು ತೈಲಮತ್ಯುಷ್ಣ ಮುಲ್ಬಣಂ ।
ಪೂರ್ಯತೇ ಚ ತತಶ್ಚಾಪಿ ಕುಂಭೀಪಾಕಂ ಪ್ರಪದ್ಯತೇ ॥ ೭೭ ॥

ನಾಸ್ತಿಕಾನಾಂ ಪ್ರವಕ್ಷ್ಯಾಮಿ ನರಕಂ ಶ್ರುಣು ಭೂಪತೇ ।
ಅಬ್ದಾನಾಂ ಕೋಟಿಪರ್ಯಂತಂ ನರಕಂ ಭುಂಜತೇ ಹಿ ತೇ ॥ ೭೮ ॥

ತತಶ್ಚ ಕಲ್ಪಪರ್ಯಂತಂ ಪುರೀಷಂ ಭುಂಜತೇ ನೃಪ ।
ಯುಗಂ ತು ರೌರವಂ ಪಶ್ಚಾತ್ತಪ್ತಸ್ಸೈಕತಭೋಜನಂ ॥ ೭೯ ॥

ಬ್ರಾಹ್ಮಣಾನ್ಯೇ ನಿರೀಕ್ಷಂತೇ ಕೋಪದೃಷ್ಟ್ಯಾ ನರಾಧಮಾಃ ।
ತಪ್ತಸೂಚೀಸಹಸ್ರೇಣ ಚಕ್ಷುಸ್ತೇಷಾಂ ಪ್ರಪೂರ್ಯತೇ ॥ ೮೦ ॥

---

೭೬-೭೭. ದೊಡ್ಡವರ ದೂಷಣೆಯನ್ನು ವಿಶ್ವಾಸದಿಂದ ಕೇಳುವವರಿಗಾಗುವ ಫಲವನ್ನು ಹೇಳುತ್ತೇನೆ ಕೇಳು—ಅವರ ಕಿವಿಗಳ ರಂಧ್ರದಲ್ಲಿ ಕಾಯಿಸಿದ ಕಬ್ಬಿಣದ ಮೊಳೆಗಳನ್ನು ತುಂಬಿ ಅವುಗಳ ಸಂದಿನಲ್ಲಿ ಕುದಿಯುವ ಎಣ್ಣೆಯನ್ನು ಭರ್ತಿಮಾಡಿ ಕುಂಭೀಪಾಕವೆಂಬ ನರಕಕ್ಕೆ ಹಾಕುವರು.

೭೮. ರಾಜನೇ! ನಾಸ್ತಿಕರಿಗಾಗುವ ನರಕವನ್ನು ಹೇಳುತ್ತೇನೆ ಕೇಳು—ಅವರು ಕೋಟಿ ವರ್ಷಗಳ ಕಾಲ ನರಕವನ್ನು ಅನುಭವಿಸುತ್ತಾರೆ.

೭೯. ತರುವಾಯ ಒಂದು ಕಲ್ಪ ಪರ್ಯಂತವಾಗ ಅಮೇಧ್ಯವನ್ನು ತಿನ್ನುತ್ತಾರೆ. ಆಮೇಲೆ ಒಂದು ಯುಗ ರೌರವವೆಂಬ ನರಕದಲ್ಲಿ ಕಾಯಿಸಿದ ಮರಳನ್ನು ಮುಕ್ಕುತ್ತಾರೆ.

೮೦-೮೧. ಬ್ರಾಹ್ಮಣರನ್ನು ಕೋಪಭಾವನೆಯಿಂದ ನೋಡುವ ನೀಚ ಮನುಷ್ಯರ ಕಣ್ಣುಗಳನ್ನು ಕಾಯಿಸಿದ ಸಾವಿರಾರು ಸೂಜಿಗಳಿಂದ ಚುಚ್ಚಿ, ಉಪ್ಪು

**ತತಃ ಕ್ಷಾರಾಂಬುಧಾರಾಭಿಃ ಸೇಚ್ಯಂತೇ ನೃಪಸತ್ತಮ ।**
**ತತಶ್ಚ ಕ್ರಕಚೈರ್ಘೋರೈರ್ಭಿದ್ಯಂತೇ ಪಾಪಕಾರಿಣಃ ॥ ೮೧ ॥**

**ವಿಶ್ವಾಸಘಾತಿನಾಂ ಚೈವ ಮರ್ಯಾದಾಭೇದಿನಾಂ ತಥಾ ।**
**ಪರಾನ್ನಲೋಲುಪಾನಾಂ ಚ ನರಕಂ ಶೃಣುದಾರುಣಂ ॥ ೮೨ ॥**

**ಸ್ವಮಾಂಸಭೋಜಿನೋ ನಿತ್ಯಂ ಭಕ್ಷ್ಯಮಾಣಾಃ ಶ್ವಭಿಸ್ತು ತೇ ।**
**ನರಕೇಷು ಸಮಸ್ತೇಷು ಪ್ರತ್ಯೇಕಂ ಹ್ಯಬ್ದವಾಸಿನಃ ॥ ೮೩ ॥**

**ಪ್ರತಿಗ್ರಹರತಾ ಯೇ ಚ ಯೇ ವೈ ನಕ್ಷತ್ರಪಾಠಕಾಃ ।**
**ಯೇ ಚ ದೇವಲಕಾನ್ನಾನಾಂ ಭೋಜಿನಸ್ತಾನ್ ಶೃಣುಷ್ವ ಮೇ ॥ ೮೪ ॥**

**ರಾಜನ್ನಾಕಲ್ಪಪರ್ಯಂತಂ ಯಾತನಾಸ್ವಾಸು ದುಃಖಿತಾಃ ।**
**ಪಚ್ಯಂತೇ ಸತತಂ ಪಾಪಾ ವಿಷ್ಠಾಭೋಗರತಾಃ ಸದಾ ॥ ೮೫ ॥**

---

ನೀರನ್ನು ಎರಚುತ್ತಾರೆ. ತರುವಾಯ ಆ ಪಾಪಿಗಳನ್ನು ಭಯಂಕರ ಗರಗಸಗಳಿಂದ ಕೊಯ್ಯುತ್ತಾರೆ.

೮೨. ನಂಬಿಕೆ ದ್ರೋಹಮಾಡುವವರು, ಮರ್ಯಾದೆಯನ್ನುಲ್ಲಂಘಿಸುವವರು, ಪರಾನ್ನವನ್ನಾಶಿಸುವವರು ಇವರಿಗೆ ಸಂಭವಿಸುವ ಭಯಂಕರ ನರಕವನ್ನು ಹೇಳುತ್ತೇನೆ ಕೇಳು.

೮೩. ಅಂತಹವರು ಯಾವಾಗಲೂ ತಮ್ಮ ಮಾಂಸವನ್ನು ತಿನ್ನುತ್ತಾ ನಾಯಿಗಳಿಂದ ಹಿಂಸಿಸಿಕೊಳ್ಳುತ್ತಾ ಒಂದೊಂದು ನರಕದಲ್ಲಿ ಒಂದೊಂದು ವರ್ಷದಂತೆ ಸಮಸ್ತ ನರಕಗಳಲ್ಲಿಯೂ ವಾಸಮಾಡುತ್ತಾರೆ.

೮೪. ದಾನ ತೆಗೆದುಕೊಳ್ಳುವುದರಲ್ಲಿ ಆಸಕ್ತರು, ನಕ್ಷತ್ರಪಾಠಕರು ಮತ್ತು ಪೂಜಾರಿಗಳ ಮನೆಯಲ್ಲಿ ಭೋಜನ ಮಾಡುವವರು ಇವರಿಗೆ ಸಂಭವಿಸುವ ಯಾತನೆಗಳನ್ನು ಹೇಳುತ್ತೇನೆ ಕೇಳು.

೮೫. ದೊರೆಯೇ! ಅಂತಹ ಪಾಪಿಗಳು ಕಲ್ಪಾವಸಾನ ಪರ್ಯಂತವಾಗಿ ಈ ಯಾತನೆಗಳಿಂದ ಪೀಡಿತರಾಗಿ ದುಃಖಪಡುತ್ತಾ ಯಾವಾಗಲೂ ಅಮೇಧ್ಯವನ್ನು ತಿನ್ನುವವರಾಗಿ ನರಳುತ್ತಿರುತ್ತಾರೆ.

ತಪ್ತತೈಲೇನ ಪೂರ್ಯಂತೇ ಕಾಲಸೂತ್ರಪ್ರಪೀಡಿತಾಃ ।
ತತಃ ಕ್ಷಾರೋದಕಸ್ನಾನಂ ಮೂತ್ರವಿಷ್ಠಾನಿಷೇವಣಂ ॥ ೮೬ ॥

ತದಂತೇ ಭುವಮಾಸಾದ್ಯ ಭವಂತಿ ಮ್ಲೇಚ್ಛಜಾತಯಃ ।
ಅನ್ಯೋದ್ವೇಗರತಾ ಯೇ ತು ಯಾಂತಿ ವೈತರಣೀನದೀಂ ॥ ೮೭ ॥

ತ್ಯಕ್ತಪಂಚಮಹಾಯಜ್ಞಾ ಲಾಲಾಭಕ್ಷಂ ವ್ರಜಂತಿ ಹಿ ।
ಉಪಾಸನಾಪರಿತ್ಯಾಗೀ ರೌರವಂ ನರಕಂ ವ್ರಜೇತ್ ॥ ೮೮ ॥

ವಿಪ್ರಗ್ರಾಮಕರಾದಾನಂ ಕುರ್ವತಾಂ ಶ್ರುಣು ಭೂಪತೇ ।
ಯಾತನಾಸ್ವಾಸು ಪಚ್ಯಂತೇ ಯಾವದಾಚಂದ್ರತಾರಕಂ ॥ ೮೯ ॥

ವಿಪ್ರಗ್ರಾಮೇಷು ಭೂಪಾಲ ಯಃ ಕುರ್ಯಾದಧಿಕಂ ಕರಂ ।
ಸ ಸಹಸ್ರಕುಲೋ ಭುಂಕ್ತೇ ನರಕಂ ಕಲ್ಪಪಂಚಸು ॥ ೯೦ ॥

---

೮೬-೮೭. ಅನಂತರ ಕಾಲಸೂತ್ರವೆಂಬ ನರಕದಲ್ಲಿ ಬಿದ್ದು ದುಃಖ ಪೀಡಿತರಾಗಿ ಕುದಿಯುವ ಎಣ್ಣೆಯನ್ನು ಹಚ್ಚಿಕೊಂಡು ಉಪ್ಪುನೀರಿನ ಸ್ನಾನ, ಮಲಮೂತ್ರಗಳ ಸೇವನೆ ಇವುಗಳನ್ನು ಮಾಡುತ್ತಾ ಕೊನೆಯಲ್ಲಿ ಭೂಲೋಕಕ್ಕೆ ಬಂದು ತುರುಷ್ಕಾದಿ ಜಾತಿಯಲ್ಲಿ ಹುಟ್ಟುತ್ತಾರೆ. ಇತರರಿಗೆ ಬಾಧೆಯನ್ನುಂಟು ಮಾಡುವವರು ವೈತರಣೀನದಿಗೆ ಹೋಗುತ್ತಾರೆ.

೮೮. ಅವಶ್ಯಕರ್ತವ್ಯವಾದ ಐದು ಪಂಚಮಹಾಯಜ್ಞಗಳನ್ನು ಪರಿತ್ಯಾಗಮಾಡಿರುವವರು ಲಾಲಾಭಕ್ಷವೆಂಬ ನರಕಕ್ಕೆ ಹೋಗಿ ಅಲ್ಲಿ ದುಃಖವನ್ನನುಭವಿಸುವರು. ಉಪಾಸನೆಯನ್ನು ಬಿಟ್ಟಿರುವವನು ರೌರವನರಕವನ್ನು ಅನುಭವಿಸಬೇಕು.

೮೯. ಬ್ರಾಹ್ಮಣರ ಗ್ರಾಮಕ್ಕೆ ಕಂದಾಯವನ್ನು ತೆಗೆದುಕೊಳ್ಳುವವರಿಗೆ ಸಂಭವಿಸುವ ಯಾತನೆಗಳನ್ನು ಹೇಳುತ್ತೇನೆ. ದೊರೆಯೇ! ಕೇಳು:—ಅಂತಹವರು ಚಂದ್ರನಕ್ಷತ್ರಗಳಿರುವವರೆಗೂ ಈ ನರಕಗಳಲ್ಲಿ ಸಿಕ್ಕಿ ನರಳುತ್ತಾರೆ.

೯೦. ಬ್ರಾಹ್ಮಣರ ಗ್ರಾಮಗಳಲ್ಲಿ ಕಂದಾಯವನ್ನು ಹೆಚ್ಚಿಸುವವನು ಸಾವಿರ ಕುಲಸಹಿತವಾಗಿ ಐದು ಕಲ್ಪಗಳ ಕಾಲ ನರಕವನ್ನನುಭವಿಸುತ್ತಾನೆ.

ವಿಪ್ರಗ್ರಾಮಕರಾದಾನೇ ಯೋಽನುಮಂತಾ ತು ಪಾಪಕೃತ್ ।
ಸ ಏವ ಕೃತವಾನ್ರಾಜನ್ ಬ್ರಹ್ಮಹತ್ಯಾ ಸಹಸ್ರಕಂ ॥ ೯೧ ॥

ಕಾಲಸೂತ್ರೇ ಮಹಾಘೋರೇ ಸ ವಸೇದ್ದ್ವಿಚತುರ್ಯುಗಂ ।
ಅಯೋನೌ ಚ ವಿಯೋನೌ ಚ ಪಶುಯೋನೌ ಚ ಯೋ ನರಃ ॥ ೯೨ ॥

ತ್ಯಜೇದ್ರೇತೋ ಮಹಾಪಾಪೀ ಸ ರೇತೋಭೋಜನಂ ಲಭೇತ್ ।
ವಸಾಕೂಪಂ ತತಃ ಪ್ರಾಪ್ಯ ಸ್ಥಿತ್ವಾ ದಿವ್ಯಾಬ್ದಸಪ್ತಕಂ ॥ ೯೩ ॥

ರೇತೋಭೋಜೀ ಭವೇನ್ಮರ್ತ್ಯಃ ಸರ್ವಲೋಕೇಷು ನಿಂದಿತಃ ।
ಉಪವಾಸದಿನೇ ರಾಜನ್ ದಂತಧಾವನಕೃನ್ನರಃ ॥ ೯೪ ॥

ಸ ಘೋರಂ ನರಕಂ ಯಾತಿ ವ್ಯಾಘ್ರಭಕ್ಷಂ ಚತುರ್ಯುಗಂ ।
ಯಃ ಸ್ವಕರ್ಮಪರಿತ್ಯಾಗೀ ಪಾಷಂಡೀತ್ಯುಚ್ಯತೇ ಬುಧೈಃ ॥ ೯೫ ॥

---

೯೧-೯೨. ಬ್ರಾಹ್ಮಣರ ಗ್ರಾಮಗಳಲ್ಲಿ ಕಂದಾಯ ವಸೂಲಿಯನ್ನು ಅನುಮೋದಿಸುವ ಪಾಪಿಯನ್ನು ಸಾವಿರ ಬ್ರಹ್ಮಹತ್ಯೆ ಮಾಡಿದವನೆಂದು ತಿಳಿಯಬೇಕು. ಅಂತಹವನು ಅತಿ ಭಯಂಕರವಾದ ಕಾಲಸೂತ್ರವೆಂಬ ನರಕದಲ್ಲಿ ಚತುರ್ಯುಗಗಳು ಎರಡಾವರ್ತಿ ತಿರುಗುವವರೆಗೂ ವಾಸಮಾಡಬೇಕು.

೯೨-೯೪. ಯೋನಿ ಭಿನ್ನಸ್ಥಾನ ಮತ್ತು ಪಶುಯೋನಿ ಇವುಗಳಲ್ಲಿ ರೇತಸ್ಸನ್ನು ಸುರಿಸುವ ಮನುಷ್ಯನು ಮಹಾಪಾಪಿಯಾಗಿ ರೇತಸ್ಸನ್ನು ತಿನ್ನಬೇಕಾಗುತ್ತದೆ. ಅಂತಹವನು ಸಕಲಲೋಕಗಳಲ್ಲಿಯೂ ನಿಂದಿತನಾಗಿ ದೇವಮಾನದ ಏಳುವರ್ಷಗಳ ಕಾಲ ವಸಾಕೂಪವೆಂಬ ನರಕದಲ್ಲಿದ್ದು ರೇತಸ್ಸನ್ನು ತಿನ್ನಬೇಕು.

೯೪-೯೮. ಉಪವಾಸಮಾಡುವ ದಿನದಲ್ಲಿ ಹಲ್ಲುಜ್ಜುವ ಮನುಷ್ಯನು ನಾಲ್ಕು ಯುಗಗಳ ಕಾಲ ವ್ಯಾಘ್ರಭಕ್ಷವೆಂಬ ನರಕದಲ್ಲಿ ಬೀಳುತ್ತಾನೆ. ವರ್ಣಾಶ್ರಮವಿಹಿತ ಕರ್ಮವನ್ನು ಬಿಟ್ಟಿರುವವನನ್ನು ಜ್ಞಾನಿಗಳು ಪಾಷಂಡಿಗಳೆಂದು ಹೇಳುತ್ತಾರೆ.

ತತ್ಸಂಗಕೃತ್ತತ್ಸಮಶ್ಚ ತಾವುಭಾವತಿಪಾಪಿನೌ ।
ಕಲ್ಪಕೋಟಿಸಹಸ್ರೇಷು ಪ್ರಾಪ್ನುತೋ ನರಕಾನ್ಕ್ರಮಾತ್ ॥ ೯೬ ॥

ದೇವದ್ರವ್ಯಾಪಹರ್ತಾರೋ ಗುರುದ್ರವ್ಯಾಪಹಾರಕಾಃ ।
ಬ್ರಹ್ಮಹತ್ಯಾವ್ರತಸಮಂ ದುಷ್ಕೃತಂ ಭುಂಜತೇ ನೃಪ ॥ ೯೭

ಅನಾಥಧನಹರ್ತಾರೋ ಹ್ಯನಾಥಂ ಯೋ ದ್ವಿಷಂತಿ ಚ ।
ಕಲ್ಪಕೋಟಿಸಹಸ್ರಾಣಿ ನರಕೇ ತೇ ವಸಂತಿ ಚ ॥ ೯೮ ॥

ಸ್ತ್ರೀಶೂದ್ರಾಣಾಂ ಸಮೀಪೇ ತು ಯೇ ವೇದಾಧ್ಯಯನೇ ರತಾಃ ।
ತೇಷಾಂ ಪಾಪಫಲಂ ವಕ್ಷ್ಯೇ ಶೃಣುಷ್ವ ಸುಸಮಾಹಿತಃ ॥ ೯೯ ॥

ಅಧಶ್ಶೀರ್ಷೋರ್ಧ್ವಪಾದಾಶ್ಚ ಕೀಲಿತಾಃ ಸ್ತಂಭಕದ್ವಯೇ ।
ಧೂಮ್ರಪಾನರತಾ ನಿತ್ಯಂ ತಿಷ್ಠಂತ್ಯಾಬ್ರಹ್ಮವತ್ಸರಂ ॥ ೧೦೦ ॥

---

೯೬. ಅಂತಹವನ ಸಹವಾಸ ಮಾಡುವವನೂ ಸಹ ಅವನಿಗ ಸದೃಶನಾಗುವನು. ಪಾಪಿಷ್ಠರಾದ ಅವರಿಬ್ಬರೂ ಕೋಟಿಸಾವಿರ ಕಲ್ಪಗಳವರೆಗೆ ಕ್ರಮವಾಗಿ ನರಕಗಳನ್ನನುಭವಿಸುತ್ತಾರೆ.

೯೭. ದೊರೆಯೇ! ದೇವದ್ರವ್ಯ ಮತ್ತು ಗುರುಗಳದ್ರವ್ಯ ಇವುಗಳನ್ನು ಅಪಹರಿಸುವವರು ಬ್ರಹ್ಮಹತ್ಯೆಗೆ ಸಮವಾದ ದುಷ್ಕೃತ್ಯದ ಫಲವನ್ನು ಅನುಭವಿಸುವರು.

೯೮. ಅನಾಥರ ಹಣವನ್ನು ಅಪಹರಿಸುವವರು ಮತ್ತು ಅನಾಥರನ್ನು ದ್ವೇಷಿಸುವವರು ಕೋಟಿಸಾವಿರ ಕಲ್ಪಗಳು ನರಕದಲ್ಲಿ ವಾಸಿಸುತ್ತಾರೆ.

೯೯. ಸ್ತ್ರೀಯರು ಮತ್ತು ಶೂದ್ರರ ಸಮೀಪದಲ್ಲಿ ವೇದಾಧ್ಯಯನ ಮಾಡುವವರ ಪಾಪಫಲವನ್ನು ಹೇಳುತ್ತೇನೆ. ಸಮಾಧಾನಚಿತ್ತನಾಗಿ ಕೇಳು.

೧೦೦. ಅಂತಹವರನ್ನು ಎರಡು ಕಂಬಗಳ ಮಧ್ಯದಲ್ಲಿ ಕೆಳಗೆ ತಲೆ, ಮೇಲೆ ಕಾಲು ಮಾಡಿ ನಿಲ್ಲಿಸಿ ಮೊಳೆ ಹೊಡೆಯುತ್ತಾರೆ. ಅವರು ಹಾಗೆಯೇ ಬ್ರಹ್ಮಮಾನದ ವರ್ಷಪರ್ಯಂತವಾಗಿ ಯಾವಾಗಲೂ ಧೂಮಪಾನಮಾಡುತ್ತಾ ನಿಂತಿರಬೇಕು.

**ಜಲೇ ದೇವಾಲಯೇ ವಾಪಿ ಯಸ್ತ್ಯಜೇದ್ದೇಹಜಂ ಮಲಂ ।**
**ಭ್ರೂಣಹತ್ಯಾಸಮಂ ಪಾಪಂ ಸಂಪ್ರಾಪ್ನೋತ್ಯತಿದಾರುಣಂ ॥ ೧೦೧ ॥**

**ದಂತಾಸ್ಥಿನಖರಾನ್ಯೇ ತ್ಯಜಂತ್ಯಮರಾಲಯೇ ।**
**ಜಲೇ ವಾ ಭುಕ್ತಶೇಷಂ ಚ ತೇಷಾಂ ಪಾಪಫಲಂ ಶೃಣು ॥ ೧೦೨ ॥**

**ಪ್ರಾಸಪ್ರತೋದನ್ಯೈರ್ಭಿನ್ನಾ ಆರ್ತರಾವವಿರಾವಿಣಃ ।**
**ಅತ್ಯುಷ್ಣತೈಲಪಾನಂ ಚ ಕುಂಭೀಪಾಕಂ ತತಃ ಕ್ರಮಾತ್ ॥ ೧೦೩ ॥**

**ಕುರ್ವಂತಿ ದುಃಖಸಂತಪ್ತಾಸ್ತತೋಽನ್ಯೇಷು ವ್ರಜಂತಿ ಚ ।**
**ಬ್ರಹ್ಮಸ್ವಂ ಹರತೇ ಯಸ್ತು ತುಷಂ ವಾ ಕಾಷ್ಠಮೇವ ವಾ ॥ ೧೦೪ ॥**

**ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ।**
**ಬ್ರಹ್ಮಸ್ವಹರಣಂ ರಾಜನ್ನಿಹಾಮುತ್ರ ಚ ದುಃಖದಂ ॥ ೧೦೫ ॥**

---

೧೦೧. ನೀರು ಅಥವಾ ದೇವಾಲಯಗಳಲ್ಲಿ ಮಲವಿಸರ್ಜನೆ ಮಾಡುವವನು ಭ್ರೂಣಹತ್ಯೆಗೆ ಸಮಾನವಾದ ಅತ್ಯಂತ ಭಯಂಕರ ಪಾಪಕ್ಕೆ ಭಾಗಿಯಾಗುತ್ತಾನೆ.

೧೦೨. ದೇವಾಲಯ ಅಥವಾ ಜಲದಲ್ಲಿ ಹಲ್ಲು, ಮೂಳೆ, ಉಗರು ಮತ್ತು ಎಂಜಲನ್ನೂ ಸಹ ಹಾಕುವವರಿಗೆ ಬರುವ ಪಾಪವನ್ನು ಹೇಳುತ್ತೇನೆ ಕೇಳು.

೧೦೩-೧೦೪. ಅಂತಹವರು ಈಟಿ ಕೊಲುಗಳ ತಿವಿತದಿಂದ ಭೇದಿಸಲ್ಪಟ್ಟು, ಅಳುತ್ತಾ ಕುದಿಯುವ ತೈಲವನ್ನು ಕುಡಿದು ಕುಂಭೀಪಾಕವೆಂಬ ನರಕದಲ್ಲಿ ದುಃಖವನ್ನನುಭವಿಸಿ ಕ್ರಮವಾಗಿ ಇತರ ನರಕಗಳಿಗೆ ಹೋಗಬೇಕು.

೧೦೪-೧೦೫. ಹೊಟ್ಟು ಅಥವಾ ಕಟ್ಟಿಗೆ ಯಾವುದೇ ಆಗಲಿ ಬ್ರಾಹ್ಮಣನ ಸ್ವತ್ತನ್ನು ಅಪಹರಿಸುವವನು ಚಂದ್ರ ನಕ್ಷತ್ರಗಳಿರುವವರೆಗೂ ಭಯಂಕರ ನರಕವನ್ನು ಅನುಭವಿಸಬೇಕು.

ಇಹ ಸಂಪದ್ವಿನಾಶಾಯ ಪರತ್ರ ನರಕಾಯ ಚ ।
ಕೂಟಸಾಕ್ಷ್ಯಂ ವದೇದ್ಯಸ್ತು ತಸ್ಯಪಾಪಫಲಂ ಶ್ರುಣು ॥ ೧೦೬ ॥

ಸ ಯಾತಿ ಯಾತನಾಃ ಸರ್ವಾ ಯಾವದಿಂದ್ರಾಶ್ಚತುರ್ದಶ ।
ಇಹ ಪುತ್ರಾಶ್ಚ ಪೌತ್ರಾಶ್ಚ ವಿನಶ್ಯಂತಿ ಪರತ್ರ ಚ ॥ ೧೦೭ ॥

ರೌರವಂ ನರಕಂ ಭುಂಕ್ತೇ ತತೋಽನ್ಯಾನಪಿ ಚ ಕ್ರಮಾತ್ ।
ಯೇ ಚಾತಿಕಾಮಿನೋ ಮರ್ತ್ಯಾ ಯೇ ಚ ಮಿಥ್ಯಾಪ್ರವಾದಿನಃ ॥ ೧೦೮ ॥

ತೇಷಾಂ ಮುಖೇ ಜಲೌಕಾಸ್ತು ಪೂರ್ಯಂತೇ ಪನ್ನಗೋಪಮಾಃ ।
ಏವಂ ಷಷ್ಟಿಸಹಸ್ರಾಬ್ದಂ ತತಃ ಕ್ಷಾರಾಂಬುಸೇಚನಂ ॥ ೧೦೯ ॥

ಯೇ ವೃಥಾ ಮಾಂಸನಿರತಾಸ್ತೇ ಯಾಂತಿ ಕ್ಷಾರಕರ್ದಮಂ ।
ತತೋ ಗಜೈರ್ನಿಪಾತ್ಯಂತೇ ಮರುತ್ಪ್ರಪತನಂ ಯಥಾ ॥ ೧೧೦ ॥

---

೧೦೫-೧೦೬. ದೊರೆಯೇ! ಬ್ರಾಹ್ಮಣರ ಸ್ವತ್ತಿನ ಅಪಹಾರವು ಈ ಲೋಕದಲ್ಲಿ ಸಂಪತ್ತನ್ನು ನಾಶಪಡಿಸಿ, ಪರಲೋಕದಲ್ಲಿ ನರಕದುಃಖವನ್ನುಂಟು ಮಾಡುತ್ತದೆಯಾದಕಾರಣ ಐಹಿಕಾಮುಷ್ಮಿಕಗಳಲ್ಲಿ ದುಃಖಪ್ರದವು.

೧೦೬-೧೦೮. ಸುಳ್ಳುಸಾಕ್ಷಿ ಹೇಳುವವನ ಪಾಪಫಲವನ್ನು ಕೇಳು— ಹದಿನಾಲ್ಕು ಇಂದ್ರರುಗಳು ಇರುವಷ್ಟು ಕಾಲ ಅವರು ಸಕಲ ಯಾತನೆಗಳನ್ನು ಅನುಭವಿಸಬೇಕು. ಈ ಲೋಕದಲ್ಲಿ ಮಕ್ಕಳು, ಮೊಮ್ಮಕ್ಕಳು ಹೋಗುವುದು ಮಾತ್ರವೇ ಅಲ್ಲದೆ, ಅಂತಹವರು ರೌರವವೆಂಬ ನರಕವನ್ನೂ ಅನಂತರ ಇತರ ನರಕಗಳನ್ನೂ ಹೊಂದುತ್ತಾರೆ.

೧೦೮-೧೦೯. ಅತ್ಯಂತ ಕಾಮುಕರು, ಸುಳ್ಳುವಾರ್ತೆಯನ್ನು ಹರಡುವವರು ಇವರ ಬಾಯಿಯಲ್ಲಿ ಹಾವಿಗೆ ಸಮಾನವಾದ ಜಿಗಣೆಗಳನ್ನು ತುಂಬಿ, ಅರವತ್ತು ಸಾವಿರ ವರ್ಷ ಪರ್ಯಂತವಾಗಿ ಹಿಂಸಿಸುತ್ತಾ ಅನಂತರ ಉಪ್ಪು ನೀರನ್ನು ಎರಚುತ್ತಾರೆ.

೧೧೦-೧೧೧. ವ್ಯರ್ಥವಾಗಿ ಎಂದರೆ ಅವಿಹಿತವಾಗಿ ಮಾಂಸಭಕ್ಷಣೆ ಮಾಡುವವರನ್ನು ಉಪ್ಪಿನ ಕೆಸರಿನಲ್ಲಿ ಹಾಕಿ, ಬಿರುಗಾಳಿಯ ಹೊಡೆತದಂತೆ

**ತದಂತೇ ಭುವಮಾಸಾದ್ಯ ಹೀನಾಂಗಾಃ ಪ್ರಭವಂತಿ ಚ ।**
**ಯಸ್ತ್ವೃತೌ ನಾಭಿಗಚ್ಛೇತ ಸ್ವಸ್ತ್ರಿಯಂ ಮನುಜೇಶ್ವರ ॥ ೧೧೧ ॥**

**ಸ ಯಾತಿ ರೌರವಂ ಘೋರಂ ಬ್ರಹ್ಮಹತ್ಯಾಂ ಚ ವಿಂದತಿ ।**
**ಅನ್ಯಾಚಾರರತಂ ದೃಷ್ಟ್ವಾ ಯಃ ಶಕ್ತೋ ನ ನಿವಾರಯೇತ್ ॥ ೧೧೨ ॥**

**ತತ್ಪಾಪಂ ಸಮವಾಪ್ನೋತಿ ನರಕಂ ತಾವುಭಾವಪಿ ।**
**ಪಾಪಿನಾಂ ಪಾಪಗಣನಾಂ ಕೃತ್ವಾನ್ಯೇಭ್ಯೋ ದಿಶಂತಿ ಯೇ ॥ ೧೧೩ ॥**

**ಅಸ್ತಿತ್ವೇ ತುಲ್ಯಪಾಪಾಸ್ತೇ ಮಿಥ್ಯಾತ್ವೇ ದ್ವಿಗುಣಾ ನೃಪ ।**
**ಅಪಾಪೇ ಪಾತಕಂ ಯಸ್ತು ಸಮಾರೋಪ್ಯ ವಿನಿಂದತಿ ॥ ೧೧೪ ॥**

---

ಆನೆಗಳಿಂದ ತುಳಿಸುತ್ತಾರೆ. ಹಾಗೆಯೇ ಬಹುಕಾಲ ಅನುಭವಿಸಿದಮೇಲೆ ಕೊನೆಗೆ ಭೂಮಿಯಲ್ಲಿ ಅಂಗಹೀನರಾಗಿ ಹುಟ್ಟುತ್ತಾರೆ.

೧೧೧-೧೧೨. ರಾಜನೇ! ಋತುಕಾಲ ಎಂದರೆ ಬಹಿಷ್ಠೆಯಾದ ೪, ೬, ೮, ೧೦, ೧೨, ೧೪, ೧೬ ಈ ದಿನಗಳಲ್ಲಿ ತನ್ನ ಹೆಂಡತಿಯ ಸಂಭೋಗ ಮಾಡದಿರುವ ಮನುಷ್ಯನು ಭಯಂಕರವಾದ ರೌರವನರಕಕ್ಕೆ ಹೋಗುವನು. ಬ್ರಹ್ಮಹತ್ಯೆಯನ್ನೂ ಸಹ ಹೊಂದುವನು.

೧೧೨-೧೧೩. ಸ್ವಧರ್ಮ ಬಿಟ್ಟು ಧರ್ಮಾಂತರವನ್ನು ಅವಲಂಭಿಸಿದ ಮನುಷ್ಯನನ್ನು ತಾನು ಸಮರ್ಥನಾಗಿದ್ದಾಗ್ಯೂ ತಡೆಯದಿರುವವನು ಆ ಪಾಪವನ್ನು ಹೊಂದುತ್ತಾನೆ. ಮತ್ತು ಅವರಿಬ್ಬರೂ ಸಹ ನರಕಭಾಗಿಗಳಾಗುತ್ತಾರೆ.

೧೧೩-೧೧೪. ಪಾಪಿಷ್ಠರ ಪಾಪಗಳನ್ನು ಎಣಿಸಿ ಇತರರಿಗೆ ಹೇಳುವವರು ಅದು ನಿಜವಾಗಿದ್ದಲ್ಲಿ ಆ ಪಾಪಗಳಿಗೆ ತಾವೂ ಸಮಭಾಗಿಗಳಾಗುವರು. ಸುಳ್ಳಾಗಿದ್ದರೆ ಅದರ ಎರಡರಷ್ಟು ಪಾಪಕ್ಕೆ ಭಾಗಿಗಳಾಗುತ್ತಾರೆ.

೧೧೪-೧೧೫. ಪಾಪಮಾಡದಿರುವವನಲ್ಲಿ ಪಾಪವನ್ನು ಆರೋಪಿಸಿ ದೂಷಿಸುವವನು ಚಂದ್ರ ಸೂರ್ಯಾದಿಗಳಿರುವವರೆಗೂ ಘೋರ ನರಕಕ್ಕೆ ಭಾಗಿ

ಸ ಯಾತಿ ನರಕಂ ಘೋರಂ ಯಾವಚ್ಚಂದ್ರಾರ್ಕತಾರಕಂ ।
ಪಾಪಿನಾಂ ನಿಂದ್ಯಮಾನಾನಾಂ ಪಾಪಾರ್ಧಂ ಕ್ಷಯಮೇತಿ ಚ ॥ ೧೧೫ ॥

ಯಸ್ತು ವ್ರತಾನಿ ಸಂಗೃಹ್ಯ ಅಸಮಾಪ್ಯ ಪರಿತ್ಯಜೇತ್ ।
ಸೋಽಸಿಪತ್ರೇಽನುಭೂಯಾರ್ತಿಂ ಹೀನಾಂಗೋ ಜಾಯತೇ ಭುವಿ ॥ ೧೧೬

ಅನ್ಯೈಃ ಸಂಗೃಹ್ಯಮಾಣಾನಾಂ ವ್ರತಾನಾಂ ವಿಘ್ನಕೃನ್ನರಃ ।
ಅತೀವ ದುಃಖದಂ ರೌದ್ರಂ ಸಯಾತಿ ಶ್ಲೇಷ್ಮಭೋಜನಂ ॥ ೧೧೭ ॥

ನ್ಯಾಯೇ ಚ ಧರ್ಮಶಿಕ್ಷಯಾಂ ಪಕ್ಷಪಾತಂ ಕರೋತಿ ಯಃ ।
ನ ತಸ್ಯ ನಿಷ್ಕೃತಿರ್ಭೂಯಃ ಪ್ರಾಯಶ್ಚಿತ್ತಾಯುತೈರಪಿ ॥ ೧೧೮ ॥

ಅಭೋಜ್ಯಭೋಜೀ ಸಂಪ್ರಾಪ್ಯ ವಿಡ್ಭೋಜ್ಯಂ ತು ಸಮಾಯುತಂ ।
ತತಶ್ಚಂಡಾಲಯೋನೌ ತು ಗೋಮಾಂಸಾಶೀ ಸದಾ ಭವೇತ್ ॥ ೧೧೯ ॥

---

ಯಾಗುತ್ತಾನೆ. ಪಾಪಿಗಳನ್ನು ದೂಷಿಸಿದರೆ ಅಂತಹ ಪಾಪಿಗಳ ಅರ್ಧ ಪಾಪವು ಪರಿಹಾರವಾಗುತ್ತದೆ.

೧೧೬. ವ್ರತಗಳನ್ನು ಮಾಡಲುಪಕ್ರಮಿಸಿ ಸಮಾಪ್ತಿಗೊಳಿಸದೇ ಮಧ್ಯದಲ್ಲಿ ಬಿಡುವವನು ಅಸಿಪತ್ರವೆಂಬ ನರಕದಲ್ಲಿ ದುಃಖವನ್ನನುಭವಿಸಿ ಅಂಗಹೀನನಾಗಿ ಭೂಲೋಕದಲ್ಲಿ ಹುಟ್ಟುವನು.

೧೧೭- ಇತರರು ಮಾಡುವ ವ್ರತಗಳಿಗೆ ವಿಘ್ನಮಾಡುವ ಮನುಷ್ಯನು ಅತ್ಯಂತ ದುಃಖಪ್ರದವಾದ ಭಯಂಕರ ನರಕದಲ್ಲಿ ಶ್ಲೇಷ್ಮವನ್ನು ತಿನ್ನುವನು.

೧೧೮. ನ್ಯಾಯ ಮತ್ತು ಧರ್ಮಗಳನ್ನೇ ಶಿಕ್ಷಿಸಬೇಕೆಂದು ಆಗ್ರಹಮಾಡುವವನಿಗೆ ಸಾವಿರಾರು ಪ್ರಾಯಶ್ಚಿತ್ತಮಾಡಿಕೊಂಡಾಗ್ಯೂ ಪಾಪಪರಿಹಾರ ವಾಗುವುದಿಲ್ಲ.

೧೧೯. ನಿಷಿದ್ಧಪದಾರ್ಥವನ್ನು ತಿನ್ನುವವನು ಸಾವಿರ ವರ್ಷಗಳಕಾಲ ಅಮೇಧ್ಯಭೋಜನಮಾಡಿ, ತರುವಾಯ ಚಂಡಾಲಜಾತಿಯಲ್ಲಿ ಜನಿಸಿ ಯಾವಾಗಲೂ ಗೋಮಾಂಸವನ್ನು ತಿನ್ನುವವನಾಗುತ್ತಾನೆ.

ಅವಮಾನ್ಯ ದ್ವಿಜಾನ್ವಾಗ್ಭಿರ್ಬ್ರಹ್ಮಹತ್ಯಾಂ ಚ ವಿಂದತಿ ।
ಸರ್ವಾಶ್ಚ ಯಾತನಾ ಭುಕ್ತ್ವಾ ಚಂಡಾಲೋ ದಶಜನ್ಮಸು ॥ ೧೨೦ ॥

ವಿಪ್ರಾಯ ದೀಯಮಾನೇ ತು ಯಸ್ತು ವಿಘ್ನಂ ಸಮಾಚರೇತ್ ।
ಸಯಾತಿ ಬ್ರಹ್ಮಹತ್ಯಾನಾಂ ಸಹಸ್ರಾಣಾಂ ಶತಾಯುತಂ ॥ ೧೨೧ ॥

ಅಪಹೃತ್ಯ ಪರಸ್ವಾರ್ಥಂ ಯಃ ಪರೇಭ್ಯಃ ಪ್ರಯಚ್ಛತಿ ।
ಅಪಹರ್ತಾ ತು ನಿರಯೀ ಯಸ್ಯಾರ್ಥಸ್ತಸ್ಯ ತತ್ಫಲಂ ॥ ೧೨೨ ॥

ಪ್ರತಿಶ್ರುತ್ಯಾಪ್ರದಾನೇನ ಲಾಲಾಭಕ್ಷಂ ವ್ರಜೇನ್ನರಃ ।
ಯಾತಿನಿಂದಾಪರೋ ರಾಜನ್ ಶಿಲಾಮಾತ್ರಂ ಪ್ರಯಾತಿ ಹಿ ॥ ೧೨೩ ॥

ಆರಾಮಚ್ಛೇದಿನೋ ಯಾಂತಿ ಯುಗಾನಾಮೇಕವಿಂಶತಿಂ ।
ಶ್ವಭೋಜನಂ ತತಃ ಸರ್ವಾ ಭುಂಜತೇ ಯಾತನಾಃ ಕ್ರಮಾತ್ ॥ ೧೨೪ ॥

---

೧೨೦. ಬ್ರಾಹ್ಮಣರಿಗೆ ಮಾತಿನಿಂದ ಅವಮಾನಮಾಡುವವನು ಬ್ರಹ್ಮ ಹತ್ಯೆಗೆ ಪಾತ್ರನಾಗಿ ಸಕಲ ದುಃಖಗಳನ್ನೂ ಅನುಭವಿಸಿ ಚಂಡಾಲನಾಗಿ ಹತ್ತು ಜನ್ಮಗಳನ್ನೆತ್ತುವನು.

೧೨೧. ಬ್ರಾಹ್ಮಣರಿಗೆ ದಾನಮಾಡುತ್ತಿರುವಾಗ ವಿಘ್ನಮಾಡುವವನು ಲಕ್ಷಾಂತರ ಬ್ರಹ್ಮಹತ್ಯೆಗಳಿಗೆ ಭಾಗಿಯಾಗುವನು.

೧೨೨. ಇತರರ ಸ್ವತ್ತನ್ನು ಅಪಹರಿಸಿ, ಇನ್ನೊಬ್ಬರಿಗೆ ದಾನಮಾಡುವವನು ನರಕದುಃಖವನ್ನು ಅನುಭವಿಸುವನು. ಆ ದಾನದ ಫಲವು ಸ್ವತ್ತುಗಾರನಿಗೇ ಬರುತ್ತದೆ.

೧೨೩. ಪ್ರತಿಜ್ಞೆಮಾಡಿ ಕೊಡದಿರುವ ಮನುಷ್ಯನು ಲಾಲಾಭಕ್ಷವೆಂಬ ನರಕಕ್ಕೆ ಹೋಗುತ್ತಾನೆ. ಯತಿದೂಷಣೆ ಮಾಡುವವನು ಶಿಲಾಮಾತ್ರವೆಂಬ ನರಕಕ್ಕೆ ಹೋಗುವನು.

೧೨೪. ತೋಟವನ್ನು ಕತ್ತರಿಸಿ ಹಾಳುಮಾಡುವವರು ಇಪ್ಪತ್ತೊಂದು ಯುಗಗಳಕಾಲ ಶ್ವಭೋಜನವನ್ನು ಮಾಡಿ ತರುವಾಯ ಕ್ರಮವಾಗಿ ಸಕಲ ನರಕಗಳನ್ನೂ ಅನುಭವಿಸುವರು.

ದೇವತಾಗೃಹಭೇತ್ತಾರಸ್ತಟಾಕಾನಾಂ ಚ ಭೂಪತೇ ।
ಪುಷ್ಪಾರಾಮಭಿದಶ್ಚೈವ ಯಾಂ ಗತಿಂ ಯಾಂತಿ ತಚ್ಛೃಣು ॥ ೧೨೫ ॥

ಯಾತನಾಸ್ವಾಸು ಸರ್ವಾಸು ಪಚ್ಯಂತೇ ವೈ ಪೃಥಕ್ ಪೃಥಕ್ ।
ತತಶ್ಚ ವಿಷ್ಠಾಕೃಮಯಃ ಕಲ್ಪಾನಾಮೇಕವಿಂಶತಿಂ ॥ ೧೨೬ ॥

ತತಶ್ಚಾಂಡಾಲಯೋನೌ ಚ ಶತಜನ್ಮಾನಿ ಭೂಪತೇ ।
ಗ್ರಾಮವಿಧ್ವಂಸಕಾನಾಂ ತು ದಾಹಕಾನಾಂ ಚ ಭೂಪತೇ ॥ ೧೨೭ ॥

ಮಹತ್ಪಾಪಂ ತದಾದೇಷ್ಟುಂ ನ ಕ್ಷಮೋಽಹಂ ನಿಜಾಯುಷಾ ।
ಉಚ್ಛಿಷ್ಟಭೋಜನೋ ಯೋ ಮಿತ್ರದ್ರೋಹಪರಶ್ಚ ಯೋ ॥ ೧೨೮ ॥

ಏತೇಷಾಂ ಯಾತನಾಸ್ತೀವ್ರಾ ಭವಂತ್ಯಾಚಂದ್ರತಾರಕಂ ।
ಉಚ್ಛಿನ್ನಪಿತೃದೇವೇಜ್ಯಾ ವೇದಮಾರ್ಗಬಹಿಃಸ್ಥಿತಾಃ ॥ ೧೨೯ ॥

---

೧೨೫. ದೇವಸ್ಥಾನವನ್ನು ಒಡೆಯುವವರು, ಕೆರೆಗಳನ್ನು ಹಾಳುಮಾಡುವವರು ಮತ್ತು ಹೂವಿನ ತೋಟಗಳನ್ನು ನಾಶಪಡಿಸುವವರು ಯಾವ ಗತಿಯನ್ನು ಹೊಂದುತ್ತಾರೆಂಬುದನ್ನು ಹೇಳುತ್ತೇನೆ ಕೇಳು.

೧೨೬-೧೨೭. ಅಂತಹವರು ಒಂದೊಂದಾಗಿ ಈ ಎಲ್ಲಾ ನರಕಗಳಿಗೂ ಸಿಕ್ಕಿ ನರಳಿ, ಇಪ್ಪತ್ತೊಂದು ಕಲ್ಪಗಳಕಾಲ ಅಮೇಧ್ಯದಲ್ಲಿನ ಕ್ರಿಮಿಗಳಾಗಿ ಹುಟ್ಟಿ ಅನಂತರ ಚಂಡಾಲ ಜಾತಿಯಲ್ಲಿ ನೂರು ಜನ್ಮಗಳನ್ನು ಪಡೆಯುವರು.

೧೨೭-೧೨೮. ಭೂಪಾಲನೇ! ಗ್ರಾಮಗಳನ್ನು ನಾಶಪಡಿಸುವವರು ಅಥವಾ ಸುಡುವವರು ಇವರುಗಳಿಗುಂಟಾಗುವ ಮಹಾಪಾಪವನ್ನು ನಿರೂಪಿಸಲು ನನ್ನ ಆಯುಸ್ಸನ್ನೆಲ್ಲಾ ಕಳೆದಾಗ್ಯೂ ಸಾಧ್ಯವಾಗುವುದಿಲ್ಲ.

೧೨೮-೧೨೯. ಎಂಜಲು ತಿನ್ನುವವರು ಮತ್ತು ಮಿತ್ರದ್ರೋಹಿಗಳು ಇವರಿಗೆ ಚಂದ್ರ ನಕ್ಷತ್ರಗಳಿರುವವರೆಗೂ ಕಠಿಣವಾದ ಯಾತನೆಗಳಾಗುತ್ತವೆ.

೧೨೯-೧೩೦. ಪಿತೃ ದೇವಯಜ್ಞಗಳನ್ನು ಬಿಟ್ಟು, ವೇದೋಕ್ತ ಧರ್ಮ

ಪಾಷಂಡಾ ಇತಿ ವಿಖ್ಯಾತಾಸ್ತೇಷಾಂ ವೈ ಸರ್ವಯಾತನಾಃ ।
ಏವಂ ಬಹುವಿಧಾ ಭೂಪ ಯಾತನಾಃ ಪಾಪಕಾರಿಣಾಂ ॥ ೧೩೦ ॥

ತೇಷಾಂ ತಾಸಾಂ ಚ ಸಂಖ್ಯಾನಂ ಕರ್ತುಂ ನಾಲಮಹಂ ಪ್ರಭೋ ।
ಪಾಪಾನಾಂ ಯಾತನಾನಾಂ ಚ ಧರ್ಮಾಣಾಂ ಚಾಪಿ ಭೂಪತೇ ॥ ೧೩೧ ॥

ಸಂಖ್ಯಾ ನಿಗದಿತುಂ ಲೋಕೇ ಕಃ ಕ್ಷಮೋ ವಿಷ್ಣುನಾ ವಿನಾ ।
ಏತೇಷಾಂ ಸರ್ವಪಾಪಾನಾಂ ಧರ್ಮಶಾಸ್ತ್ರವಿಧಾನತಃ ॥ ೧೩೨ ॥

ಪ್ರಾಯಶ್ಚಿತ್ತೇಷು ಚೀರ್ಣೇಷು ಪಾಪರಾಶಿಃ ಪ್ರಣಶ್ಯತಿ ।
ಪ್ರಾಯಶ್ಚಿತ್ತಾನಿ ಕಾರ್ಯಾಣಿ ಸಮೀಪೇ ಕಮಲಾಪತೇಃ ॥ ೧೩೩ ॥

ನ್ಯೂನಾತಿರಿಕ್ತಕೃತ್ಯಾನಾಂ ಸಂಪೂರ್ತಿಕರಣಾಯ ಚ ।
ಗಂಗಾ ಚ ತುಲಸೀ ಚೈವ ಸತ್ಸಂಗೋ ಹರಿಕೀರ್ತನಂ ॥ ೧೩೪ ॥

---

ಮಾರ್ಗದಿಂದ ದೂರವಾಗಿರುವವರು ಪಾಷಂಡರೆಂದು ಪ್ರಸಿದ್ಧವಾಗಿದೆ. ಅಂತಹವರಿಗೆ ಸಕಲ ವಿಧವಾದ ದುಃಖಗಳೂ ಸಂಭವಿಸುವುವು.

೧೩೦-೧೩೧. ಈರೀತಿಯಾಗಿ ಪಾಪಕೃತ್ಯಮಾಡುವ ಸ್ತ್ರೀಪುರುಷರಿಗೆ ಸಂಭವಿಸುವ ಬಹುವಿಧವಾದ ಯಾತನೆಗಳನ್ನು ಲೆಕ್ಕಮಾಡುವುದಕ್ಕೆ ನಾನು ಸಮರ್ಥನಲ್ಲ.

೧೩೧-೧೩೨. ಪಾಪಯಾತನೆ ಧರ್ಮ ಇವುಗಳ ಸಂಖ್ಯೆಯನ್ನು ನಿಗದಿಮಾಡಿ ಹೇಳಲು ವಿಷ್ಣುವೇ ಸಮರ್ಥನು, ಅವನನ್ನು ಬಿಟ್ಟರೆ ಲೋಕದಲ್ಲಿ ಯಾರೂ ಸಮರ್ಥರಿಲ್ಲ.

೧೩೨-೧೩೩. ಈ ಸಕಲ ಪಾಪಗಳಿಗೂ ಧರ್ಮಶಾಸ್ತ್ರೋಕ್ತ ವಿಧಾನಾನುಸಾರವಾಗಿ ಪ್ರಾಯಶ್ಚಿತ್ತಗಳು ಮಾಡಲ್ಪಟ್ಟರೆ ಪಾಪರಾಶಿಯು ನಷ್ಟವಾಗುತ್ತದೆ.

೧೩೩-೧೩೪. ಹೆಚ್ಚುಕಮ್ಮಿಯಾಗಿ ಮಾಡಿದ ಕರ್ಮಗಳು ಸಂಪೂರ್ಣವಾಗಿ ಫಲಪ್ರದವಾಗುವುದಕ್ಕೂ, ಪಾಪಪರಿಹಾರಕ್ಕೂ ಸಹ ಶ್ರೀ ಲಕ್ಷ್ಮೀಪತಿಯ ಸನ್ನಿಧಾನದಲ್ಲಿ ಪ್ರಾಯಶ್ಚಿತ್ತಗಳನ್ನಾಚರಿಸಬೇಕು.

**ಅನಸೂಯಾ ಹ್ಯಹಿಂಸಾ ಚ ಸರ್ವೇಷ್ವೇತೇ ಹಿ ಪಾಪಹಾಃ ।**
**ನಿಷ್ಣ್ವರ್ಪಿತಾನಿ ಕರ್ಮಾಣಿ ಸಫಲಾನಿ ಭವಂತಿ ಹಿ ॥ ೧೩೫ ॥**

**ಅನರ್ಪಿತಾನಿ ಕರ್ಮಾಣಿ ಭಸ್ಮನಿನ್ಯಸ್ತಹವ್ಯವತ್ ।**
**ನಿತ್ಯಂ ನೈಮಿತ್ತಿಕಂ ಕಾಮ್ಯಂ ಯಚ್ಚಾನ್ಯನ್ಮೋಕ್ಷಸಾಧನಂ ॥ ೧೩೬ ॥**

**ವಿಷ್ಣೌ ಸಮರ್ಪಿತಂ ಸರ್ವಂ ಸಾತ್ವಿಕಂ ಸಫಲಂ ಭವೇತ್ ।**
**ಹರಿಭಕ್ತಿಃ ಪರಾ ನೃಣಾಂ ಸರ್ವಪಾಪಪ್ರಣಾಶಿನೀ ॥ ೧೩೭ ॥**

**ಸಾ ಭಕ್ತಿರ್ದಶಧಾ ಜ್ಞೇಯಾ ಪಾಪಾರಣ್ಯದವೋಪಮಾ ।**
**ತಾಮಸೈಃ ರಾಜಸೈಶ್ಚೈವ ಸಾತ್ವಿಕೈಶ್ಚ ನೃಪೋತ್ತಮ ॥ ೧೩೮ ॥**

---

೧೩೪-೧೩೫. ಗಂಗೆ, ತುಲಸೀ, ಸಜ್ಜನಸಹವಾಸ, ವಿಷ್ಣುನಾಮಸಂಕೀರ್ತನೆ, ಹೊಟ್ಟೇಕಿಚ್ಚಿಲ್ಲದಿರುವಿಕೆ, ಅಹಿಂಸೆ ಇವುಗಳೆಲ್ಲವೂ ಪಾಪಪರಿಹಾರಕಗಳು. ಕರ್ಮಗಳನ್ನು ಮಾಡಿ ಅವುಗಳನ್ನು ವಿಷ್ಣುವಿಗೆ ಸಮರ್ಪಿಸಿದರೆ ಅವು ಸಫಲವಾಗುತ್ತವೆ.

೧೩೬-೧೩೭. ವಿಷ್ಣುವಿಗೆ ಸಮರ್ಪಣೆಮಾಡದಿರುವ ಕರ್ಮಗಳು ಬೂದಿಯಲ್ಲಿ ಹೋಮಮಾಡಿದಂತೆ ನಿರರ್ಥಕವಾಗುತ್ತವೆ. ನಿತ್ಯ, ನೈಮಿತ್ತಿಕ, ಕಾಮ್ಯಗಳೆಂಬ ಕರ್ಮಗಳು ಮತ್ತು ಮುಕ್ತಿಸಾಧಕನಾದ ವ್ಯಾಪಾರಗಳೆಲ್ಲವೂ ವಿಷ್ಣುವಿಗೆ ಸಮರ್ಪಿಸಲ್ಪಟ್ಟರೇ ಸಾತ್ವಿಕವೆನಿಸಿ ಸಫಲವಾಗುತ್ತವೆ. ಹರಿಯು ಸರ್ವೋತ್ತಮನೆಂದು ತಿಳಿದು ಅವನಲ್ಲಿ ಮಾಡುವ ಭಕ್ತಿಯು ಮನುಷ್ಯರ ಸಕಲ ಪಾಪಗಳನ್ನೂ ಪರಿಹರಿಸುತ್ತದೆ.

೧೩೮. ರಾಜಶ್ರೇಷ್ಠನೆ! ಪಾಪವೆಂಬ ಕಾಡಿಗೆ ಕಿಚ್ಚಿನೋಪಾದಿಯಲ್ಲಿರುವ ಆ ಭಕ್ತಿಯು ತಾಮಸ, ರಾಜಸ ಮತ್ತು ಸಾತ್ವಿಕ ಎಂಬುದಾಗಿ ತ್ರಿವಿಧರಾದ ಜೀವರುಗಳ ವಿವಿಧ ಭಾವನೆಗಳಿಗನುಗುಣವಾಗಿ ಹತ್ತುವಿಧವೆಂದು ತಿಳಿಯಬೇಕು-

ಯಚ್ಚಾನ್ಯಸ್ಯ ವಿನಾಶಾರ್ಥಂ ಭಜತೇ ಶ್ರದ್ಧಯಾ ಹರಿಂ ।
ಶ್ರೃಣುಷ್ವ ಪೃಥಿವೀಪಾಲ ಸಾ ಭಕ್ತಿಸ್ತಾಮಸಾಧಮಾ ॥ ೧೩೯ ॥

ಯೋಽರ್ಚಯೇತ್ಕೈತವಧಿಯಾ ಸ್ವೈರಿಣೀ ಸ್ವಪತಿಂ ಯಥಾ ।
ನಾರಾಯಣಂ ಜಗನ್ನಾಥಂ ತಾಮಸೀ ಮಧ್ಯಮಾ ತು ಸಾ ॥ ೧೪೦ ॥

ದೇವಪೂಜಾಪರಾನ್ದೃಷ್ಟ್ವಾ ಮಾತ್ಸರ್ಯಾದ್ಯೋಽರ್ಚಯೇದ್ಧರಿಂ ।
ಸಾ ಭಕ್ತಿಃ ಪೃಥಿವೀಪಾಲ ತಾಮಸೀ ಚೋತ್ತಮಾ ಸ್ಮೃತಾ ॥ ೧೪೧ ॥

ಧನಧಾನ್ಯಾದಿಕಂ ಯಸ್ತು ಪ್ರಾರ್ಥಯನ್ನರ್ಚಯೇದ್ಧರಿಂ ।
ಶ್ರದ್ಧಯಾ ಪರಯಾ ಯುಕ್ತಃ ಸಾ ರಾಜಸ್ಯಧಮಾ ಸ್ಮೃತಾ ॥ ೧೪೨ ॥

ಯಃ ಸರ್ವಲೋಕವಿಖ್ಯಾತಕೀರ್ತಿಮುದ್ದಿಶ್ಯ ಮಾಧವಂ ।
ಅರ್ಚಯೇತ್ಪರಯಾ ಭಕ್ತ್ಯಾ ಸಾ ಮಧ್ಯಾ ರಾಜಸೀ ಮತಾ ॥ ೧೪೩ ॥

---

೧೩೯. ದೊರೆಯೇ! ಪರರಿಗೆ ಕೇಡಾಗಲೆಂಬ ಉದ್ದೇಶದಿಂದ ವಿಶ್ವಾಸ ಪೂರ್ವಕವಾಗಿ ಹರಿಯನ್ನು ಭಜಿಸಿದರೆ ಆ ಭಕ್ತಿಯು ಅಧಮತಾಮಸ ವೆನಿಸುವುದು.

೧೪೦. ಪರಪುರುಷಾಸಕ್ತಳಾದ ಸ್ತ್ರೀಯು ತನ್ನ ಗಂಡನಲ್ಲಿ ನಡೆದು ಕೊಳ್ಳುವಂತೆ ಕಪಟ ಬುದ್ಧಿಯಿಂದ ಜಗದೊಡಯನಾದ ನಾರಾಯಣನನ್ನು ಪೂಜಿಸುವವನ ಭಕ್ತಿಯು ಮಧ್ಯಮ ತಾಮಸವು.

೧೪೧. ದೇವರ ಪೂಜೆಯಲ್ಲಿ ನಿರತರಾದವರನ್ನು ನೋಡಿ ಸಹಿಸಲಾರದೆ ಹಠದಿಂದ ಹರಿಯನ್ನು ಪೂಜಿಸುವವನ ಭಕ್ತಿಯು ಉತ್ತಮತಾಮಸವು.

೧೪೨. ಧನ, ಧಾನ್ಯ ಮುಂತಾದ ಫಲಾಪೇಕ್ಷೆಯಿಂದ ಉತ್ಕೃಷ್ಟ ಶ್ರದ್ಧಾಪೂರ್ವಕವಾಗಿ ಹರಿಯನ್ನು ಪೂಜಿಸುವವನ ಭಕ್ತಿಯು ಅಧಮರಾಜಸ ವೆನಿಸುವುದು.

೧೪೩. ಸಕಲ ಜಗತ್ತಿನಲ್ಲಿಯೂ ಹರಡುವಂತಹ ಕೀರ್ತಿಯ ಉದ್ದೇಶದಿಂದ ಉತ್ಕೃಷ್ಟ ಭಕ್ತಿಪೂರ್ವಕವಾಗಿ ಹರಿಯನ್ನು ಪೂಜಿಸುವವನ ಭಕ್ತಿಯು ಮಧ್ಯಮರಾಜಸವು.

**ಸಾಲೋಕ್ಯಾದಿಪದಂ ಯಸ್ತು ಸಮುದ್ದಿಶ್ಯಾರ್ಚಯೇದ್ಧರಿಂ ।**
**ಸಾ ರಾಜಸ್ಯುತ್ತಮಾ ಭಕ್ತಿಃ ಕೀರ್ತಿತಾ ಪೃಥಿವೀಪತೇ ॥ ೧೪೪ ॥**

**ಯಸ್ತು ಸ್ವಕೃತಪಾಪಾನಾಂ ಕ್ಷಯಾರ್ಥಂ ಪ್ರಾರ್ಚಯೇದ್ಧರಿಂ ।**
**ಶ್ರದ್ಧಯಾ ಪರಯೋಪೇತಃ ಸಾ ಸಾತ್ವಿಕ್ಯಧಮಾ ಸ್ಮೃತಾ ॥ ೧೪೫ ॥**

**ಹರೇರಿದಂ ಪ್ರಿಯಮಿತಿ ಶುಶ್ರೂಷಾಂ ಕುರುತೇ ತು ಯಃ ।**
**ಶ್ರದ್ಧಯಾ ಸಂಯುತೋ ಭೂಯಃ ಸಾತ್ವಿಕೀ ಮಧ್ಯಮಾ ತು ಸಾ ॥ ೧೪೬ ॥**

**ವಿಧಿಬುದ್ಧ್ಯಾರ್ಚಯೇದ್ಯಸ್ತು ದಾಸವಚ್ಛ್ರೀಪತಿಂ ನೃಪ ।**
**ಭಕ್ತೀನಾಂ ಪ್ರವರಾ ಸಾ ತು ಉತ್ತಮಾ ಸಾತ್ವಿಕೀ ಸ್ಮೃತಾ ॥ ೧೪೭ ॥**

**ಮಹಿಮಾನಾಂ ಹರೇರ್ಯಸ್ತು ಕಿಂಚಿಚ್ಛ್ರುತ್ವಾಪಿ ಯೋ ನರಃ ।**
**ತನ್ಮಯತ್ವೇನ ಸಂತುಷ್ಟಃ ಸಾ ಭಕ್ತಿರುತ್ತಮೋತ್ತಮಾ ॥ ೧೪೮ ॥**

---

೧೪೪. ಸಾಲೋಕ್ಯಾದಿ ಮುಕ್ತಿಪದವಿಯನ್ನು ಪಡೆಯುವುದಕ್ಕೋಸ್ಕರ ಹರಿಯನ್ನು ಆರಾಧಿಸುವವನ ಭಕ್ತಿಯು ಉತ್ತಮ ರಾಜಸ ಭಕ್ತಿಯೆಂದು ಉಕ್ತವಾಗಿದೆ.

೧೪೫. ತಾನು ಮಾಡಿದ ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಉತ್ತಮ ಶ್ರದ್ಧೆಯಿಂದ ಹರಿಯನ್ನು ಪೂಜಿಸುವವನ ಭಕ್ತಿಯು ಅಧಮ ಸಾತ್ವಿಕವು.

೧೪೬. ಹರಿಯು ಪ್ರೀತನಾಗಲೆಂದು ಸಂಕಲ್ಪಪೂರ್ವಕವಾಗಿ ಶ್ರದ್ಧೆಯಿಂದ ಸೇವಿಸುವವನ ಭಕ್ತಿಯು ಮಧ್ಯಮ ಸಾತ್ವಿಕವು.

೧೪೭. ದೊರೆಯೇ! ಭಗವದಾಜ್ಞೆ ಎಂಬ ಅನುಸಂಧಾನದಿಂದ ದಾಸನಂತೆ ಶ್ರೀಪತಿಯನ್ನು ಆರಾಧಿಸುವವನ ಭಕ್ತಿಯು ಭಕ್ತಿಗಳಲ್ಲಿ ಉತ್ತಮವಾದುದು; ಅದೇ ಉತ್ತಮಸಾತ್ವಿಕವೆನಿಸುವುದು.

೧೪೮. ಹರಿಯ ಮಹಿಮೆಯನ್ನು ಸ್ವಲ್ಪ ತಿಳಿದುಕೊಂಡರೂ ಯಾವ ಮನುಷ್ಯನು ಹರಿಯು ಪೂರ್ಣಮಹಿಮನೆಂದು ತಿಳಿದು ಸಂತೋಷಿಸುತ್ತಾನೆಯೋ ಅಂತಹವನ ಭಕ್ತಿಯು ಉತ್ತಮೋತ್ತಮವು.

ಅಹಮೇವ ಪರೋ ವಿಷ್ಣುರ್ಮಯಿ ಸರ್ವಮಿದಂ ಜಗತ್ ।
ಇತಿ ಯಃ ಸತತಂ ಪಶ್ಯೇತ್ತಂ ವಿದ್ಯಾದುತ್ತಮೋತ್ತಮಂ ॥ ೧೪೯ ॥

ಏವಂ ದಶವಿಧಾ ಭಕ್ತಿಃ ಸಂಸಾರಚ್ಛೇದಕಾರಿಣೀ ।
ತತ್ರಾಪಿ ಸಾತ್ವಿಕೀ ಭಕ್ತಿಃ ಸರ್ವಕಾಮಫಲಪ್ರದಾ ॥ ೧೫೦ ॥

ತಸ್ಮಾಚ್ಛೃಣುಷ್ವ ಭೂಪಾಲ ಸಂಸಾರವಿಜಿಗೀಷುಣಾ ।
ಸ್ವಕರ್ಮಣೋಽವಿರೋಧೇನ ಭಕ್ತಿಃ ಕಾರ್ಯಾ ಜನಾರ್ದನೇ ॥ ೧೫೧ ॥

ಯಃ ಸ್ವಧರ್ಮಂ ಪರಿತ್ಯಜ್ಯ ಭಕ್ತಿಮಾತ್ರೇಣ ಜೀವತಿ ।
ನ ತಸ್ಯ ತುಷ್ಯತೇ ವಿಷ್ಣುರಾಚಾರೇಣೈವ ತುಷ್ಯತೇ ॥ ೧೫೨ ॥

ಸರ್ವಾಗಮಾನಾಮಾಚಾರಃ ಪ್ರಥಮಃ ಪರಿಕಲ್ಪಿತಃ ।
ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ॥ ೧೫೩ ॥

---

೧೪೯. ನನ್ನಲ್ಲಿ ಅಂತರ್ಯಾಮಿಯಾಗಿರುವ ವಿಷ್ಣುವೇ ಪರದೇವನು, ಅಂತರ್ಗತನಾದ ಭಗವಂತನಲ್ಲಿಯೇ ಸಕಲ ಜಗತ್ತೂ ಆಶ್ರಯಿಸಿಕೊಂಡಿದೆ ಎಂದು ಯಾವಾಗಲೂ ತಿಳಿಯುವ ಅಧಿಕಾರಿಯು ಉತ್ತಮೋತ್ತಮನು.

೧೫೦. ಈ ಪ್ರಕಾರ ಸಂಸಾರ ನಾಶಕವಾದ ಭಕ್ತಿಯು ಹತ್ತುವಿಧವು. ಅದರಲ್ಲಿಯೂ ಸಾತ್ವಿಕ ಭಕ್ತಿಯು ಸಕಲೇಷ್ಟಪ್ರದವು.

೧೫೧. ಆದಕಾರಣ ಭೂಪತಿಯೇ! ಕೇಳು ಸಂಸಾರವನ್ನು ಜಯಿಸಬೇಕೆಂದು ಅಪೇಕ್ಷೆಪಡುವವನು ತನ್ನ ವಿಹಿತ ಕರ್ಮಗಳಿಗೆ ವಿರೋಧವಿಲ್ಲದಂತೆ ಜನಾರ್ದನನಲ್ಲಿ ಭಕ್ತಿಮಾಡಬೇಕು.

೧೫೨. ವಿಹಿತಧರ್ಮವನ್ನು ಬಿಟ್ಟು ಭಕ್ತಿಯಿಂದಲೇ ಶ್ರೇಯಸ್ಸನ್ನು ಪಡೆಯಬೇಕೆಂಬುವವನಿಗೆ ವಿಷ್ಣುವು ಪ್ರಸನ್ನನಾಗುವುದಿಲ್ಲ; ಧರ್ಮಸಹಿತವಾದ ಭಕ್ತಿಯಿಂದಲೇ ಅವನು ಪ್ರಸನ್ನನಾಗುವನು.

೧೫೩. ವೇದಾದಿ ಸಕಲ ಶಾಸ್ತ್ರಗಳಲ್ಲಿ ಆಚಾರವೇ ಪ್ರಥಮಕರ್ತವ್ಯವೆಂದು ಹೇಳಿದೆ; ಆಚಾರದಿಂದ ಧರ್ಮವುಂಟಾಗುತ್ತದೆ ಧರ್ಮಕ್ಕೆ ಹರಿಯೇ ಸ್ವಾಮಿಯು.

**ತಸ್ಮಾತ್ಕಾರ್ಯಾ ಹರೇರ್ಭಕ್ತಿಃ ಸ್ವಧರ್ಮಸ್ಯಾವಿರೋಧಿನೀ ।**
**ಸದಾಚಾರವಿಹೀನಾನಾಂ ಧರ್ಮಾ ಅಪ್ಯಸುಖಪ್ರದಾಃ ॥ ೧೫೪ ॥**

**ಸ್ವಧರ್ಮಹೀನಾ ಭಕ್ತಿರ್ಯಾ ಸ್ಯಾಽಕೃತೈವ ಪ್ರಕೀರ್ತಿತಾ ।**
**ಯತ್ತ್ವ ಪೃಷ್ಟಂ ತ್ವಯಾ ಭೂಯಸ್ತತ್ಸರ್ವಂ ಗದಿತಂ ಮಯಾ ॥ ೧೫೫ ॥**

**ತಸ್ಮಾದ್ಧರ್ಮಪರೋ ಭೂತ್ವಾ ಪೂಜಯಸ್ವ ಜನಾರ್ದನಂ ।**
**ನಾರಾಯಣಮಣೀಯಾಂಸಂ ಸುಖಮೇಷ್ಯಸಿ ಶಾಶ್ವತಂ ॥ ೧೫೬ ॥**

**ಶಿವ ಏವ ಹರಿಸ್ಸಾಕ್ಷಾದ್ಧರಿರೇವ ಶಿವಃ ಸ್ವಯಂ ।**
**ದ್ವಯೋರಂತರದೃಗ್ಯಾತಿ ನರಕಾನ್ಕೋಟಿಶಃ ಖಲಃ ॥ ೧೫೭ ॥**

---

೧೫೪. ಆದುದರಿಂದ ವಿಹಿತ ಧರ್ಮಗಳಿಗೆ ಅವಿರುದ್ಧವಾಗಿ ಹರಿಯಲ್ಲಿ ಭಕ್ತಿಮಾಡಬೇಕು.

೧೫೫. ಸದಾಚಾರವಿಲ್ಲದವರ ಧರ್ಮಗಳೂ ಸಹ ಸುಖಪ್ರದವಾಗಲಾರವು. ಸ್ವಧರ್ಮವನ್ನಾಚರಿಸದೇ ಮಾಡುವ ಭಕ್ತಿಯು ಮಾಡದಿದ್ದಂತೆಯೇ ಭಾವಿಸಬೇಕೆಂದು ಹೇಳಿದೆ. ರಾಜನೇ! ನೀನು ಕೇಳಿದುದೆಲ್ಲವನ್ನೂ ನಾನು ಹೇಳಿರುತ್ತೇನೆ.

೧೫೬. ಆದಕಾರಣ ಧರ್ಮಾನುಷ್ಠಾನನಿರತನಾಗಿ ಅಣುಪದಾರ್ಥಗಳಲ್ಲಿ ಅದಕ್ಕಿಂತ ಅಣುತರನಾಗಿ ಅಂತರ್ಗತನಾಗಿರುವ ನಾರಾಯಣಶಬ್ದವಾಚ್ಯನಾದ ಜನಾರ್ದನನನ್ನು ಪೂಜಿಸು. ಆದರಿಂದ ಶಾಶ್ವತ ಸುಖವನ್ನು ಪಡೆಯುವಿ.

೧೫೭. ಶಿವಶಬ್ದಮುಖ್ಯವಾಚ್ಯನೇ ಹರಿಯು. ಅವನೇ ಸಾಕ್ಷಾತ್ತಾಗಿ ಶಿವನೆನಿಸುವನು. ಶಿವಶಬ್ದಮುಖ್ಯಾರ್ಥ, ಹರಿ ಇವರುಗಳಿಗೆ ಭೇದವನ್ನು ತಿಳಿಯುವ ಮೂಢನು ಕೋಟ್ಯಂತರ ವರ್ಷ ನರಕಕ್ಕೆ ಭಾಗಿಯಾಗುವನು.

ತಸ್ಮಾದ್ವಿಷ್ಣುಂ ಶಿವಂ ವ್ಯಾಪಿ ಸಮಂ ಬುಧ್ವಾ ಸಮರ್ಚಯ ।
ಭೇದಕೃದ್ದುಃಖಮಾಪ್ನೋತಿ ಇಹ ಲೋಕೇ ಪರತ್ರ ಚ ॥ ೧೫೮ ॥

ಯದರ್ಥಮಹಮಾಯಾತಸ್ತ್ವತ್ಸಮೀಪಂ ಜನಾಧಿಪ ।
ತತ್ತೇ ವಕ್ಷ್ಯಾಮಿ ಸುಮತೇ ಸಾವಧಾನಂ ನಿಶಾಮಯ ॥ ೧೫೯ ॥

ಆತ್ಮಘಾತಕಪಾಪಾತ್ಮನೋ ದಗ್ಧಾಃ ಕಪಿಲಕೋಪತಃ ।
ವಸಂತಿ ನರಕೇ ತೇ ತು ರಾಜಂಸ್ತವ ಪಿತಾಮಹಾಃ ॥ ೧೬೦ ॥

ತಾನುದ್ಧರ ಮಹಾಭಾಗ ಗಂಗಾನಯನಕರ್ಮಣಾ ।
ಗಂಗಾ ಸರ್ವಾಣಿ ಪಾಪಾನಿ ನಾಶಯತ್ಯೇವ ಭೂಪತೇ ॥ ೧೬೧ ॥

ಕೇಶಾಸ್ಥಿನಖದಂತಾಶ್ಚ ಭಸ್ಮಾಪಿ ನೃಪಸತ್ತಮ ।
ನಯಂತಿ ವಿಷ್ಣುಸದನಂ ಸ್ಪೃಷ್ಟ್ವಾ ಗಾಂಗೇನ ವಾರಿಣಾ ॥ ೧೬೨ ॥

---

೧೫೮. ಆದುದರಿಂದ ವಿಷ್ಣು, ಶಿವಶಬ್ದಮುಖ್ಯಾರ್ಥ ಇವರನ್ನು ಒಂದನ್ನಾಗಿ ಭಾವಿಸಿ ಪೂಜಿಸಬೇಕು. ಅವರಿಗೆ ಭೇದವನ್ನು ತಿಳಿಯುವವನು ಈ ಲೋಕದಲ್ಲಿ ಮತ್ತು ಪರಲೋಕದಲ್ಲಿಯೂ ಸಹ ದುಃಖಪಡುತ್ತಾನೆ.

೧೫೯. ಸಮೀಚೀನಬುದ್ಧಿಯುಳ್ಳ ರಾಜನೇ! ನಾನು ನಿನ್ನ ಹತ್ತಿರಕ್ಕೆ ಏತಕ್ಕೋಸ್ಕರ ಬಂದನೆಂಬುದನ್ನು ಹೇಳುತ್ತೇನೆ. ಸಾವಧಾನಚಿತ್ತನಾಗಿ ಕೇಳು.

೧೬೦. ಆತ್ಮಹಿಂಸೆಮಾಡಿ ಪಾಪಿಗಳಾದ ನಿನ್ನ ಪಿತಾಮಹರು ಕಪಿಲ ಮುನಿಯ ಕೋಪದಿಂದ ಸುಡಲ್ಪಟ್ಟವರಾಗಿ ನರಕದಲ್ಲಿ ವಾಸಿಸುತ್ತಿದ್ದಾರೆ.

೧೬೧. ಭೂಪಾಲನೇ! ಗಂಗೆಯು ಸಕಲ ಪಾಪಗಳನ್ನೂ ನಾಶಪಡಿಸುತ್ತದೆ. ಆದುದರಿಂದ ಗಂಗೆಯನ್ನು ತಂದು ಮಹಾಪುಣ್ಯಶಾಲಿಯಾದ ನೀನು ಅವರನ್ನುದ್ಧರಿಸು.

೧೬೨. ರಾಜೋತ್ತಮನೇ! ಕೂದಲು, ಮೂಳೆ, ಉಗರು, ಹಲ್ಲು, ಮತ್ತು ಭಸ್ಮ ಇವುಗಳಿಗೆ ಗಂಗೋದಕಸ್ಪರ್ಶವಾದರೆ ಅದು ಆ ಮನುಷ್ಯನನ್ನು ವಿಷ್ಣುಲೋಕಕ್ಕೆ ಒಯ್ಯುತ್ತದೆ.

**ಯಸ್ಯಾಸ್ಥಿ ಭಸ್ಮ ವಾ ರಾಜನ್ ಗಂಗಾಯಾಂ ಕ್ಷಿಪ್ಯತೇ ನರೈಃ ।**
**ಸ ಸರ್ವಪಾಪನಿರ್ಮುಕ್ತಃ ಪ್ರಯಾತಿ ಭವನಂ ಹರೇಃ ॥ ೧೬೩ ॥**

**ಯಾನಿ ಕಾನಿ ಚ ಪಾಪಾನಿ ಪ್ರೋಕ್ತಾನಿ ತವ ಭೂಪತೇ ।**
**ತಾನಿ ಸರ್ವಾಣಿ ನಶ್ಯಂತಿ ಗಂಗಾಬಿಂದ್ವಭಿಷೇಚನಾತ್ ॥ ೧೬೪ ॥**

**ಸನಕ ಉವಾಚ**

**ಇತ್ಯುಕ್ತ್ವಾ ಮುನಿಶಾರ್ದೂಲ ಮಹಾರಾಜಂ ಭಗೀರಥಂ ।**
**ಧರ್ಮಾತ್ಮಾನಂ ಧರ್ಮರಾಜಃ ಸದ್ಯಶ್ಚಾಂತರ್ದಧೇ ತದಾ ॥ ೧೬೫ ॥**

**ಸ ತು ರಾಜಾ ಮಹಾಪ್ರಾಜ್ಞಃ ಸರ್ವಶಾಸ್ತ್ರಾರ್ಥಪಾರಗಃ ।**
**ನಿಕ್ಷಿಪ್ಯ ಪೃಥಿವೀಂ ಸರ್ವಾಂ ಸಚಿವೇಷು ಯಯೌ ವನಂ ॥ ೧೬೬ ॥**

---

೧೬೩. ದೊರೆಯೇ! ಯಾರ ಅಸ್ಥಿ ಅಥವಾ ಭಸ್ಮವನ್ನು ಗಂಗೆಯಲ್ಲಿ ಹಾಕುತ್ತಾರೆಯೋ ಅವನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ವಿಷ್ಣು ಲೋಕಕ್ಕೆ ಹೋಗುತ್ತಾನೆ.

೧೬೪. ಭೂಪಾಲನೇ! ನಿನಗೆ ಇದುವರೆಗೆ ಹೇಳಲ್ಪಟ್ಟ ಪಾಪಗಳೆಲ್ಲವೂ ಗಂಗೋದಕದ ಸ್ನಾನದಿಂದ ಅಥವಾ ಪ್ರೋಕ್ಷಣೆಯಿಂದ ನಶಿಸಿಹೋಗುತ್ತವೆ.

೧೬೫. ಸನಕನು ಹೇಳಿದನು—ಮುನಿಶ್ರೇಷ್ಠನಾದ ನಾರದನೇ! ಧರ್ಮ ರಾಜನು ಧರ್ಮಿಷ್ಠನಾದ ಭಗೀರಥಮಹಾರಾಜನಿಗೆ ಮೇಲೆ ಹೇಳಿದ ಪ್ರಕಾರ ವಾಗಿ ಉಪದೇಶಿಸಿ, ತಕ್ಷಣವೇ ಅಂತರ್ಹಿತನಾದನು.

೧೬೬. ಸಕಲ ಶಾಸ್ತ್ರಾರ್ಥಪಾರಂಗತನು, ಮಹಾಜ್ಞಾನಿಯೂ ಆದ ಆ ರಾಜನು ತನ್ನ ರಾಜ್ಯವನ್ನೆಲ್ಲಾ ಮಂತ್ರಿಗಳಿಗೆ ಒಪ್ಪಿಸಿ ಕಾಡಿಗೆ ಹೋದನು.

**ತುಹಿನಾದ್ರೌ ತತೋ ಗತ್ವಾ ನರನಾರಾಯಣಾಶ್ರಮಾತ್ |**
**ಪಶ್ಚಿಮೇ ತುಹಿನಾಕ್ರಾಂತೇ ಶೃಂಗೇ ಷೋಡಶಯೋಜನೇ ॥ ೧೬೭ ॥**

**ತಪಸ್ತಪ್ತ್ವಾSನಯಾಮಾಸ ಗಂಗಾಂ ತ್ರೈಲೋಕ್ಯಪಾವನೀಂ ॥ ೧೬೮ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಧರ್ಮಾಖ್ಯಾನೇ ಧರ್ಮರಾಜೋಪದೇಶೇನ ಭಗೀರಥಸ್ಯ ಗಂಗಾನಯನೋದ್ಯಮನವರ್ಣನಂ ನಾಮ ಪಂಚದಶೋSಧ್ಯಾಯಃ**

---

೧೬೭-೧೬೮. ತರುವಾಯ ಭಗೀರಥನು ಹೊರಟು ಹಿಮವತ್ಪರ್ವತದಲ್ಲಿರುವ ನರನಾರಾಯಣಾಶ್ರಮಕ್ಕೆ ಪಶ್ಚಿಮದಿಕ್ಕಿನಲ್ಲಿ ಹದಿನಾರುಗಾವುದ ದೂರದಲ್ಲಿರುವ ಹಿಮದಿಂದ ಆವರಿಸಲ್ಪಟ್ಟ ಶಿಖರಪ್ರದೇಶವನ್ನು ಸೇರಿ ಅಲ್ಲಿ ತಪಸ್ಸು ಮಾಡಿ ಮೂರು ಲೋಕಗಳಿಗೂ ಪರಿಶುದ್ಧಿಯನ್ನುಂಟುಮಾಡುವ ಗಂಗೆಯನ್ನು ಭೂಲೋಕಕ್ಕೆ ತಂದನು.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗದ ಪ್ರಥಮಪಾದದಲ್ಲಿ ಧರ್ಮಾಖ್ಯಾನಪ್ರಕರಣದಲ್ಲಿ ಧರ್ಮರಾಜನ ಉಪದೇಶದಿಂದ ಭಗೀರಥ ಮಹಾರಾಜನು ಮಾಡಿದ ಗಂಗಾನಯನಪ್ರಯತ್ನಕಥನವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯದ ಆರಂಭದಲ್ಲಿ ಧರ್ಮರಾಜನು ಪಾಪಪ್ರಭೇದ, ನರಕ ಯಾತನೆ ಇತ್ಯಾದಿಗಳನ್ನು ಹೇಳುತ್ತೇನೆಂದು ಪ್ರತಿಜ್ಞೆಮಾಡಿ, ನರಕ, ಅಲ್ಲಾಗುವದುಃಖ, ಪಾಪಗಳು, ಪ್ರತ್ಯೇಕವಾಗಿ ಒಂದೊಂದು ಪಾಪಗಳಿಗೂ ಅನುಭವಿಸಬೇಕಾದ ಶಿಕ್ಷೆಗಳು ಇವೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸಿ, ಸಕಲ ಪಾಪಗಳೂ ಶಾಸ್ತ್ರೋಕ್ತವಿಧಾನದಿಂದ ಪ್ರಾಯಶ್ಚಿತವನ್ನು ಮಾಡಿಕೊಂಡರೆ ಪರಿಹಾರವಾಗುತ್ತವೆ. ಗಂಗಾ, ತುಲಸೀ, ಸತ್ಸಂಗ, ಹರಿಕೀರ್ತನೆ, ಅಸೂಯೆಯಿಲ್ಲದಿರುವಿಕೆ, ಅಹಿಂಸೆ ಇವುಗಳು ಸರ್ವಪಾಪ ಪರಿಹಾರಕವು. ಮಾಡಿದ ಸಕಲ ಕರ್ಮಗಳನ್ನೂ ವಿಷ್ಣುವಿಗೆ ಸಮರ್ಪಿಸಬೇಕು. ಇಲ್ಲದಿದ್ದರೆ ವ್ಯರ್ಥವು. ವಿಷ್ಣುಭಕ್ತಿಯು ಸಕಲ ಪಾಪಪರಿಹಾರಕವು. ಸಾತ್ವಿಕ, ರಾಜಸ, ತಾಮಸ ಸ್ವಭಾವಾನುಗುಣವಾಗಿ ವಿಷ್ಣುಭಕ್ತಿಯೂ ಮೂರುವಿಧ. ಒಂದೊಂದೂ ಪ್ರತ್ಯೇಕವಾಗಿ ಉತ್ತಮ, ಮಧ್ಯಮ, ಅಧಮವೆಂದು ಮೂರುವಿಧ. ಈ ಒಂಭತ್ತಕ್ಕಿಂತಲೂ ಅತಿಶಯವಾದುದು ಉತ್ಕೃಷ್ಟಭಕ್ತಿಯು. ಈಪ್ರಕಾರ ಹತ್ತುವಿಧ ಭಕ್ತಿ ಮತ್ತು ಅವುಗಳ ಸ್ವರೂಪಗಳನ್ನು ವಿಶದಪಡಿಸಿ ಸದಾಚಾರವು ಅತ್ಯವಶ್ಯಕವು. ಅದಲ್ಲದೆ ಕೇವಲ ಭಕ್ತಿಯು ಶ್ರೇಯಸ್ಕರವಲ್ಲ. ಸದಾಚಾರಸಹಿತ ಭಕ್ತಿಯು ಅವಶ್ಯಕರ್ತವ್ಯ ಮುಂತಾಗಿ ನಿರೂಪಿಸಿ ಗಂಗೆಯನ್ನುತಂದು ನರಕದಲ್ಲಿ ಬಿದ್ದಿರುವ ಅಜ್ಜಂದಿರನ್ನು ಉದ್ಧರಿಸೆಂದು ಭಗೀರಥನಿಗೆ ಉಪದೇಶಿಸಿ ಧರ್ಮರಾಜನು ಅಂತರ್ಧಾನನಾದನು. ಭಗೀರಥನೂ ಸಹ ಹಿಮವತ್ಪರ್ವತಕ್ಕೆ ಹೋಗಿ ತಪಸ್ಸುಮಾಡಿ ಗಂಗೆಯನ್ನು ತಂದನೆಂದು ಹೇಳುವ ಸಂದರ್ಭದಲ್ಲಿ ಅಧ್ಯಾಯವು ಮುಗಿದಿದೆ.

---

# ಷೋಡಶೋಽಧ್ಯಾಯಃ

---

## ನಾರದ ಉವಾಚ

ಹಿಮವದ್ಗಿರಿಮಾಸಾದ್ಯ ಕಿಂ ಚಕಾರ ಮಹೀಪತಿಃ ।
ಕಥಮಾನೀತವಾನ್ಗಂಗಾಮೇತನ್ಮೇ ವಕ್ತುಮರ್ಹಸಿ ॥ ೧ ॥

## ಸನಕ ಉವಾಚ

ಭಗೀರಥೋ ಮಹಾರಾಜೋ ಜಟಾಚೀರಧರೋ ಮುನೇ ।
ಗಚ್ಛನ್ಹಿಮಾದ್ರಿಂ ತಪಸೇ ಪ್ರಾಪ್ತೋ ಗೋದಾವರೀತಟಂ ॥ ೨ ॥

ತತ್ರ ಪಶ್ಯನ್ಮಹಾರಣ್ಯೇ ಭೃಗೋರಾಶ್ರಮಮುತ್ತಮಂ ।
ಕೃಷ್ಣಸಾರಸಮಾಕೀರ್ಣಂ ಮಾತಂಗಗಣಸೇವಿತಂ ॥ ೩ ॥

ಭ್ರಮದ್ಭ್ರಮರಸಂಘುಷ್ಟಂ ಕೂಜದ್ವಿಹಗಸಂಕುಲಂ ।
ವ್ರಜದ್ವರಾಹನಿಕರಂ ಚಮರೀಪುಚ್ಛವೀಜಿತಂ ॥ ೪ ॥

---

## ಹದಿನಾರನೆಯ ಅಧ್ಯಾಯ

೧. ಹಿಮವತ್ಪರ್ವತಕ್ಕೆ ಹೋಗಿ ಭಗೀರಥನು ಏನುಮಾಡಿದನು ? ಗಂಗೆಯನ್ನು ಹೇಗೆ ತಂದನು ? ಇದನ್ನು ನನಗೆ ಹೇಳು ಎಂಬುದಾಗಿ ನಾರದನು ಸನಕನನ್ನು ಕೇಳಿದನು.

೨. ಸನಕನು ಹೇಳಿದನು:—ಮುನಿಯೇ ! ಭಗೀರಥರಾಜನು ಜಟೆಯನ್ನು ಧರಿಸಿ, ನಾರುಬಟ್ಟೆಯನ್ನುಟ್ಟು ಹಿಮವತ್ಪರ್ವತಕ್ಕೆ ತಪಸ್ಸಿಗಾಗಿ ಹೋಗುತ್ತಾ ಗೋದಾವರೀತೀರಕ್ಕೆ ಬಂದನು.

೩-೭. ಆ ಗೋದಾವರೀತೀರದಲ್ಲಿನ ಮಹಾರಣ್ಯದಲ್ಲಿ ಉತ್ತಮವು, ಕಪ್ಪುಜಿಂಕೆಗಳಿಂದ ಕೂಡಿರುವುದು, ಆನೆಗಳ ತಂಡದಿಂದ ಪೂರ್ಣವಾಗಿರುವುದು,

ನೃತ್ಯನ್ಮಯೂರನಿಕರಂ ಸಾರಂಗಾದಿನಿಷೇವಿತಂ ।
ಪ್ರವರ್ಧಿತಮಹಾವೃಕ್ಷಂ ಮುನಿಕನ್ಯಾಭಿರಾದರಾತ್ ॥ ೫ ॥

ಸಾಲತಾಲತಮಾಲಾಢ್ಯಂ ವೃಕ್ಷಹಿಂತಾಲಮಂಡಿತಂ ।
ಮಾಲತೀಯೂಥಿಕಾಕುಂದಚಂಪಕಾಶ್ವತ್ಥಭೂಷಿತಂ ॥ ೬ ॥

ಉತ್ಫುಲ್ಲಕುಸುಮೋಪೇತಂ ಋಷಿಸಂಘನಿಷೇವಿತಂ ।
ವೇದಶಾಸ್ತ್ರಮಹಾಘೋಷಮಾಶ್ರಮಂ ಪ್ರಾವಿಶದ್ಭೃಗೋಃ ॥ ೭ ॥

ಗೃಣಂತಂ ಪರಮಂ ಬ್ರಹ್ಮ ವೃತಂ ಶಿಷ್ಯಗಣೈರ್ಮುನಿಂ ।
ತೇಜಸಾ ಸೂರ್ಯಸದೃಶಂ ಭೃಗುಂ ತತ್ರ ದದರ್ಶ ಸಃ ॥ ೮ ॥

---

ಹಾರುತ್ತಿರುವ ಭ್ರಮರಗಳ ಝೇಂಕಾರಯುಕ್ತವು, ಶಬ್ದಮಾಡುತ್ತಿರುವ ಪಕ್ಷಿ ಸಮೂಹವುಳ್ಳದು, ಗುಂಪುಗುಂಪಾಗಿ ಓಡಾಡುತ್ತಿರುವ ಹಂದಿಗಳುಳ್ಳದು, ಚಮರೀಮೃಗಗಳ ಬಾಲದಿಂದ ಬೀಸಲ್ಪಡುತ್ತಿರುವುದು, ಕುಣಿಯುವ ನವಿಲುಗಳಿಂದ ತುಂಬಿರುವುದು, ಚಾತಕ ಮುಂತಾದ ಪಕ್ಷಿಗಳಿಗೆ ಆಶ್ರಯವು, ಋಷಿಕನ್ಯೆಯರಿಂದ ವಿಶ್ವಾಸಪೂರ್ವಕವಾಗಿ ಬೆಳೆಸಲ್ಪಟ್ಟ ಮಹಾವೃಕ್ಷಗಳುಳ್ಳದು, ಸಾಲತಾಲವೃಕ್ಷ ಮತ್ತು ಹೊಂಗೇಗಿಡಗಳಿಂದ ಕೂಡಿರುವುದು, ಕಿರುತಾಳೇಗಿಡಗಳಿಂದ ಅಲಂಕೃತವು, ಜಾಜಿ, ಕಾಡುಮಲ್ಲಿಗೆ, ಸುಗಂಧದ್ರವ್ಯ, ಸಂಪಿಗೆ, ಅಶ್ವತ್ಥ ಇವುಗಳಿಂದ ಅಲಂಕೃತವು, ಮತ್ತು ಅರಳಿದ ಹೂವುಗಳಿಂದ ಕೂಡಿರುವುದೂ, ಆಗಿರುವ ಭೃಗುಋಷಿಗಳ ಆಶ್ರಮವನ್ನು ನೋಡಿ ಭಗೀರಥನು ವೇದ, ಶಾಸ್ತ್ರಘೋಷಗಳಿಂದ ಯುಕ್ತವಾದ ಆ ಆಶ್ರಮವನ್ನು ಪ್ರವೇಶಿಸಿದನು.

೮. ಆ ಭಗೀರಥರಾಜನು ಅಲ್ಲಿ ಪರಬ್ರಹ್ಮನನ್ನು ಸ್ತೋತ್ರಮಾಡುತ್ತಿರುವವನು, ಶಿಷ್ಯಸಂಘಪರಿವೃತನು, ಸೂರ್ಯನಂತೆ ತೇಜಸ್ವಿಯೂ ಆದ ಭೃಗುಮುನಿಯನ್ನು ನೋಡಿದನು.

ಪ್ರಣನಾಮಾಥ ವಿಪ್ರೇಂದ್ರಂ ಪಾದಸಂಗ್ರಹಣಾದಿನಾ ।
ಆತಿಥ್ಯಂ ಭೃಗುರಪ್ಯಸ್ಯ ಚಕ್ರೇ ಸನ್ಮಾನಪೂರ್ವಕಂ ॥ ೯ ॥

ಕೃತಾತಿಥ್ಯಕ್ರಿಯೋ ರಾಜಾ ಭೃಗುಣಾ ಪರಮರ್ಷಿಣಾ ।
ಉವಾಚ ಪ್ರಾಂಜಲಿರ್ಭೂತ್ವಾ ವಿನಯಾನ್ಮುನಿಪುಂಗವಂ ॥ ೧೦ ॥

ಭಗೀರಥ ಉವಾಚ

ಭಗವನ್ ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ।
ಪೃಚ್ಛಾಮಿ ಭವಭೀತೋಽಹಂ ನೃಣಾಮುದ್ಧಾರಕಾರಣಂ ॥ ೧೧ ॥

ಭಗವಾಂಸ್ತುಷ್ಯತೇ ಯೇನ ಸಂಸಾರಾರ್ಣವತಾರಕಃ ।
ತನ್ಮಮಾಖ್ಯಾಹಿ ಸರ್ವಜ್ಞ ಅನುಗ್ರಾಹ್ಯೋಽಸ್ಮಿ ಸತ್ತಮ ॥ ೧೨ ॥

---

೯. ಕೂಡಲೇ ಭಗೀರಥನು ವಿಪ್ರಶ್ರೇಷ್ಠನಾದ ಭೃಗುಮುನಿಗೆ ಪಾದ ಸ್ಪರ್ಶಾದಿ ಪೂರ್ವಕವಾಗಿ ನಮಸ್ಕಾರ ಮಾಡಿದನು. ಭೃಗುಮುನಿಯೂ ಸಹ ಭಗೀರಥನಿಗೆ ಮರ್ಯಾದೆಯಿಂದ ಸತ್ಕಾರಮಾಡಿದನು.

೧೦. ಜ್ಞಾನಿವರ್ಯನಾದ ಭೃಗುವಿನಿಂದ ಸತ್ಕರಿಸಲ್ಪಟ್ಟ ರಾಜನು ಕೈ ಮುಗಿದು ವಿನಯದಿಂದ ಮುನಿವರನನ್ನು ಕುರಿತು ಮಾತನಾಡಿದನು.

೧೧-೧೨. ಸಕಲ ಧರ್ಮಜ್ಞಾನಿಯು, ಸಕಲ ಶಾಸ್ತ್ರಪಂಡಿತನು, ಸಾಧೂತ್ತಮನೂ ಆದ ಪೂಜ್ಯನೇ! ನಾನು ಸಂಸಾರ ಭಯಗ್ರಸ್ತನಾಗಿರುವೆನು. ಮನುಜರು ಸಂಸಾರದಿಂದ ಉದ್ಧಾರವಾಗುವ ಬಗೆ ಹೇಗೆ? ಸಂಸಾರವೆಂಬ ಸಮುದ್ರವನ್ನು ದಾಟಿಸುವ ಭಗವಂತನು ಯಾವ ಕರ್ಮದಿಂದ ಸಂತುಷ್ಟನಾಗುವನು? ಎಂಬುದನ್ನು ತಿಳಿಯಬೇಕೆಂದಿರುವ ನನಗೆ ಸರ್ವಜ್ಞನಾದ ನೀನು ದಯವಿಟ್ಟು ಹೇಳು. ನಾನು ನಿಮ್ಮ ಅನುಗ್ರಹಕ್ಕೆ ಪಾತ್ರನಾಗಿರುವೆನು ಎಂಬುದಾಗಿ ಭಗೀರಥನು ಹೇಳಿದನು.

ಭೃಗುರುವಾಚ

ರಾಜಂಸ್ತ್ವನ್ನೇಪ್ಸಿತಂ ಜ್ಞಾತಂ ತ್ವಂ ಹಿ ಪುಣ್ಯವತಾಂ ವರಃ ।
ಅನ್ಯಥಾ ಸ್ವಕುಲಂ ಸರ್ವಂ ಕಥಮುದ್ಧರ್ತುಮರ್ಹಸಿ ॥ ೧೩ ॥

ಯೋ ವಾ ಕೋ ವಾऽಪಿ ಭೂಪಾಲ ಸ್ವಕುಲಂ ಶುಭಕರ್ಮಣಾ ।
ಉದ್ಧರ್ತುಕಾಮಸ್ತಂ ವಿದ್ಯಾನ್ನರರೂಪಧರಂ ಹರಿಂ ॥ ೧೪ ॥

ಕರ್ಮಣಾ ಯೇನ ದೇವೇಶೋ ನೃಣಾಮಿಷ್ಟಫಲಪ್ರದಃ ।
ತತ್ಪ್ರವಕ್ಷ್ಯಾಮಿ ರಾಜೇಂದ್ರ ಶ್ರುಣುಷ್ವ ಸುಸಮಾಹಿತಃ ॥ ೧೫ ॥

ಭವ ಸತ್ಯಪರೋ ರಾಜನ್ನಹಿಂಸಾನಿರತಸ್ತಥಾ ।
ಸರ್ವಭೂತಹಿತೋ ನಿತ್ಯಂ ಮಾऽನೃತಂ ವದ ವೈ ಕ್ವಚಿತ್ ॥ ೧೬ ॥

---

೧೩. ಭೃಗುಮುನಿಯು ಹೇಳಿದನು—ರಾಜನೇ! ನಿನ್ನ ಇಷ್ಟವು ತಿಳಿಯಿತು. ನೀನು ಪುಣ್ಯವಂತರಲ್ಲಿ ಶ್ರೇಷ್ಠನು. ಆದುದರಿಂದಲೇ ನಿನ್ನ ವಂಶವನ್ನೆಲ್ಲಾ ಉದ್ಧರಿಸಲು ಅರ್ಹನಾಗಿರುವೆ.

೧೪. ಭೂಪತಿಯೇ ! ಯಾರಾದರೂ ಸರಿ, ಸತ್ಕರ್ಮದಿಂದ ತನ್ನ ವಂಶವನ್ನುದ್ಧರಿಸಲು ಇಚ್ಛಿಸುವನೋ ಅಂತಹವನನ್ನು ಮನುಷ್ಯವೇಷಧಾರಿಯಾದ ಹರಿಯೆಂದು ತಿಳಿಯಬೇಕು ಎಂದರೆ ಹರಿಯ ಪರಮಾನುಗ್ರಹಪಾತ್ರನೆಂದರಿಯಬೇಕೆಂದು ಭಾವ.

೧೫. ದೇವೇಶ್ವರನು ಯಾವ ಕರ್ಮದಿಂದ ಸಂತುಷ್ಟನಾಗಿ ಮನುಷ್ಯರಿಗೆ ಇಷ್ಟಾರ್ಥಪ್ರದನಾಗುವನೋ ಅದನ್ನು ಹೇಳುತ್ತೇನೆ. ರಾಜೇಂದ್ರನೇ ! ಸಮಾಧಾನಚಿತ್ತನಾಗಿ ಕೇಳು.

೧೬. ರಾಜನೇ ! ಸತ್ಯವಚನವನ್ನೇ ನುಡಿಯುವವನು, ಅಹಿಂಸೆಯಲ್ಲಿ ನಿರತನು ಮತ್ತು ಯಾವಾಗಲೂ ಸಕಲ ಪ್ರಾಣಿಗಳಿಗೂ ಹಿತಕರನೂ ಆಗಿರು; ಯಾವ ಸಂದರ್ಭದಲ್ಲಿಯೂ ಸುಳ್ಳು ಹೇಳಬೇಡ.

**ತ್ಯಜ ದುರ್ಜನಸಂಸರ್ಗಂ ಭಜ ಸಾಧು ಸಮಾಗಮಂ ।**
**ಕುರು ಪುಣ್ಯಮಹೋರಾತ್ರಂ ಸ್ಮರ ವಿಷ್ಣುಂ ಸನಾತನಂ ॥ ೧೭ ॥**

**ಕುರು ಪೂಜಾಂ ಮಹಾವಿಷ್ಣೋರ್ಯಾಹಿ ಶಾಂತಿಮನುತ್ತಮಾಂ ।**
**ದ್ವಾದಶಾಷ್ಟಾಕ್ಷರಂ ಮಂತ್ರಂ ಜಪ ಶ್ರೇಯೋ ಭವಿಷ್ಯತಿ ॥ ೧೮ ॥**

**ಭಗೀರಥ ಉವಾಚ**

**ಸತ್ಯಂ ತು ಕೀದೃಶಂ ಪ್ರೋಕ್ತಂ ಸರ್ವಭೂತಹಿತಂ ಮುನೇ ।**
**ಅನೃತಂ ಕೀದೃಶಂ ಪ್ರೋಕ್ತಂ ದುರ್ಜನಾಶ್ಚಾಪಿ ಕೀದೃಶಾಃ ॥ ೧೯ ॥**

**ಸಾಧವಃ ಕೀದೃಶಾಃ ಪ್ರೋಕ್ತಾಸ್ತಥಾ ಪುಣ್ಯಂ ಚ ಕೀದೃಶಂ ।**
**ಸ್ಮರ್ತವ್ಯಶ್ಚ ಕಥಂ ವಿಷ್ಣುಸ್ತಸ್ಯ ಪೂಜಾ ಚ ಕೀದೃಶೀ ॥ ೨೦ ॥**

**ಶಾಂತಿಶ್ಚ ಕೀದೃಶೀ ಪ್ರೋಕ್ತಾ ಕೋ ಮಂತ್ರೋಽಷ್ಟಾಕ್ಷರೋ ಮುನೇ ।**
**ಕೋ ವಾ ದ್ವಾದಶವರ್ಣಶ್ಚ ಮುನೇ ತತ್ವಾರ್ಥಕೋವಿದ ॥ ೨೧ ॥**

---

೧೭. ದುರ್ಜನ ಸಹವಾಸವನ್ನು ಬಿಡು, ಸಜ್ಜನಸಂಗಮಾಡು, ಹಗಲಿರುಳಲ್ಲಿ ಪುಣ್ಯಕೆಲಸಮಾಡು, ಅನಾದಿವಿಷ್ಣುವನ್ನು ಸ್ಮರಿಸು.

೧೮. ಮಹಾವಿಷ್ಣುವಿನ ಪೂಜೆಯನ್ನು ಮಾಡು; ಅದರಿಂದ ಶಾಂತಿಯನ್ನು ಹೊಂದು. ವಾಸುದೇವ ದ್ವಾದಶಾಕ್ಷರ ಮಂತ್ರ ಮತ್ತು ನಾರಾಯಣಾಷ್ಟಾಕ್ಷರಮಂತ್ರಗಳನ್ನು ಜಪಿಸು. ಶ್ರೇಯಸ್ಸುಂಟಾಗುತ್ತದೆ.

೧೯. ಭಗೀರಥನು ಹೇಳಿದನು—ಮುನಿಯೇ! ಸತ್ಯ, ಸರ್ವಭೂತಹಿತ ಮತ್ತು ಅನೃತ ಇವುಗಳು ಎಂತಹುವು? ಎಂತಹವರು ದುರ್ಜನರು?

೨೦. ಸಾಧುಗಳು ಹೇಗಿರುವರು? ಪುಣ್ಯವೆಂತಹುದು? ವಿಷ್ಣುಸ್ಮರಣೆಯನ್ನು ಹೇಗೆ ಮಾಡಬೇಕು? ಅವನ ಪೂಜೆಯು ಎಂತಹುದು?

೨೧-೨೨. ಶಾಂತಿಯು ಎಂತಹುದೆಂದು ಉಕ್ತವಾಗಿದೆ? ಅಷ್ಟಾಕ್ಷರ ಮಂತ್ರ ಮತ್ತು ದ್ವಾದಶಾಕ್ಷರ ಮಂತ್ರಗಳಾವುವು? ತತ್ವಾರ್ಥಜ್ಞಾನಿಯಾದ

ಕೃಪಾಂ ಕೃತ್ವಾ ಮಯಿ ಪರಾಂ ಸರ್ವಂ ವ್ಯಾಖ್ಯಾತುಮರ್ಹಸಿ ।

ಭೃಗುರುವಾಚ

ಸಾಧು ಸಾಧು ಮಹಾಪ್ರಾಜ್ಞ ತವ ಬುದ್ಧಿರನುತ್ತಮಾ ॥ ೨೨॥

ಯತ್ಪೃಷ್ಟೋಽಹಂ ತ್ವಯಾ ಭೂಪ ತತ್ಸರ್ವಂ ಪ್ರವದಾಮಿ ತೇ ।
ಯಥಾರ್ಥಕಥನಂ ಯತ್ತತ್ಸತ್ಯಮಾಹುರ್ವಿಪಶ್ಚಿತಃ ॥ ೨೩ ॥

ಧರ್ಮಾವಿರೋಧತೋ ವಾಚ್ಯಂ ತದ್ಧಿ ಧರ್ಮಪರಾಯಣೈಃ ।
ದೇಶಕಾಲಾದಿ ವಿಜ್ಞಾಯ ಸ್ವಯಮಸ್ಯಾವಿರೋಧತಃ ॥ ೨೪ ॥

ಯದ್ವಚಃ ಪ್ರೋಚ್ಯತೇ ಸದ್ಭಿಸ್ತತ್ಸತ್ಯಮಭಿಧೀಯತೇ ।
ಸರ್ವೇಷಾಮೇವ ಜಂತೂನಾಮಕ್ಲೇಶಜನನಂ ಹಿ ತತ್ ॥ ೨೫ ॥

ಅಹಿಂಸಾ ಸಾ ನೃಪ ಪ್ರೋಕ್ತಾ ಸರ್ವಕಾಮಪ್ರದಾಯಿನೀ ।
ಧರ್ಮಕಾರ್ಯಸಹಾಯತ್ವಮಕಾರ್ಯಪರಿಪಂಥಿತಾ ॥ ೨೬ ॥

---

ನೀನು ನನ್ನಲ್ಲಿ ಉತ್ಕೃಷ್ಟ ದಯೆಯನ್ನು ತೋರಿ ಸಕಲವನ್ನೂ ವಿವರಿಸಿ ತಿಳಿಸಬೇಕು.

೨೨-೨೩. ಭೃಗುಮುನಿಯು ಮಾತನಾಡಿದನು—ಮಹಾಜ್ಞಾನಿಯಾದ ದೊರೆಯೇ! ಒಳ್ಳೆಯದು, ಒಳ್ಳೆಯದು. ನಿನ್ನ ಬುದ್ಧಿಯು ಶ್ರೇಷ್ಠವು. ನೀನು ಕೇಳಿದುದೆಲ್ಲವನ್ನೂ ಹೇಳುತ್ತೇನೆ. ಯಥಾರ್ಥವಚನವನ್ನು ಜ್ಞಾನಿಗಳು ಸತ್ಯವೆನ್ನುತ್ತಾರೆ.

೨೪-೨೫. ಧರ್ಮನಿರತರು ಧರ್ಮಕ್ಕೆ ವಿರೋಧಬರದಂತೆ ಸತ್ಯವನ್ನು ಹೇಳಬೇಕು. ದೇಶ, ಕಾಲ, ಸಂದರ್ಭಗಳನ್ನರಿತು ಅವುಗಳಿಗೆ ಅವಿರುದ್ಧವಾಗಿ ಸಜ್ಜನರು ಹೇಳುವ ವಚನವು ಸತ್ಯವೆನಿಸುವುದು.

೨೫-೨೬. ಸಕಲ ಪ್ರಾಣಿಗಳಿಗೂ ದುಃಖವುಂಟಾಗದಂತೆ ನಡೆಯುವುದೇ ಅಹಿಂಸೆಯು. ಈ ಅಹಿಂಸೆಯು ಸಕಲೇಷ್ಟಾರ್ಥಪ್ರದವು.

**ಸರ್ವಲೋಕಹಿತತ್ವಂ ವೈ ಪ್ರೋಚ್ಯತೇ ಧರ್ಮಕೋವಿದೈಃ ।**
**ಇಚ್ಛಾನುವೃತ್ತಿಕಥನಂ ಧರ್ಮಾಧರ್ಮವಿವೇಕತಃ ॥ ೨೭ ॥**

**ಅನೃತಂ ತದ್ಧಿ ವಿಜ್ಞೇಯಂ ಸರ್ವಶ್ರೇಯೋವಿರೋಧಿ ತತ್ ।**
**ಯೇ ಲೋಕೇ ದ್ವೇಷಿಣೋ ಮೂರ್ಖಾಃ ಕುಮಾರ್ಗರತಬುದ್ಧಯಃ ॥ ೨೮ ॥**

**ತೇ ರಾಜನ್ದುರ್ಜನಾ ಜ್ಞೇಯಾಃ ಸರ್ವಧರ್ಮಬಹಿಷ್ಕೃತಾಃ ।**
**ಧರ್ಮಾಧರ್ಮವಿವೇಕೇನ ವೇದಮಾರ್ಗಾನುಸಾರಿಣಃ ॥ ೨೯ ॥**

**ಸರ್ವಲೋಕಹಿತಾಸಕ್ತಾಃ ಸಾಧವಃ ಪರಿಕೀರ್ತಿತಾಃ ।**
**ಹರಿಭಕ್ತಿಕರಂ ಯತ್ತತ್ಸದ್ಭಿಶ್ಚ ಪರಿರಂಜಿತಂ ॥ ೩೦ ॥**

**ಆತ್ಮನಃ ಪ್ರೀತಿಜನಕಂ ತತ್ಪುಣ್ಯಂ ಪರಿಕೀರ್ತಿತಂ ।**
**ಸರ್ವಂ ಜಗದಿದಂ ವಿಷ್ಣುರ್ವಿಷ್ಣುಃ ಸರ್ವಸ್ಯ ಕಾರಣಂ ॥ ೩೧ ॥**

---

೨೬–೨೭. ಧರ್ಮಕಾರ್ಯಕ್ಕೆ ಸಹಾಯಮಾಡುವುದು ಮತ್ತು ನಿಷಿದ್ಧ ವ್ಯಾಪಾರವನ್ನು ವಿರೋಧಿಸುವುದು, ಸರ್ವಲೋಕಹಿತವೆಂದು ಧರ್ಮಜ್ಞಾನಿಗಳಿಂದ ಉಕ್ತವಾಗಿದೆ.

೨೭-೨೮. ಧರ್ಮಾಧರ್ಮ ವಿವೇಕವಿಲ್ಲದೆ ಸ್ವೇಚ್ಛಾನುಸಾರ ಹೇಳುವುದು ಅನೃತವು. ಅದು ಸಕಲ ಶ್ರೇಯಸ್ಸಿಗೂ ವಿರೋಧಿಯೆಂದು ತಿಳಿಯಬೇಕು.

೨೮-೨೯. ರಾಜನೇ! ಲೋಕವಿದ್ವೇಷಿಗಳು, ಮೂರ್ಖರು, ದುರ್ಮಾರ್ಗದಲ್ಲಿಯೇ ಪ್ರವರ್ತಿಸುವ ಬುದ್ಧಿಯುಳ್ಳವರು ಮತ್ತು ಸಕಲ ಧರ್ಮಗಳನ್ನೂ ಬಿಟ್ಟಿರುವವರು ದುರ್ಜನರೆಂದು ತಿಳಿಯಬೇಕು.

೨೯–೩೦. ಧರ್ಮಾಧರ್ಮ ವಿವೇಚನೆಯಿಂದ ವೇದೋಕ್ತಮಾರ್ಗವನ್ನವಲಂಬಿಸಿರುವವರು ಮತ್ತು ಸಕಲರಿಗೂ ಅನುಕೂಲಮಾಡುವುದರಲ್ಲಿ ಆಸಕ್ತರಾಗಿರುವವರೂ ಸಾಧುಗಳೆಂದು ಉಕ್ತವಾಗಿದೆ.

೩೦-೩೧. ವಿಷ್ಣುಭಕ್ತಿಸಂಪಾದಕವೂ, ಸಜ್ಜನರಿಗೆ ಅಭಿಮತವೂ, ಪರಮಾತ್ಮನ ಪ್ರಸಾದವನ್ನು ಹುಟ್ಟಿಸುವುದೂ ಆಗಿರುವುದು ಪುಣ್ಯವೆನಿಸುವುದು.

ಅಹಂ ಚ ವಿಷ್ಣುರ್ಯದ್ಜ್ಞಾನಂ ತದ್ವಿಷ್ಣುಸ್ಮರಣಂ ವಿದುಃ ।
ಸರ್ವದೇವಮಯೋ ವಿಷ್ಣುರ್ವಿಧಿನಾ ಪೂಜಯಾಮಿ ತಂ ॥ ೩೨ ॥

ಇತಿ ಯಾ ಭವತಿ ಶ್ರದ್ಧಾ ಸಾ ಭಕ್ತಿಃ ಪರಿಕೀರ್ತಿತಾ ।
ಸರ್ವಭೂತಮಯೋ ವಿಷ್ಣುಃ ಪರಿಪೂರ್ಣಃ ಸನಾತನಃ ॥ ೩೩ ॥

ಇತ್ಯಭೇದೇನ ಯಾ ಬುದ್ಧಿಃ ಸಾ ಪೂಜಾ ಪರಿಕೀರ್ತಿತಾ ।
ಸಮತಾ ಶತ್ರುಮಿತ್ರೇಷು ವಶಿತ್ವಂ ಚ ತಥಾ ನೃಪ ॥ ೩೪ ॥

ಯದೃಚ್ಛಾಲಾಭಸಂತುಷ್ಟಿಃ ಸಾ ಶಾಂತಿಃ ಪರಿಕೀರ್ತಿತಾ ।
ಏತೇ ಸರ್ವೇ ಸಮಾಖ್ಯಾತಾಸ್ತಪಸ್ಸಿದ್ಧಿಪ್ರದಾ ನೃಣಾಂ ॥ ೩೫ ॥

ಸಮಸ್ತಪಾಪರಾಶಿನಾಂ ತರಸಾ ನಾಶಹೇತವಃ ।
ಅಷ್ಟಾಕ್ಷರಂ ಮಹಾಮಂತ್ರಂ ಸರ್ವಪಾಪಪ್ರಣಾಶನಂ ॥ ೩೬ ॥

---

೩೧–೩೨. ಈ ಸಕಲ ಜಗತ್ತೂ ವಿಷ್ಣ್ವಧೀನವು. ವಿಷ್ಣುವೇ ಜಗತ್ತಿಗೆಲ್ಲಾ ಕಾರಣನು. ಅವನು ಅಹೇಯನು ಎಂಬ ಜ್ಞಾನವೇ ವಿಷ್ಣುಸ್ಮರಣೆಯು ಎಂದು ಜ್ಞಾನಿಗಳು ತಿಳಿಯುವರು.

೩೨-೩೩. ವಿಷ್ಣುವೇ ಸರ್ವದೇವಾಂತರ್ಯಾಮಿಯು. ಅವನನ್ನು ವಿಧಿವತ್ತಾಗಿ ಪೂಜಿಸುತ್ತೇನೆಂಬ ಶ್ರದ್ಧೆಯೇ ಭಕ್ತಿಯೆಂದು ಉಕ್ತವಾಗಿದೆ.

೩೩-೩೪. ಪರಿಪೂರ್ಣನು, ಅನಾದ್ಯನಂತನೂ, ಆಗಿರುವ ವಿಷ್ಣುವು ಸಕಲ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವನು. ಆ ರೂಪವೆಲ್ಲವೂ ಅಭಿನ್ನವೆಂದು ತಿಳಿಯುವ ಮಹತ್ವಾನುಸಂಧಾನವೇ ಪೂಜೆಯು.

೩೪-೩೫. ದೊರೆಯೇ! ಭಗವಂತನೇ ಸ್ವತಂತ್ರನೆಂದರಿತು ಶತ್ರುಮಿತ್ರರನ್ನು ಸಮಾನವಾಗಿ ಕಾಣುವುದು ಮತ್ತು ಭಗವಂತನ ಇಚ್ಛೆಯಿಂದ ಲಭಿಸಿದಷ್ಟರಲ್ಲಿಯೇ ತೃಪ್ತನಾಗುವುದೂ ಸಹ ಶಾಂತಿಯೆನಿಸುವುದು.

೩೫–೩೬. ಮನುಷ್ಯರಿಗೆ ತಪಸ್ಸಿದ್ಧಿಯನ್ನುಂಟುಮಾಡುವ ಮತ್ತು ಸಕಲ ಪಾಪರಾಶಿಗಳನ್ನೂ ಬಹುಬೇಗ ನಾಶಮಾಡುವ ಸತ್ಯಾದಿಗಳ ಸ್ವರೂಪವನ್ನು ಹೇಳಿರುತ್ತೇನೆ.

ವಕ್ಷ್ಯಾಮಿ ತವ ರಾಜೇಂದ್ರ ಪುರುಷಾರ್ಥೈಕಸಾಧನಂ ।
ವಿಷ್ಣೋಃ ಪ್ರಿಯಕರಂ ಚೈವ ಸರ್ವಸಿದ್ಧಿಪ್ರದಾಯಕಂ ॥ ೩೭ ॥

ನಮೋ ನಾರಾಯಣಾಯೇತಿ ಜಪೇತ್ಪ್ರಣವಪೂರ್ವಕಂ ।
ನಮೋ ಭಗವತೇ ಪ್ರೋಚ್ಯ ವಾಸುದೇವಾಯ ತತ್ಪರಂ ॥ ೩೮ ॥

ಪ್ರಣವಾದ್ಯಂ ಮಹಾರಾಜ ದ್ವಾದಶಾರ್ಣಮುದಾಹೃತಂ ।
ದ್ವಯೋಃ ಸಮಫಲಂ ರಾಜನ್ನಷ್ಟದ್ವಾದಶವರ್ಣಯೋಃ ॥ ೩೯ ॥

ಪ್ರವೃತ್ತೌ ಚ ನಿವೃತ್ತೌ ಚ ಸಾಮ್ಯಮುದ್ದಿಷ್ಟಮೇತಯೋಃ ।
ಶಂಖಚಕ್ರಧರಂ ಶಾಂತಂ ನಾರಾಯಣಮನಾಮಯಂ ॥ ೪೦ ॥

ಲಕ್ಷ್ಮೀಸಂಶ್ರಿತವಾಮಾಂಕಂ ತಥಾऽಭಯಕರಂ ಪ್ರಭುಂ ।
ಕಿರೀಟಕುಂಡಲಧರಂ ನಾನಾಮಂಡನಶೋಭಿತಂ ॥ ೪೧ ॥

---

೩೬-೩೭. ರಾಜೇಂದ್ರನೇ! ಸರ್ವಪಾಪನಾಶಕವೂ, ಮುಕ್ತಿಗೆ ಮುಖ್ಯ ಸಾಧನವೂ, ವಿಷ್ಣುಪ್ರೀತಿಕರವೂ, ಸಕಲಸಿದ್ಧಿಪ್ರದವೂ ಆಗಿರುವ ಅಷ್ಟಾಕ್ಷರ ಮಹಾಮಂತ್ರವನ್ನು ನಿನಗೆ ಉಪದೇಶಿಸುತ್ತೇನೆ.

೩೭-೩೯. ಪ್ರಣವಮಂತ್ರಪೂರ್ವಕವಾಗಿ ನಮೋ 'ನಾರಾಯಣಾಯ' ಎಂದು ಜಪಿಸಬೇಕು. ಇದೇ ಅಷ್ಟಾಕ್ಷರಮಂತ್ರವು. ಪ್ರಣವಪೂರ್ವಕವಾದ 'ನಮೋಭಗವತೇ ವಾಸುದೇವಾಯ' ಎಂಬುದು ದ್ವಾದಶಾಕ್ಷರ ಮಂತ್ರವೆಂದು ಉಕ್ತವಾಗಿದೆ. ದೊರೆಯೇ! ಈ ಅಷ್ಟಾಕ್ಷರ, ದ್ವಾದಶಾಕ್ಷರ ಮಂತ್ರಗಳೆರಡಕ್ಕೂ ಫಲವು ಸಮಾನವು.

೪೦-೪೩. ಪ್ರವೃತ್ತಿ ಮತ್ತು ನಿವೃತ್ತಿಗಳಲ್ಲಿ ಈ ಮಂತ್ರಗಳೆರಡೂ ಸಮಾನಗಳು. ಶಂಖ ಚಕ್ರಧಾರಿಯು, ದೋಷರಹಿತನು, ಎಡತೊಡೆಯಮೇಲೆ ಲಕ್ಷ್ಮೀದೇವಿಯನ್ನು ಕೂಡಿಸಿಕೊಂಡಿರುವವನು, ಕೈಯಲ್ಲಿ ಅಭಯಚಿಹ್ನೆಯುಳ್ಳವನು, ಚತುರ್ದಶ ಲೋಕಕ್ಕೂ ಪ್ರಭುವು, ಕಿರೀಟಕುಂಡಲಗಳನ್ನು ಧರಿಸಿರುವವನು, ನಾನಾಭೂಷಣಗಳಿಂದ ಅಲಂಕೃತನು, ಪ್ರಕಾಶಮಾನವಾದ ಕೌಸ್ತುಭ

ಭ್ರಾಜತ್ಕೌಸ್ತುಭವನಮಾಲಾಢ್ಯಂ ಶ್ರೀವತ್ಸಾಂಕಿತವಕ್ಷಸಂ ।
ಪೀತಾಂಬರಧರಂ ದೇವಂ ಸುರಾಸುರನಮಸ್ಕೃತಂ ॥ ೪೨ ॥

ಧ್ಯಾಯೇದನಾದಿನಿಧನಂ ಸರ್ವಕಾಮಫಲಪ್ರದಂ ।
ಅಂತರ್ಯಾಮೀ ಜ್ಞಾನರೂಪೀ ಪರಿಪೂರ್ಣಃ ಸನಾತನಃ ॥ ೪೩ ॥

ಏತತ್ಸರ್ವಂ ಸಮಾಖ್ಯಾತಂ ಯತ್ತು ಪೃಷ್ಟಂ ತ್ವಯಾ ನೃಪ ।
ಸ್ವಸ್ತಿ ತೇಽಸ್ತು ತಪಸ್ಸಿದ್ಧಿಂ ಗಚ್ಛ ಲಬ್ಧಂ ಯಥಾಸುಖಂ ॥ ೪೪ ॥

ಏವಮುಕ್ತೋ ಮಹೀಪಾಲೋ ಭೃಗುಣಾ ಪರಮರ್ಷಿಣಾ ।
ಪರಮಾಂ ಪ್ರೀತಿಮಾಪನ್ನಃ ಪ್ರಪೇದೇ ತಪಸೇ ವನಂ ॥ ೪೫ ॥

ಹಿಮವದ್ಗಿರಿಮಾಸಾದ್ಯ ಪುಣ್ಯದೇಶೇ ಮನೋಹರೇ ।
ನಾದೇಶ್ವರೇ ಮಹಾಕ್ಷೇತ್ರೇ ತಪಸ್ತೇಪೇಽತಿದುಶ್ಚರಂ ॥ ೪೬ ॥

---

ಮಾಲೆಯನ್ನು ಧರಿಸಿರುವವನು, ವಕ್ಷಸ್ಥಳದಲ್ಲಿ ಶ್ರೀವತ್ಸಧಾರಿಯು, ಪೀತಾಂಬರಧಾರಿಯು, ದೇವದಾನವರಿಂದ ನಮಸ್ಕೃತನು, ಆದ್ಯಂತ ಶೂನ್ಯನು ಮತ್ತು ಸಕಲೇಷ್ಟಾರ್ಥಪ್ರದನೂ ಆದ ನಾರಾಯಣನನ್ನು ಧ್ಯಾನಮಾಡಬೇಕು. ಅವನು ಅಂತರ್ಯಾಮಿಯೂ, ಜ್ಞಾನರೂಪಿಯೂ, ಪರಿಪೂರ್ಣನೂ, ವೇದೈಕಗಮ್ಯನೂ ಆಗಿರುವನು.

೪೪. ರಾಜನೇ ! ನೀನು ಕೇಳಿದುದೆಲ್ಲವನ್ನೂ ಹೇಳಿರುತ್ತೇನೆ. ನಿನಗೆ ಮಂಗಳವಾಗಲಿ, ಅನಾಯಾಸವಾಗಿ ನಿನಗೆ ತಪಸ್ಸಿದ್ಧಿಯುಂಟಾಗಲಿ ಹೋಗಿಬಾ.

೪೫. ಭಗೀರಥಮಹಾರಾಜನು ಭೃಗುಮಹರ್ಷಿಗಳ ಈ ಉಪದೇಶವನ್ನು ಕೇಳಿ ಅತ್ಯಂತ ಸಂತುಷ್ಟನಾಗಿ, ತಪಸ್ಸುಮಾಡಲು ವನಕ್ಕೆ ಹೋದನು.

೪೬. ಹಿಮಾಚಲಕ್ಕೆ ಹೋಗಿ, ಅಲ್ಲಿ ಪುಣ್ಯಸ್ಥಾನವೂ, ರಮ್ಯವೂ ಆದ ನಾದೇಶ್ವರವೆಂಬ ಮಹಾಕ್ಷೇತ್ರದಲ್ಲಿ ಅತ್ಯುಗ್ರವಾದ ತಪಸ್ಸನ್ನು ಮಾಡಿದನು.

ರಾಜಾ ತ್ರಿಷವಣಸ್ನಾಯೀ ಕಂದಮೂಲಫಲಾಶನಃ ।
ಕೃತಾತಿಥ್ಯರ್ಹಣಶ್ಚಾಪಿ ನಿತ್ಯಂ ಹೋಮಪರಾಯಣಃ ॥ ೪೭ ॥

ಸರ್ವಭೂತಹಿತಃ ಶಾಂತೋ ನಾರಾಯಣಪರಾಯಣಃ ।
ಪತ್ರೈಃ ಪುಷ್ಪೈಃ ಫಲೈಸ್ತೋಯೈಸ್ತ್ರಿಕಾಲಂ ಹರಿಪೂಜಕಃ ॥ ೪೮ ॥

ಏವಂ ಬಹುತಿಥಂ ಕಾಲಂ ನೀತ್ವಾ ಚಾತ್ಯಂತಧೈರ್ಯವಾನ್ ।
ಧ್ಯಾಯನ್ನಾರಾಯಣಂ ದೇವಂ ಶೀರ್ಣಪರ್ಣಾಶನೋಽಭವತ್ ॥ ೪೯ ॥

ಪ್ರಾಣಾಯಾಮಪರೋ ಭೂತ್ವಾ ರಾಜಾ ಪರಮಧಾರ್ಮಿಕಃ ।
ನಿರುಚ್ಛ್ವಾಸಂ ತಪಸ್ತಪ್ತುಂ ತತಸ್ಸಮುಪಚಕ್ರಮೇ ॥ ೫೦ ॥

ಧ್ಯಾಯನ್ನಾರಾಯಣಂ ದೇವಮನಂತಮಪರಾಜಿತಂ ।
ಷಷ್ಟಿವರ್ಷಸಹಸ್ರಾಣಿ ನಿರುಚ್ಛ್ವಾಸಪರೋಽಭವತ್ ॥ ೫೧ ॥

---

೪೭-೪೯. ರಾಜನು ತ್ರಿಕಾಲಗಳಲ್ಲಿಯೂ ಸ್ನಾನಮಾಡಿ ಗಡ್ಡೆಗೆಣಸು, ಹಣ್ಣು ಇವುಗಳನ್ನು ಮಾತ್ರ ತಿನ್ನುತ್ತಿದ್ದನು. ಅವನು ಯಾವಾಗಲೂ ಅತಿಥಿ ಸತ್ಕಾರ ಮತ್ತು ಹೋಮಗಳಲ್ಲಿ ನಿರತನಾಗಿ ಪತ್ರ, ಪುಷ್ಪ, ಹಣ್ಣು, ಉದಕ ಇವುಗಳಿಂದ ಪ್ರಾತರ್ಮಧ್ಯಾಹ್ನಸಾಯಂಕಾಲಗಳಲ್ಲಿ ಹರಿಯನ್ನು ಪೂಜಿಸುತ್ತಾ ಬಹುದಿನಗಳನ್ನು ಕಳೆದನು. ಬಳಿಕ ಅತಿಶಯಿತ ಧೈರ್ಯವುಳ್ಳವನಾಗಿ ನಾರಾಯಣನನ್ನು ಧ್ಯಾನಿಸುತ್ತಾ ಒಣಗಿದೆಲೆಯನ್ನು ಮಾತ್ರ ತಿನ್ನುವವನಾದನು.

೫೦. ತರುವಾಯ ಪರಮ ಧಾರ್ಮಿಕನಾದ ಭಗೀರಥಮಹಾರಾಜನು ಪ್ರಾಣಾಯಾಮನಿರತನಾಗಿ ಶ್ವಾಸೋಚ್ಛ್ವಾಸವನ್ನು ತಡೆದು ತಪಸ್ಸುಮಾಡಲುಪಕ್ರಮಿಸಿದನು.

೫೧. ದೇಶಕಾಲಗುಣಾದ್ಯಪರಿಚ್ಛಿನ್ನನಾದ ವಿಜಯಶೀಲನಾದ ನಾರಾಯಣಸ್ವಾಮಿಯನ್ನು ಧ್ಯಾನಿಸುತ್ತಾ ಅರವತ್ತುಸಾವಿರವರ್ಷಕಾಲ ಉಚ್ಛ್ವಾಸ ಬಿಡದೆ ತಪಸ್ಸುಮಾಡಿದನು.

ತಸ್ಯ ನಾಸಾಪುಟಾದ್ರಾಜನ್ನೋ ವಹ್ನಿರ್ಜಜ್ಞೇ ಭಯಂಕರಃ ।
ತಂ ದೃಷ್ಟ್ವಾ ದೇವತಾಸ್ಸರ್ವೇ ವಿತ್ರಸ್ತಾ ವಹ್ನಿತಾಪಿತಾಃ ॥ ೫೨ ॥

ಅಭಿಜಗ್ಮುರ್ಮಹಾವಿಷ್ಣುಂ ಯತ್ರಾಸ್ತೇ ಜಗತಾಂ ಪತಿಃ ।
ಕ್ಷೀರೋದಧ್ಯುತ್ತರಂ ತೀರಂ ಸಂಪ್ರಾಪ್ಯ ತ್ರಿದಶೇಶ್ವರಾಃ ।
ಅಸ್ತುವನ್ದೇವದೇವೇಶಂ ಶರಣಾಗತಪಾಲಕಂ ॥ ೫೩ ॥

ದೇವಾ ಊಚುಃ

ನತಾಃ ಸ್ಮ ವಿಷ್ಣುಂ ಜಗದೇಕನಾಥಂ
ಸ್ಮರತ್ಸಮಸ್ತಾರ್ತಿಹರಂ ಪರೇಶಂ ॥ ೫೪ ॥

ಸ್ವಭಾವಶುದ್ಧಂ ಪರಿಪೂರ್ಣಭಾವಂ
ವದಂತಿ ಯದ್ಜ್ಞಾನತನುಂ ಚ ತಜ್ಜ್ಞಾಃ ।
ಧ್ಯೇಯಃ ಸದಾ ಯೋಗಿವರೈರ್ಮಹಾತ್ಮಾ
ಸ್ವೇಚ್ಛಾಶರೀರೈಃ ಕೃತದೇವಕಾರ್ಯಃ ॥ ೫೫ ॥

---

೫೨-೫೩. ಈ ಭಗೀರಥಮಹಾರಾಜನ ಮೂಗಿನ ರಂಧ್ರದಿಂದ ಭಯಂಕರವಾದ ಬೆಂಕಿಯು ಹುಟ್ಟಿತು. ಅದನ್ನು ನೋಡಿ ದೇವತೆಗಳೆಲ್ಲರೂ ಬೆಂಕಿಯಿಂದ ತಪಿಸಲ್ಪಟ್ಟು ಭೀತರಾಗಿ ಜಗದೊಡಯನಾದ ಮಹಾವಿಷ್ಣುವಿದ್ದಲ್ಲಿಗೆ ಬಂದು ಮೊರೆಹೋಕ್ಕರು. ದೇವೇಶರು ಕ್ಷೀರಾಬ್ಧಿಯ ಉತ್ತರತೀರಕ್ಕೆ ಬಂದು ಶರಣಾಗತರಕ್ಷಕನಾದ ದೇವದೇವೇಶ್ವರನನ್ನು ಸ್ತೋತ್ರಮಾಡಿದರು.

೫೪. ದೇವತೆಗಳು ಹೇಳಿದರು—ತನ್ನನ್ನು ಸ್ಮರಿಸುವವರ ಸಕಲ ದುಃಖಗಳನ್ನೂ ಪರಿಹರಿಸುವವನು, ಜಗತ್ತಿಗೆ ಮುಖ್ಯ ಸ್ವಾಮಿಯು, ದೇವೇಶನೂ ಆದ ವಿಷ್ಣುವನ್ನು ನಮಸ್ಕರಿಸುತ್ತೇವೆ.

೫೫-೫೬. ಬ್ರಹ್ಮಜ್ಞಾನಿಗಳು ಯಾವಾತನನ್ನು ನಿರ್ದೋಷಸ್ವಭಾವವುಳ್ಳವನು, ಗುಣಪರಿಪೂರ್ಣನು ಮತ್ತು ಜ್ಞಾನಾತ್ಮಕಶರೀರವುಳ್ಳವನು ಎಂದು ಹೇಳುವರೋ, ಯಾವ ಮಹಾತ್ಮನು ಸ್ವೇಚ್ಛೆಯಿಂದ ನಾನಾಶರೀರಗಳನ್ನು ಸ್ವೀಕರಿಸಿ ದೇವತೆಗಳ ಇಷ್ಟಾರ್ಥವನ್ನು ಪೂರ್ಣಗೊಳಿಸಿರುವವನೆಂದು ಸರ್ವದಾ ಯೋಗೀ

ಜಗತ್ಸ್ವರೂಪೋ ಜಗದಾದಿನಾಥ-
ಸ್ತಸ್ಮೈ ನತಾಃ ಸ್ಮ ಪುರುಷೋತ್ತಮಾಯ ।
ಯನ್ನಾಮಸಂಕೀರ್ತನತೋಽಖಿಲಾನಿ
ಸಮಸ್ತಪಾಪಾನಿ ಲಯಂ ಪ್ರಯಾಂತಿ ॥ ೫೬ ॥

ತಮೀಶಮೀಡ್ಯಂ ಪುರುಷಂ ಪುರಾಣಂ
ನತಾಃ ಸ್ಮ ವಿಷ್ಣುಂ ಪುರುಷಾರ್ಥಸಿದ್ಧ್ಯೈ ।
ಯತ್ತೇಜಸಾ ಭಾಂತಿ ದಿವಾಕರಾದ್ಯಾ
ನಾತಿಕ್ರಮಂತ್ಯಸ್ಯ ಕದಾಽಪಿ ಶಿಕ್ಷಾಃ ॥ ೫೭ ॥

ಕಾಲಾತ್ಮಕಂ ತಂ ತ್ರಿದಶಾಧಿನಾಥಂ
ನಮಾಮಹೇ ವೈ ಪುರುಷಾರ್ಥರೂಪಂ ।
ಜಗತ್ಕರೋತ್ಯಬ್ಜಭವಸ್ತ್ವಜಸ್ರಂ
ಪುನಂತಿ ಲೋಕಾನ್ ಶ್ರುತಯಶ್ಚ ವಿಪ್ರಾಃ ॥ ೫೮ ॥

---

ಶ್ವರರಿಂದ ಧ್ಯಾನಿಸಲ್ಪಡುತ್ತಿರುವನೋ, ಜಗದಂತರ್ಯಾಮಿಯು, ಜಗದಾದಿನಾಯಕನೂ ಆಗಿರುವ, ಅಂತಹ ಪುರುಷೋತ್ತಮನಿಗೆ ನಮಸ್ಕಾರಮಾಡುವೆವು.

೫೬-೫೭. ನಾಮಸಂಕೀರ್ತನೆಮಾತ್ರದಿಂದ ಸಮಸ್ತ ಪಾಪಗಳನ್ನೂ ನಾಶಪಡಿಸುವಂತಹ, ಸ್ವಾಮಿಯು, ಸ್ತುತ್ಯನು, ಪುರಾಣಪುರುಷನೂ ಆಗಿರುವ ವಿಷ್ಣುವಿಗೆ ಮೋಕ್ಷಸಿದ್ಧಿಗಾಗಿ ನಮಸ್ಕಾರಮಾಡುತ್ತೇವೆ.

೫೭-೫೮. ಯಾರ ತೇಜಸ್ಸಿನಿಂದ ಸೂರ್ಯ ಚಂದ್ರ ಮುಂತಾದವರು ಪ್ರಕಾಶನ ಶಕ್ತಿಯನ್ನು ಪಡೆದಿರುವರೋ, ಯಾರ ಶಾಸನವನ್ನು ಯಾವಾಗಲೂ ಇತರರು ಅತಿಕ್ರಮಿಸಲು ಸಾಧ್ಯವಾಗುವುದಿಲ್ಲವೋ, ಕಾಲರೂಪಿಯು, ದೇವತೆಗಳಿಗೂ ನಿಯಾಮಕನು, ಪುರುಷಾರ್ಥರೂಪನೂ ಆಗಿರುವ, ಅಂತಹ ವಿಷ್ಣುವನ್ನು ನಮಸ್ಕರಿಸುತ್ತೇವೆ.

ತಮಾದಿದೇವಂ ಗುಣಸನ್ನಿಧಾನಂ
ಯದಾಜ್ಞಯಾ ತಂ ಪ್ರಣತಾಃ ಸ್ಮ ವಿಷ್ಣುಂ ।
ವರಂ ವರೇಣ್ಯಂ ಮಧುಕೈಟಭಾರಿಂ
ಸುರಾಸುರಾಭ್ಯರ್ಚಿತಪಾದಪೀಠಂ ॥ ೫೯ ॥

ಸದ್ಭಕ್ತಸಂಕಲ್ಪಿತಸಿದ್ಧಿಹೇತುಂ
ಜ್ಞಾನೈಕವೇದ್ಯಂ ಪ್ರಣತಾಃ ಸ್ಮ ದೇವಂ ।
ಅನಾದಿಮಧ್ಯಾಂತಮಜಂ ಪರೇಶ-
ಮನಾದ್ಯವಿದ್ಯಾಖ್ಯತಮೋವಿನಾಶಂ ॥ ೬೦ ॥

ಸಚ್ಚಿತ್ಪರಾನಂದಘನಸ್ವರೂಪಂ
ರೂಪಾದಿಹೀನಂ ಪ್ರಣತಾಃ ಸ್ಮ ದೇವಂ ।
ನಾರಾಯಣಂ ವಿಷ್ಣುಮನಂತಮೀಶಂ
ಪೀತಾಂಬರಂ ಪದ್ಮಭವಾದಿಸೇವ್ಯಂ ॥ ೬೧ ॥

---

೫೮-೫೯. ಯಾರ ಆಜ್ಞೆಯಿಂದ ಬ್ರಹ್ಮನು ಯಾವಾಗಲೂ ಜಗತ್ತನ್ನು ಸೃಷ್ಟಿಸುವನೋ, ಶ್ರುತಿಗಳು ಮತ್ತು ಬ್ರಾಹ್ಮಣರೂ ಸಹ ಯಾರ ಅನುಗ್ರಹದಿಂದ ಲೋಕವನ್ನು ಪವಿತ್ರಮಾಡುವರೋ, ಅಂತಹ, ಗುಣನಿಧಿಯಾದ, ಜಗತ್ಕಾರಣ ದೇವನನ್ನು ನಮಸ್ಕರಿಸುತ್ತೇವೆ.

೫೯-೬೦. ಉತ್ತಮನು, ಉತ್ತಮೋತ್ತಮನು, ಮಧು ಕೈಟಭರೆಂಬ ದೈತ್ಯಸಂಹಾರಕನು, ದೇವದಾನವರಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನು, ಸಮೀಚೀನರಾದ ಭಕ್ತರ ಇಷ್ಟಸಿದ್ಧಿಯನ್ನುಂಟುಮಾಡುವವನು, ಕೇವಲ ಜ್ಞಾನದಿಂದಲೇ ವೇದ್ಯನೂ ಆಗಿರುವ ಕ್ರಿಡಾದಿ ಗುಣವಿಶಿಷ್ಟನಾಧ ಪರಮಾತ್ಮನನ್ನು ನಮಸ್ಕರಿಸುತ್ತೇವೆ.

೬೦-೬೧. ಆದಿ, ಮಧ್ಯ ಮತ್ತು ಅಂತ್ಯಗಳಿಲ್ಲದವನು, ಉತ್ಪತ್ತಿರಹಿತನು, ಉತ್ತಮರಾದ ದೇವತೆಗಳಿಗೂ ಸ್ವಾಮಿಯು, ಅನಾದಿಯಾದ ಅವಿದ್ಯೆಯೆಂಬ ಅಂಧಕಾರವನ್ನು ನಾಶಪಡಿಸುವವನು, ಸತ್, ಚಿತ್, ಆನಂದ ಇವುಗಳ ಪರಿಪೂರ್ಣಸ್ವರೂಪನು, ಪ್ರಾಕೃತರೂಪಾದಿ ಗುಣಶೂನ್ಯನೂ ಆಗಿರುವ ನಾರಾಯಣನನ್ನು ನಮಸ್ಕರಿಸುತ್ತೇವೆ.

ಯಜ್ಞಪ್ರಿಯಂ ಯಜ್ಞಕರಂ ವಿಶುದ್ಧಂ
ನತಾಃ ಸ್ಮ ಸರ್ವೋತ್ತಮಮವ್ಯಯಂ ತಂ
ಇತಿ ಸ್ತುತೋ ಮಹಾವಿಷ್ಣುರ್ದೇವೈರಿಂದ್ರಾದಿಭಿಸ್ತದಾ ॥ ೬೨ ॥

ಚರಿತಂ ತಸ್ಯ ರಾಜರ್ಷೇರ್ದೇವಾನಾಂ ಸಂನ್ಯವೇದಯತ್ ।
ತತೋ ದೇವಾನ್ ಸಮಾಶ್ವಾಸ್ಯ ದತ್ವಾऽಭಯಮನಂಜನಃ ॥ ೬೩ ॥

ಜಗಾಮ ಯತ್ರ ರಾಜರ್ಷಿಸ್ತಪಸ್ತಪತಿ ನಾರದ ।
ಶಂಖಚಕ್ರಧರೋ ದೇವಃ ಸಚ್ಚಿದಾನಂದವಿಗ್ರಹಃ ॥ ೬೪ ॥

ಪ್ರತ್ಯಕ್ಷತಾಮಗಾತ್ತಸ್ಯ ರಾಜ್ಞಃ ಸರ್ವಜಗದ್ಗುರುಃ ।
ತಂ ದೃಷ್ಟ್ವಾ ಪುಂಡರೀಕಾಕ್ಷಂ ಭಾಭಾಸಿತದಿಗಂತರಂ ॥ ೬೫ ॥

---

೬೧-೬೨. ವ್ಯಾಪಕನು, ನಿತ್ಯನು, ಪರಿಪೂರ್ಣನು, ಸ್ವಾಮಿಯು, ಪೀತಾಂಬರಧಾರಿಯು, ಚತುರ್ಮುಖ ಮುಂತಾದ ದೇವತೆಗಳಿಂದ ಸೇವ್ಯನು, ಯಜ್ಞಪ್ರಿಯನು, ಯಜ್ಞಾದಿ ಸಕಲ ಕರ್ಮಗಳನ್ನೂ ಸಫಲಗೊಳಿಸುವವನು, ಸರ್ವೋತ್ತಮನು, ನಾಶರಹಿತನೂ ಆಗಿರುವ ನಾರಾಯಣನನ್ನು ನಮಸ್ಕರಿಸುತ್ತೇವೆ.

೬೨-೬೩. ಇಂದ್ರಾದಿ ದೇವತೆಗಳು ಈ ರೀತಿಯಾಗಿ ಮಾಡಿದ ಸ್ತೋತ್ರವನ್ನು ಕೇಳಿ ಮಹಾವಿಷ್ಣುವು ರಾಜರ್ಷಿಯಾದ ಆ ಭಗೀರಥನ ಚರಿತ್ರೆಯನ್ನೆಲಾ ದೇವತೆಗಳಿಗೆ ಹೇಳಿದನು.

೬೩-೬೪. ನಾರದನೇ! ಅನಂತರ ದೋಷರಹಿತನಾದ ವಿಷ್ಣುವು ದೇವತೆಗಳನ್ನು ಸಮಾಧಾನಪಡಿಸಿ, ರಾಜರ್ಷಿಯಾದ ಭಗೀರಥನು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಹೋದನು.

೬೪-೬೫. ಶಂಖಚಕ್ರಗಳನ್ನು ಧರಿಸಿರುವ, ಸಚ್ಚಿದಾನಂದ ಶರೀರನು, ಸಕಲ ಜಗತ್ತಿಗೂ ಗುರುವೂ ಆದ ನಾರಾಯಣಸ್ವಾಮಿಯು ಆ ಭಗೀರಥರಾಜನಿಗೆ ಪ್ರತ್ಯಕ್ಷವಾದನು.

ಅತಸೀಪುಷ್ಪಸಂಕಾಶಂ ಸ್ಫುರತ್ಕುಂಡಲಮಂಡಿತಂ ।
ಸ್ನಿಗ್ಧಕುಂಡಲವಕ್ತ್ರಾಬ್ಜಂ ವಿಭ್ರಾಜನ್ಮುಕುಟೋಜ್ವಲಂ ॥ ೬೬ ॥

ಶ್ರೀವತ್ಸಕೌಸ್ತುಭಧರಂ ವನಮಾಲಾವಿಭೂಷಿತಂ ।
ದೀರ್ಘಬಾಹುಮುದಾರಾಂಗಂ ಲೋಕೇಶಾರ್ಚಿತಪಂಕಜಂ ॥ ೬೭ ॥

ನನಾಮ ದಂಡವದ್ಭೂಮೌ ಭೂಪತಿಃ ನಮ್ರಕಂಧರಃ ।
ಅತ್ಯಂತಹರ್ಷಸಂಪೂರ್ಣಃ ಸರೋಮಾಂಚಃ ಸಗದ್ಗದಃ ॥ ೬೮ ॥

ಕೃಷ್ಣ ಕೃಷ್ಣೇತಿ ಕೃಷ್ಣೇತಿ ಶ್ರೀಕೃಷ್ಣೇತಿ ಸಮುಚ್ಚರನ್ ।
ತಸ್ಯ ಪಿಷ್ಣುಃ ಪ್ರಸನ್ನಾತ್ಮಾ ಹ್ಯಂತರ್ಯಾಮಿ ಜಗದ್ಗುರುಃ ॥ ೬೯ ॥

ಉವಾಚ ಕೃಪಯಾವಿಷ್ಟೋ ಭಗವಾನ್ಭೂತಭಾವನಃ ಃ

ಶ್ರೀ ಭಗವಾನುವಾಚ

ಭಗೀರಥ ಮಹಾಭಾಗ ತವಾಭೀಷ್ಟಂ ಭವಿಷ್ಯತಿ ॥ ೭೦ ॥

---

೬೫-೬೯. ಭಗೀರಥರಾಜನು, ಕಮಲನೇತ್ರನು, ದಿಕ್ಕುಗಳನ್ನೆಲ್ಲಾ ಪ್ರಕಾಶಪಡಿಸುವಂತಹ ತೇಜಸ್ವಿಯು, ಅಗಸೆ ಹೂವಿನಂತೆ ಪ್ರಕಾಶಮಾನನು, ಕುಂಡಲಗಳಿಂದಲಂಕೃತನು, ನುಣುಪಾದ ಕೂದಲು ಮತ್ತು ಕಮಲದಂತಿರುವ ಮುಖ ಇವುಗಳುಳ್ಳವನು, ಹೊಳೆಯುತ್ತಿರುವ ಮುಕುಟಗಳಿಂದ ಪ್ರಕಾಶಿಸುವವನು, ಶ್ರೀವತ್ಸ ಮತ್ತು ಕೌಸ್ತುಭಗಳನ್ನು ಧರಿಸಿರುವವನು, ವನಮಾಲೆಯನ್ನು ಹಾಕಿಕೊಂಡಿರುವವನು, ಉದ್ದವಾದ ತೋಳು, ವಿಸ್ತೃತವಾದ ಅಂಗ ಇವುಗಳುಳ್ಳವನು, ಲೋಕೇಶರಾದ ಬ್ರಹ್ಮಾದಿಗಳಿಂದ ಪೂಜಿಸಲ್ಪಟ್ಟ ಚರಣಕಮಲಗಳುಳ್ಳವನೂ ಆದ ಭಗವಂತನನ್ನು ನೋಡಿ, ಅತ್ಯಂತ ಹರ್ಷಭರಿತನು, ರೋಮಾಂಚ ಮತ್ತು ಗದ್ಗದಸ್ವರಯುಕ್ತನೂ ಆಗಿ, ಕೃಷ್ಣ, ಕೃಷ್ಣ, ಕೃಷ್ಣ, ಶ್ರೀಕೃಷ್ಣ ಎಂಬುದಾಗಿ ಕೂಗುತ್ತಾ ಭೂಮಿಯಲ್ಲಿ ಬಗ್ಗಿ ಸಾಷ್ಟಾಂಗ ನಮಸ್ಕಾರ ಮಾಡಿದನು.

೬೯-೭೦. ಅಂತರ್ಯಾಮಿಯು, ಜಗದ್ಗುರುವು, ಸಕಲ ಪ್ರಾಣಿ ಪೋಷಕನೂ ಆದ ಭಗವಂತನು ಭಗೀರಥರಾಜನಿಗೆ ದಯೆಯಿಂದ ಪ್ರಸನ್ನನಾಗಿ ಧನ್ಯ

ಆಗಮಿಷ್ಯಂತಿ ಮಲ್ಲೋಕಂ ತವ ಪೂರ್ವಪಿತಾಮಹಾಃ ।
ಮಮ ಮೂರ್ತ್ಯಂತರಂ ಶಂಭುಂ ರಾಜನ್ ಸ್ತೋತ್ರೈಃ ಸ್ವಶಕ್ತಿತಃ ॥ ೭೧ ॥

ಸ್ತುಹಿ ತೇ ಸಕಲಂ ಕಾಮಂ ಸ ವೈ ಸದ್ಯಃ ಕರಿಷ್ಯತಿ ।
ಯಸ್ತು ಜಗ್ರಾಹ ಶಶಿನಂ ಶರಣಂ ಸಮುಪಾಗತಂ ॥ ೭೨ ॥

ತಸ್ಮಾದಾರಾಧಯೇಶಾನಂ ಸ್ತೋತ್ರೈಃ ಸ್ತುತ್ಯಂ ಸುಖಪ್ರದಂ ।
ಅನಾದಿನಿಧನೋ ದೇವಃ ಸರ್ವಕಾಮಫಲಪ್ರದಃ ॥ ೭೩ ॥

ತ್ವಯಾ ಸಂಪೂಜಿತೋ ರಾಜನ್ ಸದ್ಯಃ ಶ್ರೇಯೋ ವಿಧಾಸ್ಯತಿ ।
ಇತ್ಯುಕ್ತ್ವಾ ದೇವದೇವೇಶೋ ಜಗತಾಂ ಪತಿರಚ್ಯುತಃ ॥ ೭೪ ॥

ಅಂತರ್ದಧೇ ಮುನಿಶ್ರೇಷ್ಠ ಉತ್ತಸ್ಥೌ ಸೋಽಪಿ ಭೂಪತಿಃ ।
ಕಿಮಿದಂ ಸ್ವಪ್ನ ಆಹೋಸ್ವಿತ್ಸತ್ಯಂ ಸಾಕ್ಷಾದ್ದ್ವಿಜೋತ್ತಮ ॥ ೭೫ ॥

---

ನಾದ ಭಗೀರಥನೇ! ನಿನ್ನ ಇಷ್ಟಾರ್ಥವು ನೆರವೇರುತ್ತದೆ ಎಂದು ಮುಂತಾಗಿ ಮಾತನಾಡಿದನು.

೭೧-೭೨. ರಾಜನೇ! ನಿನ್ನ ಪೂರ್ವಜರಾದ ಪಿತಾಮಹರು ನನ್ನ ಲೋಕಕ್ಕೆ ಬರುತ್ತಾರೆ. ಶಂಭುವು ನಾನು ಸನ್ನಿಹಿತನಾಗಿರುವ ಬೇರೆ ಮೂರ್ತಿಯು, ನೀನು ಆ ಶಂಭುವನ್ನು ನಿನ್ನ ಶಕ್ತ್ಯನುಸಾರ ಸ್ತೋತ್ರಗಳಿಂದ ಪ್ರಶಂಸಿಸು, ಆ ಶಂಭುದೇವನು ನಿನ್ನ ಸಕಲ ಇಷ್ಟಾರ್ಥಗಳನ್ನು ಸದ್ಯದಲ್ಲಿಯೇ ನೆರವೇರಿಸುವನು.

೭೨-೭೩. ಆದುದರಿಂದ ಶರಣಾಗತನಾದ ಚಂದ್ರನನ್ನು ಸ್ವೀಕರಿಸಿ ಕಾಪಾಡಿದ, ಸ್ತೋತ್ರಪಾಠಗಳಿಂದ ಸ್ತುತ್ಯನಾದ, ಸುಖಪ್ರದನಾದ ಈಶ್ವರನನ್ನು ಪೂಜಿಸು.

೭೩-೭೫. ಆದ್ಯಂತಶೂನ್ಯನು, ಸಕಲೇಷ್ಟಾರ್ಥಪ್ರದನೂ ಆಗಿರುವ ಈಶ್ವರನನ್ನು ನೀನು ಪೂಜಿಸಿದರೆ ಆತನು ಕೂಡಲೇ ಶ್ರೇಯಸ್ಸನ್ನು ಕೊಡುವನು ಎಂಬುದಾಗಿ ಹೇಳಿ ದೇವದೇವೇಶನೂ ಜಗದೊಡೆಯನೂ ಆದ ನಾರಾಯಣನು ಅಂತರ್ಧಾನವನ್ನು ಹೊಂದಿದನು. ಮುನಿವರ್ಯನೇ! ರಾಜನೂ ಸಹ ಕೂಡಲೇ ಎಚ್ಚತ್ತನು.

ಭೂಪತಿರ್ವಿಸ್ಮಯಂ ಪ್ರಾಪ್ತಃ ಕಿಂ ಕರೋಮೀತಿ ವಿಸ್ಮಿತಃ ।
ಅಥಾಂತರಿಕ್ಷೇ ವಾಗುಚ್ಚೈಃ ಪ್ರಾಹ ತಂ ಭ್ರಾಂತಚೇತಸಂ ॥ ೭೬ ॥

ಸತ್ಯಮೇತದಿತಿ ವ್ಯಕ್ತಂ ನ ಚಿಂತಾಂ ಕರ್ತುಮರ್ಹಸಿ ।
ತಚ್ಛ್ರುತ್ವಾವನೀಪಾಲ ಈಶಾನಂ ಸರ್ವಕಾರಣಂ ॥ ೭೭ ॥

ಸಮಸ್ತದೇವತಾರಾಜಮಸ್ತೌಷೀದ್ಭಕ್ತಿತತ್ಪರಃ ।
ಭಗೀರಥ ಉವಾಚ
ಪ್ರಣಮಾಮಿ ಜಗನ್ನಾಥಂ ಪ್ರಣತಾರ್ತಿಪ್ರಣಾಶನಂ ॥ ೭೮ ॥

ಪ್ರಮಾಣಗೋಚರಂ ದೇವಮೀಶಾನಂ ಪ್ರಣವಾತ್ಮಕಂ ।
ಜಗದ್ರೂಪಮಜಂ ನಿತ್ಯಂ ಸರ್ಗಸ್ಥಿತ್ಯಂತಕಾರಣಂ ॥ ೭೯ ॥

ವಿಶ್ವರೂಪಂ ವಿರೂಪಾಕ್ಷಂ ಪ್ರಣತೋಽಸ್ಮ್ಯೂರ್ಧ್ವರೇತಸಂ ।
ಆದಿಮಧ್ಯಾಂತರಹಿತಮನಂತಮಜಮವ್ಯಯಂ ॥ ೮೦ ॥

---

೭೫–೭೬. ದ್ವಿಜೋತ್ತಮನೇ! ಭಗೀರಥಭೂಪಾಲನು ಇದು ಸ್ವಪ್ನವೋ ಅಥವಾ ನಿಜವೋ ಎಂಬುದಾಗಿ ಸಂಶಯಪಟ್ಟು ಏನು ಮಾಡಬೇಕೆಂದು ಆಶ್ಚರ್ಯ ಚಕಿತನಾದನು.

೭೬–೭೮. ಕೂಡಲೇ ಭ್ರಾಂತಮನಸ್ಕನಾದ ಆ ರಾಜನಿಗೆ ಅಂತರಿಕ್ಷದಲ್ಲಿ "ಇದು ಸತ್ಯವಾದುದು ಆಲೋಚಿಸಬೇಡ'' ಎಂಬುದಾಗಿ ಅಶರೀರವಾಣಿಯು ಸ್ಪಷ್ಟವಾಗಿ ಕೇಳಿಸಿತು. ಅದನ್ನು ಕೇಳಿ ಭೂಪಾಲನು ಸರ್ವಕಾರಣನೂ ಸಕಲದೇವರಾಜನೂ ಆದ ಈಶ್ವರನನ್ನು ಭಕ್ತಿನಿಷ್ಠೆಯಿಂದಸ್ತೋತ್ರಮಾಡಿದನು.

೭೮-೭೯. ಭಗೀರಥನು ಮಾತನಾಡಿದನು—ಜಗದೊಡೆಯನು, ಶರಣಾಗತ ಭಕ್ತರ ದುಃಖಪರಿಹಾರಕನು, ಪ್ರಮಾಣಕ್ಕೆ ಗೋಚರನು, ಪ್ರಣವಾತ್ಮಕನೂ ಆಗಿರುವ ಈಶಾನದೇವನನ್ನು ನಮಸ್ಕರಿಸುತ್ತೇನೆ.

೭೯-೮೦. ಜಗದ್ವ್ಯಾಪಿಯು, ನಿತ್ಯನು, ಸೃಷ್ಟಿಸ್ಥಿತಿಸಂಹಾರಕಾರಣನು, ವಿಶ್ವರೂಪನು, ಬ್ರಹ್ಮಚರ್ಯವ್ರತನಿಷ್ಠನೂ ಆಗಿರುವ ವಿರೂಪಾಕ್ಷಸ್ವಾಮಿಯನ್ನು ನಮಸ್ಕರಿಸುತ್ತೇನೆ.

ಸಮಾನಯಂತಿ ಯೋಗೀಂದ್ರಾಸ್ತಂ ವಂದೇ ಪುಷ್ಟಿವರ್ಧನಂ ।
ಸಮೋ ಲೋಕಾಧಿನಾಥಾಯ ರಕ್ಷತೇ ಪರಿರಕ್ಷತೇ ॥ ೮೧ ॥

ನಮೋಽಸ್ತು ನೀಲಗ್ರೀವಾಯ ಪಶೂನಾಂ ಪತಯೇ ನಮಃ ।
ನಮಶ್ಚೈತನ್ಯರೂಪಾಯ ಪುಷ್ಪಾನಾಂ ಪತಯೇ ನಮಃ ॥ ೮೨ ॥

ನಮಃ ಕಲ್ಪಪ್ರಕಲ್ಪಾಯ ಭೂತಾನಾಂ ಪತಯೇ ನಮಃ ।
ನಮಃ ಪಿನಾಕಹಸ್ತಾಯ ಶೂಲಹಸ್ತಾಯ ತೇ ನಮಃ ॥ ೮೩ ॥

ನಮಃ ಕಪಾಲಹಸ್ತಾಯ ಪಾಶಮುದ್ಗರಧಾರಿಣೇ ।
ನಮಸ್ತೇ ಸರ್ವಭೂತಾಯ ಘಂಟಾಹಸ್ತಾಯ ತೇ ನಮಃ ॥ ೮೪ ॥

ನಮಃ ಪಂಚಾಸ್ಯದೇವಾಯ ಕ್ಷೇತ್ರಾಣಾಂ ಪತಯೇ ನಮಃ ।
ನಮಃ ಸಮಸ್ತಭೂತಾನಾ ಮಾದಿಭೂತಾಯ ಭೂಭೃತೇ ॥ ೮೫ ॥

---

೮೦-೮೧. ಆದಿ, ಮಧ್ಯ, ಅಂತ ಇವುಗಳಿಲ್ಲದವನು, ಅಪರಿಚ್ಛಿನ್ನನು, ಉತ್ಪತ್ತಿರಹಿತನು, ನಾಶರಹಿತನೂ ಎಂಬುದಾಗಿ ಯೋಗಿವರ್ಯರು ಯಾರನ್ನು ತಿಳಿಯುವರೋ ಅಂತಹ, ಪುಷ್ಟಿವರ್ಧನನಾಮಕನಾದ, ಈಶನನ್ನು ನಮಸ್ಕರಿಸುತ್ತೇನೆ. ಲೋಕಸ್ವಾಮಿಯೂ, ಸಾಮಾನ್ಯವಿಶೇಷಾಕಾರವಾಗಿ ಜಗತ್ತಿಗೆ ರಕ್ಷಕನೂ ಆಗಿರುವ ಈಶ್ವರನಿಗೆ ನಮಸ್ಕಾರ.

೮೨. ನೀಲಕಂಠನಿಗೆ ನಮಸ್ಕಾರ, ಪಶುಪತಿಗೆ ನಮಸ್ಕಾರ, ಚೈತನ್ಯಸ್ವರೂಪನಿಗೆ ನಮಸ್ಕಾರ, ಪುಷ್ಪರಸ್ವಾಮಿಗೆ ನಮಸ್ಕಾರ.

೮೩. ಕಲ್ಪಪ್ರಕಲ್ಪನಿಯಾಮಕನಿಗೆ ನಮಸ್ಕಾರ, ಭೂತಪತಿಗೆ ನಮಸ್ಕಾರ, ಹಸ್ತದಲ್ಲಿ ಪಿನಾಕವನ್ನು ಧರಿಸಿದವನಿಗೆ ನಮಸ್ಕಾರ, ಕೈಯ್ಯಲ್ಲಿ ಶೂಲವನ್ನಿಟ್ಟುಕೊಂಡಿರವವನಿಗೆ ನಮಸ್ಕಾರ.

೮೪. ಕೈಯಲ್ಲಿ ಕಪಾಲವನ್ನು ಹಿಡಿದಿರುವವನಿಗೆ ನಮಸ್ಕಾರ, ಸಕಲಭೂತನಿಯಾಮಕನಿಗೆ ನಮಸ್ಕಾರ, ಹಸ್ತದಲ್ಲಿ ಘಂಟೆಪಿಡಿದಿರುವಗೆ ನಮಸ್ಕಾರ.

೮೫. ಐದು ಮುಖಗಳುಳ್ಳ ದೇವನಿಗೆ ನಮಸ್ಕಾರ, ಕ್ಷೇತ್ರಪತಿಗೆ ನಮಸ್ಕಾರ, ಸಮಸ್ತ ಭೂತಗಳಿಗೂ ಮೂಲಭೂತನಾಗಿ ಭೂಮಿಯನ್ನು ಭರಿಸುವವನಿಗೆ ನಮಸ್ಕಾರ.

ಅನೇಕರೂಪರೂಪಾಯ ನಿರ್ಗುಣಾಯ ಪರಾತ್ಮನೇ ।
ನಮೋ ಗಣಾಧಿದೇವಾಯ ಗಣಾನಾಂ ಪತಯೇ ನಮಃ ॥ ೮೬ ॥

ನಮೋ ಹಿರಣ್ಯಗರ್ಭಾಯ ಹಿರಣ್ಯಪತಯೇ ನಮಃ ।
ಹಿರಣ್ಯರೇತಸೇ ತುಭ್ಯಂ ನಮೋ ಹಿರಣ್ಯಬಾಹವೇ ॥ ೮೭ ॥

ನಮಸ್ತೇ ಧ್ಯಾನರೂಪಾಯ ನಮಸ್ತೇ ಧ್ಯಾನಸಾಕ್ಷಿಣೇ ।
ನಮಸ್ತೇ ಧ್ಯಾನಸಂಸ್ಥಾಯ ಧ್ಯಾನಗಮ್ಯಾಯ ತೇ ನಮಃ ॥ ೮೮ ॥

ಯೇನೇದಂ ವಿಶ್ವಮಖಿಲಂ ಚರಾಚರವಿರಾಜಿತಂ ।
ಪ್ರಧಾನಂ ಪುರುಷಶ್ಚೈವ ಅಭ್ರಾದ್ವೃಷ್ಟಿರಿವಾಜನಿ ॥ ೮೯ ॥

ಸ್ವಪ್ರಕಾಶಂ ಮಹಾತ್ಮಾನಂ ಪರಂ ಜ್ಯೋತಿಃ ಸನಾತನಂ ।
ಯಮಾಮನಂತಿ ತತ್ವಜ್ಞಾಃ ಸವಿತಾರಂ ನೃಚಕ್ಷುಷಾಂ ॥ ೯೦ ॥

---

೮೬-೮೭. ಅನೇಕವಿಧ ರೂಪಗಳನ್ನುತಾಳಿರುವ, ನಿರ್ಗುಣನಾದ, ಶ್ರೇಷ್ಠ ನಾದ ಗಣಾಧಿದೇವನಿಗೆ ನಮಸ್ಕಾರ, ಗಣಪತಿಗೆ ನಮಸ್ಕಾರ, ಗರ್ಭದಲ್ಲಿ ಹಿರಣ್ಯ ವುಳ್ಳವನಿಗೆ ನಮಸ್ಕಾರ, ಹಿರಣ್ಯಸ್ವಾಮಿಗೆ ನಮಸ್ಕಾರ, ಹಿರಣ್ಯರೇತಸ್ಕನಿಗೆ ನಮಸ್ಕಾರ, ಹಿರಣ್ಯಮಯಭಾಹುಗಳುಳ್ಳ ನಿನಗೆ ನಮಸ್ಕಾರ.

೮೮. ಧ್ಯಾನರೂಪನಿಗೆ ನಮಸ್ಕಾರ, ಧ್ಯಾನಸಾಕ್ಷಿಯಾದ ನಿನಗೆ ನಮ ಸ್ಕಾರ, ಧ್ಯಾನದಲ್ಲಿರುವವನಿಗೆ ನಮಸ್ಕಾರ, ಧ್ಯಾನದಿಂದ ಹೊಂದಲರ್ಹನಾದವ ನಿಗೆ ನಮಸ್ಕಾರ.

೮೯-೯೩. ಚರಾಚರಾತ್ಮಕವಾದ ಈ ಸಕಲ ಪ್ರಪಂಚವೂ, ಪ್ರಕೃತಿ ಪುರುಷರೂ ಸಹ ಮೇಘದಿಂದ ವೃಷ್ಟಿಯು ಹುಟ್ಟವಂತೆ ಯಾರಿಂದ ಉದ್ಭವಿ ಸಿದವೋ, ತತ್ವಜ್ಞಾನಿಗಳು ಯಾರನ್ನು ಸ್ವಪ್ರಕಾಶನು, ಉತ್ಕೃಷ್ಟಜ್ಯೋತಿಯು, ಅನಾದಿಯು ಮತ್ತು ಮನುಷ್ಯನೇತ್ರಗಳಿಗೆ ಸೂರ್ಯಪ್ರಾಯನು ಎಂದು ತಿಳಿ ಯುವರೋ ಅಂತಹ, ಪಾರ್ವತೀಪತಿಯು, ನಂದಿಕೇಶ್ವರನು, ನೀಲಗ್ರೀವನು,

ಉಮಾಕಾಂತಂ ನಂದಿಕೇಶಂ ನೀಲಕಂಠಂ ಸದಾಶಿವಂ ।
ಮೃತ್ಯುಂಜಯಂ ಮಹಾದೇವಂ ಪರಾತ್ಪರತರಂ ವಿಭುಂ ॥ ೯೧ ॥

ಪರಂ ಶಾಂತಂ ಬ್ರಹ್ಮರೂಪಂ ತಂ ವಂದೇಽಖಿಲಕಾರಣಂ ।
ಕಪರ್ದಿನೇ ನಮಸ್ತುಭ್ಯಂ ನೀಲಗ್ರೀವಾಯ ತೇ ನಮಃ ॥ ೯೨ ॥

ಭವೋದ್ಭವಾಯ ಶುದ್ಧಾಯ ಜ್ಯೇಷ್ಠಾಯ ಚ ಕನೀಯಸೇ ।
ಮನ್ಯವೇ ತ ಇಷೇ ತ್ರಯೀಪತಯೇ ಯಜ್ಞತಂತವೇ ॥ ೯೩ ॥

ಊರ್ಜೇ ದಿಶಾಂ ಚ ಪತಯೇ ಕಾಲಾಯಾಘೋರರೂಪಿಣೇ ।
ಕೃಶಾನುರೇತಸೇ ತುಭ್ಯಂ ನಮೋಽಸ್ತು ಸುಮಹಾತ್ಮನೇ ॥ ೯೪ ॥

ಯತಃ ಸಮುದ್ರಾಃ ಸರಿತೋದ್ರಯಶ್ಚ
ಗಂಧರ್ವಯಕ್ಷಾಸುರಸಿದ್ಧಸಂಘಾಃ ।
ಸ್ಥಾಣುಶ್ಚರಿಷ್ಣುರ್ಮಹದಲ್ಪಕಂ ಚ
ಸ ನೋಽಸ್ತು ದೇವಶ್ಚ ಶುಭಪ್ರದಶ್ಚ ॥ ೯೫ ॥

---

ಸದಾಶಿವನಾಮಕನು, ಮೃತ್ಯುಂಜಯನು, ಉತ್ತಮೋತ್ತಮನು, ಸಮರ್ಥನು, ಉತ್ತಮನು, ಶಾಂತನು, ಬ್ರಹ್ಮರೂಪನು, ಎಲ್ಲಕ್ಕೂ ಕಾರಣನೂ ಆದ ಮಹಾದೇವನನ್ನು ನಮಸ್ಕರಿಸುತ್ತೇನೆ. ಕಪರ್ದಿಯಾದ ನಿನಗೆ ನಮಸ್ಕಾರ, ನೀಲಕಂಠನಾದ ನಿನಗೆ ನಮಸ್ಕಾರ.

೯೩–೯೪. ಸಂಸಾರೋತ್ಪಾದಕನು, ಶುದ್ಧನು, ಜೇಷ್ಠ ಮತ್ತು ಕನಿಷ್ಠನು, ಮನ್ಯುನಿಯಾಮಕನು, ಇಚ್ಛಾರೂಪಿಯು, ವೇದಸ್ವಾಮಿಯು, ಯಜ್ಞನಿಯಾಮಕನು, ದಿಕ್ಪಾಲಕನು, ಕಾಲರೂಪಿಯು, ಸೌಮ್ಯಸ್ವರೂಪವುಳ್ಳವನು, ಅಗ್ನಿರೇತಸ್ಕನು, ಮತ್ತು ಮಹಾತ್ಮನೂ ಆಗಿರುವ ನಿನಗೆ ನಮಸ್ಕಾರ.

೯೫. ಸಮುದ್ರ, ನದಿ, ಪರ್ವತ, ಗಂಧರ್ವ, ಯಕ್ಷ, ರಾಕ್ಷಸ, ಸಿದ್ಧಗಣ ಸ್ಥಾವರವಸ್ತು, ಚರವಸ್ತು, ದೊಡ್ಡದು, ಚಿಕ್ಕದು ಇವೆಲ್ಲವೂ ಯಾರಿಂದ ಯಥಾಯೋಗ್ಯವಾಗಿ ಸೃಷ್ಟವಾಯಿತೋ ಅಂತಹ, ಶುಭಪ್ರದನಾದ, ದೇವನಿಗೆ ನಮಸ್ಕಾರ.

ನತೋಽಸ್ಮಿ ತಂ ಯೋಗಿನತಾಂಘ್ರಿಪದ್ಮಂ
ಸರ್ವಾಂತರಾತ್ಮಾನಮರೂಪಮೀಶಂ ।
ಸ್ವತಂತ್ರಮೇಕಂ ಗುಣಿನಂ ಗುಣಂ ಚ
ನಮಾಮಿ ಭೂಯಃ ಪ್ರಣಮಾಮಿ ಭೂಯಃ ॥ ೯೬ ॥

ಇತ್ಥಂ ಸ್ತುತೋ ಮಹಾದೇವಃ ಶಂಕರೋ ಲೋಕಶಂಕರಃ ।
ಆವಿರ್ಬಭೂವ ಭೂಪಸ್ಯ ಸಂತಪ್ತತಪಸೋಽಗ್ರತಃ ॥ ೯೭ ॥

ಪಂಚವಕ್ತ್ರಂ ದಶಭುಜಂ ಚಂದ್ರಾರ್ಧಕೃತಶೇಖರಂ ।
ತ್ರಿಲೋಚನಮುದಾರಾಂಗಂ ನಾಗಯಜ್ಞೋಪವೀತಿನಂ ॥ ೯೮ ॥

ವಿಶಾಲವಕ್ಷಸಂ ದೇವಂ ತುಹಿನಾದ್ರಿಸಮಂ ಪ್ರಭುಂ ।
ಗಜಚರ್ಮಾಂಬರಧರಂ ಸುರಾರ್ಚಿತಪದಾಂಬುಜಂ ॥ ೯೯ ॥

ದೃಷ್ಟ್ವಾ ಪಪಾತ ಪಾದಾಗ್ರೇ ದಂಡವದ್ಭುವಿ ನಾರದ ।
ತತ ಉತ್ಥಾಯ ಸಹಸಾ ಶಿವಾಗ್ರೇ ವಿಹಿತಾಂಜಲಿಃ ॥ ೧೦೦ ॥

---

೯೬. ಯೋಗಿಗಗಳಿಂದ ನಮಸ್ಕರಿಸಲ್ಪಟ್ಟ ಪಾದಪದ್ಮಗಳುಳ್ಳ, ಸರ್ವಾಂತರ್ಗತನಾದ, ಅರೂಪನಾದ, ಈಶ್ವರನನ್ನು ನಮಸ್ಕರಿಸುತ್ತೇನೆ. ಸ್ವತಂತ್ರನು ಮುಖ್ಯನು, ಗುಣಿ ಮತ್ತು ಗುಣ ಸ್ವರೂಪನೂ ಆದ ಈಶ್ವರನನ್ನು ಪುನಃಪುನಃ ನಮಿಸುತ್ತೇನೆ.

೯೭. ಈ ರೀತಿಯಾಗಿ ಮಾಡಿದ ಸ್ತೋತ್ರವನ್ನು ಕೇಳಿ ಆನಂದಪ್ರದನು, ಲೋಕಕ್ಕೆಲ್ಲಾ ಸುಖಕರನೂ ಆಗಿರುವ ಮಹಾದೇವನು ತಪಸ್ಸಿನಿಂದ ತಪಿಸಲ್ಪಡುತ್ತಿರುವ ಭಗೀರಥರಾಜನ ಎದುರಿಗೆ ಆವಿರ್ಭವಿಸಿದನು.

೯೮-೧೦೦. ಐದು ಮುಖಗಳು, ಹತ್ತು ಭುಜಗಳೂ ಉಳ್ಳ, ಅರ್ಧಚಂದ್ರನನ್ನು ಜಟೆಯಲ್ಲಿ ಧರಿಸಿರುವ, ಮೂರು ಕಣ್ಣುಗಳುಳ್ಳ, ವಿಸ್ತೃತಾವಯವವುಳ್ಳ, ಯಜ್ಞೋಪವೀತದಂತೆ ಸರ್ಪವನ್ನು ಧರಿಸಿರುವ, ವಿಶಾಲವಾದ ವಕ್ಷಸ್ಥಳವುಳ್ಳ, ಹಿಮಾಚಲಕ್ಕೆ ಸದೃಶವಾದ ಕಾಂತಿಯುಳ್ಳ, ಆನೆಯ ಚರ್ಮವನ್ನು ಧರಿಸಿರುವ, ದೇವತೆಗಳಿಂದ ಅರ್ಚಿಸಲ್ಪಟ್ಟ ಪಾದಪದ್ಮವುಳ್ಳ- ಪ್ರತ್ಯಕ್ಷನಾದ ದೇವನನ್ನು ರಾಜನು ನೋಡಿ ಅವನ ಪಾದದಮೇಲೆ ಬಿದ್ದನು.

**ಪ್ರಣನಾಮ ಮಹಾದೇವಂ ಕೀರ್ತಯನ್ ಶಂಕರಾಹ್ವಯಂ ।**
**ವಿಜ್ಞಾಯ ಭಕ್ತಿಂ ಭೂಪಸ್ಯ ಶಂಕರಃ ಶಶಿಶೇಖರಃ ॥ ೧೦೧ ॥**

**ಉವಾಚ ರಾಜ್ಞೇ ತುಷ್ಟೋಽಸ್ಮಿ ವರಂ ವರಯ ವಾಂಛಿತಂ ।**
**ತೋಷಿತೋಽಸ್ಮಿ ತ್ವಯಾ ಸಮ್ಯಕ್ ಸ್ತೋತ್ರೇಣ ತಪಸಾ ತಥಾ ॥ ೧೦೨ ॥**

**ಏವಮುಕ್ತಃ ಸ ದೇವೇನ ರಾಜಾ ಸಂತುಷ್ಟಮಾನಸಃ ।**
**ಉವಾಚ ಪ್ರಾಂಜಲಿರ್ಭೂತ್ವಾ ಜಗತಾಮೀಶ್ವರೇಶ್ವರಂ ॥ ೧೦೩ ॥**

**ಭಗೀರಥ ಉವಾಚ**

**ಅನುಗ್ರಾಹ್ಯೋಽಸ್ಮಿ ಯದಿ ತೇ ವರದಾನಾನ್ಮಹೇಶ್ವರ ।**
**ತದಾ ಗಂಗಾಂ ಪ್ರಯಚ್ಛಾಸ್ಮತ್ಪಿತ್ೄಣಾಂ ಮುಕ್ತಿಹೇತವೇ ॥ ೧೦೪ ॥**

---

೧೦೦-೧೦೧. ತಕ್ಷಣವೇ ಎದ್ದು ಈಶ್ವರನ ಮುಂದೆ ನಿಂತು ಕೈಮುಗಿದುಕೊಂಡು ಶಂಕರನಾಮವನ್ನು ಕೀರ್ತನೆ ಮಾಡುತ್ತಾ ಮಹಾದೇವನಿಗೆ ನಮಸ್ಕಾರ ಮಾಡಿದನು.

೧೦೧-೧೦೨. ಶಿಖೆಯಲ್ಲಿ ಚಂದ್ರನನ್ನು ಧರಿಸಿರುವ ಶಂಕರನು ರಾಜನ ಭಕ್ತಿಗೆ ಮೆಚ್ಚಿ ನೀನು ಆಚರಿಸಿದ ತಪಸ್ಸು, ಸ್ತೋತ್ರಪಾಠ ಇವುಗಳಿಂದ ಸಂತೋಷಪಟ್ಟು ನಿನಗೆ ಪ್ರಸನ್ನನಾಗಿದ್ದೇನೆ; ನಿನಗೆ ಇಷ್ಟವಾದ ವರವನ್ನು ಕೇಳು ಎಂದು ಹೇಳಿದನು.

೧೦೩. ಈರೀತಿ ಶಂಕರದೇವನು ಹೇಳಿದ ಮಾತನ್ನು ಕೇಳಿ ರಾಜನು ಸಂತೋಷಚಿತ್ತನಾಗಿ ಕೈಮುಗಿದುಕೊಂಡು ಜಗದೀಶ್ವರರಿಗೂ ನಿಯಾಮಕನಾದ ಶಂಕರದೇವನನ್ನು ಕುರಿತು ಮಾತನಾಡಿದನು.

೧೦೪. ಭಗೀರಥನು ಮಾತನಾಡಿದನು—ಮಹೇಶ್ವರನೇ! ವರಪ್ರದಾನ ಮಾಡಿ ನನ್ನಲ್ಲಿ ಅನುಗ್ರಹಮಾಡಬೇಕೆಂದು ನಿನ್ನ ಚಿತ್ತಕ್ಕೆ ಬಂದಿದ್ದರೆ ನಮ್ಮ ಪಿತೃಗಳಿಗೆ ಮುಕ್ತಿಪ್ರದವಾದ ಗಂಗೆಯನ್ನು ಕೊಟ್ಟು ಅನುಗ್ರಹಿಸು.

## ಶ್ರೀಶಿವ ಉವಾಚ

ದತ್ತಾ ಗಂಗಾ ಮಯಾ ತುಭ್ಯಂ ಪಿತೄಣಾಂ ತೇ ಗತಿಃ ಪರಾ ।
ತುಭ್ಯಂ ಮೋಕ್ಷಃ ಪರಶ್ಚೇತಿ ತಮುಕ್ತ್ವಾಂತರ್ದಧೇ ಶಿವಃ ॥ ೧೦೫ ॥

ಕಪರ್ಧಿನೋ ಜಟಾಸ್ರಸ್ತಾ ಗಂಗಾ ಲೋಕೈಕಪಾವನೀ ।
ಪಾವಯಂತೀ ಜಗತ್ಸರ್ವಮನ್ವಗಚ್ಛದ್ಭಗೀರಥಂ ॥ ೧೦೬ ॥

ತತಃ ಪ್ರಭೃತಿ ಸಾ ದೇವೀ ನಿರ್ಮಲಾ ಮಲಹಾರಿಣೀ ।
ಭಾಗೀರಥೀತಿ ವಿಖ್ಯಾತಾ ತ್ರಿಷು ಲೋಕೇಷ್ವಭೂನ್ಮುನೇ ॥ ೧೦೭ ॥

ಸಗರಸ್ಯಾತ್ಮಜಾಃ ಪೂರ್ವಂ ಯತ್ರ ದಗ್ಧಾಃ ಸ್ವಪಾಪ್ಮನಾ ।
ತಂ ದೇಶಂ ಪ್ಲಾವಯಾಮಾಸ ಗಂಗಾ ಸರ್ವಸರಿದ್ವರಾ ॥ ೧೦೮ ॥

ಯದಾ ಸಂಪ್ಲಾವಿತಂ ಭಸ್ಮ ಸಾಗರಾಣಾಂ ತು ಗಂಗಯಾ ।
ತದೈವ ನರಕೇ ಮಗ್ನಾ ಉದ್ಧೃತಾಶ್ಚ ಗತೈನಸಃ ॥ ೧೦೯ ॥

---

೧೦೫. ಈಶ್ವರನು ಮಾತನಾಡಿದನು—ರಾಜನೇ! ನಿನಗೆ ಗಂಗೆಯನ್ನು ಕೊಟ್ಟೆನು, ನಿನ್ನ ಪಿತೃಗಳಿಗೆ ಉತ್ತಮಗತಿಯು, ನಿನಗೆ ಉತ್ತಮವಾದ ಮೋಕ್ಷವೂ ಸಹ ಲಭಿಸುತ್ತದೆ ಎಂದು ಹೇಳಿ ಅಂತರ್ಹಿತನಾದನು.

೧೦೬. ಈಶ್ವರನ ಜಟೆಯಿಂದ ಹೊರಟು, ಲೋಕವನ್ನೆಲ್ಲಾ ಪವಿತ್ರ ಮಾಡುವ ಪವಿತ್ರತಮವಾದ ಗಂಗೆಯು ಭಗೀರಥರಾಜನನ್ನು ಅನುಸರಿಸಿ ಬಂದಳು.

೧೦೭. ನಾರದಮುನಿಯೇ! ಆಗಿನಿಂದ ಪರಿಶುದ್ಧವು, ಮಲನಾಶಕವೂ ಆಗಿರುವ ಆ ಗಂಗಾದೇವಿಯು ಮೂರು ಲೋಕಗಳಲ್ಲಿಯೂ ಭಾಗೀರಥಿಯೆಂದು ಪ್ರಸಿದ್ಧಳಾದಳು.

೧೦೮. ಸಕಲ ನದಿಗಳಲ್ಲಿಯೂ ಉತ್ತಮವಾದ ಗಂಗಾನದಿಯು ಪೂರ್ವದಲ್ಲಿ ಸಗರ ಪುತ್ರರು ತಮ್ಮ ಪಾಪಕೃತ್ಯದಿಂದ ದಹಿಸಲ್ಪಟ್ಟ ಸ್ಥಳದಲ್ಲಿ ಹರಿಯಿತು.

೧೦೯. ಆ ಗಂಗಾಜಲದಿಂದ ಸಗರಪುತ್ರರ ಬೂದಿಯು ಕದಡಲ್ಪಟ್ಟಿತು. ಕೂಡಲೇ ನರಕದಲ್ಲಿ ಸಿಲುಕಿದ್ದ ಸಗರಪುತ್ರರು ತಮ್ಮ ಪಾಪದಿಂದ ಬಿಡುಗಡೆಯನ್ನು ಹೊಂದಿ ಉದ್ಧರಿಸಲ್ಪಟ್ಟರು.

ಪುರಾ ಸಂತಾಡ್ಯಮಾನೇನ ಯೇ ಯಮೇನಾತಿಪೀಡಿತಾಃ ।
ತ ಏವ ಪೂಜಿತಾಸ್ತೇನ ಗಂಗಾಜಲಪರಿಪ್ಲುತಾಃ ॥ ೧೧೦ ॥

ಗತಪಾಪಾನ್ಸ ವಿಜ್ಞಾಯ ಯಮಃ ಸಗರಸಂಭವಾನ್ ।
ಪ್ರಣಮ್ಯಾಭ್ಯರ್ಚ್ಯ ವಿಧಿವತ್ಪ್ರಾಹ ತಾನ್ಪ್ರೀತಮಾನಸಃ ॥ ೧೧೧ ॥

ಭೋ ಭೋ ರಾಜಸುತಾ ಯೂಯಂ ನರಕಾದ್ಘೃಶದಾರುಣಾತ್ ।
ಮುಕ್ತಾ ವಿಮಾನಮಾರುಹ್ಯ ಗಚ್ಛಧ್ವಂ ವಿಷ್ಣುಮಂದಿರಂ ॥ ೧೧೨ ॥

ಇತ್ಯುಕ್ತಾಸ್ತೇ ಮಹಾತ್ಮಾನೋ ಯಮೇನ ಗತಕಲ್ಮಷಾಃ ।
ದಿವ್ಯದೇಹಧರಾ ಭೂತ್ವಾ ವಿಷ್ಣುಲೋಕಂ ಪ್ರಪೇದಿರೇ ॥ ೧೧೩ ॥

ಏವಂಪ್ರಭಾವಾ ಸಾ ಗಂಗಾ ವಿಷ್ಣುಪಾದಾಗ್ರಸಂಭವಾ ।
ಸರ್ವಲೋಕೇಷು ವಿಖ್ಯಾತಾ ಮಹಾಪಾತಕನಾಶಿನೀ ॥ ೧೧೪ ॥

---

೧೧೦. ಪೂರ್ವದಲ್ಲಿ ಯಮನ ಹೊಡೆತದಿಂದ ಅತಿಶಯವಾಗಿ ಬಾಧಿಸಲ್ಪಡುತ್ತಿದ್ದ ಆ ಸಗರಪುತ್ರರೇ ಗಂಗೋದಕದಿಂದ ಪರಿಶುದ್ಧರಾದ ಬಳಿಕ ಆ ಯಮನಿಂದಲೇ ಪೂಜಿಸಲ್ಪಟ್ಟರು.

೧೧೧. ಯಮನು ಸಗರಪುತ್ರರ ಪಾಪಪರಿಹಾರವಾದುದನ್ನು ತಿಳಿದು ಸಂತೋಷಚಿತ್ತನಾಗಿ ಅವರನ್ನು ವಿಧಾನೋಕ್ತರೀತಿಯಿಂದ ನಮಸ್ಕಾರಪೂರ್ವಕವಾಗಿ ಸತ್ಕರಿಸಿ ಮಾತನಾಡಿದನು.

೧೧೨-೧೧೩. ರಾಜಕುಮಾರರೇ! ಅತ್ಯಂತ ಭಯಂಕರವಾದ ನರಕದಿಂದ ನೀವು ಬಿಡುಗಡೆಯಾದಿರಿ, ವಿಮಾನಾರೂಢರಾಗಿ ವಿಷ್ಣುಲೋಕಕ್ಕೆ ಹೋಗಿ ಎಂಬುದಾಗಿ ಯಮನು ಹೇಳಲು, ಪಾಪವನ್ನು ಪರಿಹರಿಸಿಕೊಂಡು ಮಹಾತ್ಮರಾದ ಆ ಸಗರಪುತ್ರರು ದಿವ್ಯ ದೇಹಗಳನ್ನು ಸ್ವೀಕರಿಸಿ ವಿಷ್ಣುಲೋಕಕ್ಕೆ ಹೋದರು.

೧೧೪. ಈರೀತಿ ಮಹಿಮಾತಿಶಯಯುಕ್ತವಾದ, ವಿಷ್ಣುಪಾದಾಗ್ರದಲ್ಲಿ ಜನಿಸಿದ ಆ ಗಂಗೆಯು ಮಹಾಪಾಪಗಳನ್ನು ಪರಿಹರಿಸುವುದೆಂದು ಸಕಲ ಲೋಕಗಳಲ್ಲಿಯೂ ಸುಪ್ರಸಿದ್ಧವಾಯಿತು.

**ಯ ಇದಂ ಪುಣ್ಯಮಾಖ್ಯಾನಂ ಮಹಾಪಾತಕನಾಶನಂ ।**
**ಪಠೇಚ್ಚ ಶೃಣುಯಾದ್ವಾಽಪಿ ಗಂಗಾಸ್ನಾನಫಲಂ ಲಭೇತ್ ॥ ೧೧೫ ॥**

**ಯಸ್ತ್ವೇತತ್ಪುಣ್ಯಮಾಖ್ಯಾನಂ ಕಥಯೇದ್ಬ್ರಾಹ್ಮಣಾಗ್ರತಃ ।**
**ಸ ಯಾತಿ ವಿಷ್ಣುಭವನಂ ಪುನರಾವೃತ್ತಿವರ್ಜಿತಂ ॥ ೧೧೬ ॥**

**ಇತಿ ಶ್ರೀ ಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಗಂಗಾಮಾಹಾತ್ಮ್ಯೇ ಭಗೀರಥಗಂಗಾನಯನಂ ನಾಮ ಷೋಡಶೋಽಧ್ಯಾಯಃ**

---

೧೧೫. ಪುಣ್ಯಕರವು, ಮಹಾಪಾಪ ಪರಿಹಾರಕವೂ ಆದ ಈ ಗಂಗಾವತರಣ ಚರಿತ್ರೆಯ ಪಠನಶ್ರವಣಗಳನ್ನು ಮಾಡುವವರು ಗಂಗಾಸ್ನಾನದ ಫಲವನ್ನು ಹೊಂದುತ್ತಾರೆ.

೧೧೬. ಈ ಪುಣ್ಯಪ್ರದವಾದ ಉಪಾಖ್ಯಾನವನ್ನು ಬ್ರಾಹ್ಮಣರ ಮುಂದೆ ಹೇಳುವವನು ಪುನರಾವೃತ್ತಿರಹಿತವಾದ ವಿಷ್ಣುಲೋಕಕ್ಕೆ ಹೋಗುತ್ತಾರೆ.

ಇಂತು ಶ್ರೀಬೃಹನ್ನಾರದೀಯಪುರಾಣದೊಳು, ಪೂರ್ವಭಾಗದ ಪ್ರಥಮಪಾದದಲ್ಲಿ ಗಂಗಾಮಾಹಾತ್ಮ್ಯಯನಿರೂಪಣಪ್ರಕರಣದಲ್ಲಿ ಭಗೀರಥನು ಗಂಗೆಯನ್ನು ತಂದ ವೃತ್ತಾಂತ ಕಥನರೂಪವಾದ ಹದಿನಾರನೆಯ ಅಧ್ಯಾಯವು ಮುಗಿದುದು.

॥ ಮಂಗಳಂ ॥



## ಕಥಾಸಾರಾಂಶ

ಭಗೀರಥನು ಹಿಮವತ್ಪರ್ವತಕ್ಕೆ ಹೋಗಿ ಏನು ಮಾಡಿದನು? ಗಂಗೆಯನ್ನು ಹೇಗೆ ತಂದನು? ಎಂದು ನಾರದನು ಸನಕನನ್ನು ಕೇಳಿದನು. ಅದಕ್ಕೆ ಉತ್ತರವಾಗಿ ಭಗೀರಥನು ಹಿಮಾಚಲಕ್ಕೆ ಹೋಗುತ್ತಾ ದಾರಿಯಲ್ಲಿ ಗೋದಾವರಿಯ ತೀರದಲ್ಲಿ ಭೃಗುಋಷಿಗಳನ್ನು ಸಂದರ್ಶಿಸಿ ನಾರಾಯಣ ತುಷ್ಟಿಕರವಾದ ಕರ್ಮವಾವುದು ? ಅವನ ಪೂಜೆಯನ್ನು ಹೇಗೆ ಮಾಡಬೇಕು? ಮುಂತಾದುದನ್ನು ಕೇಳಿದನು. ಭೃಗವು ಸತ್ಯ, ಅಹಿಂಸೆ ಮುಂತಾದ ಧರ್ಮನಿರತನಾಗಿ, ನಾರಾಯಣಾಷ್ಟಾಕ್ಷರಾದಿ ಮಂತ್ರ ಜಪ ಪೂರ್ವಕವಾಗಿ ಉಪಾಸನೆ ಮಾಡಬೇಕೆಂದು ಉಪದೇಶಿಸಿದನು. ಪುನಃ ರಾಜನು ಪ್ರಶ್ನೆಮಾಡಲು ಭೃಗುಮುನಿಯು ಸತ್ಯ, ಅಹಿಂಸಾದಿಗಳು, ದುರ್ಜನ, ಸಾಧು, ಶಾಂತಿ, ಇವುಗಳ ಸ್ವರೂಪ, ವಿಷ್ಣುಪೂಜೆ, ಧ್ಯಾನ, ಮುಂತಾದುವುಗಳನ್ನು ವಿಸ್ತಾರವಾಗಿ ನಿರೂಪಿಸಿದನು. ತರುವಾಯ ಭಗೀರಥನು ಹಿಮಾಚಲಕ್ಕೆ ಹೋಗಿ ಉಗ್ರತಪಸ್ಸನ್ನು ಮಾಡಿ ಭಗವಂತನ ಪ್ರಸಾದದಿಂದ ಗಂಗೆಯನ್ನು ಭೂಲೋಕಕ್ಕೆ ತಂದನು. ಆ ಗಂಗೆಯಿಂದ ಸಗರಪುತ್ರರು ನರಕದಿಂದ ಉದ್ಧೃತರಾಗಿ ವಿಷ್ಣುಲೋಕಕ್ಕೆ ಹೋಗಿ ಮುಕ್ತಪದವನ್ನು ಹೊಂದಿದರು ಮುಂತಾಗಿ ಹೇಳಿ ಈಚರಿತ್ರೆಯ ಶ್ರವಣಪಠನೆ ಮಾಡುವವರಿಗಾಗುವ ಫಲವನ್ನು ನಿರೂಪಿಸಿ ಈ ಅಧ್ಯಾಯವು ಕೊನೆಗೊಂಡಿದೆ.